# ಪ್ರಕಾಶಕರ ಮಾತು

ಈಗಾಗಲೇ ನಾವು ಕೆಲವು ಕಾಯಿದೆ ಪುಸ್ತಕಗಳನ್ನು ಪ್ರಕಟಿಸಿದ್ದೇವೆ. ಗ್ರಾಹಕರು ಅವುಗಳಿಗೆ ಆಶ್ರಯ ಕೊಟ್ಟು ನಮ್ಮನ್ನು ಪ್ರೋತ್ಸಾಹಿಸಿದ್ದಾರೆ. ಸುಲಭ ಸರಲ ಕನ್ನಡದಲ್ಲಿ-ಕಾಯಿದೆಗಳ ಅರ್ಥವನ್ನು ಪೂರ್ಣ ತರುವಂತಹ-ಕನ್ನಡದಲ್ಲಿ ಪ್ರಕಟಿಸಿದ ನಮ್ಮ ಪುಸ್ತಕಗಳು ಜನಪ್ರಿಯವಾಗಿವೆ. ಇದು ನಮಗೆ ಸಂತೋಷ ವನ್ನುಂಟು ಮಾಡಿದೆ.

೧೯೫೬ ರ ನವಂಬರ ೧ ಕ್ಕೆ ರಾಜ್ಯಗಳ ಪುನರ್ಘಟನೆಯಾಗಿ ನಮ್ಮ ಕರ್ನಾಟಕವು ಮೈಸೂರ ರಾಜ್ಯವೆಂಬ ಹೆಸರಿನಲ್ಲಿ ಉದಯವಾಯಿತು. ಅನಂತರ ಕನ್ನಡ ಮಾತನಾಡುವ ಜನತೆಯು ಒಂದೇ ರಾಜ್ಯದ ಆಡಳಿತೆಯಲ್ಲಿ ಬಂದ ಸಂಗತಿಯು ಎಲ್ಲರಿಗೂ ತಿಳಿದ ಮಾತಾಗಿದೆ. ಇಂದಿಲ್ಲ ನಾಳೆ ಆಡಳಿತದ ವ್ಯವ ಹಾರದ ಭಾಷೆ ಕನ್ನಡ ಆಗಬಹುದಾಗಿದೆ. ಆದ್ದರಿಂದ ಕನ್ನಡದಲ್ಲಿಯ ಕಾಯಿದೆ ಪುಸ್ತಕಗಳಿಗೆ ಮಹತ್ವ ಬಂದಿದೆ.

ಈಗ ನಾವು ಮೊದಲನೆಯದಾಗಿ ಮೈಸೂರ ಗ್ರಾಮಪಂಚಾಯತ ಹಾಗೂ ಲೋಕಲ್ ಬೋರ್ಡ ಕಾಯಿದೆಯನ್ನು ವಿವೇಚನೆ ಸಹಿತವಾಗಿ ಕನ್ನಡದಲ್ಲಿ ಪ್ರಕಟಿಸಿದ್ದೇವೆ. ಇದಾದರೂ ಗ್ರಾಹಕರಿಂದ ಪ್ರೋತ್ಸಾಹನೆಯನ್ನು ಪಡೆಯುವು ದೆಂದು ಆಶಿಸಿದ್ದೇವೆ.

ಈ ಕಾಯಿದೆಯ ನಿಯಮಗಳು ಇನ್ನೂ ಪ್ರಕಟವಾಗಿಲ್ಲ. ಅವುಗಳು ಸರಕಾರದಿಂದ ಪ್ರಸಿದ್ಧವಾದ ಕೂಡಲೆ ಕನ್ನಡದಲ್ಲಿ ವಿವೇಚನೆ ಸಹಿತವಾಗಿ ಪ್ರಕಟಿ ಸುತ್ತೇವೆ. ಆ ಪ್ರತಿಗಳು ಬೇಕಾದವರು ಹೆಸರು ನೋಂದಾಯಿಸಿಕೊಳ್ಳಬೇಕು.

ಇನ್ನು ಮುಂದೆ ಮೈಸೂರ ಕಾಯಿದೆಗಳನ್ನು ಭಾರತ ಸರಕಾರದ ಇತರ ನಿತ್ಯೋಪಯೋಗಿ ಕಾಯಿದೆಗಳನ್ನು ಕನ್ನಡದಲ್ಲಿ ಪ್ರಕಟಿಸುವ ಯೋಜನೆ ಮಾಡಿದ್ದೇವೆ.

ಅಲ್ಲದೆ, ವಕೀಲರಿಗಾಗಿ ನ್ಯಾಯಾಲಯದಲ್ಲಿ ಉಪಯೋಗವಾಗುವಂತೆ ಇಂಗ್ಲಿಶದಲ್ಲಿಯೂ ಕಾಯಿದೆ ಪುಸ್ತಕಗಳನ್ನು ಪ್ರಕಟಿಸುವ ಯೋಜನೆಯೂ ಇದೆ.

ಈ ಪುಸ್ತಕವನ್ನು ಬರೆದುಕೊಟ್ಟ ಶ್ರೀ ನೆಗಳೂರ ರಂಗನಾಥ ಎಂ. ಎ., ಎಲ್. ಎಲ್. ಬಿ. ಅಡ್ವೊಕೇಟ, ಧಾರವಾಡ ಇವರಿಗೆ ನಾವು ಕೃತಜ್ಞರಾಗಿದ್ದೇವೆ. ಇಂತಹ ದೊಡ್ಡ ಪುಸ್ತಕವನ್ನು ಕಡಿಮೆ ಕಾಲಾವಧಿಯಲ್ಲಿ ಅಂದವಾಗಿ ಮುದ್ರಿಸಿ ಕೊಟ್ಟ, ಧಾರವಾಡ ಪ್ರಿಂಟಿಂಗ ಪ್ರೆಸ್ಸಿನವರಿಗೆ ನಾವು ಕೃತಜ್ಞರಾಗಿದ್ದೇವೆ.

೧೪-೯-೧೯೫೯
ಧಾರವಾಡ

**ರಾಮಣ್ಣ ಈಶ್ವರಪ್ಪ ಆಕಳವಾಡಿ,**
ಆಕಳವಾಡಿ ಬುಕ್ ಡಿಪೋ, ಧಾರವಾಡ

# ಬರೆದವನ ನಿವೇದನೆ

ಪುನರ್ಘಟಿತ ಮೈಸೂರ ರಾಜ್ಯಕ್ಕೆ ಅನ್ವಯಿಸಿರುವ ಈ ಕಾಯಿದೆಯನ್ನು ಸಾದರಪಡಿಸಲು ಸಂತೋಷವಾಗುತ್ತದೆ.

ಐದು ರಾಜ್ಯದಲ್ಲಿ ಹಂಚಿ ಹೋಗಿದ್ದ—ಐದು ಬೇರೆ ಬೇರೆ ಸ್ವರೂಪದ ಕಾಯಿದೆ ಇದ್ದ ಕನ್ನಡ ಪ್ರದೇಶಗಳು ಒಂದಾಗಿದ್ದರೂ ಕಾಯಿದೆಗಳು ಏಕರೂಪವಾಗುವುದಕ್ಕೆ ಕಾಲಾವಧಿ ಬೇಕು. ಅವು ಏಕರೂಪವಾಗಿ ಬಂದ ಹಾಗೆಲ್ಲ ಅವುಗಳನ್ನು ಕನ್ನಡಿಸಿ, ವಿವೇಚನೆ ಕೊಟ್ಟು ಬರೆಯಬೇಕೆಂಬ ಯೋಜನೆಯಲ್ಲಿ ಇದು ಮೊದಲನೆಯದು.

ಕಲಮುಗಳನ್ನು ಶಕ್ಯವಾದಷ್ಟು ಮಟ್ಟಿಗೆ ಸರಳ ಕನ್ನಡದಲ್ಲಿ ಭಾಷಾಂತರಿಸಿ ಕೊಡಲಾಗಿದೆ. ಕಾಯಿದೆಯಲ್ಲಿ ಅಡಕವಾದ ತತ್ವಗಳನ್ನು ವಿವೇಚನೆಯಲ್ಲಿ ಕೊಡ ಲಾಗಿದೆ. ಕಾಯಿದೆಯ ಭಾಗ ಕ್ಲಿಷ್ಟವಾಗಿದ್ದಲ್ಲಿ ವಿವೇಚನೆಯಲ್ಲಿ ವಿವರ ಕೊಟ್ಟಿದೆ.

ಇಂಗ್ಲಿಶ್ ಪದಪ್ರಯೋಗಗಳಿಗೆ ಕನ್ನಡ ಶಬ್ದಗಳನ್ನು ರೂಪಿಸಲಾಗಿದೆ. ಅವು ಗಳನ್ನು ಶಬ್ದಕೋಶದಲ್ಲಿ ಕೊಟ್ಟಿದೆ. ಅದರಿಂದ ಕಾಯಿದೆಯಲ್ಲಿಯ ಯಾವ ಇಂಗ್ಲಿಶ ಶಬ್ದಕ್ಕೆ ಯಾವ ಕನ್ನಡ ಶಬ್ದವನ್ನು ಬಳಸಲಾಗಿದೆ ಎಂಬುದು ತಿಳಿವುದು.

ಈ ಕಾಯಿದೆಯನ್ನು ಆಧರಿಸಿ, ವಕೀಲರಿಗೆ ಉಪಯೋಗವಾಗುವಂತೆ ನ್ಯಾಯಾಲಯದಲ್ಲಿ ವಾದ ಮಂಡಿಸಲು ಕೇಸುಗಳ ಸಂಬಂಧವನ್ನು ಸೂಚಿಸಿ ಬೇರೆ ಒಂದು ಇಂಗ್ಲಿಶದಲ್ಲಿ ಪುಸ್ತಕ ಮಾಡಲಾಗುತ್ತಿದೆ.

ಪುಸ್ತಕವನ್ನು ಪ್ರಕಟನೆಮಾಡಿ ಓದುಗರೊಡನೆ ಸಂಬಂಧವನ್ನು ಕಲ್ಪಿಸಿ ಕೊಟ್ಟಿದ್ದಕ್ಕಾಗಿ ಪ್ರಕಾಶಕರಿಗೆ ಕೃತಜ್ಞನಾಗಿದ್ದೇನೆ.

ಶಾಂತಿರಂಗ,
ಸಾಧನಕೇರಿ
ಧಾರವಾಡ,
೨೦-೯-೧೯೫೭

**ನೆಗಳೂರ ರಂಗನಾಥ**

# ಮೈಸೂರ ಗ್ರಾಮಪಂಚಾಯತ ಮತ್ತು ಲೋಕಲ್ ಬೋರ್ಡ ಕಾಯಿದೆ—೧೯೫೯

ವಿವರ ಪರಿವಿಡಿ ಪುಟ

ಪ್ರಸ್ತಾವನೆ ೧
ಪೀಠಿಕೆ ೧೧

ಭಾಗ ೧

ಪ್ರಕರಣ ೧. ಪ್ರಾರಂಭಿಕ

ಕಲಂ: ೧ ತಲೆಬರಹ-ವ್ಯಾಪ್ತಿ-ಮತ್ತು ಪ್ರಾರಂಭ. ೧೧
೨ ವ್ಯಾಖ್ಯೆಗಳು. ೧೨

ಭಾಗ ೨

ಪ್ರಕರಣ ೨ ಪಂಚಾಯತಗಳ ಸ್ಥಾಪನೆ ಮತ್ತು ಘಟನೆ-ರಚನೆ.

ಕಲಂ: ೩ ಗ್ರಾಮದ ನಿರ್ದೇಶನ. ೩೪
೪ ಪಂಚಾಯತಗಳ ಸ್ಥಾಪನೆ. ೩೬
೫ ಪಂಚಾಯತಗಳ ರಚನೆ. ೩೭
೬ ಪಂಚಾಯತಗಳ ಸಂಸ್ಥೀಕರಣ. ೪೨
೭ ಚುನಾವಣೆ. ೪೫
೮ ಪಂಚಾಯತದ ಸದಸ್ಯರನ್ನು ಆರಿಸಲು ತಪ್ಪಿದರೆ, ಆಡಳಿತಗಾರನ ಇಲ್ಲವೆ ಆಡಳಿತ ಸಮಿತಿಯ ನೇಮಕ. ೪೬
೯ ಮತದಾರರ ಪಟ್ಟಿ. ೪೯
೧೦ ಸದಸ್ಯತ್ವದ ಅರ್ಹತೆ. ೫೦
೧೧ ಸದಸ್ಯತ್ವದ ಅನರ್ಹತೆ. ೫೧
೧೨ ಏಕಕಾಲಕ್ಕೆ ಬೇರೆ ಬೇರೆ ಮತದಾರ ಸಂಘದಿಂದ ಸದಸ್ಯನಾಗಲು ನಿರ್ಬಂಧ. ೬೩
೧೩ ಚುನಾವಣೆಗಳ ಕಾಯಿದೆ ಬದ್ಧತೆಯನ್ನು ನಿರ್ಣಯಿಸುವುದು. ೬೪
೧೪ ಒಂದು ಸದಸ್ಯ ಸ್ಥಳವು ತೆರವಾದರೆ ಚುನಾವಣೆ ಇಲ್ಲವೆ ನೇಮಕ. ೮೦
೧೫ ಮತದಾನ ಕಟ್ಟೆಯಲ್ಲಿ ಇಲ್ಲವೆ ಅದರ ಹತ್ತಿರ ಮತಯಾಚನೆಗೆ ನಿರ್ಬಂಧ. ೮೧

| | | |
|---|---|---|
| ೧೬ | ಮತದಾನ ಕಟ್ಟೆಯಲ್ಲಿ ಇಲ್ಲವೆ ಅದರ ಹತ್ತಿರ ಅಕ್ರಮ ವರ್ತನೆಗೆ ದಂಡನೆ. | ೮೨ |
| ೧೭ | ಮತದಾನ ಕಟ್ಟೆಯಲ್ಲಿ ದುರ್ವರ್ತನೆಗೆ ದಂಡನೆ. | ೮೪ |
| ೧೮ | ಮತದಾನದ ಗುಪ್ತತೆಯನ್ನು ಕಾಯಿದುಕೊಳ್ಳುವುದು. | ೮೫ |
| ೧೯ | ಚುನಾವಣೆಯಲ್ಲಿಯ ಅಧಿಕಾರಿ ಮುಂತಾದವರು ಉಮೇದವಾರರ ಪರವಾಗಿ ಕೆಲಸಮಾಡಕೂಡದು ಇಲ್ಲವೆ ಪ್ರಭಾವ ಬೀರಕೂಡದು. | ೮೬ |
| ೨೦ | ಚುನಾವಣೆಗೆ ಸಂಬಂಧವಾಗಿ ಅಧಿಕೃತ ಕರ್ತವ್ಯದಲ್ಲಿ | ೮೮ |
| ೨೧ | ಹುತದಾನಪತ್ರಗಳನ್ನು ಮತದಾನ ಕಟ್ಟೆಯಿಂದ ತೆಗೆದು ಕೊಂಡು ಹೋಗುವುದು ಅಪರಾಧ. | ೮೯ |
| ೨೨ | ಇತರ ಅಪರಾಧಗಳು ಮತ್ತು ಅವುಗಳಿಗಾಗಿ ದಂಡನೆ. | ೯೨ |
| ೨೩ | ಕೆಲ ಅಪರಾಧಗಳಿಗಾಗಿ ಖಟ್ಲೆ ಹಾಕುವುದು. | ೯೪ |
| ೨೪ | ಅಧಿಕಾರ ಕಾಲಾವಧಿ. | ೯೫ |
| ೨೫ | ಅಧಿಕಾರ ಕಾಲಾವಧಿಯ ಪ್ರಾರಂಭ. | ೯೬ |
| ೨೬ | ಸದಸ್ಯರ ರಾಜೀನಾಮೆ. | ೯೭ |
| ೨೭ | ಚೇರಮನ್ನ ಮತ್ತು ಉಪಚೇರಮನ್ನರ ಚುನಾವಣೆ. | ೯೭ |
| ೨೮ | ಚೇರಮನ್ನ ಮತ್ತು ಉಪಚೇರಮನ್ನರ ಅಧಿಕಾರ ಕಾಲಾವಧಿ. | ೯೮ |
| ೨೯ | ಹೊಸ ಚೇರಮನ್ನರ ಚುವಾವಣೆ ಆಗುವ ತನಕ ಇದ್ದ ಚೇರಮನ್ನನು ನಿತ್ಯ ಕರ್ತವ್ಯಗಳನ್ನು ನಡೆಸತಕ್ಕದ್ದು | ೯೮ |
| ೩೦ | ಪಂಚಾಯತ ಸ್ಥಾಪನೆಯನ್ನು ಮುಂತಾದುವು ಆದ ನಂತರ ಚೇರಮನ್ನರ ಚುನಾವಣೆ | ೯೯ |
| ೩೧ | ಚೇರಮನ್ ಇಲ್ಲವೆ ಉಪಚೇರಮನ್ರ ರಾಜಿನಾಮೆ | ೧೦೦ |
| ೩೨ | ಅವಿಶ್ವಾಸದ ಠರಾವು | ೧೦೧ |
| ೩೩ | ಸಭೆಗಳ ಕಾರ್ಯಪದ್ಧತಿ ಅಧಿಕಾರ ಪದದಿಂದ ತೆಗೆಯುವುದು ಇಲ್ಲವೆ ಮಾಡುವುದು | ೧೦೩ ೧೦೪ |
| ೩೫ | ತೆರವಾದ ಸ್ಥಳಗಳನ್ನು ತುಂಬುವುದು | ೧೦೬ |
| ೩೬ | ಪಂಚಾಯತದ ಸಭೆಗಳು | ೧೦೮ |
| ೩೭ | ಕಾರ್ಯಾವಶ್ಯಕ ಸಂಖ್ಯೆ—ಕಾರ್ಯವಿಧಾನ | ೧೦೯ |
| ೩೮ | ಠರಾವುಗಳ ತಿದ್ದುಪಡಿ ಇಲ್ಲವೆ ರದ್ದತಿ | ೧೧೨ |

೩೯ ಕಾರ್ಯಕಲಾಪಗಳ ದಾಖಲೆ ೧೧೩
೪೦ ಠರಾವುಗಳು ಮತ್ತು ಮಾಹಿತಿ ಪ್ರಶ್ನೆಗಳು ೧೧೪
೪೧ ಪಂಚಾಯತದ ಕಾರ್ಯಗಳು ಮುಂತಾದವು
ಕಾಯಿದೆಬದ್ಧವಲ್ಲವೆಂದು ಹೇಳಲಾಗದು ೧೧೫
ಪ್ರಕರಣ : ೩ ಪಂಚಾಯತಗಳ ಕಾರ್ಯಗಳು
೪೨ ಪಂಚಾಯತಗಳು ಮಾಡಲೇಬೇಕಾದ ಕರ್ತವ್ಯಗಳು ೧೧೬
೪೩ ಪಂಚಾಯತಗಳು ಮಾಡಬಹುದಾದ ಕರ್ತವ್ಯಗಳು ೧೧೯
೪೪ ಸಂಸ್ಥೆಗಳನ್ನು ಸುಸ್ಥಿತಿಯಲ್ಲಿಡಲು ಮತ್ತು ಇತರ
ಕಾರ್ಯಗಳ ನಿರ್ವಹಣೆಯ ಕೆಲಸವನ್ನು ಹಸ್ತಾಂತರಿಸಲು
ತಾಲೂಕ ಬೋರ್ಡಿಗೆ ಅಧಿಕಾರ ೧೨೨
೪೫ ಇತರ ಕರ್ತವ್ಯಗಳು ೧೨೨
೪೬ ಕಾರ್ಯಗಳನ್ನು ಒಪ್ಪಿಸಿ ಕೊಡುವುದು ೧೨೪
೪೭ ಪಂಚಾಯತಗಳ ಕಾರ್ಯಗಳಿಗೆ ಹೆಚ್ಚಿನ ಕಾರ್ಯ
ಗಳನ್ನು ಜೋಡಿಸಲು ಸರಕಾರಕ್ಕೆ ಅಧಿಕಾರ ೧೨೫
೪೮ ಒಂದು ಸ್ಥಾನಿಕ ಸಂಸ್ಥೆಯಕಿಂತ ಹೆಚ್ಚು ಸಂಸ್ಥೆಗಳು
ಕೂಡಿ ಜಕಾತಿ ಹಾಕುವುದು ೧೨೬
೪೯ ಕೆಲ ಭೂಮಿಗಳನ್ನು ಸರಕಾರವು ಪಂಚಾಯತದ ಅಧಿ-
ಕಾರಕ್ಕೆ ಅಧಿಕಾರ ವಹಿಸಿ ಕೊಡಬಹುದು ೧೨೭
೫೦ ಆಸ್ತಿಯನ್ನು ಪಡೆದು ಕೊಳ್ಳಲಿಕ್ಕೆ ಸ್ವಾಧೀನದಲ್ಲಿಟ್ಟು
ಕೊಳ್ಳಲಿಕ್ಕೆ ಪಂಚಾಯತದ ಅಧಿಕಾರವು ನಿಯಮಗಳಿಗೆ
ಅಂಕಿತವಾಗಿರತಕ್ಕದ್ದು ೧೨೭
೫೧ ಪಂಚಾಯತದ ಸಾಮಾನ್ಯ ಅಧಿಕಾರ ೧೨೯
೫೨ ರಸ್ತೆ—ಸೇತುವೆ—ಮುಂತಾದವುಗಳಿಗೆ ಸಂಬಂಧಪಟ್ಟ
ಪಂಚಾಯತಗಳ ಅಧಿಕಾರ ೧೩೦
೫೩ ಕಟ್ಟಡಗಳ ರಚನೆಯಲ್ಲಿ ನಿಯಂತ್ರಣ ೧೩೨
೫೪ ಕೆಲವೊಂದು ಪ್ರದೇಶದಲ್ಲಿ ಪರವಾನಗಿ ಇಲ್ಲವೆ ಕಟ್ಟಡ-
ಗಳ ರಚನೆಯನ್ನು ಮಾಡುವುದನ್ನು ನಿರ್ಬಂಧಿಸಲು
ಕ್ರಮಗೊಳಿಸಲು ಸರಕಾರಕ್ಕೆ ಅಧಿಕಾರ ೧೩೪
ಕಾರಖಾನೆಗಳನ್ನು ಕಟ್ಟಲು ಮತ್ತು ಯಂತ್ರಗಳನ್ನು
ಕೂಡಿಸಲು ಪರವಾನಗಿ ೧೩೬
೫೬ ಲಾಯಸೆನ್ಸ ಇಲ್ಲದೆ ಭಯಾನಕ ಇಲ್ಲವೆ ಕ್ಲೇಶಕಾರ
ವ್ಯಾಪಾರ ನಡೆಸಲು ನಿರ್ಬಂಧ ೧೩೭

೫೭ ಹೈನ ವ್ಯವಸ್ಥೆಯ ಉಪಹಾರ ಮಂದಿರ ಮುಂತಾದವುಗಳ ನಿರ್ಬಂಧ ೧೩೭

೫೮ ಕಲಂ ೫೫, ೫೬, ೫೭ ರನ್ವಯವಾಗಿರುವ ಲಾಯಸೆನ್ಸ ಮತ್ತು ಪರವಾನಗಿಗಳ ಸಂಬಂಧವಾದ ಶರತುಗಳು ೧೩೮

೫೯ ಸಂಸ್ಥೆಗಳನ್ನು ಇಲ್ಲವೆ ಕೆಲಸಗಳನ್ನು ಪಂಚಾಯತಕ್ಕೆ ಹಸ್ತಾಂತರಿಸುವುದು ೧೩೯

೬೦ ಸಾರ್ವಜನಿಕ ರಸ್ತೆಗಳ ಮತ್ತು ಬಯಲು ಜಾಗೆಯ ಮೇಲೆ ಅತಿಕ್ರಮಣ ಮತ್ತು ಆತಂಕ ೧೪೦

೬೧ ರಸ್ತೆಗಳನ್ನು ಹೆಸರಿಸುವುದಕ್ಕೆ ಮನೆಗಳಿಗೆ ಅಂಕಿಸುವುದಕ್ಕೆ ಅಧಿಕಾರ ೧೪೨

೬೨ ಹಾಳಾದ ಇಲ್ಲವೆ ಗೀಳಾದ ಕಟ್ಟಡ, ಗಿಡ ಮುಂತಾದವುಗಳನ್ನು ತೆಗೆದು ಹಾಕುವುದು ೧೪೩

೬೩ ಸ್ವಚ್ಛತೆ, ಗಟಾರ ವ್ಯವಸ್ಥೆ, ಭಂಗೀ ವ್ಯವಸ್ಥೆಗಳ ಬಗ್ಗೆ ಅಧಿಕಾರ ೧೪೪

೬೪ ಯಾತ್ರಾ ಸ್ಥಳಗಳ ಮೇಲೆ ನಿಯಂತ್ರಣವಿದ್ದ ಜನರ ಕಡೆಯಿಂದ ವಂತಿಗೆ ೧೪೬

೬೫ ಯೋಗ್ಯ ನೀರಿನ ಪೂರೈಕೆ ಮಾಡುವ ಅಧಿಕಾರ ೧೪೭

೬೬ ನೀರಿನ ಪೂರೈಕೆಗಾಗಿ ಶರತುಗಳನ್ನು ಗೊತ್ತುಪಡಿಸುವ ಬಗ್ಗೆ ನಿಯಮಗಳನ್ನು ಮಾಡುವುದಕ್ಕೆ ಸರಕಾರದ ಅಧಿಕಾರ. ೧೪೯

೬೭ ಪ್ರವೇಶದ ಅಧಿಕಾರ ೧೫೦

೬೮ ಪಟ್ಟಣ-ಪಂಚಾಯತಗಳಿಗೆ ಹೆಚ್ಚಿನ ಅಧಿಕಾರ ೧೫೧

ಪ್ರಕರಣ : ೪ ಆಸ್ತಿ ಮತ್ತು ಆರ್ಥಿಕ ವ್ಯವಸ್ಥೆ

೬೯ ಪಂಚಾಯತದ ಆಸ್ತಿ ೧೫೨

೭೦ ಪಂಚಾಯತದ ಪರವಾಗಿ ಇಲ್ಲವೆ ವಿರುದ್ಧವಾಗಿ ಇದ್ದ ಆಸ್ತಿಗಳ ಹಕ್ಕುಗಳ ಬಗ್ಗೆ ನಿರ್ಣಯ ೧೫೩

೭೧ ಪಂಚಾಯತ ನಿಧಿ ೧೫೫

೭೨ ಪಂಚಾಯತ ನಿಧಿಯ ವಿನಿಯೋಗ ೧೫೬

೭೩ ಕರ ತೆರಿಗೆಗಳು ಮತ್ತು ಕೆಲವೊಂದು ಫೀ ೧೫೭

೭೪ ಕರಾಕರಣೆಯ ವಿರುದ್ಧ ಅಪೀಲು ೧೬೦

೭೫ ಮಾರ್ಕೆಟ ಫೀ ೧೬೦

| | | |
|---|---|---|
| ೭೬ | ಪಂಚಾಯತದ ಕರಾಕರಣೆಯನ್ನು ಹೆಚ್ಚಿಸಲು ನಿರ್ದೇಶಿಸುವುದು ಡೆ. ಕಮಿಶನರರ ಅಧಿಕಾರ. | ೧೬೧ |
| ೭೭ | ಕರ ವಸೂಲಿ ಮತ್ತು ಇತರ ಬಾಕಿ ವಸೂಲಿ | ೧೬೨ |
| ೭೮ | ಸರಕಾರದಿಂದ ಸಹಾಯ ಧನ. | ೧೬೫ |
| ೭೯ | ತಾಲೂಕ ಬೋರ್ಡದಿಂದ ಸಾಲ. . | ೧೬೭ |
| ೮೦ | ಸೆಕ್ರೆಟರಿ. | ೧೬೭ |
| ೮೧ | ನೌಕರ ವರ್ಗದ ಕೋಷ್ಟಕ. | ೧೬೯ |
| ೮೨ | ನೌಕರರ ನೇಮಕ. | ೧೬೯ |
| ೮೩ | ಮುಂಗಡ ಪತ್ರ-ಲೆಕ್ಕಪತ್ರ : ಗ್ರಾಮದ ರಹಿವಾಸಿಗಳ ಸಭೆಯನ್ನು ಪಂಚಾಯತ ಕರೆಯಬೇಕು. | ೧೭೦ |
| ೮೪ | ಬಾಕಿ ವಸೂಲಾಗದೆ ಇದ್ದ ಹಣವನ್ನು ಸೂಟು ಬಿಡಲು ಅಧಿಕಾರ. | ೧೭೨ |
| ೮೫ | ಖಟ್ಟ ಬಾಕಿ ರಕಮು | ೧೭೩ |
| ೮೬ | ಲೆಕ್ಕಪತ್ರ ತಪಾಸಣೆ. | ೧೭೪ |

ಪ್ರಕರಣ ೬. ಮುನಸಿಪಾಲಟಿಯನ್ನು ಪಂಚಾಯತವಾಗಿ ಮತ್ತು ಪಂಚಾಯತವನ್ನು ಮುನಸಿಪಾಲಟಿಯಾಗಿ ಮಾರ್ಪಡಿಸುವ ಮತ್ತು ಪಂಚಾಂತಗಳನ್ನು ಜೋಡಿಸುವ ಇಲ್ಲವೆ ವಿಭಾಗಿಸುವ ಶರತುಗಳು.

| | | |
|---|---|---|
| ೮೭ | ಅರ್ಥ ವಿವರಣೆ. | ೧೭೬ |
| ೮೮ | ಮುನಸಿಪಾಲಟಿಯನ್ನು ಪಂಚಾಯತವನ್ನಾಗಿ ಮಾರ್ಪಡಿಸಿದುದರ ಪರಿಣಾಮ. | ೧೭೭ |
| ೮೯ | ಮಧ್ಯಂತರ ಪಂಚಾಯತದ ಸದಸ್ಯರ ಅಧಿಕಾರ ಕಾಲಾವಧಿ ಮತ್ತು ಅವರ ಅಧಿಕಾರ | ೧೮೧ |
| ೯೦ | ಗ್ರಾಮಗಳ ಜೋಡಣೆಯಿಂದ ಆಗುವ ಪರಿಣಾಮ | ೧೮೩ |
| ೯೧ | ಗ್ರಾಮದ ವಿಭಾಗೀಕರಣದಿಂದ ಆಗುವ ಪರಿಣಾಮ | ೧೮೭ |
| ೯೨ | ಗ್ರಾಮದ ಪ್ರದೇಶದ ಸೀಮೆಯ ಸ್ಥಿತ್ಯಂತರದಿಂದ ಆದ ಪಂಚಾಯತದ ಮುರಗಡೆ ಹಾಗೂ ಪುನಾರಚನೆ | ೧೮೯ |
| ೯೩ | ಮುರಗಡೆಯಾದ–ಪುನಾರಚಿತವಾದ ಇಲ್ಲವೆ ಸ್ಥಾಪಿತವಾದ ಪಂಚಾಯತದ ಆಸ್ತಿಯ ಅಧಿಕಾರ | ೧೯೦ |
| ೯೪ | ಆತಂಕಗಳ ನಿವಾರಣೆ | ೧೯೧ |

ಭಾಗ ೩ ತಾಲೂಕ ಅಭಿವೃದ್ಧಿ ಬೋರ್ಡುಗಳು

ಪ್ರಕರಣ ೬ ತಾಲೂಕ ಬೋರ್ಡುಗಳ ರಚನೆ


೯೫ ತಾಲೂಕ ಬೋರ್ಡುಗಳ ರಚನೆ ಹಾಗೂ ಅವುಗಳ ಸಂಸ್ಥೀಕರಣ ೧೯೩
೯೬ ತಾಲೂಕ ಬೋರ್ಡುಗಳ ಸ್ವರೂಪ ೧೯೪
೯೭ ಚುನಾಯಿತ ಸದಸ್ಯರ ಸಂಖ್ಯೆ ೧೯೫
೯೮ ಪರಿಶಿಷ್ಟ ವರ್ಗಗಳ ಪ್ರಾ ೧೯೬
೯೯ ಸ್ತ್ರೀ ಪ್ರಾತಿನಿಧ್ಯ ೧೯೭
೧೦೦ ಪ್ರಾದೇಶಿಕ ಮತದಾರ ಸಂಘದ ಸೀಮಾ ನಿರ್ಣಯ ೧೯೭
೧೦೧ ಮತದಾರರ ಯಾದಿ ೧೯೮
೧೦೨ ಉಮ್ಮೇದುವಾರರ ಅರ್ಹತೆ ೧೯೯
೧೦೩ ಸದಸ್ಯರ ಅನರ್ಹ ೨೦೦
೧೦೪ ಚುನಾವಣೆಯಲ್ಲಿ ಮತದಾನ ಪದ್ಧತಿ ಮತ್ತು ಕಾರ್ಯ ವಿಧಾನ ೨೦೪
೧೦೫ ಏಕ ಕಾಲಕ್ಕೆ ಬೇರೆ ಬೇರೆ ಮತದಾರ ಸಂಘದಿಂದ ಸದಸ್ಯನಾಗಲು ನಿರ್ಬಂಧ ೨೦೫
೧೦೬ ಚುನಾವಣೆಯ ಕಾಯಿದೆಬದ್ಧತೆಯನ್ನು ನಿರ್ಣಯಿಸುವುದು ೨೦೬
೧೦೭ ಸದಸ್ಯರ ಹೆಸರುಗಳ ಪ್ರಕಟನೆ ೨೧೨
೧೦೮ ಸದಸ್ಯರ ಅಧಿಕಾರ ಕಾಲಾವಧಿ ೨೧೨
೧೦೯ ಸದಸ್ಯರ ಅಧಿಕಾರ ಕಾಲಾವಧಿಯ ಪ್ರಾರಂಭ ೨೧೨
೧೧೦ ಸದಸ್ಯನ ರಾಜೀನಾಮೆ ೨೧೩
೧೧೧ ದುರ್ವರ್ತನೆಗಾಗಿ ಸದಸ್ಯನನ್ನು ತೆಗೆದು ಹಾಕುವುದು ೨೧೪
೧೧೨ ನೈಮಿತ್ತಿಕವಾಗಿ ತೆರವಾದ ಸ್ಥಳಗಳನ್ನು ತುಂಬುವಿಕೆ ೨೧೫
೧೧೩ ಅಧ್ಯಕ್ಷ, ಉಪಾಧ್ಯಕ್ಷರ ಚುನಾವಣೆ ಹಾಗೂ ಅವರ ಅಧಿಕಾರ ಕಾಲಾವಧಿ ೨೧೬
೧೧೪ ಅಧ್ಯಕ್ಷ-ಉಪಾಧ್ಯಕ್ಷರ ರಾಜೀನಾಮೆ ಇಲ್ಲವೆ ತೆಗೆದು ಹಾಕುವಿಕೆ ಹಾಗೂ ಅಧ್ಯಕ್ಷ-ಉಪಾಧ್ಯಕ್ಷರಿಗೆ ರಜೆ ದಯಪಾಲಿಸುವಿಕೆ ೨೧೭


ಪ್ರಕರಣ ೭ ವ್ಯವಹಾರ ನಡೆವಳಿಕೆ


೧೧೫ ಅಧ್ಯಕ್ಷನ ಅಧಿಕಾರ ಹಾಗೂ ಕರ್ತವ್ಯ ೨೨೦
೧೧೬ ಉಪಾಧ್ಯಕ್ಷನ ಅಧಿಕಾರ ಹಾಗೂ ಕರ್ತವ್ಯ ೨೨೧
೧೧೭ ತಾಲೂಕ ಬೋರ್ಡುಗಳ ಸಭೆಗಳು ೨೨೨

೧೧೮ ಠರಾವುಗಳು ಹಾಗೂ ಮಾಹಿತಿ ಪ್ರಶ್ನೆಗಳು ೨೨೭

೧೧೯ ತಾಲೊಕ ಬೋರ್ಡದ ಮುಖ್ಯ ಕಾರ್ಯಾಧಿಕಾರಿ ಮತ್ತು ಇತರ ಅಧಿಕಾರಿಗಳು ೨೨೮

೧೨೦ ಮುಖ್ಯ ಕಾರ್ಯಾಧಿಕಾರಿಯ ಕಾರ್ಯಗಳು ೨೩೦

೧೨೧ ಕರಾರು ಮಾಡಿಕೊಳ್ಳುವ ವಿಧಾನ ೨೩೨

೧೨೨ ಮುಖ್ಯ ಕಾರ್ಯಾಧಿಕಾರಿಯು ಮಾಡಿಕೊಂಡ ಕರಾರುಗಳನ್ನು ವರದಿ ಮಾಡಬೇಕು. ೨೩೪

೧೨೩ ಬೋರ್ಡು ಮಾಡಿದ ವೆಚ್ಚಗಳಿಗಾಗಿ ತಾಲೂಕ ಬೋರ್ಡ ನಿಧಿಯು ಸಾಮಾನ್ಯವಾಗಿ ವಹಿಸತಕ್ಕದ್ದು. ೨೩೪

೧೨೪ ತಾಲೂಕ ಬೋರ್ಡು ಸಮಿತಿಗಳನ್ನು ನೇಮಿಸಬೇಕು. ೨೩೫

೧೨೫ ಸಮಿತಿಗಳ ಕಾರ್ಯಗಳು ೨೩೬

೧೨೬ ಸ್ಥಾಯಿ ಸಮಿತಿಯ ಅವಸರದ ಅಧಿಕಾರಗಳು ೨೩೭

೧೨೭ ಇತರ ಸಮಿತಿಗಳು ೨೩೮

೧೨೮ ಸಮಿತಿಗಳ ಕಾರ್ಯಪದ್ಧತಿ ೨೩೯

೧೨೯ ಬೋರ್ಡಿನ ಕೃತಿಗಳು ಕಾಯಿದೇ ಬದ್ಧವಲ್ಲವೆಂದು ಸಾರಲಾಗದು. ೨೪೦

ಪ್ರಕರಣ ೮ ತಾಲೂಕ ಬೋರ್ಡಿನ ಕಾರ್ಯಗಳು

೧೩೦ ತಾಲೂಕ ಬೋರ್ಡ ಮಾಡಲೇಬೇಕಾದ ಕಾರ್ಯಗಳು ೨೪೧

೧೩೧ ತಾಲೂಕ ಬೋರ್ಡ ಮಾಡಬಹುದಾದ ಕಾರ್ಯಗಳು ೨೪೪

೧೩೨ ತಾಲೂಕ ಬೊರ್ಡು ಆಸ್ತಿಯನ್ನು ಪಡೆಯುವುದು ಸ್ವಾಧೀನದಲ್ಲಿಟ್ಟುಕೊಳ್ಳುವುದು ನಿಯಮಗಳಿಗೆ ಅಂಕಿತ ೨೪೬

೧೩೩ ಜಿಲ್ಲಾ ಬೋರ್ಡಿನ ಕೆಲವೊಂದು ರಸ್ತೆಗಳು ಈ ಕಾಯಿದೆಯನ್ವಯ ರಚಿತವಾದ ತಾಲೂಕ ಬೋರ್ಡಿನ ಅಂತರ್ಗತ ೨೪೭

೧೩೪ ತಾಲೂಕ ಬೋರ್ಡಿನಿಂದ ನಿರ್ಮಿಸಲ್ಪಟ್ಟ ಕಟ್ಟಡಗಳು ಅದರ ಅಧಿಕಾರಾಂಕಿತ ೨೪೮

೧೩೫ ಮಾಲಕರ ಪರವಾನಗಿಯಿಂದ ಕೆಲವೊಂದು ಕಾಮಗಿರಿಗಳನ್ನು ತಾಲೂಕ ಬೋರ್ಡು ವಶಪಡಿಸಿಕೊಂಡು ಅವುಗಳ ದುರಸ್ತಿ ಕೆಲಸ ಮಾಡಬಹುದು ೨೪೮

| | | |
|---|---|---|
| ೧೩೬ | ರಸ್ತೆಗಳನ್ನು ಮತ್ತು ಇತರ ಆಸ್ತಿಗಳನ್ನು ಸರಕಾರವು ತಾಲೂಕ ಬೋರ್ಡಿನ ಅಂಕಿತವಾಗಿಡಬಹುದು | ೨೪೯ |
| ೧೩೭ | ತಾಲೂಕ ಬೋರ್ಡಿನ ಸಾಮಾನ್ಯ ಅಧಿಕಾರಗಳು | ೨೫೦ |
| ೧೩೮ | ಸರಕಾರಿ ಕಟ್ಟಡಗಳ ನಿರ್ಮಾಣ, ದುರಸ್ತಿ-ಸುಭದ್ರತೆ ಕಾಯಿದುಕೊಳ್ಳುವುದನ್ನು ತಾಲೂಕ ಬೋರ್ಡು ವಹಿಸಿ ಕೊಳ್ಳಬಹುದು | ೨೫೧ |
| ೧೩೯ | ತಾಲೂಕ ಬೋರ್ಡಗಳು ಪಂಚಾಯತಗಳು ಕಾರ್ಯ ಕಾರಿಯಾಗುವುದರ ಮೇಲ್ವಿಚಾರಣೆಯನ್ನು ಮಾಡಬೇಕು ಹಾಗೂ ಅವುಗಳಿಗೆ ನೆರವನ್ನು ಕೊಡಬೇಕು | ೨೫೧ |
| ೧೪೦ | ರಸ್ತೆಗಳ ದಾರಿ ಬದಲಿಸುವ ತಿರುಗಿಸುವ, ಬಂದು ಮಾಡುವ ನಿರ್ಬಂಧಿಸುವ ಅಧಿಕಾರ | ೨೫೨ |
| ೧೪೧ | ಮಿತಿಮೀರಿದ ವಾಹನ ಸಂಚಾರದ ನಿಯಂತ್ರಣ | ೨೫೨ |
| ೧೪೨ | ಮಾರ್ಕೆಟ ಮುಂತಾದವುಗಳ ಸ್ಥಾಪನೆ | ೨೫೩ |
| ೧೪೩ | ಕೆಲವೊಂದು ವ್ಯಾಪಾರಗಳನ್ನು ಕ್ರಮವಾಗಿಸುವಿಕೆ | ೨೫೪ |
| ೧೪೪ | ಲಾಯಿಸೆನ್ಸು ದಯಪಾಲಿಸುವಿಕೆ | ೨೫೫ |
| ೧೪೫ | ಕಟ್ಟಡ ಮುಂತಾದವುಗಳನ್ನು ಪ್ರವೇಶಿಸಲು ಪರೀಕ್ಷಿ ಸಲು ಅಧಿಕಾರ | ೨೫೬ |
| ೧೪೬ | ಅಸ್ವಚ್ಛ ಕಟ್ಟಡಗಳು | ೨೫೭ |
| ೧೪೭ | ನೀರಿನ ಪೂರೈಕೆಯ ಉಗಮಗಳ ಸಂಬಂಧವಾಗಿ ಅಧಿ ಕಾರಗಳು ಹಾಗೂ ಕರ್ತವ್ಯಗಳು | ೨೫೮ |
| ೧೪೮ | ಕೊಟ್ಟ ನಿರ್ದೇಶನಗಳ ಉಲ್ಲಂಘನೆಗೆ ಉಪಾಯ | ೨೬೦ |
| ೧೪೯ | ಸಾರ್ವಜನಿಕ ಬುಗ್ಗೆಗಳನ್ನು, ತೊರೆಗಳನ್ನು ಕೆಲವೊಂದು ಉದ್ದೇಶಗಳಿಗಾಗಿ ಪ್ರತ್ಯೇಕವಾಗಿಡುವ ಅಧಿಕಾರ. | ೨೬೧ |
| ೧೫೦ | ಕೆಲವೊಂದು ಉಗಮಗಳಿಂದ ಬಂದ ನೀರನ್ನು ಉಪ-ಯೋಗಿಸಲು ನಿರ್ಬಂಧಮಾಡುವ ಅಧಿಕಾರ. | ೨೬೨ |
| ೧೫೧ | ಕೆಲವೊಂದು ಉದ್ದೇಶಗಳಿಗಾಗಿ ನೀರು ಉಪಯೋಗಿ-ಸಿದರೆ ದಂಡನೆ. | ೨೬೩ |
| ೧೫೨ | ಮಲಿನ ನೀರಿನಿಂದ ಆಗುವ ಅಪಾಯ ನಿವಾರಣೆ. | ೨೬೪ |
| ೧೫೩ | ಮಸಣ ಭೂಮಿಯ ಉಪಯೋಗವನ್ನು ನಿಲ್ಲಿಸುವಿಕೆ. | ೨೬೫ |
| ೧೫೪ | ಸಾಂಕ್ರಾಮಿಕ ರೋಗಗಳು ಇದ್ದ ಕಟ್ಟಡಗಳು ಮುಂತಾ ದವುಗಳಲ್ಲಿ ಪ್ರವೇಶದ ಅಧಿಕಾರ. | ೨೬೬ |

೧೫೫ ಕಟ್ಟಡಗಳನ್ನು ಕ್ರಿಮಿನಾಶಕದಿಂದ ಸ್ವಚ್ಛಮಾಡುವುದು. ೨೬೭

೧೫೬ ಕ್ರಿಮಿಕೂಡುವ ಹಾಗೆ ವಸ್ತುಗಳನ್ನು ಬಯಲಿಗಿಡುವುದು. ೨೬೮

೧೫೭ ಸಾರ್ವಜನಿಕ ರಸ್ತೆ, ಭೂಮಿ ಮತ್ತು ಕಟ್ಟಡಗಳ ಮೇಲೆ ಅತಿಕ್ರಮಣ—ಆತಂಕ. ೨೬೮

೧೫೮ ಬೇರೆ ಯಾವುದೇ ಕಲಮಿನಪ್ರಕಾರ ದಂಡನೆ ಮಾಡಲಾಗದ ನೋಟೀಸು-ಹುಕುಮುಗಳ ಉಲ್ಲಂಘನೆಗಾಗಿ ಶಿಕ್ಷೆ. ೨೭೧

೧೫೯ ಮಾಲಕರ ದುರ್ಲಕ್ಷ್ಯದಿಂದ ಉಂಟಾದ ಪರಿಸ್ಥಿತಿಯಲ್ಲಿ ತಾಲೂಕ ಬೋರ್ಡು ಕೆಲಸ ನಡೆಸಿ ವೆಚ್ಚ ವಸೂಲ ಮಾಡಬಹುದು. ೨೭೨

೧೬೦ ವೆಚ್ಚವನ್ನು ಹೇಗೆ ನಿರ್ದಿಷ್ಟಪಡಿಸಬೇಕು ಹಾಗು ವಸೂಲ ಮಾಡಬೇಕು. ೨೭೪

ಪ್ರಕರಣ: ೯ ಆಸ್ತಿ ಮತ್ತು ಆರ್ಥಿಕ ವ್ಯವಸ್ಥೆ.

೧೬೧ ತಾಲೂಕ ಬೋರ್ಡ ನಿಧಿ, ಅದರ ಸ್ವಾಧೀನ ಹಾಗು ಅದನ್ನು ತೊಡಗಿಸುವಿಕೆ. ೨೭೫

೧೬೨ ತಾಲೂಕ ಬೋರ್ಡ ನಿಧಿಯು ರಚನೆ. ೨೭೬

೧೬೩ ಸ್ಥಾನಿಕ ಸೆಸ್ಸಿನ ಎತ್ತುವಳಿ. ೨೭೭

೧೬೪ ಕರಾಕರಣೆ. ೨೭೭

೧೬೫ ಕೆಲವೊಂದು ಕಂದಾಯ ಭಾಗವನ್ನು ಸರಕಾರವು ತಾಲೂಕ ಬೋರ್ಡಿಗೆ ಒಪ್ಪಿಸುವುದು. ೨೮೩

೧೬೬ ತಾಲೂಕ ಬೋರ್ಡ ನಿಧಿಯ ಮತ್ತು ಆಸ್ತಿಯ ವಿನಿಯೋಗ. ೨೮೩

೧೬೭ ಬಾಡಿಗೆ ಮತ್ತು ಶುಲ್ಕ ( ಫೀ ) ೨೮೬

೧೬೮ ವಸೂಲಿಯ ವ್ಯವಸ್ಥೆ ೨೮೭

೧೬೯ ಫೀ ಕೊಡದೆ ಇದ್ದವರನ್ನು ಹೊರಗೆ ಹಾಕುವ ಅಧಿಕಾರ ೨೮೭

೧೭೦ ತಾಲೂಕ ಬೋರ್ಡ ಸಾಲ ಎತ್ತಬಹುದು ಹಾಗೂ ಋಣಪರಿಹಾರಕ ನಿಧಿಯನ್ನು ನಿರ್ವಿಸಬಹುದು ೨೮೮

೧೭೧ ಸಹಾಧನ ಕೊಡುವ ಅಧಿಕಾರ ೨೮೮

೧೭೨ ವರುಷಗಳ ಕಾಲಾವಧಿ ವರೆಗೆ ಇಲ್ಲವೆ ಶಾಶ್ವತವಾಗಿ ಬಂಧನಕಾರಕವಾಗುವ ವ್ಯವಸ್ಥೆ ೨೮೯

೧೭೩ ಮುಂಗಡ ಪತ್ರದಲ್ಲಿ ಕಾಣಿಸಲಾಗದೆ ಇದ್ದ ವೆಚ್ಚಕ್ಕೆ ನಿರ್ಬಂಧ ೨೯೦

೧೭೪ ಲೆಕ್ಕಪತ್ರಗಳ ನಿವೇದನೆ ೨೯೧

೧೭೫ ಮುಂಗಡ ಪತ್ರದ ಪುನರ್ವಿಮರ್ಶೆ ೨೯೩

೧೭೬ ಲೆಕ್ಕಪತ್ರ ಇಡುವುದು ಹಾಗು ವೆಚ್ಚದ ಮೇಲೆ ನಿರ್ಬಂಧ ೨೯೪

೧೭೭ ಲೆಕ್ಕಪತ್ರಗಳನ್ನು ಕಳಿಸಿಕೊಡುವುದು ೨೯೫

೧೭೮ ಖಟ್ಟಬಾಕಿಯ ಹಣವನ್ನು ತೆಗೆದುಹಾಕುವುದು ೨೯೫

೧೭೯ ಲೆಕ್ಕಪತ್ರ ತಪಾಸಣೆ ೨೯೬

೧೮೦ ಸರಕಾರಿ ಲೆಕ್ಕ ತಪಾಸಿಗನ ಅಧಿಕಾರ ೨೯೭

೧೮೧ ಸರಕಾರಿ ಲೆಕ್ಕ ತಪಾಸಿಗನ ಕರ್ತವ್ಯಗಳು ೨೯೮

೧೮೨ ಸರಕಾರಿ ಲೆಕ್ಕತಪಾಸಿಗನು ವೆಚ್ಚವನ್ನು ಒಪ್ಪದಿರುವುದು ಹಾಗೂ ಕಮಿಶನರನು ಆ ಬಗ್ಗೆ ಹುಕುಮು ಮಾಡುವುದು ೨೯೯

೧೮೩ ಹುಕುಮಿನ ವಿರುದ್ಧ ಅಪೀಲು ೩೦೦

೧೮೪ ಮನ್ನಣೆ ಕೊಡದೆ ಇದ್ದ ಹಣದ ವಸೂಲಿ ೩೦೧

೧೮೫ ಬಾಕಿ ವಸೂಲಿಗಾಗಿ ವಿಧಾನ ೩೦೨

೧೮೬ ಜಪ್ತಿ ಹಾಗೂ ಮಾರಾಟಕ್ಕಾಗಿ ಕರಾರುಗಳು ೩೦೪


ಭಾಗ ೪

ಪ್ರಕರಣ ೧೦ ಜಿಲ್ಲಾ ಅಭಿವೃದ್ಧಿ ಮಂಡಳ


೧೮೭ ಜಿಲ್ಲಾ ಮಂಡಳಗಳ ರಚನೆ ೩೦೭

೧೮೮ ಪ್ರೆಸಿಡೆಂಡ ಮತ್ತು ಸೆಕ್ರೆಟರಿ ೩೦೮

೧೮೯ ಜಿಲ್ಲಾ ಅಭಿವೃದ್ಧಿ ಮಂಡಳಗಳ ಕಾರ್ಯಗಳು ೩೦೯

೧೯೦ ಆಡಳಿತದ ವರದಿ ೩೧೦


ಭಾಗ ೫ ಸಾಮಾನ್ಯ

ಪ್ರಕರಣ ೧೧


೧೯೧ ಈ ಕಾಯಿದೆಯ ಕಾರ್ಯಾಚರಣೆಯಿಂದ ಪ್ರದೇಶಗಳನ್ನು ದೂರವಾಗಿರಿಸುವುದು ೩೧೧

೧೯೨ ಪಟ್ಟಣ ಪ್ರದೇಶಗಳ ಆಡಳಿತಕ್ಕಾಗಿ ಕಮಿಟಿಗಳ ರಚನೆ, ಸ್ವರೂಪ ೩೧೨

೧೯೩ ಪಟ್ಟಣ ಪ್ರದೇಶಕ್ಕೆ ಅನ್ವಯಿಸುವ ಕಾಯಿದೆಗಳು ನಿರ್ದಿಷ್ಟ ತಿದ್ದುಪಡಿ, ಜೋಡಣೆ ಮತ್ತು ನಿರ್ಬಂಧಗಳಿಗಂಕಿತ ೩೧೩

೧೯೪ ಕಲಮು ೧೯೧ ರನ್ವಯವಾಗಿರುವ ಪ್ರಕಟನೆಯ ನಿವರ್ತನ ೩೧೪

೧೯೫ ಸಂಧಿಕಾಲದ ಶರತುಗಳು ೩೧೫

ಪ್ರಕರಣ ೧೨

೧೯೬ ಮುಖ್ಯ ನಿಯಂತ್ರಣಾಧಿಕಾರಿ ೩೧೬

೧೯೭ ಅಧಿಕಾರಗಳನ್ನು ಒಪ್ಪಿಸಿಕೊಡುವುದು ೩೧೬

೧೯೮ ಪರೀಕ್ಷಣೆ ಹಾಗೂ ಮೇಲ್ವಿಚಾರಣೆಯ ಅಧಿಕಾರ ೩೧೭

೧೯೯ ಪಂಚಾಯತಗಳ ಹಾಗೂ ತಾಲೂಕ ಬೋರ್ಡುಗಳ ಸಿಬ್ಬಂದಿಯನ್ನು ಕಡಿಮೆ ಮಾಡುವುದು ೩೧೯

೨೦೦ ಪಂಚಾಯತಗಳ ಹಾಗೂ ತಾಲೂಕ ಬೋರ್ಡುಗಳ ಹುಕುಮುಗಳ ಅಮಲಬಜಾವಣೆಯನ್ನು ಸ್ಥಗಿತಗೊಳಿಸಲು ಡೆಪ್ಯೂಟಿ ಕಮಿಶನರನಿಗೆ ಅಧಿಕಾರ ೩೨೦

೨೦೧ ಕೆಲವೊಂದು ಸಂದರ್ಭಗಳಲ್ಲಿ ಕಾಮಗಿರಿ ಮಾಡಿಸುವುದು ೩೨೧

೨೦೨ ಪಂಚಾಯತಗಳ ಇಲ್ಲವೆ ತಾಲೂಕ ಬೋರ್ಡುಗಳ ಕರ್ತವ್ಯ ಪಾಲನೆಯಲ್ಲಿ ಚ್ಯುತಿ ೩೨೨

೨೦೩ ಪಂಚಾಯತಗಳ ಇಲ್ಲವೆ ತಾಲೂಕ ಬೋರ್ಡುಗಳ ಮುರಗಡೆ ಇಲ್ಲವೆ ಅಧಿಕಾರ ಹೀನತೆ ೩೨೩

೨೦೪ ಜಿಲ್ಲೆಯಲ್ಲಿಯ ಪಂಚಾಯತಗಳ, ತಾಲೂಕ ಬೋರ್ಡುಗಳ, ಮುನಸಿಪಾಲಟಿಗಳ ಹಾಗೂ ಪಟ್ಟಣ ಪ್ರದೇಶ ಕಮಿಟಿಗಳ ನಡುವಿನ ತಂಟೆಗಳು ೩೨೬

೨೦೫ ಎರಡು ಜಿಲ್ಲೆಗಳಲ್ಲಿಯ ಪಂಚಾಯತಗಳ, ತಾಲೂಕ ಬೋರ್ಡುಗಳ ಮತ್ತು ಸಿಟಿ-ಮುನಸಿಪಾಲಟಿಗಳ ಮತ್ತು ಸ್ಥಾನಿಕ ಅಧಿಕಾರಗಳ ನಡುವಿನ ತಂಟೆಗಳು ೩೨೭

೨೦೬ ಅಪೀಲುಗಳು ೩೨೮

೨೦೭ ಪುನರ್ವಿಮರ್ಶೆ ೩೨೯

೨೦೮ ಹಾನಿ-ನಾಶ-ತಪ್ಪು ವಿನಿಯೋಗಕ್ಕಾಗಿ ಸದಸ್ಯರ ಹೊಣೆಗಾರಿಕೆ. ೩೨೯

೨೦೯ ದಾಖಲೆ ಪತ್ರಗಳನ್ನು ತರಿಸಿಕೊಳ್ಳಲು ಡೆಪ್ಯೂಟಿ ಕಮಿಶನರರ ಅಧಿಕಾರ ೩೩೧

ಪ್ರಕರಣ ೧೩ ನಿಯಮಗಳು, ಕ್ರಮನಿಯಮಗಳು, ಪೋಟನಿಯಮಗಳು ಮತ್ತು ದಂಡನೆಗಳು

೨೧೦ ನಿಯಮಗಳನ್ನು ಮಾಡುವ ಅಧಿಕಾರ ೩೩೨

| | | |
|---|---|---|
| ೨೧೧ | ಕ್ರಮನಿಯಮಗಳನ್ನು ಮಾಡಲು ತಾಲೂಕ ಬೋರ್ಡದ ಅಧಿಕಾರ | ೩೩೫ |
| ೨೧೨ | ಪೋಟನಿಯಮಗಳನ್ನು ಮಾಡಲು ಪಂಚಾಯತಗಳ ಅಧಿಕಾರ | ೩೪೦ |
| ೨೧೩ | ಅನರ್ಹತೆ ಪಡೆದ ಮೇಲೆ ಪಂಚಾಯತದ ಸದಸ್ಯ, ಚೇರಮನ್ನ ಇಲ್ಲವೆ ಉಪಚೇರಮನ್ನ ಎಂದು ಇಲ್ಲವೆ ತಾಲೂಕ ಬೋರ್ಡದ ಸದಸ್ಯ, ಅಧ್ಯಕ್ಷ ಇಲ್ಲವೆ ಉಪಾಧ್ಯಕ್ಷ ಎಂದು ಕಾರ್ಯ ಮಾಡಿದ್ದಕ್ಕೆ ದಂಡನೆ | ೩೪೩ |
| ೨೧೪ | ಹಿತಾಸಕ್ತಿ ಇದ್ದ ಸದಸ್ಯನು ಮತದಾನ ಮಾಡಿದರೆ ದಂಡನೆ | ೩೪೪ |
| ೨೧೫ | ಕರಾರಿನಲ್ಲಿ ಹಿತಾಸಕ್ತಿಯು ಅಧಿಕಾರಿಯಿಂದ ಇಲ್ಲವೆ ಸೇವಕನಿಂದ ಪಡೆಯಲ್ಪಟ್ಟದ್ದಕ್ಕೆ ದಂಡನೆ | ೩೪೫ |
| ೨೧೬ | ಕೆಲಅಧಿಕಾರಿಗಳ ಇಲ್ಲವೆ ಅವರ ಪ್ರತಿನಿಧಿಗಳ ಕಾರ್ಯಕ್ಕೆ ಅನ್ಯಾಯವಾಗಿ ಅಡ್ಡಿ ಮಾಡುವುದು | ೩೪೬ |
| ೨೧೭ | ಚೇರಮನ್ನ ಅಧ್ಯಕ್ಷ ಮುಂತಾದವರಿಗೆ ಆತಂಕ ಮಾಡುವುದನ್ನು ನಿರ್ಬಂಧಿಸುವುದು | ೩೪೬ |
| ೨೧೮ | ನೋಟೀಸನ್ನು ತೆಗೆದುಹಾಕುವುದಕ್ಕೆ, ಅದರಲ್ಲಿ ಬರೆದುದನ್ನು ಅಳಿಸಲಿಕ್ಕೆ ನಿರ್ಬಂಧ. | ೩೪೭ |
| ೨೧೯ | ಮಾಹಿತಿ ಕೊಡದೆ ಇದ್ದರೆ ಇಲ್ಲವೆ ತಪ್ಪು ಮಾಹಿತಿ ಕೊಟ್ಟರೆ ದಂಡನೆ. | ೩೪೮ |
| ೨೨೦ | ಲಿಲಾವಿನಲ್ಲಿ ಬೇಡುವುದಕ್ಕೆ ನಿರ್ಬಂಧ. | ೩೪೮ |
| ಪ್ರಕರಣ ೧೪ ಇತರ | | |
| ೨೨೧ | ಮೈಸೂರ ಸ್ಥಾನಿಕ ಸರಕಾರದ ಸೇವೆ. | ೩೪೯ |
| ೨೨೨ | ಸಾರ್ವಜನಿಕ ಕಾಮಗಿರಿಗಳ ನಿರ್ವಹಣೆ. | ೩೫೦ |
| ೨೨೩ | ಸ್ಥಾನಿಕ ಸರಕಾರದ ಸಿಬ್ಬಂದಿ ನಿಧಿ. | ೩೫೦ |
| ೨೨೪ | ಭೂಮಿಯನ್ನು ಪಡೆಯುವುದು. | ೩೫೧ |
| ೨೨೫ | ತಾಲೂಕ ಬೋರ್ಡ ಮತ್ತು ಪಂಚಾಯತಗಳ ಸದಸ್ಯರಿಗೆ ಮತ್ತು ಅವುಗಳ ಅಧಿಕಾರಿಗಳಿಗೆ ಮತ್ತು ಸೇವಕರಿಗೆ "ಸಾರ್ವಜನಿಕ ಸೇವಕ" ಎಂಬ ಪದ ಅನ್ವಯಿಸುವುದು. | ೩೫೧ |
| ೨೨೬ | ದಂಡಗಳನ್ನು ಪಂಚಾಯತ ಮತ್ತು ತಾಲೂಕ ಬೋರ್ಡ ನಿಧಿಗಳಿಗೆ ಜಮಾಮಾಡತಕ್ಕದ್ದು | ೩೫೨ |

| | | |
|---|---|---|
| ೨೨೭ | ಡಿಸ್ಟ್ರಿಕ್ಟ ಬೋರ್ಡಗಳಿಂದ ಮತ್ತು ಪಂಚಾಯತಗಳಿಂದ ಸಂಚಾಲಿತವಾದ ಸಂಸ್ಥೆಗಳನ್ನು ವಶಪಡಿಸಿಕೊಳ್ಳುವುದು | ೩೫೩ |
| ೨೨೮ | ಪಂಚಾಯತ ಇಲ್ಲವೆ ತಾಲೂಕ ಬೋರ್ಡದ ಆಸ್ತಿಗೆ ಆದ ಹಾನಿಯನ್ನು ಹೇಗೆ ಸರಿಪಡಿಸಬೇಕು | ೩೫೩ |
| ೨೨೯ | ಪಂಚಾಯತ ಮತ್ತು ತಾಲೂಕ ಬೋರ್ಡುಗಳ ವಿರುದ್ಧ ದಾವೆ ಮಾಡುವುದರ ಸಂಬಂಧವಾಗಿ ನಿರ್ಬಂಧಗಳು | ೩೫೪ |
| ೨೩೦ | ಸರಕಾರವು ಲಾಯಸೆನ್ಸು ಮತ್ತು ಪರವಾನಗಿ ಪಡೆಯಬೇಕಾಗಿಲ್ಲ | ೩೫೬ |
| ೨೩೧ | ಚುನಾವಣೆಯ ಪ್ರಕರಣಗಳಲ್ಲಿ ತಾಕೀದಿಗಳು ಕೊಡಲ್ಪಡತಕ್ಕದ್ದಲ್ಲ | ೩೫೭ |
| ೨೩೨ | ದಾವೆ ಮುಂತಾದವುಗಳಿಗೆ ಆತಂಕ | ೩೫೭ |
| ೨೩೩ | ಮ್ಯಾಜಿಸ್ಟ್ರೇಟನ ಅಧಿಕಾರ-ಕ್ಷೇತ್ರ | ೩೫೮ |
| | ದಾವೆಯಿಂದ ಪರಿಯಾಯ ವಿಧಾನ | ೩೫೯ |
| ೨೩೫ | ಈ ಕಾಯಿದೆಯನ್ವಯವಾಗಿ ಅಪರಾಧಗಳಿಗೆ ದಂಡನೆ ಮತ್ತು ರಾಜಿ ಆಗಲು ಅಧಿಕಾರಗಳು | ೩೬೦ |
| ೨೩೬ | ಪೋಲೀಸ ಅಧಿಕಾರಿಗಳ ಅಧಿಕಾರಗಳು | ೩೬೨ |
| ೨೩೭ | ವಾರ್ಷಿಕ ಆಡಳಿತದ ವರದಿ | ೩೬೪ |
| ೨೩೮ | ಕಾಯಿದೆ ಬದ್ಧವಾಗಿ ರಚಿತವಾಗದೇ ಇದ್ದ ಪಂಚಾಯತಗಳ ಕರ್ತವ್ಯಗಳು ಮತ್ತು ಅಧಿಕಾರಗಳು ಸರಕಾರದಿಂದ ನೇಮಕವಾದ ವ್ಯಕ್ತಿಯಿಂದ ನಿರ್ವಹಿಸಲ್ಪಡತಕ್ಕದ್ದು | ೩೬೫ |
| ೨೩೯ | ತಾಲೂಕುಗಳ ಪ್ರಾದೇಶಿಕ ಮಿತಿಯ ಸ್ಥಿತ್ಯಂತರದ ಮೂಲಕ ತಾಲೂಕ ಬೋರ್ಡುಗಳನ್ನು ಮುರಗಡೆ ಮಾಡುವ ಮತ್ತು ಪುನಾರಚನೆ ಮಾಡುವ ಸರಕಾರದ ಅಧಿಕಾರ | ೩೬೬ |
| ೨೪೦ | ನೋಟೀಸು ಮುಂತಾದವುಗಳನ್ನು ಜಾರಿ ಮಾಡುವ ವಿಧಾನ | ೩೬೯ |
| ೨೪೧ | ಸಂಧಿಕಾಲದ ಶರತುಗಳು | ೩೭೨ |
| ೨೪೨ | ರದ್ದತಿ ಹಾಗೂ ಸಂರಕ್ಷಣೆ | ೩೭೫ |

೨೪೩ ೧೯೪೭ ರ ಮುಂಬಯಿ ಕಾಯಿದೆ LXI ಯ ತಿದ್ದುಪಡಿ ೩೭೮

೨೪೪ ೧೯೫೪ ರ ಕೊಡಗು ಕಾಯಿದೆ viii ಯ ತಿದ್ದುಪಡಿ ೩೭೯

೨೪೫ ಈ ಕಾಯಿದೆಯನ್ನು ಜಾರಿಯಲ್ಲಿ ತರಲು ಹುಕುಮುಗಳು ೩೮೦

೨೪೬ ಕೆಲವೊಂದು ನಿಯಮಗಳು ಮತ್ತು ಹುಕುಮುಗಳು ರಾಜ್ಯದ ಶಾಸನ ಸಭೆಗಳ ಎದುರು ಮಂಡಿಸಬೇಕು ೩೮೧

ಕೋಷ್ಟಕ (೧) (ಕಲಮು ೭೩) ೩೮೩

ಕೋಷ್ಟಕ (೨) (ಕಲಮು ೧೪೩ ರನ್ವಯ ಲಾಯಸೆನ್ಸು ಇಲ್ಲದೆ ಸ್ಥಳಗಳನ್ನು ಉಪಯೋಗಿಸಬಾರದೆಂಬ ಉದ್ದೇಶಗಳು ೩೮೬

ಕೋಷ್ಟಕ (೩) ನೋಟೀಸಿನ ನಮೂನೆ (ಕಲಮು ೧೬೪) ೩೯೨

# ಶಬ್ದಾರ್ಥ

## ಪುಸ್ತಕದಲ್ಲಿ ಬಂದ ಕ್ರಮದಲ್ಲಿ ಕೊಡಲಾಗಿದೆ

Consolidate ಏಕೀಕರಿಸು
Amend ತಿದ್ದುಪಡಿಮಾಡು
Notification ಪರಿಪತ್ರ;ಪ್ರಕಟನೆ
Building ಕಟ್ಟಡ
Out House ಆವಾರದ ಮನೆ
Stable ಲಾಯ
Ware House ಸರಕಿನ ಮನೆ
Canopy ಆಚ್ಛಾದನ
Business ವ್ಯವಹಾರ
Trade ವ್ಯಾಪಾರ
Commerce ವಾಣಿಜ್ಯ
Manufacture ವಸ್ತುನಿರ್ಮಾಣ
District ಜಿಲ್ಲಾ
Council ಮಂಡಳ
Material ವಾಸ್ತವಿಕ
Conversion ಪರಿವರ್ತಿಸುವಿಕೆ
Alteration ಬದಲಾವಣೆ
Stall ಮಳಿಗೆ
Godown ಗುದಾಮು
Vice Versa ತದ್ವಿರುದ್ಧವಾಗಿ
Factory ಕಾರಖಾನೆ
Government ಸರಕಾರ
Health Officer ಆರೋಗ್ಯಾಧಿಕಾರಿ
Jurisdiction ಕ್ಷೇತ್ರಾಧಿಕಾರ
Infectious ಸಾಂಕ್ರಾಮಿಕ
Cerebro Spinal Fever ಮೆದೋಕಶೇರುಕಾರಜ್ಜುವಿನ ಜ್ವರ
Chiken Pox ಸಿಡುಬು
Diptheria ಗಂಟಲು ಬಾವು ಬೇನೆ
Enteric Fever ಕರಳು ಬಾವು ಜ್ವರ
Influenza ಗುದ್ದವ್ವನ ಬೇನೆ
Epidemic ಪಿಡುಗು
Leprosy ಮಹಾರೋಗ-ಕುಷ್ಟರೋಗ
Measles ಗಣಜಲಿ
Rabies ನಾಯಿಹುಚ್ಚು
Scarlet Fever ಕೆಂಪುಬಕ್ಕೆ ಜ್ವರ
Small Pox ಮೈಲೀ ಬೇನೆ
Tuberculosis ಕ್ಷಯರೋಗ
Yaws ಕುರುವಿನ ಬೇನೆ
Inhabitant ರಹಿವಾಸಿ
Occupy ಸ್ವಾಧೀನಪಡಿಸಿಕೊಳ್ಳು
Nuisance ಕಂಟಕ
Act ಕಾರ್ಯ
Omission ಅಕಾರ್ಯ
Octroi ಜಕಾತಿ
Offensive ಕ್ಲೇಶಕಾರಕ
Dangerous ಅಪಾಯಕಾರಕ
Tenant ಬಾಡಿಗೆದಾರ
Owner ಮಾಲಕ
Trustee ಧರ್ಮದರ್ಶಿ
Ferry ತಾರಿಣಿ
t ರಸ್ತೆ
ಕೋಷ್ಟಕ

Schedued Castes ಪರಿಶಿಷ್ಟ ವರ್ಗ
High Way ರಾಜಮಾರ್ಗ
Vehicle ವಾಹನ
Via duct ಕಣಿವೆಮಾರ್ಗ
Constituency ಮತದಾರ ಸಂಘ
Ratio ಪ್ರಮಾಣ
Census ಜನಗಣತಿ
Incorporation ಸಂಸ್ಥೀಕರಣ
Acquire ಪಡೆ
Hold ಧಾರಣಮಾಡು
Transfer ಹಸ್ತಾಂತರಿಸು
Ballot ಗುಪ್ತ ಮತದಾನ
Period ಕಾಲಾವಧಿ
Term of Office ಅಧಿಕಾರ ಕಾಲಾವಧಿ
Administrator ಆಡಳಿತಗಾರ
Voter ಮತದಾರ
Qualification ಅರ್ಹತೆ
Disqualification ಅನರ್ಹತೆ
Terpitude - ದೋಷ
Insolvent ನಾದಾರಿ
Deposit ಠೇವು
Jurisdiction ಅಧಿಕಾರ ಕ್ಷೇತ್ರ
Corrupt Practice ಕಲುಷಿತ ವ್ಯವಹರಣೆ
Scrutiny ಪರಿಶೀಲನೆ
Consideration ಸಂಭಾವನೆ
Abet ಪ್ರೋತ್ಸಾಹಿಸು
Polling Station ಮತದಾನ ಕಟ್ಟೆ

Vessel ನಾವೆ
Canvas ಮತಯಾಚನೆ
Disorderly Conduct ಅಕ್ರಮ ವರ್ತನೆ
Apparatus ಉಪಕರಣ
Wilfully ಬುದ್ಧಿಪೂರ್ವಕವಾಗಿ
Cognizable ಅನುಜ್ಞಾಪತ್ರವಿಲ್ಲದೆ ಲಕ್ಷ್ಯಯೋಗ್ಯ
Record ದಾಖಲೆ ಮಾಡು
Imprisonment ಕಾರಾವಾಸ
Deface ರೂಪಗೆಡಿಸು
Fraudulently ಮೋಸದಿಂದ
Prosecution ಖಟ್ಲೆ ಹಾಕುವುದು
Dissolve ವಿಸರ್ಜಿಸು; ಮುರಗಡೆಮಾಡು
Bye Law ಪೋಟನಿಯಮ
Procedure ವಿಧಾನ
Quorum ಕಾರ್ಯಾವಶ್ಯಕ ಸಂಖ್ಯೆ
Amendment ತಿದ್ದುಪಡಿ
Cancellation ರದ್ದತಿ
Interpellations ಮಾಹಿತಿ ಪ್ರಶ್ನೆಗಳು
Waste ನಾಶ
Road ರಸ್ತೆ
Drain ಗಟಾರ
Bund ಒಡ್ಡು
Bridge ಸೇತುವೆ
Maintain ಸುಸ್ಥಿತಿಯಲ್ಲಿಡು; ಪರಿಪಾಲನೆ ಮಾಡು

Domestic Use ಗೃಹೋಪಯೋಗ
Irrigation ನೀರಾವರಿ
Conservancy ಭಂಗೀ ವ್ಯವಸ್ಥೆ
Competent ಸಮರ್ಥ
Slaughter House ಕಸಾಯಿಖಾನೆ
Cottage Industries ಗುಡಿ ಕೈಗಾರಿಕೆ
Stray Dog ಬೀಡಾಡಿ ನಾಯಿ
Promotion ಪುರಸ್ಕರಿಸುವುದು
Exhibition ಪ್ರದರ್ಶನ
Seminar ಪರಿಷತ್ತು
Conference ಸಮ್ಮೇಲನ
Contribution ವಂತಿಗೆ
Co-opt ಸಹಕರಿಸಿಕೊಳ್ಳು
Water Way ಜಲಮಾರ್ಗ
Imminent ಅತ್ಯಾಸನ್ನ
Pure ಶುದ್ಧ
Culinary ಅಡಿಗೆಗಾಗಿ
Civil Court ದಿವಾಣಿ ನ್ಯಾಯಾಲಯ
Appellate Authority ಅಪೀಲಾಧಿಕಾರಿ
Fund ನಿಧಿ
Fee ಶುಲ್ಕ; ಫೀ
Assessment ಕರಾಕರಣೆ
Regular ನಿಯತ
Defaulter ತಪ್ಪಿತಸ್ಥ
Writ of Demand ಪ್ರಾರ್ಥನಾದೇಶ ಪತ್ರ
Vegetation ಹುಲ್ಲುಪಲ್ಲವಾದಿಗಳು
Remuneration ಪ್ರತಿಫಲ
Salary ಸಂಬಳ
Allowances ಭತ್ತೆ
Irrecoverable ಖಟ್ಟಬಾಕಿ
Auditor ಲೆಕ್ಕತಪಾಸಿಗ
Interim ಮಧ್ಯಂತರ
Authorised ಅಧಿಕರಿಸಿದ
Authenticated ಅಧಿಕೃತವಾಗಿಸಿದ
Proceedings ಪ್ರಕರಣಗಳು
Prosecution ಖಟ್ಲೆ
Suit ದಾವೆ
Rates ತೆರಿಗೆ
Mutatis Mutandis ಆವಶ್ಯಕ ಬದಲಾವಣೆಯೊಂದಿಗೆ
Valuation ಮೌಲ್ಯಮಾಪನ
Invalid ಅಶಕ್ತ
Dissolution ಮುರಗಡೆ
Reconstitution ಪುನಾರಚನೆ
Standing Committee ಸ್ಥಾಯಿ ಸಮಿತಿ
Executive ಕಾರ್ಯಕಾರಿಕ
Development Block ಅಭಿವೃದ್ಧಿ ಘಟಕ
Extract ಅವತರಣಿಕೆ
Regulation ಕ್ರಮನಿಯಮ
Rest House ತಂಗು ಮನೆ
Shandies ಸಂತೆ
Pedestrian ಪಾದಯಾತ್ರಿಕ
Prickly Pear ಮುಳ್ಳುಗಳ್ಳಿ
Noisome ದುರ್ಗಂಧ
Rank ಉಗ್ರಗಂಧಿ

Deleterious ವಿನಾಶಕ
Dispose of ವಿಲೇವಾರಿ ಮಾಡು
Cess ಸೆಸ್ಸು
Exemption ವಿನಾಯತಿ
Concession ರಿಯಾಯತಿ:
Instrument; deed ದಾಖಲೆ ಪತ್ರ
Honorarium ಗೌರವ ಧನ
Sinking Fund ಋಣ ಪರಿಹಾರಕ ನಿಧಿ
Compensation ಲುಕ್ಸಾನ ಭರಪಾಯಿ
Decree ಹುಕುಂನಾಮೆ
Order ಹುಕುಂ
Actual ವಾಸ್ತವಿಕ
Expected ಅಪೇಕ್ಷಿತ
Voucher ಪಾವತಿ
Write of ಸೂಟು ಬಿಡು–ಲೆಕ್ಕದಿಂದ ತೆಗೆದುಹಾಕು
Distraint ಜಪ್ತಿ
Sale ಮಾರಾಟ
Movable ಜಂಗಮ
Immovable ಸ್ಥಾವರ
Claimant ಮಾಗಣಿದಾರ
House of the People ಲೋಕ ಸಭೆ
Council of States ರಾಜ್ಯ ಸಭೆ
Coordination ಸಂಬಂಧೀಕರಣ
Operation ಕಾರ್ಯಾಚರಣೆ

Expedient ಯುಕ್ತ; ಪ್ರಸಂಗೋಚಿತ
Revocation ನಿವರ್ತನ
Suspend ಸ್ಥಗಿತಗೊಳಿಸು
Supercede ಅಧಿಕಾರಹೀನ ಮಾಡು
Search Warrant ಶೋಧ-ವಾರಂಟು
Purification ಶುದ್ಧೀಕರಿಸು
Successor ಉತ್ತರಾಧಿಕಾರಿ
Compensation ಪರಿಹಾರ ಧನ
Shellac ಅರಗಿನ ಪದರು
Spirit ಮದ್ಯಾರ್ಕ
Tallow ಚರಬಿ
Tar ಡಾಂಬರು
Tender ಕೊಡಮಾಡು
Good faith ಸದ್ಭಾವನೆ
Compoundable ರಾಜೀಯೋಗ್ಯ
Information ಸೂಚನಾ
Accused ಆರೋಪಿ
Custody ತಾಬಾ
Bonafide ಸದುದ್ದೇಶದಿಂದ
Indemnified ಅಭಯ ಪಡೆದ
Bill ಬಿಲ್ಲು
To serve Notice ನೋಟೀಸ ಜಾರಿಮಾಡ

Super Annuation fund ವಯೋಧಿಕ ನಿಧಿ

Session ಅಧಿವೇಶನ

Securities ಆಧಾರ ಪತ್ರಗಳು

Architect ಸ್ಥಾಪತ್ಯ ವಿಶಾರದ

Surveyor ಮೋಜಣಿದಾರ

Livery-stable ತೈನಾತಿ ಲಾಯಗಳು

Artizans ಕೈ ಕೆಲಸಗಾರರು

Ashes ಭಸ್ಮ

Cinder ಅಂಗಾರ; ಭಸ್ಮ

Combustible ಜ್ವಲನ

Explosives ಸ್ಫೋಟಕ

Flax ನಾರು

Husking ಹೊಟ್ಟು ತೆಗೆವುದು

Lac ಅರಗು

Pitch ಕಪ್ಪು ರಾಳ

Saltpetre ಸೋರುಪ್ಪು.

# ಮೈಸೂರ ಗ್ರಾಮಪಂಚಾಯತ ಮತ್ತು ಲೋಕಲ್‌ಬೋರ್ಡ ಕ್ವಾಯಿದೆ

## ೧೯೫೯

## ಪ್ರಸ್ತಾವನೆ

ಗ್ರಾಮ ಪಂಚಾಯತವು ನಮ್ಮ ದೇಶದಲ್ಲಿ ಬೆಳೆದು ಬಂದ ಬಹು ಪ್ರಾಚೀನ ಸಂಸ್ಥೆ. ಒಕ್ಕಲುತನವು ಭಾರತದ ಮುಖ್ಯ ಉದ್ಯೋಗ. ಹಳ್ಳಿ-ಗ್ರಾಮವು ಭಾರತದ ಜನವಸತಿಯ ಮೂಲ ಘಟಕ. ಭಾರತವು ಇಂದಿಗೂ-ಹಳ್ಳಿಗಳ ನಾಡು. ದೇಶದ ಜನತೆಯ ಬಹುಭಾಗವು ಹಳ್ಳಿಗಳಲ್ಲಿಯೇ ವಾಸವಾಗಿದೆ. ದೇಶದ ಹಿತದ ದೃಷ್ಟಿಯಿಂದ ಯಾವ ಕಾರ್ಯವನ್ನು ಮಾಡಬೇಕೆಂದರೂ ಹಳ್ಳಿಗಳನ್ನು ಗಮನಿಸಿಯೇ ಕಾರ್ಯಮಾಡಬೇಕಾವುದು. ಈ ಮಾತನ್ನು ಪ್ರಾಚೀನಕಾಲದಿಂದಲೂ ಇಂದಿನ ವರೆಗೆ ತಿಳಿದು ನಡೆಯುತ್ತ ಬಂದಿದ್ದಾರೆ.

ಒಕ್ಕಲತನಕ್ಕೂ ಹಳ್ಳಿಗೂ ನಿಕಟವಾದ ಸಂಬಂಧವಿದೆ. ಒಕ್ಕಲುತನದ ಮೂಲಕವಾಗಿಯೆ ಮೂಲದಲ್ಲಿ ಹಳ್ಳಿಗಳ ನಿರ್ಮಾಣವಾಯಿತು. ಇಂದಿಗಾದರೂ ಒಕ್ಕಲುತನ ಅವಲಂಬಿಸಿದವರು ಹಳ್ಳಿಗೇ ಹೋಗಬೇಕಾಗುತ್ತದೆ. ವ್ಯಾಪಾರ-ಉದ್ಯಮಗಳು ಪಟ್ಟಣದ ಬೆಳೆಗೆಗೆ ಕಾರಣವಾದುವು. ಅವು ಪಟ್ಟಣದ ಮುಖ್ಯ ಲಕ್ಷಣಗಳಾದುವು. ದೊಡ್ಡ ದೊಡ್ಡ ಪಟ್ಟಣಗಳು ನಗರಗಳೆಂದಾಗಿ-ಅಲ್ಲಿಯ ರೀತಿ ನೀತಿಗಳು ನಾಗರಿಕತೆ, ಎಂದು ಹೆಸರು ಪಡೆದುವು. ಆದರೆ ಹಿಂದಿನ ಕಾಲದಲ್ಲಿ ಹಳ್ಳಿಗಳ-ಗ್ರಾಮಗಳ ಸಭೆಯು-ಪಂಚಾಯತಗಳು-ಮುಖ್ಯವಾಗಿ ಜನಜೀವನದ ಸಂಸ್ಕೃತಿಯ ಕುರುಹುಗಳಾಗಿದ್ದರಿಂದ ಸಭ್ಯತೆ ಎಂಬುದು ಸಂಸ್ಕೃತಿಯ ಲಕ್ಷಣ ವಾಗಿದ್ದಿತು. ಈ ಸಭ್ಯತೆಯನ್ನು ನಿಜವಾಗಿಯೂ ಇಂದಿಗೆ ಗ್ರಾಮಗಳಲ್ಲಿಯೇ ನೋಡಬೇಕು. ನಾಗರಿಕತೆಯು ನಗರಜನ್ಯವಾದದ್ದು. ಸಭ್ಯತೆ-ಸಂಸ್ಕೃತಿ-ಗ್ರಾಮ ಜನ್ಯವಾದದ್ದು. ದೇಶದ ನಾಗರಿಕತೆ-ಕಾಲಕಾಲಕ್ಕೆ ಬದಲಾಗುವುದು. ಆದರೆ ಸಭ್ಯತೆ-ಇಲ್ಲವೆ ಸಂಸ್ಕೃತಿಯು ಶಾಶ್ವತವಾದ ಅಂಶವಾಗಿರುವುದು. ಭಾರತದ ಸಭ್ಯತೆ-ಇಲ್ಲವೆ ಸಂಸ್ಕೃತಿಯ ನಿದರ್ಶನವಾಗಿ ನಿಂತಿರುವ ಏಕಮೇವಾದ್ವಿತೀಯ ಸಂಸ್ಥೆಯೆಂದರೆ—ಪಂಚಾಯತ. ಇತಿಹಾಸ ಪೂರ್ವಕಾಲದಿಂದ ಆಧುನಿಕ ಕಾಲದ ವರೆಗೂ ಈ ಪಂಚಾಯತವು ಬಾಳಿದೆ. ಭಾರತದ ಮೇಲೆ ಜನ-ಜನಾಂಗಗಳ ದಾಳಿಯಾಗಿ, ರಾಜ್ಯ ಸಾಮ್ರಾಜ್ಯಗಳು ಬದಲಾಗಿ, ಬುಡಮೇಲಾಗಿ, ಅರಳಿ-ಉರಳಿ ಹೋದರೂ ನಿಶ್ಚಲವಾಗಿ-ನಿಶ್ಚಿಂತೆಯಿಂದ-ನಿತ್ಯವಾದ ಸಂಸ್ಥೆಯಾಗಿ ಉಳಿದಿದೆ ಪಂಚಾಯತ.

ಪಂಚಾಯತವು ಸ್ಥಾನಿಕ ಸಂಸ್ಥೆ. ಗ್ರಾಮವೇ ಅದರ ಪ್ರಾದೇಶಿಕ ಪರಿಮಿತಿ. ಮುಂದೆ ವಿಸ್ತಾರವಾದ ಪ್ರದೇಶಗಳಿಗೆ ಬೇರೆ ಬೇರೆ ಸ್ಥಾನಿಕ ಸಂಸ್ಥೆಗಳು ಹುಟ್ಟಿಕೊಂಡರೂ ಮೂಲಘಟಕ—ಗ್ರಾಮಪಂಚಾಯತ. ಮೂಲ ಆದರ್ಶ-ಗ್ರಾಮಪಂಚಾಯತ. ಇದು ಜನರಾಜ್ಯದ ಪ್ರತೀಕ. ಗಣರಾಜ್ಯದಲ್ಲಿ ಯಾವ ಸ್ಥಿತ್ಯಂತರವಾದರೂ ಜನರಾಜ್ಯದಲ್ಲಿ ಅದರ ಪರಿಣಾಮ ಏನೂ ಆಗುತ್ತಿರಲಿಲ್ಲ. ಅರಸನನ್ನು ಆರಿಸುವ ಕಾಲದಲ್ಲಿ ಈ ಜನರಾಜ್ಯದ ಮುಖ್ಯನಾದ ಗ್ರಾಮಣಿಯ ಪಾತ್ರ ಮಹತ್ವದ್ದು ಆಗಿರುತ್ತಿತ್ತು. ಗ್ರಾಮದ ಅಭಿಪ್ರಾಯದ ಸತ್ವವಾಗಿ ಅವನು ವರ್ತಿಸುತ್ತಿದ್ದನು. ಅದಕ್ಕಾಗಿ ಯಾವ ಅರಸನಾದರೂ ತನ್ನ ಅಧಿಕಾರವು ಗ್ರಾಮಾಂತರಗಳಲ್ಲಿ ಸ್ಥಾಪಿತವಾಗಬೇಕೆಂದು ಬಯಸುತ್ತಿದ್ದರೆ ಅವನು ಗ್ರಾಮಣಿಯ ಮೇಲೆ ಅವಲಂಬಿಸಬೇಕಾಗುತ್ತಿತ್ತು. ಹೀಗಾಗಿ ರಾಜಕೀಯದಲ್ಲಿ ಆದ ಅದಲು-ಬದಲುಗಳ ಪರಿಣಾಮ ಗ್ರಾಮಗಳ ಮೇಲೆ ಆಗದೆ, ಅಧಿಕಾರಾರೂಢನಾದವನು ಗ್ರಾಮಗಳ ಬೆಂಬಲವನ್ನು ಪಡೆಯಲೇ ಬೇಕಾಗುತ್ತಿತ್ತು. ಆದ್ದರಿಂದ ಯಾವ ರಾಜನೂ-ಸಮ್ರಾಟನೂ ಗ್ರಾಮಗಳನ್ನು-ಗ್ರಾಮಣಿಯನ್ನು-ಪಂಚಾಯತವನ್ನು ಅಲಕ್ಷಿಸುವಂತಿರಲಿಲ್ಲ. ಅಲ್ಲದೆ ಅವುಗಳ ವ್ಯವಹಾರದಲ್ಲಿ ಕೈಹಾಕುತ್ತಿರಲಿಲ್ಲ. ಪಂಚಾಯತಗಳು ಸ್ವಾಯತ್ತ-ಸ್ಥಾನಿಕ ಸಂಸ್ಥೆಗಳಾಗಿದ್ದುವು. ಯಾವುವೇ ತಂಟೆ-ತಕರಾರು ಇದ್ದರೂ ಅದನ್ನು ಪಂಚಾಯತವು ಬಗೆಹರಿಸುತ್ತಿತ್ತು. ಜನರಿಗೆ ಅದರಲ್ಲಿ ವಿಶ್ವಾಸವಿದ್ದಿತು. **ಈ ವಿಶ್ವಾಸವೇ ಪಂಚಾಯತದ ಭದ್ರತೆಯ ಅಡಿಗಲ್ಲಾಗಿದ್ದಿತು.**

ಬ್ರಿಟಿಶರು ಭಾರತದಲ್ಲಿ ತಳವೂರುವ ಮೊದಲು ಬಂದ ದಾಳಿಗಾರರೆಲ್ಲ ಭಾರತದ ನೆಲವನ್ನೆ ತಾಯ್ನಾಡಾಗಿ ಮಾಡಿಕೊಂಡಿದ್ದರಿಂದ ಇಲ್ಲಿಯ ನಾಗರಿಕತೆ-ಸಂಸ್ಕೃತಿಗಳನ್ನು ಹಾಳು ಬೀಳುಗಳೆಯದೆ ಅವುಗಳಲ್ಲಿ ಸಮರಸವಾಗಿ-ಅವುಗಳಿಗೆ ಹೊಸಮೆರಗು ಕೊಟ್ಟರು. ಆದರೆ ಬ್ರಿಟಿಶರು ಇಲ್ಲಿ ಬಾಳಲು ಬರಲಿಲ್ಲ; ಕಾವಲುಗಾರರಾಗಿ ಉಳಿದು ಕಾಯುವ ನೆವದಿಂದ ಸಂಪತ್ತನ್ನು ದೋಚಿಕೊಂಡು ಹೋಗುವ ಸಾಹಸಿಗರಾಗಿ ಪರಿಣಮಿಸಿದ್ದರು. ಈ ಪ್ರವೃತ್ತಿಯ ಮೂಲಕ ಅವರಿಗೆ ಇಲ್ಲಿಯ ನಾಗರಿಕತೆ-ಸಂಸ್ಕೃತಿಗಳನ್ನು ಸಂರಕ್ಷಿಸುವ-ಸಂವೃದ್ಧಿಸುವ ವಿಚಾರ ಬರುವ ಬದಲು ತಮ್ಮ ಅಧಿಕಾರ ಪ್ರಬಲವಾಗಬೇಕೆಂಬ ಮಹತ್ವಾಕಾಂಕ್ಷೆಯಿದ್ದಿತು. ಹಿಂದಿನ ರಾಜರು-ಸಮ್ರಾಟರು ಜನತೆಯ ವಿಶ್ವಾಸ-ಬೆಂಬಲ ಗಳಿಸಿ ನೆಲೆಯೂರಿದ್ದರು. ಬ್ರಿಟಿಶರು ಮಾತ್ರ-ವಿಶ್ವಾಸದ ವಿಷಯನ್ನು ಬಿಟ್ಟು ಬೆದರಿಕೆ-ಭೇದೋಪಾಯಗಳನ್ನು ಕೈಕೊಂಡರು. ಈ ಧೋರಣೆಯ ಮೂಲಕ ಭಾರತೀಯವಾಗಿ ಬೆಳೆದ, ಜನರ ವಿಶ್ವಾಸಕ್ಕೆ ಪಾತ್ರವಾದ, ಜನತೆಯ ಒಕ್ಕಟ್ಟನ್ನು ಕುದುರಿಸುವ ಅಧಿಕಾರವನ್ನು ವಿಕೇಂದ್ರೀಕರಿಸುವ ಯಾವ ಸಂಸ್ಥೆಯನ್ನೂ ಉಳಿಯಗೊಡಬಾರದೆಂಬ ರೀತಿ ನೀತಿಯನ್ನು ತಾಳಿದರು. ಆ ಕಾರಣದಿಂದ ಸಾವಕಾಶವಾಗಿ-ಜನತೆಗೆ ತಿಳಿಯದಂತೆಯೆ, ಕಾಲನೆಲವು ಕುಸಿಯತೊಡಗಿತು. ಸ್ವಾವಲಂಬಿಯಾಗಿ-ಸ್ವತಂತ್ರರಾಗಿ ಬೆಳೆದಿದ್ದ

ಜನತೆ ಪರಾವಲಂಬಿಯಾಗಿ ಪರತಂತ್ರವಾಗಿಬಿಟ್ಟಿತು. ಕಳೆದುಹೋದದ್ದು ತಿಳಿದಾಗ ಮರಳಿ ಪಡೆದುಕೊಳ್ಳುವ ಚೈತನ್ಯವಾಗಲಿ, ಧೈರ್ಯವಾಗಲೀ-ಆತ್ಮವಿಶ್ವಾಸವಾಗಲೀ ಒಕ್ಕಟ್ಟಾಗಲೀ ಉಳಿದಿರಲಿಲ್ಲ.

ಪ್ರಾಚೀನ ಕಾಲದಿಂದ ನಡೆದು ಬಂದ ಪಂಚಾಯತಗಳು ಗ್ರಾಮದ ಆಡಳಿತ ವನ್ನು ನೋಡುತ್ತಿದ್ದುವಲ್ಲದೆ, ನ್ಯಾಯದಾನವನ್ನೂ ಮಾಡುತ್ತಿದ್ದವು. ಈ ನ್ಯಾಯ ದಾನದ ಭಾಗವು ಬ್ರಿಟಿಶರಿಗೆ ಮುಳುವಾಯಿತು. ಇವುಗಳ ಅಂತರಂಗವನ್ನು ತಿಳಿಯಬೇಕೆಂದೂ ತಿಳಿದು ಸ್ಥಾನಪಲ್ಲಟಿಸಬೇಕೆಂದೂ ೧೮೦೨ ರ ರೆಗ್ಯುಲೇಶನದ ಪ್ರಕಾರ ಪಂಚಾಯತಗಳನ್ನು ನ್ಯಾಯಪದ್ಧತಿಯ ಕ್ರಮಾಗತ ಸಂಸ್ಥೆಗಳನ್ನಾಗಿ ಮಾಡಿಕೊಳ್ಳಲಾಯಿತು. ೧೮೨೭ ರ ರೆಗ್ಯುಲೇಶನ್ನು ಕೂಡ ಮೂಲಮಾತನ್ನು ಮಾರ್ಪಡಿಸಿ ಹೇಳಿತು. ಆದರೆ ಮುಂದೆ ಪ್ರಕಟವಾದ ಧೋರಣವು ಪಂಚಾಯತ ಗಳನ್ನು ಒಪ್ಪುವ ಬದಲು ಅಲ್ಲಗಳೆಯುವ ವಿಚಾರವನ್ನೆ ಸಮರ್ಥಿಸಿತು. ಇದಕ್ಕೆ ಎರಡು ಕಾರಣ: ಪಂಚಾಯತ ನ್ಯಾಯಪದ್ಧತಿಯು ಭಾರತೀಯವಾಗಿ ಬೆಳೆದು ಬಂದುದು. ಬ್ರಿಟಿಶರ ನ್ಯಾಯ ಪದ್ಧತಿಯ ಅಂಗವಾಗಿ ಅದು ಮೂಲಸತ್ವವನ್ನು ಕಾಯಿದುಕೊಳ್ಳದೆ ಹೋಯಿತು. ಯಾವುದೊಂದು ಕಾಯಿದೆ ಪದ್ಧತಿಯು ಆಯಾ ದೇಶದ-ಜನಾಂಗದ ವಿಚಾರ ಪದ್ಧತಿಯನ್ನು ಅವಲಂಬಿಸಿರುವುದು. ಭಿನ್ನ ವಿಚಾರ-ಸಂಸ್ಕೃತಿಯಲ್ಲಿ ಬೆಳೆದ ಎರಡು ಪದ್ಧತಿಗಳು ಹೊಂದುಗೂಡುವುದು ಕಠಿಣ ವಾಯಿತು. ಅಧಿಕಾರವಿದ್ದವರು-ತಮ್ಮದಕ್ಕೆ ಹೊಂದಿಕೊಳ್ಳದ್ದು-ನಿರುಪಯೋಗಿ ಎಂದು ಮುದ್ರೆಹಾಕಿದರು. ೧೮೬೧ ರಲ್ಲಿ ಪಂಚಾಯತಗಳನ್ನು ಪೂರ್ತಿಯಾಗಿ ಅಲ್ಲ ಗಳೆಯಲಾಯಿತು. ಆಡಳಿತ ವಿಕೇಂದ್ರೀಕರಿಸುವ ಯಾವುದೂ ಆಳರಸರಿಗೆ ೧೮೫೭ ರ ನಂತರ ಬೇಕಾಗಿದ್ದಿಲ್ಲವೆಂಬುದು ಸ್ಪಷ್ಟವದೆ.

೧೮೫೭ ರ ಪುನರವತಾರ ತಪ್ಪಿಸಲು ಎರಡೇ ಮಾರ್ಗಗಳಿದ್ದವು. ಕೇವಲ ದರ್ಪದ ದಂಡಾಧಿಕಾರದಿಂದ ಆಳುವುದು. ಇಲ್ಲವೆ ದೇಶೀಯ ಜನರನ್ನು ತಮ್ಮ ಆಡಳಿತ ವರ್ಗದಲ್ಲಿ ತೆಗೆದುಕೊಂಡು ಅವರ ವಿಚಾರ-ರೀತಿನೀತಿಗಳೆಲ್ಲವೂ ತಮ್ಮ ವಿದೇಶೀಯ ಛಾಪು-ಮುದ್ರೆಗಳ ಅಂಕಿತವಾಗಿರುವಂತೆ ನೋಡಿಕೊಳ್ಳುವುದು. ಭಾರತೀಯ ಕುದುರೆಗೆ ಬ್ರಿಟಿಶರ ಲಗಾಮು ಹಾಕಿ ಕುದುರೆಗೆ ಬ್ರಿಟಿಶ್ ಮುಖವಾಡ ಹಾಕಿ ಯಜಮಾನನಿಗೆ ಕಾಣಬೇಕಾದದ್ದೇ ಕುದುರೆಗೆ ಕಂಡಿರಬೇಕೆಂಬ ವ್ಯವಸ್ಥೆ ಮಾಡಲಾಯಿತು. ಇದರಿಂದ ಸ್ವಾಯತ್ತತೆಯು ಹೋಗಿ ಬಿಟ್ಟದ್ದರಿಂದ ಮೂಲ ಸತ್ವವೇ ಹೋಯಿತು. ಸೋಗು ಮಾತ್ರ ಉಳಿಯಿತು.

೧೮೮೦ ರಲ್ಲಿ ಕ್ಷಾಮ ಪರಿಹಾರದ ಕೆಲಸಕ್ಕೆ ಗ್ರಾಮಗಳಲ್ಲಿಯ ಸಂಸ್ಥೆಗಳನ್ನು ಉಪಯೋಗಿಸಬೇಕೆಂದು ಆದೇಶವಿತ್ತರೂ ಜನತೆಯು ಸಹಕಾರ ತೋರಲಿಲ್ಲ. ಮೇಲಿ ನಿಂದ ಬಂದ ಆದೇಶವಾದ್ದರಿಂದ ಕೆಳಗಿನವರು ಕೇಳಲಿಲ್ಲ. ಅಲಕ್ಷ್ಯಮಾಡಿದರು.

ಬಾಯಿಂದ ಹೂಂ–ಎಂದರೂ ಕೈಯಿಂದ ಕೆಲಸ ಮಾಡುತ್ತಿರಲಿಲ್ಲ. ಸ್ಥಾನಿಕ-ಸ್ವರಾಜ್ಯದ ಮೂಲ ಪುರಸ್ಕರ್ತನಾದ ಲಾರ್ಡ ರಿಪನ್ನನು ೧೮೮೦-೮೧ ರಲ್ಲಿ ಒಂದು ಠರಾವು ಹೊರಡಿಸಿ, ಸ್ಥಾನಿಕ ಸ್ವಾಯತ್ತ ಸಂಸ್ಥೆಗಳು ಜಿಲ್ಲಾ ಬೋರ್ಡ ಕಿಂತಲೂ ಕೆಳಗಿನ ಹಂತಗಳಲ್ಲಿ ಪ್ರಾರಂಭವಾಗಬೇಕೆಂದು ವಿಧಿಸಿದರೂ ಅವನು ಗ್ರಾಮಸಂಸ್ಥೆಗಳ ಬಗ್ಗೆ ಉಲ್ಲೇಖಮಾಡಲಿಲ್ಲ. ೧೮೮೪-೮೫ ರಲ್ಲಿ ಮದ್ರಾಸ-ಬಂಗಾಲ-ಇಲಾಖೆಗಳಲ್ಲಿ ಸ್ಥಾನಿಕ ಸ್ವರಾಜ್ಯಗಳ ಕಾಯಿದೆ ಅಮಲಿನಲ್ಲಿ ಬಂದುವು. ಈ ಕಾಯಿದೆಯು ಪಂಚಾಯತಗಳ ಉಲ್ಲೇಖಮಾಡಿ ಅವುಗಳಿಗೆ ಸ್ವಚ್ಛತೆ, ದೀಪದ ವ್ಯವಸ್ಥೆ, ರಸ್ತೆ ರಿಪೇರಿ, ಮುಂತಾದ ಕೆಲಸಗಳನ್ನು ಕೊಡಲಾಯಿತು. ಹಳೆಯ ಪಂಚಾಯತಗಳು ಜನತೆಯ ವಿಶ್ವಾಸದ ಮೇಲೆ ಬೆಳೆದುವು. ಈ ಕಾಯಿದೆಬದ್ಧ ಪಂಚಾಯತಗಳಲ್ಲಿ ಜನತೆಯ ವಿಶ್ವಾಸವೇ ಇದ್ದಿಲ್ಲ. ಆದ್ದರಿಂದ ಕಾಯಿದೆ ಒಪ್ಪಿಗೆ ಕೊಟ್ಟರೂ ಜನತೆ ಅವುಗಳನ್ನು ಮುಕ್ತ ಮನಸ್ಸಿನಿಂದ ಸ್ವೀಕರಿಸಲಿಲ್ಲ.

ಈ ಪರಿಸ್ಥಿತಿಯನ್ನು ಪೂರ್ತಿಯಾಗಿ ಅಭ್ಯಸಿಸಲು ೧೯೦೭ ರಲ್ಲಿ ಆಗಿನ ಬ್ರಿಟಿಶ ಸಮ್ರಾಟನಾದ ಏಳನೆಯ ಎಡ್ವರ್ಡನು, ವಿಕೇಂದ್ರೀಕರಣ ವಿಚಾರಣಾ ಆಯೋಗ ವನ್ನು (Royal Commission on Decentralisation) ನೇಮಿಸಿದನು. ಈ ಆಯೋಗದಲ್ಲಿ ಐವರು ಇಂಗ್ಲಿಶರು-ಒಬ್ಬ ಭಾರತೀಯ-ರೋಮೇಶ ಚಂದ್ರದತ್ತ ಎಂಬವರು ಇದ್ದರು. "ಗ್ರಾಮವೇ ಆಡಳಿತದ ಮೂಲ ಘಟಕ ವಾಗಿದ್ದು-ಅವುಗಳ ಮೇಲಿಂದಲೇ ಮೇಲಿನ ವಿಸ್ತೃತ ಆಡಳಿತ ವಿಭಾಗಗಳು ನಿರ್ಮಾಣವಾಗಿವೆ" ಎಂಬ ಮಾತನ್ನು ಆಯೋಗದವರು ತಿಳಿಯಪಡಿಸಿದರು. "ಗ್ರಾಮಗಳು ಹಿಂದಿನ ಕಾಲದಲ್ಲಿ ಸ್ವಾಯತ್ತವಾಗಿದ್ದವು. ಆದರೆ ಇಂದಿನ ದಿವಾಣಿ, ಫೌಜದಾರಿ, ರೆವಿನ್ಯೂ ನ್ಯಾಯಾಲಯಗಳು ಉದಯವಾದಂದಿನಿಂದ ಗ್ರಾಮಗಳು ತಮ್ಮ ಸ್ವಾಯತ್ತತೆಯನ್ನು ಕಳೆದುಕೊಂಡಿವೆ. ಇಂದಿನ ಪೋಲೀಸು ವ್ಯವಸ್ಥೆ ಯಿಂದಲೂ ಗ್ರಾಮಗಳ ಸ್ವಾಯತ್ತತೆಗೆ ಧಕ್ಕೆ ತಗಲಿದೆ. ಅಲ್ಲದೆ ನವಮನ್ವಂತರದ ರೀತಿಯಲ್ಲಿ ವ್ಯಕ್ತಿ ಸ್ವಾತಂತ್ರ್ಯ, ಸಂಚಾರಾನುಕೂಲತೆ, ರೈತವಾರಿ ಪದ್ಧತಿ ಇವು ಮೂಲ ಗ್ರಾಮದ ಸಾಂಘಿಕ ವಿಚಾರ ಪ್ರಣಾಲಿಯನ್ನು ತೆಗೆದು ಹಾಕಿಬಿಟ್ಟಿವೆ." ಎಂಬ ಮಾತನ್ನು ಆಯೋಗವು ಸಾರಿ ಹೇಳಿತು.

ಕಾಲಗತಿಯಲ್ಲಿ ಗ್ರಾಮಪಂಚಾಯತಗಳು ಹದಗೆಟ್ಟು ಹೋಗಿವೆಯೆಂದು ಕೆಲ ಪರಿಣತರು ಆಯೋಗದ ಮುಂದೆ ಸಾಕ್ಷಿ ನುಡಿದರೆ, ಇನ್ನು ಕೆಲವರು ಅವುಗಳನ್ನು ಪುನರ್ಘಟಿಸಲು ಇನ್ನೂ ಅವಕಾಶವಿದೆ ಎಂಬ ವಿಚಾರವನ್ನು ಮಂಡಿಸಿದರು. ಗ್ರಾಮಗಳ ಆಡಳಿತಕ್ಕಾಗಿ ಪಂಚಾಯತಗಳನ್ನು ಪುನರ್ಘಟಿಸಬೇಕೆಂದು ಆಯೋಗವು ಶಿಫಾರಸು ಮಾಡಿತು. ಈ ಶಿಫಾರಸು ಮಾಡುವಾಗ ಆಯೋಗವು ಹಳ್ಳಿಗಳಲ್ಲಿಯ ಜಾತಿ ವೈಷಮ್ಯ, ಪಕ್ಷಪಂಗಡಗಳ ರೀತಿ, ಇವು ಪಂಚಾಯತಗಳ

ಯಶಸ್ವೀ ಕಾರ್ಯಾಚರಣೆಗೆ ಅಡ್ಡಿಯಾಗಬಹುದೆಂಬ ಭೀತಿಯನ್ನು ವ್ಯಕ್ತಿಪಡಿಸಿದ್ದಿತು. ಆದರೂ ಪ್ರಯೋಗ ಮಾಡಿ ನೋಡಬೇಕೆಂದೂ ಪಂಚಾಯತದಲ್ಲಿ '೫ ಜನ' ಇರುವುದು ಒಳ್ಳೆತೆಂದು ಅವಶ್ಯ ಕಂಡರೆ ಹೆಚ್ಚು ಜನ ಇರಬಹುದೆಂದೂ ಸೂಚಿಸಲಾಗಿತ್ತು. ಹಳ್ಳಿಯ ಗೌಡನೆ, ಅಧಿಕಾರಪದ ಬಲದಿಂದ ಪಂಚಾಯತದ ಚೇರಮನ್ನನಾಗಿರಬೇಕು. ಉಳಿದ ಸದಸ್ಯರು ಹಳ್ಳಿಯ ಜನರಿಂದ ಚುನಾಯಿತರಾಗಬೇಕು. ಈ ಪಂಚಾಯತಗಳಿಗೆ ಕಾಲಾವಧಿ ಮಿತಿಯಿಲ್ಲ. ಸುಮ್ಮ ಸುಮ್ಮನೆ ಚುನಾವಣೆ ನಡೆಸಬಾರದು. ಪಂಚಾಯತಗಳ ಕಾರ್ಯಗಳನ್ನು ಹೀಗೆ ನಿರ್ದೇಶಿಸಲಾಗಿದ್ದಿತು.

೧. ಚಿಕ್ಕ ಪ್ರಕರಣಗಳ ಬಗ್ಗೆ ದಿವಾಣಿ-ಫೌಜದಾರಿ ಅಧಿಕಾರ.
೨. ಗ್ರಾಮದ ಸ್ವಚ್ಛತೆ ಹಾಗು ಕಿರಕೋಳ ಕೆಲಸಗಳ ಬಗ್ಗೆ ಅಧಿಕಾರ.
೩. ಶಾಲಾ ಕಟ್ಟಡಗಳ ರಚನೆ, ಶಾಲಾ ವ್ಯವಸ್ಥೆಯಲ್ಲಿ ಅಧಿಕಾರ.
೪. ಕೊಂಡವಾಡೆ-ಮಾರ್ಕೆಟ ಸಂಬಂಧ-ಅಧಿಕಾರ.
೫. ಉರುವಲ-ಮೇವು-ಸಂಬಂಧ ಅಧಿಕಾರ.

ಈ ಪಂಚಾಯತಗಳು ಜಿಲ್ಲಾ ಬೋರ್ಡ-ಉಪಜಿಲ್ಲಾ ಬೋರ್ಡಗಳ ಅಧೀನವಾಗಿರತಕ್ಕದ್ದು. ಆಯೋಗದ ವಿಚಾರಗಳನ್ನು ನೋಡಿದರೆ ಅದು ಆಗಿನ ಪರಿಸ್ಥಿತಿಯಲ್ಲಿ ಪಂಚಾಯತಗಳ ಸ್ಥಾನಮಾನವೇನಿರಬೇಕೆಂಬ ಬಗ್ಗೆ ಪೂರ್ಣ ವಿಚಾರ ಮಾಡಿದ್ದಿತೆಂದು ಹೇಳಬಹುದು. ಆದರೆ ಅವುಗಳ ಸ್ವಾಯತ್ತತೆಯ್ನು ಕಸಿದಕೊಂಡು ಪಂಚಾಯತಗಳ ಪಂಚತ್ವವನ್ನೇ ಹರಣಮಾಡಿದಂತಾಯಿತು. ಪಂಚಾಯತಗಳಿಗೆ ಇದ್ದ ದಿಗ್ಬಂಧನವನ್ನು ಡಾ. ಆನಿ ಬೆಸಂಟರು ೧೯೧೭ ರಲ್ಲಿ ಕಲಕತ್ತೆಯ ಕಾಂಗ್ರೆಸ್ ಅಧ್ಯಕ್ಷಸ್ಥಾನದಿಂದ ಹೀಗೆ ಬಣ್ಣಿಸಿದ್ದಾರೆ. "ಕೂಸಿನ ಕೈ-ಕಾಲು ಕಟ್ಟಿರಿ ಅಡ್ಡಾಡಲು ಕಲಿ ಎಂದು ಅದಕ್ಕೆ ಹೇಳಿರಿ. ಅದು ಅಡ್ಡಾಡಲು ಸಾಧ್ಯವಾಗದಿದ್ದರೆ, ಅದನ್ನು ಬಯ್ಯಿರಿ. ಸ್ವತಂತ್ರವಾಗಿದ್ದ ಮಗು ನಡೆಯುವಾಗ ಎಡವಬಹುದು—ಮುಗ್ಗರಿಸಬಹುದು. ಆದರೂ ಅದು ತನ್ನ ಸಮತೋಲವನ್ನು ಕಾಯಿದುಕೊಳ್ಳುತ್ತದೆ-ಮತ್ತು ನಡೆಯುತ್ತದೆ. ಕೈ-ಕಾಲು ಕಟ್ಟಿದ ಕೂಸು ವಾಯುಪೀಡಿತವಾಗಿ ನಡೆಯಲಿಕ್ಕೆ ಬಾರದಂತಾಗುವುದು." ಈ ಹೊಸ ವ್ಯವಸ್ಥೆಯು "ಹಳೆಯ ಗ್ರಾಮಪಂಚಾಯತದ ಮಾರಕವಾಗುವುದು." ಗ್ರಾಮದ ಅಧಿಕಾರಿಗಳು ಮೇಲಧಿಕಾರಿಗಳ ಕೈಕೆಳಗಿನವರಾಗಿ, ಅಧಿಕಾರಿಗಳ ಮುಖ ನೋಡುವವರಾಗುವರು. ಹಳ್ಳಿಗಳ ಸೇವಕರಾಗದೆ-ಹಳ್ಳಿಗಳಲ್ಲಿ ಸೊಕ್ಕಿನ ಅಧಿಕಾರಿಗಳಾಗುವರು."

"ಸ್ಥಾನಿಕ- ಸ್ವಾಯತ್ತ ಸಂಸ್ಥೆಗಳ ಮೇಲೆ ಬಂಧನಗಳನ್ನು ಹೇರಿ ಸರಕಾರದವರು ಆ ಸಂಸ್ಥೆಗಳ ಪೌರುಷವನ್ನೇ ಹೀರಿ ತೆಗೆದಿದ್ದಾರೆ" ಎಂದು ಸುರೇಂದ್ರನಾಥ ಬ್ಯಾನರ್ಜಿ ಅವರು ಸಾರಿ ಹೇಳಿದರು. ಸರಕಾರಕ್ಕೆ ಕೆಲಸ ಮಾಡಿದ ಶಿಫಾರಸು ಬೇಕಿತ್ತೆ ಹೊರತು, ಕಾರ್ಯಕಾರಿಯಾಗಬೇಕೆಂಬ ಇಚ್ಛೆ ಇರಲಿಲ್ಲ. ಯಾವ

ಸ್ವಾಯತ್ತ ಸಂಸ್ಥೆಯೂ ಬಲು ಬೇಗ ಬೆಳೆಯುವುದು ಬೇಕಾಗಿರಲಿಲ್ಲ. ಸ್ಥಾನಿಕ ಸ್ವಾಯತ್ತ ಸಂಸ್ಥೆಗಳ ಅಭಿವೃದ್ಧಿ ಎಂದರೆ ಕೇಂದ್ರ ಸರಕಾರದ ಅಧಿಕಾರ ಕಡಿಮೆ ಯಾದಂತೆಯೆ. ಅದು ಬ್ರಿಟಿಶರಿಗೆ ಬೇಕಾಗಿರಲಿಲ್ಲ.

ಯಾವುದು ಬ್ರಿಟಿಶರಿಗೆ ಬೇಕಾಗಿರಲಿಲ್ಲವೊ ಅದು ರಾಷ್ಟ್ರೀಯ ಮುಂದಾಳು ಗಳಿಗೆ ಬೇಕಾಗಿದ್ದಿತು. ಮೊದಲನೆಯ ಮಹಾಯುದ್ಧದ ನಂತರ ಭಾರತದ ರಾಷ್ಟ್ರೀಯ ರಂಗದ ಮೇಲೆ ಮಹಾತ್ಮಾಗಾಂಧಿಯವರು ಬಂದರು. ಅವರ ಪ್ರಭಾವವು ದಿನೇ ದಿನೇ ಬೆಳೆಯತೊಡಗಿತು. ಅದರ ಅರಿವು ಜನತೆಗೂ ಸರಕಾರಕ್ಕೂ ಆಯಿತು. ಕಾಂಗ್ರೆಸದ ೩೩ ನೆಯ ಮಹಾಧಿವೇಶನವು ದಿಲ್ಲಿಯಲ್ಲಿ ಪಂಡಿತ ಮದನ ಮೋಹನ ಮಾಲವೀಯರ ಅಧ್ಯಕ್ಷತೆಯಲ್ಲಿ ಸೇರಿತು. ಅಲ್ಲಿ ಹಳ್ಳಿಗರು ಬಹು ಸಂಖ್ಯೆ ಯಲ್ಲಿ ಬಂದಿದ್ದರೂ ರಾಜಕೀಯ ಸುಧಾರಣೆಗಳೇ ಮುಖ್ಯ ಸ್ಥಾನಪಡೆದುವು. ೧೯೨೦ ರ ಕಲಕತ್ತೆಯ ಸ್ಪೆಶಲ ಅಧಿವೇಶನದಲ್ಲಿ-ಅಸಹಕಾರ ಗೊತ್ತವಳಿಯ ಹೊಟ್ಟೆ ಯಲ್ಲಿ ಗ್ರಾಮ ಪಂಚಾಯತಗಳ ಪುನರುಜ್ಜೀವರದ ಅಂಕುರವಿದ್ದಿತು. ಮಹಾತ್ಮಾ ಗಾಂಧಿಯವರ ಅಸಹಕಾರ-ಹಾಗೂ ಸತ್ಯಾಗ್ರಹ ಚಳವಳಿಗಳಲ್ಲಿ ಗ್ರಾಮಪಂಚಾ ಯತದ ಬಗ್ಗೆ ಅಂದೋಲನ ನಡೆಯುವ ಹಾಗೆ ವಾತಾವರಣವುಂಟಾಗತೊಡಗಿತು. ಕಲಕತ್ತೆಯ ಠರಾವಿನಲ್ಲಿ " ಬ್ರಿಟೀಶರ ಕೋರ್ಟುಗಳನ್ನು ವಕೀಲರು ಮತ್ತು ಪಕ್ಷ ಕಾರರು ಬಹಿಷ್ಕರಿಸಬೇಕು ಮತ್ತು ಖಾಸಗಿ ವಾದವಿವಾದಗಳನ್ನು ಮಧ್ಯಸ್ಥಿಕೆಯ ಮುಖಾಂತರ ಬಗೆಹರಿಸಿಕೊಳ್ಳಬೇಕು. ಎಂದು ಹೇಳಿದುದರಲ್ಲಿ ಗ್ರಾಮಪಂಚಾಯತ ಗಳ ಪುನರುಜ್ಜೀವನ ನಡೆಸಬೇಕೆಂಬ ಸೂಚನೆ ಇದ್ದಿತು. ೧೯೨೦ ರ ನಾಗಪುರ ಕಾಂಗ್ರೆಸದಲ್ಲಿಯಂತೂ ಗ್ರಾಮಪಂಚಾಯತದ ಪ್ರಶ್ನೆಯು ಪ್ರಾಮುಖ್ಯ ಪಡೆಯಿತು. ೧೯೨೨ ರಲ್ಲಿ ರಾಜಗೋಪಾಲಾಚಾರಿಯವರು. " ಯಂಗ ಇಂಡಿಯಾ " ದಲ್ಲಿ ಹೀಗೆ ಬರೆದರು : ನಾವು ಮೇಲೆ ಮೇಲೆಯ ಹೆಚ್ಚು ಕೆಲಸ ಮಾಡುತ್ತಿದ್ದೇವೆ. ಗ್ರಾಮವು ನಮ್ಮ ಚಟುವಟಿಕೆಗಳ ರಂಗಸ್ಥಳವಾಗಬೇಕು. ........ಪ್ರತಿಯೊಂದು ಗ್ರಾಮಕ್ಕೆ ಒಂದು ಸಭೆಯಿದ್ದು ಅದು ಗ್ರಾಮದ ಎಲ್ಲ ವ್ಯವಹಾರಗಳಲ್ಲಿ ಭಾಗವಹಿಸಬೇಕು..... ಗ್ರಾಮಗಳು ಹೀಗೆ ಸ್ವತಂತ್ರವಾದರೆ ರಾಜಕೀಯ ಬಂಡಾಯದ ಅಸ್ತಿವಾರವನ್ನು ಹಾಕಿದಂತಾಗುವುದು.

ಗಯಾ ಕಾಂಗ್ರೆಸದ—೧೯೨೨ ರಲ್ಲಿ-ಅಧ್ಯಕ್ಷರಾದ ದೇಶಬಂಧು ಚಿತ್ತರಂಜನ ದಾಸರು ಹೀಗೆ ನುಡಿದರು : " ಗ್ರಾಮಜೀವನದ ಸಂಘಟನೆ ಹಾಗೂ ಸ್ಥಾನಿಕ ಸಂಸ್ಥೆಗಳ ವ್ಯಾವಹಾರಿಕ ಸ್ವಾಯತ್ತತೆ ಇವು ಪ್ರಾಂತಿಕ ಸ್ವಾಯತ್ತತೆ ಇಲ್ಲವೆ ಕೇಂದ್ರದ ಹೊಣೆಗಾರಿಕೆ ಇವುಗಳಕಿಂತಲೂ ಮಹತ್ವವೆನ್ನಿಸುವುದು. ಇವೆರಡರಲ್ಲಿ ಯಾವು ದೊಂದನ್ನು ಆರಿಸಿಕೊಳ್ಳುವ ಪ್ರಸಂಗ ನನಗೆ ಬಂದರೆ—ಸ್ಥಾನಿಕ ಸಂಸ್ಥೆಗಳ ಸ್ವಾಯತ್ತತೆಯನ್ನು ನಾನು ಆರಿಸಿಕೊಳ್ಳುತ್ತೇನೆ.

೧೯೩೧ ರಲ್ಲಿ ಗಾಂಧಿಯವರು ' ಯಂಗ ಇಂಡಿಯಾ ' ದಲ್ಲಿ ಹೀಗೆ ಬರೆದರು : "ಪಂಚಾಯತವೆಂಬುದು ಹಳೆಯದು. ಅದರ ಅರ್ಥವೆಂದರೆ—ಗ್ರಾಮದ ಜನರಿಂದ ಆರಿಸಲ್ಪಟ್ಟ ಐವರು ಮಹಾಜನರು ಉಳ್ಳ ಒಂದು ಸಭೆ. ಪಂಚಾಯತವು ಹಳೆಯ ಕಾಲದ ಜನರಾಜ್ಯದ ಲಕ್ಷಣವಾಗಿದ್ದಿತು. ಕಾಂಗ್ರೆಸ್ಸಿಗರು ಪಂಚಾಯತದ ಪುನರುಜ್ಜೀವನದ ಪ್ರಯತ್ನ ನಡೆಸಿದ್ದಾರೆ. ಪ್ರಥಮತಃ ೧೯೨೧ ರಲ್ಲಿ ಪ್ರಯತ್ನ ಮಾಡಲಾಯಿತು. ಆದರೆ ಅದು ಅಯಸ್ವಿಯಾಯಿತು. ವ್ಯವಸ್ಥಿತವಾಗಿ ಪ್ರಯತ್ನ ಮಾಡದಿದ್ದರೆ ಈಗಲೂ ಅದು ಅಯಶಸ್ವಿಯಾಗುವುದು. "

ಗಾಂಧೀಜಿ ಹೀಗೆ ಸಾರಿ ಹೇಳಿದ್ದರೂ ಪಂಚಾಯತದ ವಿಚಾರವು ರಾಷ್ಟ್ರೀಯ ವಿಚಾರ ಪ್ರಣಾಲಿಯ ಭಾಗವಾಯಿತು. ಈ ಪಂಚಾಯತ ಸಂಸ್ಥೆಯ ಮೇಲೆ ಭವಿಷತ್ತಿನ ಭಾರತದ ನಿರ್ಮಾಣವಾಗಬೇಕೆಂದು ಕೂಡ ಗಾಂಧೀಜಿ ಅನ್ನುತ್ತಿದ್ದರು. ಬೆಳಗಾವಿಯ ಕಾಂಗ್ರೆಸಿನ—೧೯೨೪—ಅಧ್ಯಕ್ಷಸ್ಥಾನದಿಂದ ಗಾಂಧೀಜಿ : ಪಂಚಾಯತಗಳ ನಿರ್ಣಯವೇ ಕೊನೆಯದಾಗಬೇಕು. ಲಂಚ ಇಲ್ಲವೆ ಕಾಯಿದೆಯ ತಪ್ಪು ಅರ್ಥಗಳು ಇರದ ಹೊರತು ಅಪೀಲು ಮಾಡಲು ಅವಕಾಶ ಇರಕೂಡದು.

" ಗ್ರಾಮದ ಸಂಘಟನೆ ಎಂದರೆ ಅದೊಂದು ಸುಲಭ ಶಬ್ದವೇನೋ ಆಯಿತು. ಆದರೆ ಅದರ ಸಂಘಟನೆ ಎಂದರೆ ಇಡೀ ಭಾರತದ ಸಂಘಟನೆ. ಏಕೆಂದರೆ ಭಾರತವು ಪ್ರಾಮುಖ್ಯವಾಗಿ ಗ್ರಾಮಗಳಲ್ಲಿಯೇ ಇದೆ. "— ಗಾಂಧೀಜಿ ೧೯೨೫.

" ಚಾರಿತ್ರ್ಯವಂತರು ಮಾತ್ರ ಹಳ್ಳಿಗೆ ಹೋಗಬೇಕು—ನೆಲಸಬೇಕು........ ಅವರು ತಾಳ್ಮೆಯುಳ್ಳವರು ಇರಬೇಕು. ಸತ್ಯವಂತರಾಗಿರಬೇಕು............ಗ್ರಾಮಗಳ ಉದ್ಧಾರಕ್ಕಾಗಿ ಅವತರಿಸಿದ ಸಂತನಾಗಿ ಹೋಗಕೂಡದು. ಸೇವಕನೆಂಬ ಸೌಜನ್ಯದಿಂದ ಹೋಗಬೇಕು. ಹಳ್ಳಿಯಿಂದ ಆಲಸ್ಯ, ಅಸ್ವಚ್ಛತೆ ಹಾಗು ದಾರಿದ್ರ್ಯ ಇವುಗಳನ್ನು ಹೊರಗೆ ಹಾಕಿರಿ. "

" ಹಳ್ಳಿಗಳು ಹಾಳಾಗದೆ ಉಳಿಯಬೇಕಾಗಿದ್ದರೆ ಪಂಚಾಯತ ಸಂಸ್ಥೆಯ ಪುನರುಜ್ಜೀವನವಾಗಲೇಬೇಕು. "

" ಆದರ್ಶ ಭಾರತೀಯ ಗ್ರಾಮವು ಸ್ವಚ್ಛತೆಯ ಆಗರವಾಗಿರುವ ಹಾಗೆ ಕಟ್ಟಲ್ಪಡಬೇಕು. ಆ ಸ್ಥಾನದಿಂದ ಐದು ಮೈಲುಗಳ ಅಂತರದಲ್ಲಿಯೇ ದೊರೆವ ಸಲಕರಣೆಗಳಿಂದ ಗುಡಿಸಲುಗಳು ಕಟ್ಟಲ್ಪಟ್ಟು ಅಲ್ಲಿ ಗಾಳಿ ಬೆಳಕು ಸಾಕಷ್ಟು ಬರುತ್ತಿರಬೇಕು. ಹಿತ್ತಲವಿದ್ದು ಅಲ್ಲಿ ಪಲ್ಲೆಕಾಯಿ ಬೆಳೆವ ಅನುಕೂಲತೆ ಇರಬೇಕು.........ಅಲ್ಲಿ ತಂಟೆ ತಕರಾರುಗಳನ್ನು ನಿರ್ಣಯಿಸಲಿಕ್ಕೆ ಪಂಚಾಯತಗಳು ಇರಬೇಕು.........ಸ್ಥಾನಿಕ ಆವಶ್ಯಕತೆಗಳಿಗಾಗಿ ಬೇಕಾಗುವ ಎಲ್ಲ ಸಂಪತ್ತು ಇರುತ್ತದೆ.........ಆದರೆ ಹಳ್ಳಿಗರು ತಮ್ಮ ಸ್ಥಿತಿ ಸುಧಾರಿಸಿಕೊಳ್ಳಬೇಕೆಂಬ ಬುದ್ಧಿಯವರಾಗಿಲ್ಲವೆಂಬುದೇ ದೊಡ್ಡ ಆತಂಕ. "

"ಗ್ರಾಮ ಸುಧಾರಣೆಯ ಚಳವಳವು ನೆಲೆನಿಂತಿದೆ."

೧೯೪೨ ರಲ್ಲಿ ಗಾಂಧೀಜಿಯವರು ಗ್ರಾಮ ಸ್ವರಾಜ್ಯದ ಕಲ್ಪನೆಯ ವಿವರವನ್ನು ಹೇಳಿದರು : ಗ್ರಾಮ ಸ್ವರಾಜ್ಯದ ನನ್ನ ಕಲ್ಪನೆಯಲ್ಲಿ ಪ್ರತಿಯೊಂದು ಗ್ರಾಮವು ತನ್ನ ನಿತ್ಯೋಪಯೋಗಿ ವಸ್ತುಗಳ ಬಗ್ಗೆ ಸ್ವತಂತ್ರವಾಗಿರತಕ್ಕ ಪೂರ್ಣ ರಾಜ್ಯವಾಗಿರಬೇಕು. ಅವಲಂಬನ ಅಗತ್ಯವಿದ್ದಲ್ಲಿ ಮಾತ್ರ ಪರಸ್ಪರಾವಲಂಬಿಯಾಗಬೇಕು.......... ಗ್ರಾಮದ ಸರಕಾರವು ಪಂಚಾಯತದಿಂದ ನಡೆಯಬೇಕು. ಅವರು ಐವರು ಪ್ರತಿ ವರುಷ ಗ್ರಾಮದ ಜನರಲ್ಲಿಯ ವಯಸ್ಕರಿಂದ ಚುನಾಯಿತರಾಗಬೇಕು......... ಈ ಪಂಚಾಯತವು ಶಾಸನಾಂಗ, ನ್ಯಾಯಾಂಗ-ಕಾರ್ಯಾಂಗಗಳನ್ನು ಒಳಗೊಂಡಿರಬೇಕು. ಇಲ್ಲಿ ಪೂರ್ತಿಯಾಗಿ ಪ್ರಜಾಪ್ರಭುತ್ವ ಇರಬೇಕು."

೧೯೪೩ : "ಕಾಂಗ್ರೆಸು ಪ್ರಾರಂಭದಿಂದಲೇ ಪ್ರಜಾಸತ್ತಾತ್ಮಕ ಸಂಸ್ಥೆಯಾಗಿದೆ......... ಇದರ ಬೇರುಗಳು ಹಳೆಯ ಪಂಚಾಯತ ಪದ್ಧತಿಯಲ್ಲಿವೆ."

೧೯೪೭ : ಪ್ರಜಾಸತ್ತೆಯಲ್ಲಿ ಪ್ರತಿಯೊಬ್ಬ ಸ್ತ್ರೀ-ಪುರುಷನು ತನ್ನ ಹೊಣೆಗಾರಿಕೆ ಏನೆಂಬುದನ್ನು ಅರಿಯಬೇಕು. ಪಂಚಾಯತ ರಾಜ್ಯವೆಂದರೇ ಅದು."

ಈ ಎಲ್ಲ ಮಾತುಗಳನ್ನು ಓದಿದಾಗ ಸ್ವರಾಜ್ಯದ ಅಡಿಗಲ್ಲು ಪಂಚಾಯತ; ಪ್ರಜಾಸತ್ತೆಯ ಅಸ್ತಿವಾರ ಪಂಚಾಯತ; ಆಡಳಿತದ ಮೂಲ ಘಟಕ ಪಂಚಾಯತ; ಎಂಬುದು ತಿಳಿವುದು. ಮತ್ತು ರಾಷ್ಟ್ರೀಯ ಇತಿಹಾಸದಲ್ಲಿ ಪಂಚಾಯತದ ಬಗ್ಗೆ ಚಳವಳ ಪ್ರಚಾರ ಹೇಗೆ ನಡೆಯಿತೆಂಬುದರ ಸ್ಥೂಲಕಲ್ಪನೆ ಬರುವದು.

ಸ್ವಾತಂತ್ರ್ಯ ಪೂರ್ವದಲ್ಲಿ ಅನೇಕ ರಾಜ್ಯಗಳಲ್ಲಿ ಗ್ರಾಮಪಂಚಾಯತ ಕಾಯಿದೆಗಳು ಜಾರಿಯಲ್ಲಿದ್ದವು. ಆದರೆ ಸ್ವಾತಂತ್ರ್ಯದ ನಂತರ ಗ್ರಾಮಪಂಚಾಯತಕ್ಕೆ ನಮ್ಮ ರಾಜ್ಯಘಟನೆಯಲ್ಲಿ ಸ್ಥಾನದೊರೆಯಿತು. ರಾಜ್ಯಘಟನೆಯ ನಾಲ್ಕನೆಯ ಪ್ರಕರಣದಲ್ಲಿ ನಿರ್ದೇಶಕ ತತ್ವಗಳು ಎಂಬುವಲ್ಲಿ ೪೦ನೆಯ ನಿಬಂಧನೆಯಲ್ಲಿ ಹೀಗೆ ಹೇಳಲಾಗಿದೆ.

"ಗ್ರಾಮಪಂಚಾಯತಗಳನ್ನು ಸಂಘಟಿಸುವ ಬಗ್ಗೆ ಸರಕಾರವು ಕ್ರಮಗಳನ್ನು ಕೈಕೊಳ್ಳತಕ್ಕದ್ದು. ಮತ್ತು ಅವು ಸಾಯತ್ತ ಸಂಸ್ಥೆಗಳಾಗಿ ಬೆಳೆಯಲು ಅನುಕೂಲವಾಗುವಂತೆ ಅವುಗಳಿಗೆ ಎಲ್ಲ ಅಧಿಕಾರಗಳನ್ನು ಕೊಡತಕ್ಕದ್ದು."

೧೯೫೪ ರ ಮೇ ತಿಂಗಳಲ್ಲಿ ನ್ಯೂದಿಲ್ಲಿಯಲ್ಲಿ ಸೇರಿದ ಕಾಂಗ್ರೆಸ್ ವರ್ಕಿಂಗ ಕಮಿಟಿಯು ಈ ಠರಾವನ್ನು ಸ್ವೀಕರಿಸಿತು.

"ಭಾರತದ ವಿವಿಧ ಭಾಗಗಳಲ್ಲಿ ಪಂಚಾಯತ ಪದ್ಧತಿಯು ಪ್ರಗತಿಪರವಾಗಿ ಮುಂದುವರೆಯುತ್ತಿರುವುದನ್ನು ವರ್ಕಿಂಗ ಕಮಿಟಿಯು ಸಂತಸದಿಂದ ಲಕ್ಷಿಸುತ್ತದೆ. ಇದು ಭಾರತದ ಪ್ರಾಚೀನ ಪದ್ಧತಿಗನುಸಾರವಾಗಿದೆಯಲ್ಲದೆ ಆಧುನಿಕ ಆವಶ್ಯಕತೆಗಳ ಅನುಗುಣವಾಗಿಯೂ ಇದೆ.

ಆಧುನಿಕ ಸರಕಾರವು ಕ್ರಮೇಣ ಕೇಂದ್ರೀಕೃತವಾಗುವುದು ಅನಿವಾರ್ಯ. ಈ ಪ್ರವೃತ್ತಿಯನ್ನು ಸಮತೋಲವಾಗಿಸಲು ಸ್ಥಾನಿಕ ಸ್ವಾಯತ್ತ ಸಂಸ್ಥೆಗಳು ಬೆಳೆಯಬೇಕು. ಅಂದರೆ ಜನಸಮೂಹವು ಆಡಳಿತದಲ್ಲಿ ಭಾಗಿಯಾಗಿ ಸಮಾಜದ ಸಾಮಾಜಿಕ ಆರ್ಥಿಕ-ನ್ಯಾಯಿಕ ವ್ಯವಹಾರಗಳಲ್ಲಿ ಪಾಲು ವಹಿಸಿದಂತೆಯಾಗುವುದು. ಇದನ್ನು ಸಾಧ್ಯಮಾಡುವ ದಾರಿಯೆಂದರೆ ಭಾರತದಲ್ಲಿಯ ಹಳ್ಳಿಗಳಲ್ಲಿ ಪಂಚಾಯತಗಳ ಅಭಿವೃದ್ಧಿ ಮಾಡುವುದು—ಒಂದೇ. ”

ಈ ಗೊತ್ತುವಳಿಗನುಸಾರವಾಗಿ ಕಾಂಗ್ರೆಸ್ ಗ್ರಾಮಪಂಚಾಯತ ಸಮಿತಿಯೊಂದು ಸ್ಥಾಪಿತವಾಯಿತು. ಅದು ತನ್ನ ವರದಿಯಲ್ಲಿ ಹೇಳಿದ ಅಂಶಗಳು ಇವು:

೧. ಪಂಚಾಯತ ಪದ್ಧತಿಯು ಭಾರತದಲ್ಲಿ ಒಳ್ಳೆಯ ಆರೋಗ್ಯಕರವಾದ ಪ್ರಜಾಸತ್ತೆಯ ಸಂಪ್ರದಾಯಗಳನ್ನು ಹಾಕಲು ಅನುಕೂಲತೆ ಒದಗಿಸುವುದು. ಅದರಿಂದ ದೇಶದ ಬಹು ಜನರು ಆಡಳಿತದಲ್ಲಿ ಪಾಲುಗಾರರಾಗುವರು.

೨. ಪಂಚಾಯತಗಳು ಸ್ಥಾನಿಕ ಸ್ವಾಯತ್ತ ಸಂಸ್ಥೆಗಳ ಘಟಕಗಳು ಆಗಬೇಕಲ್ಲದೆ ಸಾಮಾಜಿಕ ನ್ಯಾಯ-ಸಹಕಾರ ಒದಗಿಸುವ ಸಂಸ್ಥೆಗಳಾಗಬೇಕು.

೩. ಗ್ರಾಮಪಂಚಾಯತಗಳು ಅಧಿಕಾರ ವಿಕೇಂದ್ರೀಕರಣಕ್ಕೆ ನೆರವಾಗಬೇಕು.

೪. ಗ್ರಾಮಪಂಚಾಯತಗಳು ಹೊಸ ಮುಂದಾಳುತನ ಹುಟ್ಟಿಸಬೇಕು.

೫. ಗ್ರಾಮಪಂಚಾಯತಗಳ ಯಶಸ್ಸು ಅವು ಗ್ರಾಮದಲ್ಲಿ ಒಕ್ಕಟನ್ನು ಹುಟ್ಟಿಸುವುದು, ಎಲ್ಲ ಜನತೆಯ ವಿಶ್ವಾಸ ಗಳಿಸುವುದು, ಇವುಗಳ ಮೇಲೆ ಅವಲಂಬಿಸಿರುವುದರಿಂದ ಪಕ್ಷದ ರಾಜಕಾರಣದಿಂದ ಪಂಚಾಯತಗಳನ್ನು ದೂರ ಇಡುವುದು ಅಗತ್ಯವಾಗಿದೆ.

೬. ಗ್ರಾಮಪಂಚಾಯತದ ಚುನಾವಣೆಗಳು ಸರ್ವಾನುಮತದಿಂದ ಆಗಬೇಕು.

೭. ಸ್ಥಳೀಯ ಪದ್ಧತಿ-ಸಂಪ್ರದಾಯ-ಪರಿಸ್ಥಿತಿ ಆವಶ್ಯಕತೆಗಳನ್ನು ಲಕ್ಷಿಸಿ ಗ್ರಾಮಪಂಚಾಯತಗಳನ್ನು ರೂಪಿಸಲು ರಾಜ್ಯಸರಕಾರಗಳಿಗೆ ಆಸ್ಪದಕೊಡಬೇಕು.

೮. ವಯಸ್ಕರ ಮತದಾನ ಪದ್ಧತಿಯ ಮೇಲೆ ಚುನಾವಣೆ ನಡೆಯಬೇಕು. ಪಂಚಾಯತದ ಸಂಖ್ಯೆ ಜನಸಂಖ್ಯೆಯನ್ನು ಅವಲಂಬಿಸಿರಬೇಕು. ಆದರೆ ಅದು ೫ರ ಗುಣಕವಾಗಿರಬೇಕು.

೯. ಚುನಾವಣೆಯ ವಿಧಾನ ಸುಲಭ-ಸರಲವಾಗಿರಬೇಕು.

೧೦. ೧೫೦೦ ಜನಸಂಖ್ಯೆ ಇದ್ದರೆ ಗ್ರಾಮಪಂಚಾಯತಕ್ಕೆ ಒಳ್ಳೆಯದು. ಕಡಿಮೆ ಜನಸಂಖ್ಯೆಯಿದ್ದ ಗ್ರಾಮಗಳಿದ್ದರೆ ಗ್ರಾಮಗಳ ಗುಂಪಿಗೆ ಒಂದು ಪಂಚಾಯತ ರೂಪಿಸಬೇಕು.

೧೧. ಗ್ರಾಮಪಂಚಾಯತಗಳ ಕಾರ್ಯದ ಮೇಲ್ವಿಚಾರಣೆಗಾಗಿ ಬೇರೆ ಸಂಸ್ಥೆಗಳು ಇರಬೇಕು.

೧೨. ಕಂದಾಯ ವಸೂಲಿ ಕೆಲಸವನ್ನು ಪಂಚಾಯತಗಳಿಗೆ ಕೊಟ್ಟು ಅದ ರಲ್ಲಿಯ ಪ್ರತಿಶತ ೧೫ ರಿಂದ ೨೫ ರಷ್ಟು ಪಂಚಾಯತಕ್ಕೆ ಅದರ ಕಾರ್ಯಕ್ಕಾಗಿ ಕೊಡಬೇಕು.

ಈ ವರದಿಯು ಎಲ್ಲ ರಾಜ್ಯಗಳಲ್ಲಿ ಪಂಚಾಯತ ವಿಷಯದ ಬಗ್ಗೆ ವಿಚಾರ ಕುದುರಿಸಿತು. ವಿನೋಬಾಜಿಯವರ ಗ್ರಾಮದಾನ–ಭೂದಾನ–ಚಳವಳವು ಗ್ರಾಮ ಪಂಚಾಯತದ ಕಲ್ಪನೆಗೆ ಪುಟಕೊಟ್ಟಿದೆ. ಮೂಲದಲ್ಲಿ ಸಾಮಾಜಿಕ ರಾಜಕೀಯ ಘಟಕವಾಗಿ ಪರಿಣಮಿಸಿದಂತೆ ಗ್ರಾಮವು ಪಂಚಾಯತದ ಮೂಲಕ ಒಂದು ಆಡಳಿತದ ಘಟಕವಾಗಬೇಕೆಂದು ಬಯಸಲಾಗಿದೆ ಗ್ರಾಮವೇ ಒಂದು ಕುಟುಂಬ ವಾಗಬೇಕು. ವೈಯಕ್ತಿಕ ಒಡೆತನವು ಹೋಗಬೇಕು. ಸಾಮೂಹಿಕ-ಸಾಹಕಾರಿಕ ಒಡೆತನವು ಬರಬೇಕು. ಅಂದರೆ ಪಂಚಾಯತಗಳು ಅಂತಃಸತ್ವಪೂರಿತವಾಗುವುವು.

“ಭಾರತದಲ್ಲಿ ಕಲ್ಯಾಣರಾಷ್ಟ್ರವನ್ನು ಸ್ಥಾಪಿಸುವ ನಮ್ಮ ಪ್ರತಿಜ್ಞೆಯು ಮತ್ತು ಪ್ರಜಾಸತ್ತಾತ್ಮಕ ಸಂಪ್ರದಾಯಗಳನ್ನು ಎತ್ತಿಹಿಡಿವ ನಮ್ಮ ಪ್ರತಿಜ್ಞೆಯು ಗ್ರಾಮಾಂತರಗಳಲ್ಲಿಯ ಜನತೆಯನ್ನು ಪ್ರಜಾಸತ್ತೆಯ ರೀತಿಯಲ್ಲಿ ತರಬೇತುಗೊಳಿಸ ದಿದ್ದರೆ ಕೇವಲ ಅರ್ಥಹೀನವಾಗುವುದು. ಅಂದರೆ ಸುಧಾರಣೆಗೆ ಬೇಕಾಗುವ ಅಂತಃಸ್ಫೂರ್ತಿ ಗ್ರಾಮಸ್ಥರಿಂದಲೇ ಬರುವುದು” ಎಂದು ರಾಷ್ಟ್ರಪತಿ ಡಾ। ರಾಜೇಂದ್ರ ಬಾಬುಗಳು ೧೯೫೫ ರಲ್ಲಿ ಬಿಹಾರ ರಾಜ್ಯದ ಪಂಚಾಯತ ಪರಿಷತ್ತಿನಲ್ಲಿ ನುಡಿದರು.

ಗ್ರಾಮಪಂಚಾಯತವೆಂದರೆ ಗ್ರಾಮಾಭಿವೃದ್ಧಿ. ಸ್ಥಾನಿಕ ಸ್ವಾಯತ್ತತೆ ಯೆಂದರೆ—ಸ್ಥಾನಿಕ ಸಂಸ್ಥೆಗಳ ಅಭಿವೃದ್ಧಿ. ಈ ಉದ್ದೇಶಗಳನ್ನು ಇಟ್ಟುಕೊಂಡು ಈ ಹಿನ್ನೆಲೆಯಲ್ಲಿ ಮೈಸೂರ ರಾಜ್ಯದಲ್ಲಿ ಒಂದು ಕಾಯಿದೆ ಮಾಡಲಾಗಿದೆ. ಅವೇ ಮೈಸೂರ ಗ್ರಾಮಪಂಚಾಯತ ಹಾಗೂ ಲೋಕಲ್ ಬೋರ್ಡುಗಳ ಕಾಯಿದೆ— ೧೯೫೯. ಈ ಕಾಯಿದೆಯ ಹಿನ್ನೆಲೆ-ಇತಿಹಾಸಗಳು ಮನವರಿಕೆಯಾದರೆ ಕಾಯಿ ದೆಯ ಅಂತರಂಗವು ಬೇಗನೆ ತಿಳಿವುದು.

೧೯೫೯ ರ ಮೈಸೂರ ಕಾಯಿದೆ ನಂಬರ ೧೦.

# ಮೈಸೂರ ಗ್ರಾಮ ಪಂಚಾಯತ ಮತ್ತು ಲೋಕಲ್‌ಬೋರ್ಡ ಕಾಯಿದೆ

## ೧೯೫೯

೧೯೫೯ ರ ಜುಲೈ ೧೬ ಕ್ಕೆ ರಾಷ್ಟ್ರಪತಿಗಳ ಸಮ್ಮತಿ ದೊರೆತಿದೆ.

## ಪೀಠಿಕೆ

**ಮೈಸೂರು ರಾಜ್ಯದಲ್ಲಿಯ ಪಂಚಾಯತಗಳ ಸಂಬಂಧವಾಗಿದ್ದ ಕಾಯಿದೆಗಳನ್ನು ಏಕೀಕರಿಸುವ ಮತ್ತು ತಿದ್ದುಪಡಿಮಾಡುವ ಮತ್ತು ತಾಲೂಕ ಅಭಿವೃದ್ಧಿ ಬೋರ್ಡುಗಳನ್ನು ಮತ್ತು ಜಿಲ್ಲಾ ಅಭಿವೃದ್ಧಿ ಮಂಡಳಗಳನ್ನು ನಿರ್ಮಿಸುವುದಕ್ಕೆ ಅನುಕೂಲಮಾಡಿಕೊಡುವ ಕಾಯಿದೆ.**

ಮೈಸೂರು ರಾಜ್ಯದಲ್ಲಿಯ ಪಂಚಾಯತಗಳ ಸಂಬಂಧವಾಗಿದ್ದ ಕಾಯಿದೆಗಳನ್ನು ಏಕೀಕರಿಸುವುದು ಹಾಗು ತಿದ್ದುಪಡಿಮಾಡುವುದು ಮತ್ತು ತಾಲೂಕ ಅಭಿವೃದ್ಧಿ ಬೋರ್ಡುಗಳನ್ನು ಮತ್ತು ಜಿಲ್ಲಾ ಅಭಿವೃದ್ಧಿ ಮಂಡಳಗಳನ್ನು ನಿರ್ಮಿಸುವುದಕ್ಕೆ ಮತ್ತು ಇತರ ಆನುಷಂಗಿಕ ವಿಷಯಗಳ ಬಗ್ಗೆ ಅನುಕೂಲತೆ ಕಲ್ಪಿಸುವುದು ಅವಶ್ಯವಾಗಿದ್ದುದರಿಂದ —

ಭಾರತದ ಗಣರಾಜ್ಯದ ಈ ಹತ್ತನೆಯ ವರುಷದಲ್ಲಿ ಮೈಸೂರು ರಾಜ್ಯದ ಶಾಸನ ಸಭೆಯಿಂದ ಕೆಳಗೆ ಕಂಡಂತೆ ಕಾಯಿದೆ ಮಾಡಲ್ಪಡಲಿ.

# ಭಾಗ ಒಂದು

## ಪ್ರಕರಣ ೧—ಪ್ರಾರಂಭಿಕ

### ೧. ತಲೆಬರೆಹ–ವ್ಯಾಪ್ತಿ–ಮತ್ತು ಪ್ರಾರಂಭ

(೧) ಈ ಕಾಯಿದೆಯನ್ನು ೧೯೫೯ ರ ಮೈಸೂರ ಗ್ರಾಮಪಂಚಾಯತ ಮತ್ತು ಲೋಕಲ್‌ಬೋರ್ಡ ಕಾಯಿದೆ ಎಂದು ಕರೆಯಬೇಕು.

(೨) ಇದು ಇಡಿ ಮೈಸೂರು ರಾಜ್ಯಕ್ಕೆ ಅನ್ವಯಿಸುತ್ತದೆ.

(೩) ಸರಕಾರದವರು ಪ್ರಕಟನೆ ಪರಿಪತ್ರದ ಮೂಲಕ ಗೊತ್ತು ಮಾಡುವ ದಿನದಿಂದ ಇದು ಜಾರಿಯಲ್ಲಿ ಬರುತ್ತದೆ.

**ವಿವೇಚನೆ :** ಈ ಕಾಯಿದೆಯು ಇಡಿ ಮೈಸೂರು ರಾಜ್ಯಕ್ಕೆ ಅನ್ವಯಿಸು ವದು. ಇಡಿ ಮೈಸೂರು ರಾಜ್ಯವೆಂದರೆ ೧೯೫೬ ನವಂಬರ ೧ ಕ್ಕೆ ರಚಿತವಾದ ಮೈಸೂರುರಾಜ್ಯ, ಎಂದು ತಿಳಿಯಬೇಕು.

ಸರಕಾರದ ಗ್ಯಾಜೆಟಿನಲ್ಲಿ ಪ್ರಕಟನೆಯ ಪರಿಪತ್ರ ಹೊರಟು ಯಾವ ತಾರೀಖಿನಿಂದ ಇದು ಜಾರಿಯಲ್ಲಿ ಬರುವುದೆಂದು ಅದರಲ್ಲಿ ಹೇಳಲಾಗುವುದೋ ಅಂದಿನಿಂದ ಇದು ಜಾರಿಯಲ್ಲಿ ಬರುವುದು.

## ೨. ವ್ಯಾಖ್ಯೆಗಳು

ಈ ಕಾಯಿದೆಯಲ್ಲಿ ಸಂಬಂಧಾರ್ಥ ಬೇರೆ ಅರ್ಥವನ್ನು ಸೂಚಿಸದಿದ್ದರೆ ಈ ಕೆಳಗಿನ ಪದಗಳ ಅರ್ಥವು ಅಲ್ಲಿಯೆ ಕೊಟ್ಟಂತೆ ಆಗುತ್ತದೆ.

(೧) **ಅಸಿಸ್ಟಂಟ ಕಮಿಶನರ**– ಎಂದರೆ ಭೂಕಂದಾಯ ಶಾಖೆಯ ಒಂದು ಪ್ರಾಂತವೆಂದು ಕರೆಯಲ್ಪಡುವ ವಿಭಾಗದ ಅಸಿಸ್ಟಂಟ ಕಮಿಶನರ.

(೨) **ಕಟ್ಟಡ**– ಈ ಶಬ್ದವು, ಮನೆ, ಆವಾರದ ಮನೆ, ಅಂಗಡಿ, ಲಾಯ, ಸರಕಿನಮನೆ, ಕಾರ್ಯಾಲಯ, ಆಚ್ಛಾದನ, ಶೆಡ್ಡು, ಗುಡಿಸಲು, ಇಲ್ಲವೆ ಮಾನವ ವಸತಿಗಾಗಿ ಉಪಯೋಗವಾಗಲಿ ಬಿಡಲಿ ಅಂತಹ ಆವಾರ, ಇವುಗಳನ್ನು ಒಳಗೊಳ್ಳುತ್ತದೆ. ಮತ್ತು ಅದು ಗೋಡೆ, ಆವಾರಗೋಡೆ, ಕಂಟಿ ಬೇಲಿ, ವರಾಂಡಾ, ಕಟ್ಟೆ, ಪಾಯಾ, ಬಾಗಿಲು, ಪಾವುಟಿಗೆ ಮತ್ತು ಈ ತರಹದ ಎಲ್ಲವನ್ನು ಒಳಗೊಳ್ಳುತ್ತದೆ.

(೩) **ವ್ಯವಹಾರ**– ಈ ಶಬ್ದವು ವ್ಯಾಪಾರ, ವಾಣಿಜ್ಯ, ಇಲ್ಲವೆ ವಸ್ತು-ನಿರ್ಮಾಣ ಇಲ್ಲವೆ ವ್ಯಾಪಾರ-ವಾಣಿಜ್ಯ-ವಸ್ತುನಿರ್ಮಾಣಗಳ ರೀತಿಯಲ್ಲಿ ನಡೆವ ಒಂದು ಸಾಹಸ ಇಲ್ಲವೆ ಸಂಸ್ಥೆ ಇವುಗಳನ್ನು ಒಳಗೊಳ್ಳುತ್ತದೆ.

(೪) **ಚೇರಮನ್**– ಅಂದರೆ ಪಂಚಾಯತದ ಚೇರಮನ್.

(೫) **ಕಮಿಶನರ**– ಅಂದರೆ, ಡಿವಿಜನಲ್ ಕಮಿಶನರ ಇಲ್ಲವೆ ಈ ಕಾಯಿದೆಯನ್ವಯವಾಗಿ ಕಮಿಶನರರ ಅಧಿಕಾರಗಳನ್ನು ನಿರ್ವಹಿಸಲು ಸರಕಾರದಿಂದ ನೇಮಕ ಮಾಡಲ್ಪಟ್ಟ ಬೇರೆ ಅಧಿಕಾರಿ.

(೬) **ಕಂಪನಿ**– ಅಂದರೆ, ೧೯೫೬ ರ ಕಂಪನಿ ಕಾಯಿದೆ (ಕೇಂದ್ರ ಕಾಯಿದೆ ನಂಬರ ೧–೧೯೫೬) ಯಲ್ಲಿ ವ್ಯಾಖ್ಯೆ ಮಾಡಲಾದ ಕಂಪನಿ ಮತ್ತು ಈ ಶಬ್ದವು ಮೈಸೂರು ರಾಜ್ಯದಲ್ಲಿ ವ್ಯವಹಾರ ನಡೆಸುತ್ತಿರುವ ಯಾವುದೇ ಸಂಘ-ಇಲ್ಲವೆ ಸಂಸ್ಥೆ-ಅದು ನೋಂದಾಯಿಸಲ್ಪಟ್ಟಿರಲಿ ಬಿಡಲಿ, ಅದರ ಮುಖ್ಯ ಕಾರ್ಯಾಲಯವು ಈ ರಾಜ್ಯದಲ್ಲಿರಲಿ ಬಿಡಲಿ, ಅಂತಹ ಸಂಘ–ಸಂಸ್ಥೆಯನ್ನು ಒಳಗೊಳ್ಳುತ್ತದೆ.

(೭) **ಜಿಲ್ಲಾ-** ಅಂದರೆ, ಭೂಕಂದಾಯದ ಆಡಳಿತದ ಸಲುವಾಗಿ ಕಾಲ ಕಾಲಕ್ಕೆ ಜಿಲ್ಲಾ ಎಂದು ರಚಿತವಾದ ಭೂಕಂದಾಯದ ಜಿಲ್ಲಾ.

(೮) **ಜಿಲ್ಲಾ ಮಂಡಳ–** ಎಂದರೆ ಈ ಕಾಯಿದೆಯನ್ವಯವಾಗಿ ಒಂದು ಭೂಕಂದಾಯದ ಜಿಲ್ಲೆಗಾಗಿ ರಚಿತವಾದ ಜಿಲ್ಲಾ ಅಭಿವೃದ್ಧಿ ಮಂಡಳ.

(೯) **ರಚನೆ-ಪುನರ್ರಚನೆ-ಇಲ್ಲವೆ ವಿಸ್ತರಣೆ-** ಎಂಬುವು ಯಾವುದೇ ಕಟ್ಟಡದ ಸಂಬಂಧವಾಗಿ ಇದ್ದಾಗ ಈ ಕೆಳಗಿನ ಅರ್ಥಗಳನ್ನು ಒಳಗೊಳ್ಳುವುವು.

(i) ಯಾವುದೇ ಕಟ್ಟಡದ ಯಾವುದೇ ವಾಸ್ತವಿಕ ಬದಲಾವಣೆ ಇಲ್ಲವೆ ವಿಸ್ತರಣೆ.

(ii) ಮೂಲತಃ ಮಾನವ ವಾಸಕ್ಕಾಗಿ ಕಟ್ಟದೇ ಇದ್ದ ಯಾವುದೇ ಕಟ್ಟಡವನ್ನು ಮಾನವ ವಾಸಕ್ಕಾಗಿ ಯೋಗ್ಯವಾಗುವಂತೆ ಕಟ್ಟಡದ ರಚನೆಯಲ್ಲಿ ಬದಲಾವಣೆ ಮಾಡಿ ಪರಿವರ್ತಿಸುವಿಕೆ.

(iii) ಮಾನವ ವಾಸದ ಒಂದು ಇಲ್ಲವೆ ಹೆಚ್ಚು ಸ್ಥಳಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಅವುಗಳನ್ನು ಪರಿವರ್ತಿಸುವಿಕೆ.

(iv) ಮಾನವ ವಾಸದ ಎರಡು ಇಲ್ಲವೆ ಹೆಚ್ಚು ಸ್ಥಳಗಳನ್ನು ಕಡಿಮೆ ಸಂಖ್ಯೆಯಲ್ಲಿ ಅವುಗಳನ್ನು ಪರಿವರ್ತಿಸುವಿಕೆ.

(v) ಗಟಾರು ವ್ಯವಸ್ಥೆಯಲ್ಲಿ . ಇಲ್ಲವೆ ಉಳಿದ ಸ್ವಚ್ಛತೆಯ ವ್ಯವಸ್ಥೆಯಲ್ಲಿ ಇಲ್ಲವೆ ವಾಸ್ತವಿಕವಾಗಿ ಅದರ ಭದ್ರತೆಯ ವ್ಯವಸ್ಥೆಯಲ್ಲಿ ವ್ಯತ್ಯಯ ಬರುವಂಥ ಕಟ್ಟಡದ ಯಾವುದೇ ಬದಲಾವಣೆ.

(vi) ಯಾವುದೇ ಕಟ್ಟಡಕ್ಕೆ ಕೋಣೆಗಳನ್ನು, ಕಟ್ಟಡಗಳನ್ನು ಆವಾರ ಮನೆಗಳನ್ನು ಇಲ್ಲವೆ ಇತರ ರಚನೆಗಳನ್ನು ಜೋಡಿಸುವುದು.

(vii) ಮೂಲತಃ ಆ ಉದ್ದೇಶಗಳಿಗಾಗಿ ಇಲ್ಲದೆ ಇಲ್ಲವೆ ಕಟ್ಟಲಾಗದೇ ಇದ್ದ ಯಾವುದೇ ಸ್ಥಳ ಇಲ್ಲವೆ ಕಟ್ಟಡವನ್ನು ರಚನೆಯಲ್ಲಿಯ ಯಾವುದೇ ಬದಲಾವಣೆಯಿಂದ ಧಾರ್ಮಿಕ ಪೂಜೆಗಾಗಿ ಇಲ್ಲವೆ ಪವಿತ್ರ ಉದ್ದೇಶಗಳಿಗಾಗಿ ಉಪಯೋಗಿಸುವ ಉದ್ದೇಶಕ್ಕಾಗಿ ಪರಿವರ್ತಿಸುವಿಕೆ.

(viii) ಗೋಡೆಗಳ ಇಲ್ಲವೆ ಕಟ್ಟಡಗಳ ನಡುವಿನ ಬಯಲು ಜಾಗಾದ ಮೇಲೆ ಛಪ್ಪರ ಇಲ್ಲವೆ ಮುಸುಕು ಹಾಕಿದಾಗ ಇಂತಹ ಜಾಗಾದ ಸಂಬಂಧವಾಗಿರುವ ಛಪ್ಪರ ಇಲ್ಲವೆ ಮುಸುಕುಗಳಿಂದಾದ ಕಟ್ಟಡ.

(ix) ಮೂಲತಃ ಅದಕ್ಕಾಗಿ ಕಟ್ಟದೇ ಇದ್ದ ಯಾವುದೇ ಕಟ್ಟಡವನ್ನು ಮಳಿಗೆ, ಅಂಗಡಿ, ಸರಕಿನಮನೆ, ಗುದಾಮು ಆಗಿ ಇಲ್ಲವೆ ತದ್ವಿರುದ್ಧವಾಗಿ ಪರಿವರ್ತಿಸುವಿಕೆ.

(x) ಗೋಡೆಯ ಮಾಲಕನಲ್ಲಿ ಮಾಲಕಿ ವಹಿವಾಟ ಇಲ್ಲದ ಯಾವುದೇ ರಸ್ತೆ–ಇಲ್ಲವೆ ಬಯಲು ಜಾಗಾಕ್ಕೆ ಹೊಂದಿಕೊಂಡು ಇರುವ• ಗೋಡೆಯಲ್ಲಿ ಆ ಜಾಗಾಕ್ಕೆ ಇಲ್ಲವೆ ರಸ್ತೆಗೆ ಹೋಗಲು ಬಾಗಿಲು ಇಲ್ಲವೆ ಕಿಂಡಿ,

(೧೦) **ಕಾರಖಾನೆ**— ಅಂದರೆ, ೧೯೪೮ರ ಕಾರಖಾನೆ ಕಾಯಿದೆಯಲ್ಲಿ (೧೯೪೮ ಕೇಂದ್ರ ಕಾಯಿದೆ ನಂಬರು ೧೩) ವ್ಯಾಖ್ಯೆಮಾಡಲಾದ ಕಾರಖಾನೆಯೆಂದು ಅರ್ಥವಾಗುವುದಲ್ಲದೆ, ಮಾನವ ಇಲ್ಲವೆ ಪಶು ಇವುಗಳ ಸಾಧನದಿಂದ ಉತ್ಪಾದಿಸದೆ ಇದ್ದ ಮತ್ತು ಉಗೆ, ನೀರು, ಎಣ್ಣೆ, ಗ್ಯಾಸು, ವಿದ್ಯುತ್ ಇಲ್ಲವೆ ಬೇರೆ ಯಾವುದೇ ಶಕ್ತಿಯಿಂದ ಯಾಂತ್ರಿಕವಾಗಿ ಸಂಚಾಲಿತವಾದ ರೀತಿಯ ಸಹಾಯದಿಂದ ಯಾವುದೇ ಔದ್ಯಮಿಕ, ವಸ್ತುನಿರ್ಮಾಣದ, ಇಲ್ಲವೆ ವ್ಯಾಪಾರದ ಕ್ರಮವು ನಡೆಸಲಾಗುತ್ತದೆ, ಅಂತಹ ಆವಾರ ಸಹಿತವಾದ ಯಾವುದೇ ಸ್ಥಳವು ಎಂದು ಅರ್ಥವಾಗುತ್ತದೆ.

(೧೧) **ಸರಕಾರ**— ಅಂದರೆ ರಾಜ್ಯ ಸರಕಾರ.

(೧೨) **ಆರೋಗ್ಯಾಧಿಕಾರಿ**— ಅಂದರೆ ತಾಲೂಕ ಬೋರ್ಡಿನಿಂದ ಇಲ್ಲವೆ ಅದರ ಪರವಾಗಿ ನೇಮಕಹೊಂದಿದ–ಒಂದು ವೇಳೆ ನೇಮಕವಾಗಿದ್ದರೆ–ಆರೋಗ್ಯಾಧಿಕಾರಿ. ಮತ್ತು ಇಂತಹ ಅಧಿಕಾರಿ ಇರದೇ ಇದ್ದರೆ, ಸಂಬಂಧಪಟ್ಟ ತಾಲೂಕ ಇಲ್ಲವೆ ಪ್ರದೇಶದ ಮೇಲೆ ಕ್ಷೇತ್ರಾಧಿಕಾರ ಇರುವ ಸರಕಾರದ ಆರೋಗ್ಯಾಧಿಕಾರಿ.

(೧೩) **ಸಾಂಕ್ರಾಮಿಕ ರೋಗ**—ಅಂದರೆ ಮೇದಾ–ಕಶೇರುಕಾರಜ್ಜುವಿನ ಜ್ವರ, ಸಿಡುಬು, ಮಾರಿಬೇನೆ (ಕಾಲರಾ), ಗಂಟಲು ಬಾವು ಬೇನೆ, ಕರಳು ಬಾವು ಜ್ವರ, ಗುದ್ದವ್ವನ ಬೇನೆಯ ಪಿಡುಗು, ಮಹಾರೋಗ, ಕುಷ್ಟರೋಗ, ಗಣಜಲಿ, ಪ್ಲೇಗು, ನಾಯಿ ಹುಚ್ಚು, ಕೆಂಪುಬಕ್ಕೆ ಜ್ವರ, ಮೈಲಿಬೇನೆ, ಕ್ಷಯರೋಗ, ವಿಷಮ ಜ್ವರ, ಕುರುವಿನ ಬೇನೆ ಇಲ್ಲವೆ ಸರಕಾರದವರು ಸಾಮಾನ್ಯವಾಗಿ ಇಡೀ ರಾಜ್ಯಕ್ಕೆ ಅನ್ವಯಿಸುವ ಹಾಗೆ ಪರಿಪತ್ರದಲ್ಲಿ ಕಾಣಿಸಿದ ಇಲ್ಲವೆ ಯಾವುದೇ ಪ್ರದೇಶಕ್ಕೆ ಇಲ್ಲವೆ ಅದರ ವಿಭಾಗಕ್ಕೆ ಅನ್ವಯಿಸುವ ಹಾಗೆ ಪರಿಪತ್ರದಲ್ಲಿ ಕಾಣಿಸಿದ ಬೇರೆ ಯಾವುದೇ ರೋಗ.

(೧೪) **ರಹಿವಾಸಿ**— ಎಂಬ ಶಬ್ದವು ಯಾವುದೇ ಪ್ರದೇಶದಲ್ಲಿ ಸಾಮಾನ್ಯವಾಗಿ ವಾಸಿಸುವ, ಇಲ್ಲವೆ ವ್ಯವಹಾರ ಸಾಗಿಸುವ ಇಲ್ಲವೆ ಸ್ಥಾವರ ಆಸ್ತಿಯ ಒಡೆತನವುಳ್ಳ ಇಲ್ಲವೆ ಸ್ವಾಧೀನವುಳ್ಳ ಯಾವುದೇ ವ್ಯಕ್ತಿಯನ್ನು ಒಳಗೊಳ್ಳುತ್ತದೆ.

(೧೫) **ಭೂಕಂದಾಯ**— ಅಂದರೆ ಯಾವ ವಿಭಾಗದಲ್ಲಿ ಹೊಲವು ಇರುವುದೋ ಆ ಪ್ರದೇಶದಲ್ಲಿ ಪ್ರಚಲಿತವಿದ್ದ ಸರ್ವೇನಿಯುಕ್ತವಾಗಿ ಗೊತ್ತುಪಡಿಸಲಾದ ಆ ಹೊಲದ ಸಂಬಂಧವಾಗಿ ಯಾವುದೇ ವ್ಯಕ್ತಿಯಿಂದ ತನ್ನ ಮಾಲಕಿಯಲ್ಲಿದ್ದ ಇಲ್ಲವೆ ವಶದಲ್ಲಿದ್ದ ಹೊಲದ ಲೆಕ್ಕಕ್ಕೆ ಸರಕಾರಕ್ಕೆ ಸಲ್ಲಬೇಕಾದ ಇಲ್ಲವೆ ಸರಕಾರವು ಪಡೆಯಬಹುದಾದ ಎಲ್ಲ ರಕಮುಗಳು ಮತ್ತು ಹಣ.

**ವಿವರಣೆ:** ಯಾವುದೊಂದು ಗ್ರಾಮಕ್ಕೆ ಸರ್ವೆ ನಿಯುಕ್ತಿಯು ಆಗಿರದಿದ್ದಲ್ಲಿ, ನೆರೆಯಲ್ಲಿಯ ಸರ್ವೆನಿಯುಕ್ತಿಯಾದ ಗ್ರಾಮದಲ್ಲಿಯ ಸಮಾನ-ಸ್ಥಾನ-ವ್ಯಾಪ್ತಿಯುಳ ಹೊಲದ ಭೂಕಂದಾಯವೆ ಪ್ರಮಾಣವೆಂದು ಈ ಕಾಯಿದೆಯ ಉದ್ದೇಶಕ್ಕಾಗಿ ಗಣಿಸಲ್ಪಡಲಾಗುವುದು.

(೧೬) **ಪಾಯಖಾನೆ**- ಎಂಬ ಶಬ್ದವು ಸಂಡಾಸ, ಕಾಲುಮಡಿ ಮನೆ, ಬಚ್ಚಲುಮನೆ ಇವುಗಳನ್ನು ಒಳಗೊಳ್ಳುವುದು.

(೧೭) **ಸ್ಥಾನಿಕ ಅಧಿಕಾರ**- ಎಂಬ ಶಬ್ದವು ಮ ನಸಿಪಲ್ ಕಾರ್ಪೊರೇಶನ್, ಮುನಸಿಪಲ್ ಕಾವುನ್ಸಿಲ್, ತಾಲೂಕ ಅಭಿವೃದ್ಧಿ ಬೋರ್ಡ, ಜಿಲ್ಲಾ ಅಭಿವೃದ್ಧಿ ಮಂಡಳ, ಗ್ರಾಮಪಂಚಾಯತ ಮತ್ತು ಪಟ್ಟಣ ಪ್ರದೇಶ ಸಮಿತಿ ಇವುಗಳನ್ನು ಒಳಗೊಳ್ಳುತ್ತದೆ.

(೧೮) **ಮಾರ್ಕೆಟ**- ಅಂದರೆ, ಯಾವ ಸ್ಥಳದಲ್ಲಿ ಸಾಮಾನ್ಯವಾಗಿ ಇಲ್ಲವೆ ನಿಯಮಿತಕಾಲಿಕವಾಗಿ ಕನಿಷ್ಠ ನಾಲ್ಕು ಅಂಗಡಿ, ಇಲ್ಲವೆ ಮಳಿಗೆಗಳು ಇಲ್ಲವೆ ಶೆಡ್ಡುಗಳು ಹಾಕಲ್ಪಡುವವೊ ಇಲ್ಲವೆ ಯಾವ ಸ್ಥಳದಲ್ಲಿ ಕನಿಷ್ಠ ೧೦ ಪ್ರಾಣಿಗಳು ಮಾರಲಿಕ್ಕೆ ತರಲ್ಪಟ್ಟಿರುವವೊ ಅಂತಹ ಸರಕು ಇಲ್ಲವೆ ಪ್ರಾಣಿಗಳನ್ನು ಸಾರ್ವಜನಿಕ ವಾಗಿ ಮಾರುವ ಸ್ಥಳ.

(೧೯) **ಮೈಸೂರ ಸ್ಥಾನಿಕ ಸರಕಾರ ಸೇವೆ**- ಎಂದರೆ ಭಾರತದ ರಾಜ್ಯ ಘಟನೆಯ ನಿಬಂಧನೆ ೩೦೯ ರನ್ವಯವಾಗಿ ಮಾಡಲಾದ ನಿಯಮಗಳು ನಿರ್ದಿಷ್ಟ ಪಡಿಸುವಂತಹ ಕರಾರುಗಳಿಗಂಕಿತವಾಗಿ ಇರುವ ಹುದ್ದೆಗಳುಳ್ಳ ಮತ್ತು ಅಂತಹ ವೇತನಗಳುಳ್ಳ ಮೈಸೂರ ಸ್ಥಾನಿಕ ಸರಕಾರ ಸೇವೆಯೆಂದು ಸ್ಥಾಪಿತವಾದ ಸೇವೆ.

(೨೦) **ಪ್ರಕಟನೆ-ಪರಿಪತ್ರ**— ಅಂದರೆ ಸರಕಾರೀ ಗ್ಯಾಜೆಟದಲ್ಲಿ ಪ್ರಕಟಿತ ವಾದು ಪ್ರಕಟನೆ-ಪರಿಪತ್ರ.

(೨೧) ಕಂಟಕ ( Nuisance ) ಎಂಬ ಶಬ್ದವು— ಸಾರ್ವಜನಿಕವಾಗಿ ತಮ್ಮ ಹಕ್ಕು ಬಾಧ್ಯತೆಗಳನ್ನು ಉಪಯೋಗಿಸಲು ಪ್ರಸಂಗ ಬರಬಹುದಾದ ವ್ಯಕ್ತಿ ಗಳ, ಇಲ್ಲವೆ ಆ ಪ್ರದೇಶದಲ್ಲಿ ವಾಸವಾಗಿರುವ ಸಾಮಾನ್ಯ ಜನತೆಯ ಸಾರ್ವಜನಿಕ ಆರೋಗ್ಯಕ್ಕೆ ಇಲ್ಲವೆ ಸಾಮಾಜಿಕ ಆಸ್ತಿಗೆ ಇಲ್ಲವೆ ಜೀವನಕ್ಕೆ ಅಪಾಯಕಾರಿಯಾ ಗುವ ಹಾಗೆ ಇರುವ, ಇಲ್ಲವೆ ಅಪಾಯಕಾರಿಯಾಗಬಹುದಾದಂತಹ ಇಲ್ಲವೆ ಅವರ ದೃಷ್ಟಿ, ಶ್ರುತಿ, ವಾಸನೆ ಇವುಗಳಿಗೆ ವ್ಯತ್ಯಯ ಬರುವಂತಹ ಇಲ್ಲವೆ ಅವರ ವಿಶ್ರಾಂತಿ-ಭಂಗ ಇಲ್ಲವೆ ನಿದ್ರಾಭಂಗವಾಗುವಂತಹ, ಮನನೋಯುವಂತಹ, ಅಪಾಯಕಾರಿಯಾಗುವಂತಹ, ಯಾವುದೇ ಕಾರ್ಯ, ಅಕಾರ್ಯ ಸ್ಥಳ, ಇಲ್ಲವೆ ವಸ್ತು ಇವುಗಳನ್ನು ಒಳಗೊಳ್ಳುತ್ತದೆ.

(೨೨) **ಜಕಾತಿ**— ಅಂದರೆ, ಪಟ್ಟಣ ಪಂಚಾಯತದ ಪ್ರದೇಶದಲ್ಲಿಯು ಬಳಕೆ, ಉಪಯೋಗ ಇಲ್ಲವೆ ಮಾರಾಟಕ್ಕಾಗಿ ಆ ಪ್ರದೇಶದ ಅಧಿಕಾರಕ್ಷೇತ್ರದಲ್ಲಿಯ ವಾಸಯೋಗ್ಯ ವಿಭಾಗದಲ್ಲಿ ಪ್ರವೇಶಮಾಡುವ ಸರಕಿನ ಮೇಲೆ ಹಾಕಿದ ಕರ.

(೨೩) **ಕ್ಲೇಶಕಾರಕ ಇಲ್ಲವೆ ಅಪಾಯಕಾರಕ ವ್ಯಾಪಾರ**— ಅಂದರೆ, ಯಾವ ವ್ಯಾಪಾರ-ವ್ಯವಹಾರ ಇಲ್ಲವೆ ಉದ್ಯಮದಲ್ಲಿ ಉಪಯೋಗಿಸಲಾದ ಸರಕುಗಳಿಂದ ಕಂಟಕ ಉಂಟಾಗಬಹುದೋ ಅಂತಹ 'ವ್ಯಾಪಾರ-ವ್ಯವಹಾರ ಇಲ್ಲವೆ ಉದ್ಯಮ.

(೨೪) **ಸ್ವಾಧೀನದಲ್ಲಿಟ್ಟುಕೊಂಡವ**— ಅಂದರೆ, ಯಾವುದೇ ಭೂಮಿ, ಇಲ್ಲವೆ ಕಟ್ಟಡ ಇಲ್ಲವೆ ಅದರ ಭಾಗ ಇದರ ಪ್ರತ್ಯಕ್ಷ ಕಬಜಾದಲ್ಲಿ ಇರುವ ಯಾವುದೇ ವ್ಯಕ್ತಿ ಎಂದೂ ಮತ್ತು ಈ ಶಬ್ದವು ಪ್ರತ್ಯಕ್ಷ ಕಬಜಾದಲ್ಲಿರುವ ಮಾಲಕ ಮತ್ತು ಬಾಡಿಗೆದಾರ, ಇ॰ ಲಾಯಸೆನ್ಸದಾರ-ಈ ಬಾಡಿಗೆದಾರ ಇಲ್ಲವೆ ಲಾಯಸೆನ್ಸದಾರನು ಬಾಡಿಗೆ ಕೊಡಲು ಹೊಣೆಗಾರನಿರಲಿ ಬಿಡಲಿ-ಇವರನ್ನು ಒಳಗೊಳ್ಳುತ್ತದೆ.

(೨೫) **ಕ್ಲೇಶಕಾರಕ ವಸ್ತು**— ಎಂಬ ಶಬ್ದವು ಹೊಲಸು, ಗಟಾರು ಹೊಲಸು,ಹೇಸಿಕೆ, ಕಸ, ಉಗುಳು,-ಎಲೆ ಅಡಿಕೆ ತಂಬಾಕು ಸಹಿತವಾದ ಉಗುಳು-ಅಡಿಗೆಮನೆಯಲ್ಲಿಯ ಇಲ್ಲವೆ ಲಾಯದ ಹಳಸು, ಕಾಜಿನ ತುಣುಕುಗಳು ಇಲ್ಲವೆ ಗಡಿಗೆಮಡಿಕೆಯ ಚೂರುಗಳು ಮತ್ತು ರದ್ದಿಕಾಗದ ಇವುಗಳನ್ನು ಒಳಗೊಳ್ಳುತ್ತದೆ.

(೨೬) **ಮಾಲಕ**— ಎಂಬ ಶಬ್ದವು ಭೂಮಿ ಇಲ್ಲವೆ ಕಟ್ಟಡ ಇಲ್ಲವೆ ಅದರ ಭಾಗವನ್ನು ಬಾಡಿಗೆಗೆ ಇಲ್ಲವೆ ಬಾಡಿಗೆದಾರನಿಗೆ ಒಂದು ವೇಳೆ ಕೊಟ್ಟಿದ್ದರೆ ಬಾಡಿಗೆಯನ್ನು ಯಾರು ವಸೂಲು ಪಡೆಯುವರೋ ಇಲ್ಲವೆ ತನ್ನ ಸ್ವಂತದ ಲೆಕ್ಕಕ್ಕೆ ಇಲ್ಲವೆ ಏಜೆಂಟನೆಂದು, ಇಲ್ಲವೆ ರಿಸೀವ್ಹರನೆಂದು ಇಲ್ಲವೆ ಧರ್ಮದರ್ಶಿಯೆಂದು ತಾತ್ಕಾಲಿಕವಾಗಿ ಯಾವುದೇ ಭೂಮಿ, ಕಟ್ಟಡ ಇಲ್ಲವೆ ಅದರ ಭಾಗದ ಬಾಡಿಗೆಯನ್ನು ಯಾರು ಸ್ವೀಕರಿಸುವರೋ ಆ ವ್ಯಕ್ತಿಯನ್ನು ಒಳಗೊಳ್ಳುತ್ತದೆ.

(೨೭) **ಪಂಚಾಯತ**— ಅಂದರೆ ಈ ಕಾಯಿದೆಯನ್ವಯವಾಗಿ ಸ್ಥಾಪಿತವಾದ ಆಯಾ ಸಂಬಂಧದಲ್ಲಿ ಗ್ರಾಮಪಂಚಾಯತ ಇಲ್ಲವೆ ಪಟ್ಟಣ ಪಂಚಾಯತ.

(೨೮) **ಗೊತ್ತುಪಡಿಸಿದ**— ಅಂದರೆ ಈ ಕಾಯಿದೆಯನ್ವಯವಾಗಿ ಮಾಡಲಾದ ನಿಯಮಗಳು ಗೊತ್ತುಪಡಿಸಿದ ಎಂದು ಅರ್ಥ.

(೨೯) **ಅಧ್ಯಕ್ಷ-ಪ್ರೆಸಿಡೆಂಟ**— ಎಂದರೆ ತಾಲೂಕ ಬೋರ್ಡಿನ ಅಧ್ಯಕ್ಷ-ಪ್ರೆಸಿಡೆಂಟ ಎಂದು ಅರ್ಥ.

(೩೦) **ಖಾಸಗಿ ಮಾರ್ಕೆಟ**— ಅಂದರೆ ಸಾರ್ವಜನಿಕ ಮಾರ್ಕೆಟು ಅಲ್ಲದ ಬೇರೆ ಮಾರ್ಕೆಟು.

(೩೧) **ಸಾರ್ವಜನಿಕ ತಾರಿಣಿ**— ಅಂದರೆ ಯಾವುದೇ ಪ್ರವಾಸಿ, ಪ್ರಾಣಿ, ಚಕ್ಕಡಿ, ಬಂಡಿ, ಇಲ್ಲವೆ ಇಂತಹ ವಾಹನ ಇಲ್ಲವೆ ಸರಕು ಇವುಗಳನ್ನು ಬಾಡಿಗೆ ಪಡೆದು ಸಾಗಿಸಲು ಉಪಯೋಗಿಸುವಂತಹ ತಾರಿಣಿ.

(೩೨) **ಸಾರ್ವಜನಿಕ ಮಾರ್ಕೆಟ**— ಅಂದರೆ, ಪಂಚಾಯತ ಇಲ್ಲವೆ ತಾಲೂಕ ಬೋರ್ಡಿನ ಒಡೆತನವುಳ್ಳ ಇಲ್ಲವೆ ಪಂಚಾಯತದಿಂದ ಇಲ್ಲವೆ ತಾಲೂಕ ಬೋರ್ಡಿನಿಂದ ಸ್ವಾಧೀನಪಡಿಸಿಕೊಂಡ, ಕಟ್ಟಿಸಲ್ಪಟ್ಟಂಥ ಇಲ್ಲವೆ ಚಾಲಿತವಾದ ಇಲ್ಲವೆ ಘೋಷಿಸಲಾದ ಯಾವುದೇ ಮಾರ್ಕೆಟು.

(೩೩) **ಸಾರ್ವಜನಿಕ ಸ್ಥಳ**— ಅಂದರೆ, ಪಂಚಾಯತ ಇಲ್ಲವೆ ತಾಲೂಕ ಬೋರ್ಡಿನ ಅಧಿಕಾರಾಂತರ್ಗತವಾಗಿರಲಿ ಬಿಡಲಿ, ಯಾವ ಸ್ಥಳವು ಖಾಸಗಿ ಆಸ್ತಿ ಅಲ್ಲವೊ ಮತ್ತು ಯಾವುದು ಸಾರ್ವಜನಿಕರ ಉಪಯೋಗ ಇಲ್ಲವೆ ಉಪಭೋಗಕ್ಕೆ ಮುಕ್ತವಾಗಿದೆಯೋ ಆ ಸ್ಥಳ.

(೩೪) **ಸಾರ್ವಜನಿಕ ರಸ್ತೆ**— ಅಂದರೆ, ಅದು ರಹದಾರಿ ಇರಲಿ ಬಿಡಲಿ, ಯಾವ ರಸ್ತೆಯ ಮೇಲೆ ಸಾರ್ವಜನಿಕರಿಗೆ ದಾರಿಯ ಹಕ್ಕು ಇದೆಯೋ ಅಂತಹ ಯಾವುದೇ ರಸ್ತೆ.

(೩೫) **ಭೂಕಂದಾಯ ಗ್ರಾಮ**— ಅಂದರೆ, ಭೂಕಂದಾಯದ ಆಡಳಿತದ ಉದ್ದೇಶಗಳಿಗಾಗಿ ಸರಕಾರದಿಂದ ಗ್ರಾಮವೆಂದು ಗುರುತಿಸಲ್ಪಟ್ಟ ಯಾವುದೇ ಸ್ಥಾನಿಕ ಪ್ರದೇಶ.

**ವಿವರಣೆ**—ಯಾವುದೇ ಭೂಕಂದಾಯದ ಗ್ರಾಮದ ಭಾಗವು ಮುನಸಿಪಾಲಟಿ ಇಲ್ಲವೆ ಸ್ಯಾನಿಟರಿ ಬೋರ್ಡು ಇಲ್ಲವೆ ಪಟ್ಟಣ ಪ್ರದೇಶ ಸಮಿತಿ ಇವರ ಅಧಿಕಾರಕ್ಕೆ ಒಳಪಟ್ಟಿದ್ದರೆ, ಅದನ್ನು ಬಿಟ್ಟು ಉಳಿದ ಭಾಗವನ್ನು ಭೂಕಂದಾಯದ ಗ್ರಾಮವೆಂದು ಪರಿಗಣಿಸಬೇಕು.

(೩೬) **ಕೋಷ್ಟಕ**— ಎಂದರೆ ಈ ಕಾಯದೆಗೆ ಜೋಡಿಸಲಾದ ಕೋಷ್ಟಕ.

(೩೭) **ಪರಿಶಿಷ್ಟ ವರ್ಗಗಳು**— ಎಂದರೆ, ಚಾಲತಿಯಲ್ಲಿದ್ದ ೧೯೫೦ ರ ರಾಜ್ಯಘಟನೆಯ ( ಪರಿಶಿಷ್ಟ ಪಂಗಡಗಳು ) ಹುಕುಮು ಮತ್ತು ೧೯೫೦ ರ ರಾಜ್ಯ ಘಟನೆಯ ( ಪರಿಶಿಷ್ಟ ವರ್ಗಗಳು ) ಹುಕುಮು ಇವುಗಳಲ್ಲಿ ಮೈಸೂರು ರಾಜ್ಯದ ಸಂಬಂಧವಾಗಿ ನಿರ್ದಿಷ್ಟ ಪಡಿಸಲಾದ ಪರಿಶಿಷ್ಟ ವರ್ಗಗಳು ಮತ್ತು ಪರಿಶಿಷ್ಟ ಪಂಡಗಳು ಎಂದು ಅರ್ಥ.

(೩೮) **ರಸ್ತೆ**—ಎಂಬ ಶಬ್ದವು. ರಾಜಮಾರ್ಗ, ಫರಸಿ, ಸೇತುವೆ, ಕಮಾನು, ಮಾರ್ಗ, ಹೊಲ, ಕಾಲುದಾರಿ, ಕವಲುದಾರಿ, ಅಂಗಣ, ಸಂದಿ, ಸವಾರಿದಾರಿ, ಬೀದಿ,-ಅದು ರಹದಾರಿ ಇರಲಿ ಬಿಡಲಿ; ಇವುಗಳನ್ನು ಒಳಗೊಳ್ಳುತ್ತದೆ. ಮತ್ತು ಒಂದು

ರಸ್ತೆಯಲ್ಲಿ ಕಾಲುದಾರಿ ಹಾಗು ವಾಹನಮಾರ್ಗ ಇದ್ದರೆ ಈ ಪದವು. ಅವೆರಡನ್ನು ಒಳಗೊಳ್ಳುತ್ತದೆ.

(೩೯) **ತಾಲೂಕ**— ಅಂದರೆ, ಭೂಕಂದಾಯದ ಆಡಳಿತದ ಸಲುವಾಗಿ ಕಾಲಕಾಲಕ್ಕೆ ತಾಲೂಕ, ಮಹಾಲ-ಪೇಠಾ ಎಂದು ರಚಿಸಲಾದ ಭೂಕಂದಾಯದ ತಾಲೂಕ.

(೪೦) **ತಹಶೀಲದಾರ**— ಎಂದರೆ ಭೂಕಂದಾಯದ ತಾಲೂಕ ಪೇಠಾ ಇಲ್ಲವೆ ಮಹಾಲದ ತಹಶೀಲದಾರ ಇಲ್ಲವೆ ಡೆಪ್ಯೂಟಿ ತಹಶೀಲದಾರ.

(೪೧) **ತಾಲೂಕ ಬೋರ್ಡ ಇಲ್ಲವೆ ಬೋರ್ಡ**— ಎಂದರೆ ಈ ಕಾಯಿದೆ ಯನ್ವಯವಾಗಿ ರಚಿತವಾದ ತಾಲೂಕ ಅಭಿವೃಧಿ ಬೋರ್ಡ.

(೪೨) **ವಾಹನ**— ಎಂಬ ಶಬ್ದವು, ಸಾಯಿಕಲ್ಲು, ಸಾಯಿಕಲ್ ರಿಕ್‍ಶಾ, ಮೂರುಗಾಲಿ ಸಾಯಿಕಲ್ಲು, ಆಟೋರಿಕ್‍ಶಾ, ಮೋಟಾರಕಾರು, ಮತ್ತು ಸಾರ್ವ ಜನಿಕ ರಸ್ತೆಯ ಮೇಲೆ ಉಪಯೋಗಿಸಲಾಗುವ ಇಲ್ಲವೆ ಉಪಯೋಗಮಾಡಲು ಸಮರ್ಥವಾದ ಚಕ್ರವುಳ್ಳ ಪ್ರತಿಯೊಂದು ವಾಹನ ಇವುಗಳನ್ನು ಒಳಗೊಳ್ಳುತ್ತದೆ.

(೪೩) **ಉಪಚೇರಮನ್**— ಅಂದರೆ ಪಂಚಾಯತದ ಉಪಚೇರಮನ್.

(೪೪) **ಉಪಾಧ್ಯಕ್ಷ**— ಅಂದರೆ ತಾಲೂಕ ಬೋರ್ಡಿನ ಉಪಾಧ್ಯಕ್ಷ.

(೪೫) **ಗ್ರಾಮ**— ಎಂದರೆ ಈ ಕಾಯಿದೆಯನ್ವಯವಾಗಿ ಯಾವುದು ಗ್ರಾಮವೆಂದು ಸಾರಲ್ಪಟ್ಟಿರುವುದೋ ಅಂತಹ ಭೂಕಂದಾಯದ ಗ್ರಾಮ ಇಲ್ಲವೆ ಭೂಕಂದಾಯದ ಗ್ರಾಮುಗಳ ಗುಂಪು ಇರುವ ಯಾವದೇ ಪ್ರದೇಶ.

## ವಿವೇಚನೆ

ಇದು ವ್ಯಾಖ್ಯೆಗಳನ್ನು ಹೇಳುವ ಕಲಮು. ಇದರಲ್ಲಿ ಒಟ್ಟು ೪೫ ವ್ಯಾಖ್ಯೆ ಗಳಿವೆ. ಒಂದೊಂದಕ್ಕೆ ಒಂದೊಂದು ಅಂಕಿ ಕೊಡಲಾಗಿದೆ. ಇಲ್ಲಿ ಕೆಳಗೆ ವಿವೇಚನೆ ಮಾಡುವಾಗ ಎಡಬದಿಗೆ ಕೊಡಲಾದ ಅಂಕಿಗಳು ಕಲಮಿನಲ್ಲಿಯ ಉಪಕಲಮು ಗಳಲ್ಲಿಯ ವ್ಯಾಖ್ಯೆಗಳ ಪದಗಳಿಗೆ ಸಂಬಂಧವುಳ್ಳದ್ದು ಎಂದು ತಿಳಿಯಬೇಕು.

೧ ಒಂದು ಜಿಲ್ಲೆಯು ಭೂಕಂದಾಯದ ಬಗ್ಗೆ ಒಂದು ಪ್ರಾದೇಶಿಕ ವಿಭಾಗ. ಅದರಲ್ಲಿ ಉಪವಿಭಾಗಗಳನ್ನಾಗಿ ಮಾಡಲಾಗಿರುವುದು. ಇವುಗಳಿಗೆ ಪ್ರಾಂತ ಎಂದು ಹೆಸರು ಇರುವುದು. ಪ್ರಾಂತದಲ್ಲಿ ಅನೇಕ ತಾಲೂಕುಗಳು ಇರುವುವು. ತಾಲೂಕು ಗಳಲ್ಲಿ ಹಳ್ಳಿಗಳು ಇರುವುವು. ಜಿಲ್ಲೆಯ ರಚನೆಯನ್ನು ನೋಡಿದರೆ, ಹಳ್ಳಿಗಳು— ಹಳ್ಳಿಗಳ ಗುಂಪುಗಳನ್ನು ಒಂದು ತಾಲೂಕ-ಪೇಠಾ-ಮಹಾಲ;—ಮೂರು-ನಾಲ್ಕು ತಾಲೂಕುಗಳು ಕೂಡಿದು ಒಂದು ಪ್ರಾಂತ.—ಪ್ರಾಂತಗಳು ಕೂಡಿ ಒಂದು ಜಿಲ್ಲೆ.

ಜಿಲ್ಲೆಯ ಭೂಕಂದಾಯ ಮುಖ್ಯಾಧಿಕಾರಿ ಹಿಂದಿನ ಕಾಲದಲ್ಲಿ ಕಲೆಕ್ಟರ ಎಂದು ಕರೆಯಲ್ಪಡುತ್ತಿದ್ದರು. ಈಗ ಅವನಿಗೆ ಡೆಪ್ಯೂಟಿ ಕಮಿಶನರ ಎಂದು ಕರೆಯುತ್ತಾರೆ. ಅವನ ಆಡಳಿತದಲ್ಲಿಯ ಉಪವಿಭಾಗವಾದ ಪ್ರಾಂತಕ್ಕೆ ಇರುವ ಅಧಿಕಾರಿಗೆ ಅಸಿಸ್ಟಂಟ ಕಮಿಶನರ ಎಂದು ಹೆಸರು.

೨ 'ಕಟ್ಟಡ' ವೆಂದರೆ ಯಾರಿಗೆ ಗೊತ್ತಿಲ್ಲ ? ಆದರೆ ಕಾಯಿದೆಯಲ್ಲಿ ವ್ಯಾಖ್ಯೆ ಮಾಡಬೇಕಾಗುತ್ತದೆ. ವ್ಯಾಖ್ಯೆಮಾಡಿದಾಗ ಸಾಮಾನ್ಯವಾಗಿ ನಾವು ಯಾವುದಕ್ಕೆ ಕಟ್ಟಡ ಎನ್ನುವುದಿಲ್ಲ, ಅದು ಕೂಡ ಕಾಯಿದೆಯ ವ್ಯಾಖ್ಯೆಯಮೂಲಕ ಕಟ್ಟಡವಾಗುತ್ತದೆ. ಕಾರಣವೆಂದರೆ ಕಾಯದೆಯಲ್ಲಿ ಎಲ್ಲವೂ ಸ್ಪಷ್ಟವೂ ನಿರ್ದಿಷ್ಟವೂ ಆಗಿರಬೇಕಾಗುತ್ತದೆ. ನಿರ್ದಿಷ್ಟವಾಗಿರದೆ ಇದ್ದಾಗ ಕಾಯದೆಯ ಕಕ್ಷೆಯಿಂದ ಜಾರಿ ಕೊಳ್ಳಲು ಬರುತ್ತದೆ. ಹಾಗೆ ಯಾರೂ ಯಾವ ಕಾರಣದಿಂದಲೂ ಜಾರಿಕೊಂಡಿರ ಬಾರದೆಂದು ಸಾಮಾನ್ಯದಾಗಿ ಎಲ್ಲವೂ ವ್ಯಾಖ್ಯೆಯಲ್ಲಿ ಬಂದಿರುವಂತೆ ಹಾಕಿರ ಲಾಗುವುದು. ಅದಕ್ಕಾಗಿ ಇದರಲ್ಲಿ ಎಲ್ಲ ಬಗೆಯ ಕಟ್ಟಡದ ವಿವರಗಳು, ಬಂದಿವೆ.

೩. ವ್ಯವಹಾರ— ಶಬ್ದವು ಸಾಮಾನ್ಯ ಬಳಕೆಯಲ್ಲಿ ಬಂದಿದೆ. ಅದು ವ್ಯಾಪಾರ ಎಂಬ ಅರ್ಥದಲ್ಲಿಯೂ ಬಳಸಲಾಗುತ್ತಿದೆ. ವ್ಯಾಪಾರ–ವ್ಯವಹಾರ ಒಂದೇ ಶಬ್ದವೇನೋ ಅಂಬುವಷ್ಟು ಅವು ರೂಢವಾಗಿವೆ. ಆದರೆ ಬಿಡಿಸಿನೋಡಿ ದಾಗ ವ್ಯಾಪಾರ- ಬೇರೆ ವ್ಯವಹಾರ ಬೇರೆ. ಎಂಬುದು ತಿಳಿವುದು. ವ್ಯವಹಾರ ಶಬ್ದವು ವ್ಯಾಪಕವಾದದ್ದು. ಅದರಲ್ಲಿ ವ್ಯಾಪಾರವು ಬರುವುದು. ಅದಕ್ಕೊಂದು ವ್ಯಾಪಕವಾದ ಶಬ್ದದ ಹೊಟ್ಟೆಯಲ್ಲಿ ವ್ಯಾಪಾರ-ವಾಣಿಜ್ಯ, ವಸ್ತುನಿರ್ಮಾಣ, ಒಂದು ಸಾಹಸದ ಕೆಲಸ- ಇವು ಬಂದಿದೆ. ಒಂದು ಸಾಹಸದ ಕೆಲಸವೆಂದರೆ ಅದು ಶಾಶ್ವತವಾದುದಲ್ಲ. ಕಾಲಮಿತಿಯುಳ್ಳದ್ದು. ಆದರೂ ಅದು ವ್ಯವಹಾರದಲ್ಲಿ ಬರುವುದು. :ಅಲ್ಪಾವಧಿಯದಿರಲಿ, ದೀರ್ಘಾವಧಿಯರಲಿ,ಸಾಹಸವೆಂದು ಮಾಡಿ ರಲಿ ಸಂಘಟಿತವಾಗಿ ಮಾಡಿರಲಿ, ಅದೆಲ್ಲವೂ ವ್ಯವಹಾರವೆನ್ನಿಸುವುದು.

೪. ಚೇರಮನ್ನ ಎಂಬವರು ಯಾವುದೇ ಸಭೆಯಲ್ಲಿಯ ಸಭಾಪತಿ ಎಂದು ಸಾಮಾನ್ಯ ಅರ್ಥ ಹೊರಟರೂ ಈ ಕಾಯದೆಗೆ ಸಂಬಂಧವಾಗಿ ವಿಚಾರಮಾಡು ವಾಗ ಚೇರಮನ್ನ ಎಂದರೆ ಕೇವಲ ಪಂಚಾಯತದ ಚೇರಮನ್ನ ಎಂದೇ ಅರ್ಥ ವಾಗುವುದು. ಉಳಿದ ಯಾವ ಸಭೆಯು, ಸಮಿತಿಯ ಸಂಘದ ಚೇರಮನ್ನ ಅಲ್ಲ ಎಂದು ಸ್ಪಷ್ಟಪಡಿಸಲಾಗಿದೆ.

೫. ಮೈಸೂರ ರಾಜ್ಯವು ಅನೇಕ ವಿಭಾಗಗಳಾಗಿ ಮಾಡಲ್ಪಟ್ಟಿದೆ. ಒಂದೊಂದು ವಿಭಾಗದಲ್ಲಿ ೪-೫ ಜಿಲ್ಲೆಗಳು ಸಮಾವೇಶವಾಗಿವೆ. ಹೀಗೆ ನಾಲ್ಕು- ಐದು ಜಿಲ್ಲೆಗಳು ಕೂಡಿ ಆದ ವಿಭಾಗಕ್ಕೆ ಮುಖ್ಯ ಅಧಿಕಾರಿ-ಕಮಿಶನರ.

ಒಂದೊಂದು ಜಿಲ್ಲೆಗೆ ಡೆಪ್ಯೂಟಿ ಕಮಿಶನರು ಇದ್ದು ಇಡೀ ವಿಭಾಗಕ್ಕೆ ಕಮಿಶನರು ಇರುವರು. ಈ ಕಾಯದೆಯ ಸಂಬಂಧದಲ್ಲಿ ಕಮಿಶನರ ಎಂದು ಬಂದಾಗ ಈ ಮೇಲೆ ಹೇಳಿದ ಕಮಿಶನರು ಎಂದು ಅರ್ಥ. ಅಲ್ಲದೆ, ಸರಕಾರದವರು ಈ ಕಾಯಿದೆಯ ಸಂಬಂಧವಾಗಿ ಪ್ರತ್ಯೇಕವಾಗಿ ಯಾವೊಬ್ಬ ಅಧಿಕಾರಿಗೆ ಕಮಿಶನರರ ಅಧಿಕಾರಗಳನ್ನು ಕೊಟ್ಟು ನೇಮಿಸಿದ್ದರೆ- ಆ ಅಧಿಕಾರಿಯು ಕೂಡ ಕಮಿಶನರ ಎಂದು ಅರ್ಥವಾಗುವದು.

(೬) ಕಂಪನಿ ಅಂದರೆ ೧೯೫೬ ರ ಕಂಪನಿ ಕಾಯಿದೆಯಲ್ಲಿ ವ್ಯಾಖ್ಯೆ ಹೇಳಿದಂತೆ; ಆ ಕಾಯಿದೆಯ ೩ ನೆಯ ಕಲಮಿನಲ್ಲಿ ಕಂಪನಿಯ ವ್ಯಾಖ್ಯೆ ಹೇಳಲಾಗಿದೆ. "**ಕಂಪನಿ** ಅಂದರೆ ಈ ಕಾಯಿದೆಯನ್ವಯವಾಗಿ ರೂಪಿತವಾದ ಹಾಗೂ ನೋಂದಾಯಿಸಲ್ಪಟ್ಟ ಕಂಪನಿ." ವಿವಿಧ ಪ್ರಕಾರದ ಕಂಪನಿಗಳು ಇವೆ. ಖಾಸಗಿ ಕಂಪನಿ, ಸಾರ್ವಜನಿಕ ಕಂಪನಿ, ನಿಯಮಿತ ಕಂಪನಿ, ಅನಿಯಮಿತ ಕಂಪನಿ. ಕಂಪನಿಯು ಬಗ್ಗೆ ವ್ಯಾಖ್ಯೆಯ ನಿಷ್ಕರ್ಷೆ ಮಾಡಬೇಕಾದರೆ ಕಂಪನಿ ಕಾಯಿದೆಯ ೩ ನೆಯ ಕಲಮು ನೋಡಬೇಕು.

**ಕಂಪನಿ** ಶಬ್ದದಲ್ಲಿ ಬೇರೆ ಸಂಘ-ಸಂಸ್ಥೆಗಳೂ ಸಮಾವೇಶವಾಗಿವೆ. ಸಂಘ-ಸಂಸ್ಥೆಯೆಂದರೆ ಅದರಲ್ಲಿ ಒಬ್ಬರಕಿಂತ ಹೆಚ್ಚಿಗೆ ವ್ಯಕ್ತಿಗಳು ಸದಸ್ಯರಿದ್ದು-ಆ ಸದಸ್ಯರ ವೈಯುಕ್ತಿಕ ಅಸ್ತಿತ್ವ ಬಿಟ್ಟು ಪ್ರತ್ಯೇಕವಾದ ಅಸ್ತಿತ್ವ-ಹಾಗೂ ವ್ಯಕ್ತಿತ್ವ ಪಡೆದ ಕಾಯಿದೆಯ ವ್ಯಕ್ತಿಗಳು. ಅಂತಹ ಸಂಘ-ಸಂಸ್ಥೆಗಳೂ ಈ ಕಾಯಿದೆಯ ಪ್ರಕಾರ ಕಂಪನಿ ಶಬ್ದದಲ್ಲಿ ಸಮಾವೇಶವಾಗಿದೆ.

ಕಂಪನಿಯ ಕಾಯಿದೆ ಪ್ರಕಾರ ಕಂಪನಿ ಇದ್ದರೆ ಅದು ಕಂಪನಿ ಕಾಯಿದೆ ಪ್ರಕಾರ ನೋಂದಾಯಿಸಲ್ಪಟ್ಟಿರುವುದು. ಇತರ ಕಾಯಿದೆಗಳ- ಅಂದರೆ ಪಾಲುಗಾರಿಕೆ-ಕಾಯಿದೆ-ಪ್ರಕಾರ ಸಂಘ-ಸಂಸ್ಥೆ ರೂಪಿತವಾಗಿದ್ದರೆ, ಅದು ನೋಂದಾಯಿಸಲ್ಪಟ್ಟಿರಬಹುದು ಇಲ್ಲವೆ ನೋಂದಾಯಿಸದೆಯೂ ಇರಬಹುದು. ಆದರೂ ಅಂತಹ ಸಂಘ-ಸಂಸ್ಥೆಗಳು ಈ ಶಬ್ದದಲ್ಲಿ ಸಮಾವೇಶವಾಗಿರುವುವು.

(೭) ಜಿಲ್ಲಾ ಎಂದರೆ ಭೂಕಂದಾಯಕ್ಕಾಗಿ ವಿಭಾಗಿಸಲ್ಪಟ್ಟ ಪ್ರದೇಶ. ಕಾಲ ಕಾಲಕ್ಕೆ ಎಂಬುದು ಇಲ್ಲಿಯ ಮುಖ್ಯ ಶಬ್ದ. ಜಿಲ್ಲೆಯ ಗಡಿಗಳು ಎಲ್ಲ ಕಾಲಕ್ಕೂ ಒಂದೇ ಇಲ್ಲ. ಕಾಲಗತಿಯಲ್ಲಿ ರಾಜಕೀಯ ಬದಲಾವಣೆಗಳ ಮೂಲಕ ಗಡಿಗಳಲ್ಲಿ ಬದಲಾವಣೆ ಆಗುತ್ತವೆ. ಆಗಿವೆ. ೧೮೬೨ ರ ಕಿಂತಲೂ ಮೊದಲು ಉತ್ತರ-ದಕ್ಷಿಣ ಕನ್ನಡ ಜಿಲ್ಲೆಗಳು ಕೂಡಿ ಒಂದೆ ಜಿಲ್ಲೆಯಾಗಿದ್ದಿತು. ಸ್ವಾತಂತ್ರ್ಯಪ್ರಾಪ್ತಿಯ ನಂತರ ಸಂಸ್ಥಾನಗಳ ವಿಲೀನವಾಗಿ ಪ್ರತಿಯೊಂದು ಜಿಲ್ಲೆಗೆ ಹೊಂದಿಕೊಂಡಿದ್ದ ಜಿಲ್ಲೆಯ ಪ್ರದೇಶದಲ್ಲಿ ಆಯಾ ಸಂಸ್ಥಾನಗಳು ಸೇರಿಕೊಂಡು

ಜಿಲ್ಲೆಯು ವಿಸ್ತಾರವಾಗಿದೆ. ಆದ್ದರಿಂದ ಕಾಲ ಕಾಲಕ್ಕೆ ಎಂಬ ಶಬ್ದ ಹಾಕಲಾಗಿದೆ. ಇಂದು ಇದ್ದ ಜಿಲ್ಲೆಯು ದೊಡ್ಡದೂ ಆಗಬಹುದು. ಪ್ರದೇಶ ಹಂಚಿಕೆಯ ಮೂಲಕ ಕಡಿಮೆಯ ಪ್ರದೇಶವುಳ್ಳದ್ದು ಆಗಬಹುದು. ಆದ್ದರಿಂದ ಯಾವುದೊಂದು ಕಾಲಕ್ಕೆ ಒಂದು ಜಿಲ್ಲೆಯಲ್ಲಿ ಎಷ್ಟು ಪ್ರದೇಶವಿರುವುದೋ ಅದಷ್ಟೇ ಆ ಜಿಲ್ಲೆ ಎಂಬ ಹೆಸರಲ್ಲಿ ಬರುವ ಭೂಕಂದಾಯದ ಆಡಳಿತ ವಿಭಾಗವಾದ ಜಿಲ್ಲೆ ಆಗುವುದು. ಈ ಪ್ರಾದೇಶಿಕ ವಿಭಾಗವನ್ನು ಭೂ ಕಂದಾಯದ ದೃಷ್ಟಿಯಿಂದ ಮಾತ್ರ ವಿಚಾರಿಸಬೇಕು.

ಏಕಂದರೆ, ರೇಲ್ವೆ ಜಿಲ್ಲೆಗಳು ಬೇರೆ ಆಗಿವೆ. ಬೇರೆ ಬೇರೆ ಉದ್ದೇಶಗಳಿಗಾಗಿ ಬೇರೆ ಬೇರೆ ಜಿಲ್ಲೆಗಳು ಇವೆ. ಅವನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ಕೇವಲ ಭೂಕಂದಾಯದ ಉದ್ದೇಶಕ್ಕಾಗಿ ವಿಭಾಗ ಮಾಡಿದ- ಕಾಲ ಕಾಲಕ್ಕೆ ಗುರುತಿಸಲಾದ ಜಿಲ್ಲೆ ಎಂಬುದೇ ಈ ಉಪಕಲಮಿನಲ್ಲಿ ಹೇಳಿದುದು.

(೮) ಜಿಲ್ಲಾ ಮಂಡಳವೆಂದರೆ ಮೇಲೆ ವಿವರಿಸಲಾದ ಜಿಲ್ಲೆಗೆಂದು ರಚಿತವಾದ ಜಿಲ್ಲಾ ಅಭಿವೃದ್ಧಿ ಮಂಡಳ. ಅಂದರೆ ಭೂಕಂದಾಯದ ಉದ್ದೇಶಕ್ಕಾಗಿ ಇರುವ ಜಿಲ್ಲಾ ಪ್ರದೇಶವೂ ಅಭಿವೃದ್ಧಿ ಮಂಡಳದ ಅಧಿಕಾರದಲ್ಲಿ ಬರುವಂತಹ ಪ್ರದೇಶವೂ ಒಂದೇ ಆಗಿವೆ-ಆಗಿರುತ್ತವೆ ಎಂದು ಸೂಚನೆ

(೯) ಕಟ್ಟಡದ ರಚನೆಯಲ್ಲಿ ಬದಲಾವಣೆ, ಎಂಬ ಹೆಸರಿನಲ್ಲಿ ಏನೇನು ಬರುತ್ತದೆ ಎಂಬುದನ್ನು ಇಲ್ಲಿ ವಿವರಿಸಲಾಗಿದೆ. ಹೊಸದಾಗಿ ಕಟ್ಟಿಸುವದು, ಪುನಃ ಕಟ್ಟಿಸುವುದು, ವಿಸ್ತಾರ ಮಾಡುವುದು ಇವೆಲ್ಲ ಕಟ್ಟಡದ ರಚನೆಯೇ ಆಗುವುದು. ಇದ್ದ ಕಟ್ಟಡದ ರೂಪ-ಉಪಯೋಗ ಬದಲಾಯಿಸಿದರೂ ಅದೂ ಈ ವ್ಯಾಖ್ಯೆಯಲ್ಲಿ ಬರುವುದು. ರೂಪದಲ್ಲಿ ಬದಲು ಎರಡು ತೆರನಾಗಿ ಆಗಬಹುದಾಗಿದೆ. ಮೊದಲು ಉಪಯೋಗಿಸಿದ ಕಟ್ಟಡದ ಸಾಮಾನುಗಳು- ಇಟ್ಟಂಗಿ, ಗಚ್ಚು, ಸಿಮೆಂಟು, ಕಟ್ಟಿಗೆ ಮುಂತಾದ ಸಾಮಾನುಗಳಲ್ಲಿ ಬದಲಾವಣೆಯಾಗುವುದರಿಂದ ರೂಪ ;ಬದಲಾಗುವುದು. ಮೊದಲು ಇದ್ದ ಆಕಾರದಲ್ಲಿ ವ್ಯತ್ಯಯವಾಗುವ ಹಾಗೆ ಕಟ್ಟಡದ ರಚನೆಯಲ್ಲಿ ಬದಲು ಆಗಬಹುದು. ಕೋಣೆಗಳ ಸಂಖ್ಯೆಯಲ್ಲಿ ಹೆಚ್ಚು ಕಡಿಮೆ ಆದರೂ ರೂಪದಲ್ಲಿ ಬದಲಾಗುವುದು. ಇನ್ನು ಉಪಯೋಗದಲ್ಲಿ ಬದಲಾವಣೆಯಾಗಿ ಕಟ್ಟಡದ ರಚನೆಯಲ್ಲಿ ಬದಲಾವಣೆಯಾಗಬಹುದಾಗಿದೆ. ಮಾನವ ವಸತಿ ಯೋಗ್ಯವಾಗಿರದೇ ಇದ್ದುದನ್ನು ಮಾನವ ವಸತಿ ಯೋಗ್ಯವಾಗಿರುವ ಹಾಗೆ ಮಾರ್ಪಡಿಸುವುದು. ಇದ್ದ ಮಾನವ ವಸತಿ ಕಟ್ಟಡಗಳನ್ನು ಹೆಚ್ಚಿಸುವುದು. ಇಲ್ಲವೆ ಕಡಿಮೆ ಮಾಡುವುದು. ಧಾರ್ಮಿಕ ಇಲ್ಲವೆ ಪವಿತ್ರ ಕಾರ್ಯಗಳ ಉದ್ದೇಶಕ್ಕಾಗಿ ಮಾರ್ಪಡಿಸುವುದು. ಸಾದಾ

ಕಟ್ಟಡವಿದ್ದುದನ್ನು ಒಂದು ದೇವಾಲಯವಾಗಿ ಮಾರ್ಪಡಿಸುವುದು. ಆ ಕಾರಣ ಕ್ಕಾಗಿ ಕಟ್ಟಡದ ರಚನೆಯಲ್ಲಿ ಬದಲಾವಣೆ ಮಾಡುವುದು: ಮನೆಯಿದ್ದ ದ್ದನ್ನು ಮಳಿಗೆ, ಅಂಗಡಿ ಲಾಯ, ಗೋಡಾವುನ ಮುಂತಾಗಿ ಮಾಡುವುದು. ಬಾಗಿಲು ಹಚ್ಚುವದು—ಮುಂತಾದವು ಕೂಡ ಬಟ್ಟಿನಲ್ಲಿ ಕಟ್ಟಡದ ಬದಲಾವಣೆ ಎಂಬ ಅರ್ಥದಲ್ಲಿ ಬರುವುವು. ವಸ್ತು, ರೂಪ ಉಪಯೋಗ, ಆಕಾರ ಯಾವು ದರಲ್ಲಿಯೇ ಬದಲು ತರುವಂತಹದಿದ್ದರೂ, ಅದು ಈ ವ್ಯಾಖ್ಯೆಯಲ್ಲಿ ಬರುವುದು.

೧೦ ಕಾರಖಾನೆ—ಶಬ್ದದ ವ್ಯಾಖ್ಯೆಯು ೧೯೪೮ರ ( ಕೇಂದ್ರ ಕಾಯಿದೆ ನಂಬರ LXIII ) ಕಾರಖಾನೆಯ ಕಾಯಿದೆಯಲ್ಲಿಯ ೨ ನೆಯ ಕಲಮಿನ (ಎಂ) ದಲ್ಲಿ ಹೇಳಲಾಗಿದೆ. ಅದು ಹೀಗಿದೆ: “ಆವಾರ ಸಹಿತವಾಗಿರುವ ಯಾವುದೇ ಸ್ಥಳವು ಕಳೆದ ೧೨ ತಿಂಗಳಲ್ಲಿ ಯಾವುದೇ ದಿನ ಹತ್ತು ಇಲ್ಲವೆ ಹೆಚ್ಚು ಕಾರ್ಮಿಕರು ಕೆಲಸಮಾಡುತ್ತಿದ್ದರೋ ಇಲ್ಲವೆ ಕೆಲಸಮಾಡುವರೋ ಮತ್ತು ಆ ಆವಾರದ ಯಾವುದೇ ಭಾಗದಲ್ಲಿ ಚಾಲಕಶಕ್ತಿಯ ಸಹಾಯದಿಂದ ಕೆಲಸ ನಡೆಯುವದೋ ಇಲ್ಲವೆ ಸಾಮಾನ್ಯವಾಗಿ ನಡೆಯುವುದೋ ಅಂತಹ ಸ್ಥಳವು ಕಾರಖಾನೆ. ಇದರಲ್ಲಿ ಗಣಿ ಕೆಲಸಗಾರರು ಇಲ್ಲವೆ ರೇಲ್ವೆ-ರನ್ನಿಂಗಶೆಡ್ಡು ಸಮಾವೇಶವಾಗುವದಿಲ್ಲ.”

ಕಾರಖಾನೆ ಎಂದರೆ ೧೦ ರ ಕಿಂತ ಹೆಚ್ಚು ಕಾರ್ಮಿಕರು ಕೆಲಸಮಾಡುತ್ತಿರ ಬೇಕು. ಅಲ್ಲಿ ಯಾವುದೇ ರೀತಿಯ ಔದ್ಯಮಿಕ ತಯಾರಿಕೆಯ ಕೆಲಸ ನಡೆಯ ಬೇಕು. ಈ ಕೆಲಸಗಳು ಮಾನವ ಶಕ್ತಿಯಿಂದಲ್ಲದೆ ಬೇರೆ ಯಾವುದೇ ಚಾಲಕ ಶಕ್ತಿಯಿಂದ ಯಂತ್ರ ಸಹಾಯದಿಂದ ನಡೆಯುತ್ತಿರಬೇಕು. ಹೀಗೆ ಕೆಲಸ ನಡೆವ ಸ್ಥಳಗಳು ಕಾರಖಾನೆ ಎಂದು ತಿಳಿಯುವ ಹಾಗೆ ಇಲ್ಲಿ ಹೇಳಲಾಗಿದೆ. ಕಾರಖಾನೆ ಕಾಯಿದೆ ೧೯೪೮ರಲ್ಲಿ ಹೇಳಿದ್ದರಕಿಂತಲೂ ಇಲ್ಲಿಯ ಉಪಕಲಮಿನಲ್ಲಿ ಹೇಳಿದ್ದು ಹೆಚ್ಚು ವ್ಯಾಪಕವಾಗಿದೆ. ಆ ಕಾಯಿದೆಯಲ್ಲಿ ೧೦ ಇಲ್ಲವೆ ಹೆಚ್ಚು ಕಾರ್ಮಿಕರು ಕಳೆದ ೧೨ ತಿಂಗಳಲ್ಲಿಯಾದರೂ ಯಾವುದೊಂದು ದಿನ ದುಡಿಯುತ್ತಿರಬೇಕು ಎಂಬ ನಿರ್ಬಂಧವಿದೆ. ಈ ಉಪಕಲಮಿನಲ್ಲಿ ಆ ನಿರ್ಬಂಧ ಇಲ್ಲ. ಚಾಲಕಶಕ್ತಿ ಎಂತಹ-ದಿರಬೇಕೆಂಬ ಬಗ್ಗೆ ಇಲ್ಲಿ ಹೆಚ್ಚು ವಿವರಣೆ ಕೊಡಲಾಗಿದೆ. ಇದು ಕಾರಖಾನೆ ಕಾಯಿದೆಯಲ್ಲಿ ನಿರ್ದಿಷ್ಟಪಡಿಸಿಲ್ಲ.

೧೧. ಸರಕಾರ—ಎಂದರೆ ರಾಜ್ಯ ಸರಕಾರ—ಅಂದರೆ ಮೈಸೂರ ರಾಜ್ಯ ಸರಕಾರ. ನಮ್ಮ ದೇಶದಲ್ಲಿ ಕೇಂದ್ರಸರಕಾರ ಒಂದು, ರಾಜ್ಯ ಸರಕಾರಗಳು ಅನೇಕ. ಒಂದೊಂದು ರಾಜ್ಯಕ್ಕೆ ಒಂದೊಂದು ಸರಕಾರ. ನಾಗರಿಕನ ದೃಷ್ಟಿ ಯಿಂದ ಎಲ್ಲವೂ ಸರಕಾರಗಳೇ. ಆದರೆ ಈ ಕಾಯಿದೆಯ ಸಂಬಂಧವಾಗಿ ‘ಸರಕಾರ’

ಶಬ್ದದ ಪ್ರಯೋಗ ಬಂದಾಗ ಅದು ರಾಜ್ಯಸರಕಾರ-ಅಂದರೆ ಕೇಂದ್ರಸರಕಾರ ಅಲ್ಲ-ಎಂದೂ ರಾಜ್ಯ ಸರಕಾರ ಎಂದರೆ ಮೈಸೂರು ರಾಜ್ಯ ಸರಕಾರ ಎಂದೇ ಅರ್ಥ ವಾಗುತ್ತದೆ; ಬೇರೆ ಯಾವ ರಾಜ್ಯದ ಸರಕಾರ ಅಲ್ಲ.

೧೨. ಆರೋಗ್ಯಾಧಿಕಾರಿಯು ತಾಲೂಕ ಬೋರ್ಡಿನಿಂದ ನಿಯಮಿತ್ತವಾದ ವನು. ಆದರೆ ಒಂದು ವೇಳೆ ತಾಲೂಕ ಬೋರ್ಡು ಯಾರನ್ನೂ ಹಾಗೆ ಆರೋಗ್ಯಾಧಿ ಕಾರಿಯೆಂದು ನೇಮಿಸದಿದ್ದರೆ ಆ ತಾಲೂಕಿಗೆ ಇಲ್ಲವೆ ಆ ಪ್ರದೇಶಕ್ಕೆ ಅಧಿಕಾರ ಪಡೆದಿರುವ ಸರಕಾರಿ ಆರೋಗ್ಯಾಧಿಕಾರಿಯೇ, ಈ ಕಲಮಿನಲ್ಲಿ ಹೇಳಿದ ಆರೋ ಗ್ಯಾಧಿಕಾರಿ ಎಂದು ತಿಳಿಯಬೇಕು.

೧೩. ಸಾಂಕ್ರಾಮಿಕ ಬೇನೆಗಳು ಬೇರೆ. ಸಾಂಸರ್ಗಿಕ ಬೇನೆಗಳು ಬೇರೆ. ಮುಟ್ಟಿದರೆ ತಗಲುವ ಬೇನೆಗಳು ಸಾಂಸರ್ಗಿಕ. ಕ್ರಿಮಿಗಳ ಅಭಿಯೋಗದಿಂದ ದೇಹವು ಬೇನೆ ಉಂಟಾಗುವ ಬೇನೆಗಳು ಸಾಂಕ್ರಾಮಿಕ ಬೇನೆಗಳು. ಇಲ್ಲಿ ಅಂತಹ ಬೇನೆಗಳ ಪಟ್ಟಿಯನ್ನು ಕೊಡಲಾಗಿದೆ. ಇದರಲ್ಲಿ ಹೆಸರಿಸಲಾದ ಬೇನೆ ಗಳಲ್ಲಿ ಕೆಲವು ಎಲ್ಲರಿಗೂ ತಿಳಿದ ಬೇನೆಯ ಹೆಸರುಗಳಾಗಿವೆ. ಕಾಲರಾ, ಪ್ಲೇಗು, ಮೈಲಿಬೇನೆ, ಸಿಡುಬು, ಗಣಜಲಿ ಇನ್‌ಫ್ಲುಎಂಜಾ, ಕ್ಷಯರೋಗ ಕುಷ್ಟರೋಗ ವಿಷುಮಜ್ವರ ಮುಂತಾದುವು. ಗಂಟಲುಬೇನೆ, ಕರಳುಬಾವಿನ ಬೇನೆ, ನಾಯಿ ಹುಚ್ಚು, ಕೆಂಪುಬಕ್ಕೆಯಜ್ವರ, ಕುರುವಿನಬೇನೆ, ಇವು ಸಾಮಾನ್ಯರಿಗೆ ತಿಳಿಯದ ಬೇನೆಗಳು. ಈ ಬೇನೆಗಳು ಸಾಂಕ್ರಾಮಿಕವಾಗಿವೆ ಇವಲ್ಲದೆ ಇನ್ನೂ ಬೇರೆ ಅನೇಕ ಸಾಂಕ್ರಾಮಿಕ ಬೇನೆಗಳಿವೆ. ಕಾಲಕಾಲಕ್ಕೆ ಸರಕಾರದವರು ಪ್ರಕಟನೆ ಹೊರಡಿಸಿ ಇಂತಹದು ಸಾಂಕ್ರಾಮಿಕ ಬೇನೆಯಾಗಿದೆ, ಎಂದು ಉಲ್ಲೇಖ ಮಾಡಿ ದಾಗ ಆ ಬೇನೆಯು ಕೂಡ ಈ ವ್ಯಾಖ್ಯೆಯಲ್ಲಿ ಬರುವುದು.

೧೪ ರಹಿ-ವಾಸಿ ಎಂದರೆ ಯಾರು? ಈ ಪ್ರಶ್ನೆಯು ಅನೇಕ ಸಲ ಉಂಟಾಗುವುದು. ಯಾವುದೇ ಪ್ರದೇಶದಲ್ಲಿ ಯಾವುದೇ ವ್ಯಕ್ತಿಯು ಸಾಮಾನ್ಯವಾಗಿ ವಾಸವಾಗಿರುತ್ತಿದ್ದರೆ, ಅವನು ಅಲ್ಲಿಯ ರಹಿವಾಸಿಯು. ಇಲ್ಲವೆ ಅವನು ಆ ಪ್ರದೇಶದಲ್ಲಿ ಹೊಟ್ಟೆಯ ಪಾಡಿಗಾಗಿ ಯಾವುದಾದರೂ ವ್ಯವಹಾರವನ್ನು ಮಾಡು ತ್ತಿದ್ದರೆ ಅವನು ಆ ಪ್ರದೇಶದ ರಹಿವಾಸಿಯು. ಇವೆರಡಲ್ಲದೆ, ಆ ವ್ಯಕ್ತಿಯು ಆ ಪ್ರದೇಶದಲ್ಲಿಯ ಸ್ಥಾವರ ಆಸ್ತಿಯ ಮಾಲಕನಾಗಿದ್ದರೆ, ಇಲ್ಲವೆ ಸ್ಥಾವರ ಆಸ್ತಿಯು ಅವನ ವಶದಲ್ಲಿದ್ದರೆ, ಯಾವ ಪ್ರದೇಶದಲ್ಲಿ ಇಂತಹ ಸ್ಥಾವರ ಆಸ್ತಿ ಇರುವುದೋ ಆ ಪ್ರದೇಶದ ರಹಿವಾಸಿಯಾಗುತ್ತಾನೆ.

೧೫ ಭೂಕಂದಾಯದ ಬಗ್ಗೆ ಇಲ್ಲಿ ಹೇಳಲಾಗಿದೆ. ಭೂಮಿಯ ಸಂಬಂಧವಾಗಿ ಸರಕಾರವು ಪಡೆಯುವ ಎಲ್ಲ ರಕಮು. ಈ ರಕಮು ಆ ಪ್ರದೇಶ ದಲ್ಲಿ ಭೂಕಂದಾಯ ನಿಶ್ಚಿತ ಮಾಡಿದಾಗ ಗೊತ್ತು ಮಾಡಲ್ಪಟ್ಟಿರಬೇಕು.

ಇದನ್ನು ಕೊಡುವ ವ್ಯಕ್ತಿಯು ಭೂಮಿಯ ಮಾಲಕನಾಗಿರಬಹುದು, ಇಲ್ಲವೆ ಧಾರಣ ಮಾಡಿರಬಹುದು. ಇಲ್ಲಿ ಮುಖ್ಯವಾದದ್ದು-ಭೂಕಂದಾಯವೆಂದು ರಕಮು ನಿಶ್ಚಿತವಾಗಿರಬೇಕು. ಅದು ಸರಕಾರಕ್ಕೆ ಸಲ್ಲುವಂತಹದು ಇರಬೇಕು. ಅಂತಹ ರಕಮು ಭೂಕಂದಾಯವೆಂದು ಗಣಿಸಲಾಗುವುದು.

ಇದರಲ್ಲಿ ವಿವರಣೆಯೊಂದಿದೆ. ಎಲ್ಲ ಹಳ್ಳಿಗಳೂ ಭೂಕಂದಾಯ ನಿಯೋಜಿತವಾಗಿರುವುದಿಲ್ಲ. ಅಂತಹ ಹಳ್ಳಿಯಿದ್ದರೆ ಏನು ಮಾಡಬೇಕು ? ಅಲ್ಲಿಯ ಭೂಮಿಗೆ ಕಂದಾಯ ಎಷ್ಟು ಅಂತ ತಿಳಿಯಬೇಕು ? ನಿಯೋಜಿತವಾದ ಹಳ್ಳಿಯಲ್ಲಿಯ ಸಮಾನ ಗುಣವುಳ್ಳ ಸಮಾನ ಪ್ರಾಪ್ತಿಯುಳ್ಳ ಭೂಮಿಗೆ ಎಷ್ಟು ಕಂದಾಯ ಇರುವುದೋ ಅಷ್ಟೇ ಕಂದಾಯ ನಿಯೋಜಿತವಾಗದೆ ಇದ್ದ ಹಳ್ಳಿಯ ಭೂಮಿಗೆ ಹಿಡಿಯಬೇಕೆಂದು ವಿವರಣೆಯಲ್ಲಿ ಹೇಳಲಾಗಿದೆ. ಆ ರಕಮು ಭೂಕಂದಾಯದ ವ್ಯಾಖ್ಯೆಯಲ್ಲಿ ಬರುವದು.

೧೬. ಪಾಯಖಾನೆ— ಎಂಬುದು ಒಂದು ರೀತಿಯಲ್ಲಿ ಕಟ್ಟಿದುದಿರಬಹುದು. ಸಂಡಾಸ, ಬಚ್ಚಲುಮನೆ, ಕಾಲುಮಡಿಮನೆ, (ಮೂತ್ರಾಲಯ) ಇವು ಅದೇ ಕೆಲಸಕ್ಕೆ ಬಳಸಬಹುದಾದ ಸ್ಥಳಗಳು. ಆದ್ದರಿಂದ ಪಾಯಖಾನೆ ಶಬ್ದದಲ್ಲಿ ಅವು ಬಂದಿರುವುವು. ಇಲ್ಲಿ ಕಟ್ಟಡ ಮುಖ್ಯವಲ್ಲ. ಅದರ ಉಪಯೋಗ ಮುಖ್ಯ. ಪಾಯಖಾನೆಯ ಉಪಯೋಗವು ಯಾವುದಕ್ಕೆ ಆಗುವುದೋ ಆ ಉಪಯೋಗವಾಗುವುದೆಲ್ಲ ಪಾಯಖಾನೆ ಶಬ್ದದಲ್ಲಿ ಬರುವುದು.

೧೭. ಸ್ಥಾನಿಕ ಅಧಿಕಾರ— ಎಂಬುದು ಸ್ಪಷ್ಟವಾದ ಪದರಚನೆಯಾಗಿದೆ. ಆದರೆ ಕಾಯಿದೇಶೀರ ರಚಿತವಾದ ಸ್ಥಾನಿಕ ಅಧಿಕಾರ ಎಂಬ ಸಂಸ್ಥೆಗಳು ಯಾವು ಎಂಬುದನ್ನು ಇಲ್ಲಿ ಹೇಳಿದೆ. ಮುನಸಿಪಲ್ ಕಾರ್ಪೊರೇಶನು, ಮುನಸಿಪಲ್ ಕೌನ್ಸಿಲ, ತಾಲೂಕ-ಅಭಿವೃದ್ಧಿ ಬೋರ್ಡ, ಜಿಲ್ಲಾ ಅಭಿವೃದ್ಧಿ ಮಂಡಳ, ಗ್ರಾಮಪಂಚಾಯತ; ಪಟ್ಟಣ ಪ್ರದೇಶ ಕಮಿಟಿ. ಮುನಸಿಪಲ್ ಬರೋ ಎಂಬುದು ಒಂದು ಪ್ರಕಾರದ ಸ್ಥಾನಿಕ ಅಧಿಕಾರ—ಅದರ ಹೆಸರು ಇಲ್ಲಿ ಉಲ್ಲೇಖಿಸಲಾಗಿಲ್ಲ. ಪಟ್ಟಣ ಪ್ರದೇಶ ಕಮಿಟಿಯಲ್ಲಿ ಅದು ಬರಬಹುದೆಂದು ಬಿಟ್ಟಿರಬಹುದು. ಆದರೆ ಮುನಸಿಪಲ್ ಬರೋ ಎಂಬುದು ಕಾಯಿದೆಬದ್ಧವಾದ ಸ್ಥಾನಿಕ ಅಧಿಕಾರವುಳ್ಳ ಸಂಸ್ಥೆಯಾಗಿದೆ.

೧೮. ಮಾರ್ಕೆಟ, ಎಂಬದು ಯಾರಿಗೆ ಗೊತ್ತಿಲ್ಲ ? ಮಾರುವ ಸ್ಥಳವೇ ಮಾರ್ಕೆಟು. ಆದರೆ ಎಲ್ಲ ಇಂತಹ ಸ್ಥಳಗಳು ಮಾರ್ಕೆಟು ಆಗುವದಿಲ್ಲ. ಆ ಸ್ಥಳದಲ್ಲಿ ಸಾಮಾನ್ಯವಾಗಿ ಇಲ್ಲವೆ ನಿಯತಕಾಲಿಕವಾಗಿ ನಾಲ್ಕು ಅಂಗಡಿ, ಮಳಿಗೆ ಮುಂತಾದವು ಇರಲೇಬೇಕು. ಇನ್ನು ಪ್ರಾಣಿ ಮುಂತಾದವು ಮಾರಾಟದ ವಸ್ತುವಾಗಿದ್ದರೆ, ಕನಿಷ್ಠ ಹತ್ತು ಪ್ರಾಣಿಗಳಾದರೂ ಮಾರಾಟಕ್ಕಾಗಿ ಬಂದಿರಬೇಕು.

ಅಂದರೆ ಒಬ್ಬನೇ ಯಾವನಾದರೂ ಯಾವುದೇ ಮಳಿಗೆ ಮುಂತಾದವುಗಳನ್ನು ಹಾಕದೆ, ಸರಕುಗಳನ್ನು ಮಾರಿದರೆ ಆ ಸ್ಥಳವು ಮಾರ್ಕೆಟು ಆಗಲಾರದು. ಅದರಂತೆ ಇಪ್ಪತ್ತರಕಿಂತಲೂ ಕಡಿಮೆ ದನಗಳನ್ನು ಮಾರಾಟಕ್ಕೆ ತಂದ ಸ್ಥಾನವೂ ಮಾರ್ಕೆಟು ಅನ್ನಿಸಿಕೊಳ್ಳಲಾರದು. ಈ ಕನಿಷ್ಠ ಮಿತಿಯನ್ನು ಹಾಕಿ ಮಾರ್ಕೆಟ ಎಂದರೆ ಸಾರ್ವಜನಿಕವಾಗಿ ವ್ಯಾಪಾರ-ವ್ಯವಹಾರವು ಬಹು ಜನರ ಸಲುವಾಗಿ ನಡೆಯುವ ಸ್ಥಳ ಎಂಬುದನ್ನೇ ಸೂಚಿಸಬೇಕಾಗಿದೆ. ಉಳಿದೆಲ್ಲವೂ ಮಾರುವ ಸ್ಥಳವಾದರೂ ಮಾರ್ಕೆಟು ಆಗಲಾರವು.

೧೯. ಭಾರತದ ರಾಜ್ಯ ಘಟನೆಯ ನಿಬಂಧನೆ ೩೦೯ ರಲ್ಲಿ ಹೀಗೆ ಹೇಳಿಯದೆ: ಕೇಂದ್ರದ ಇಲ್ಲವೆ ಯಾವುದೇ ರಾಜ್ಯಸರಕಾರದ ವ್ಯವಹಾರಗಳ ಸಂಬಂಧವಾಗಿ ಇರುವ ಸಾರ್ವಜನಿಕ ಸೇವೆ–ಮತ್ತು ಅಧಿಕಾರಪದಗಳಿಗೆ ನೇಮಕವಾದ ವ್ಯಕ್ತಿಗಳ ಸೇವೆಯ ಕರಾರುಗಳು, ಸೇವಾ ಭರತಿಯ ನಿಯಮಗಳು ಈ ರಾಜ್ಯಘಟನೆಯ ನಿಬಂಧನೆಗಳಿಗಂಕಿತವಾಗಿ ಯೋಗ್ಯ ಶಾಸನಸಭೆಯು ಕ್ರಮಗೊಳಿಸಬಹುದು.

ಆದರೆ, ಕೇಂದ್ರ ಸರಕಾರದ ಸೇವೆಯ ಸಂಬಂಧದಲ್ಲಿ ರಾಷ್ಟ್ರಪತಿಗಳು ಇಲ್ಲವೆ ಅವರಿಂದ ನೇಮಕವಾದ ಬೇರೆ ಯಾವುದೇ ವ್ಯಕ್ತಿ ಮತ್ತು ರಾಜ್ಯ ಸರಕಾರದ ಸಂಬಂಧವಾದ ಸೇವೆಯ ವಿಷಯದಲ್ಲಿ ಗವರ್ನರ ಇಲ್ಲವೆ ಅವನಿಂದ ನಿರ್ದೇಶಿಸಲ್ಪಟ್ಟ ಬೇರೆ ಯಾವುದೇ ವ್ಯಕ್ತಿಯು ಆಯಾ ಸೇವೆಗಳ ಕರಾರುಗಳ ಬಗ್ಗೆ ಸೇವಾ ಭರತಿಯ ನಿಯಮಗಳ ಬಗ್ಗೆ ಕ್ರಮಗೊಳಿಸುವ ಉಪಕ್ರಮವನ್ನು ಶಾಸನ ಸಭೆಯಿಂದ ಕಾಯಿದೆ ಪಾಸಾಗುವವರೆಗೆ ನಿಯಮಗಳನ್ನು ಮಾಡಬಹುದು. ಮತ್ತು ಆ ನಿಯಮಗಳು ಪರಿಣಾಮಕಾರಿಯಾಗಿದ್ದು ಪಾಸಾಗುವ ಕಾಯಿದೆಗೆ ಅಂಕಿತ ವಾಗಿರುವುವು.

ರಾಜ್ಯಘಟನೆಯ ೩೦೯ನೆಯ ನಿಬಂಧನೆಯನ್ವಯವಾಗಿ ಪಡೆದ ಅಧಿಕಾರ ದಿಂದ ಮಾಡಲಾದ ನಿಯಮಗಳ ಅನ್ವಯವಾಗಿ ಭರತಿ ಹೊಂದಿದ, ಕರಾರುಗಳ ಪ್ರಕಾರವಾಗಿ ಸೇವಾಪದದಲ್ಲಿ ಇರುವ ಮೈಸೂರ ಸ್ಥಾನಿಕ ಸರಕಾರದ ಸೇವೆ ಎಂದು ಹೆಸರು ಪಡೆದಿರುವುದೆಲ್ಲವೂ ಮೈಸೂರು ಸ್ಥಾನಿಕ ಸರಕಾರದ ಸೇವೆ ಎಂದು ಅರ್ಥ ಮಾಡಲಾಗುವದು.

೨೦. ಪ್ರಕಟನೆ— ಪರಿಪತ್ರ ಎಂದರೆ ಬೇಕಾದ ಪ್ರಕಟನೆ ಎಂದಲ್ಲ. ಯಾವುದು ಸರಕಾರೀ ಗ್ಯಾಜಿಟದಲ್ಲಿ ಪ್ರಕಟವಾಗಿರುವದೋ ಅಂತಹ ಪ್ರಕಟನೆ ಪರಿಪತ್ರ ಎಂದು ನಿರ್ದಿಷ್ಟಪಡಿಸಲಾಗಿದೆ.

೨೧. ಕಂಟಕ— ಎಂಬುದು ಮುಳ್ಳಿನಂತೆ ತೊಂದರೆದಾಯಕವಾದುದು. ದೇಹಕ್ಕೆ ಮುಳ್ಳು ನಟ್ಟರೆ ಆಗುವ ವೇದನೆ ಒಂದು ತರಹ; ಮನಸ್ಸಿಗೆ ಮುಳ್ಳು ನಟ್ಟ ಹಾಗೆ ಅಳಕುವ ವೇದನೆ ಇನ್ನೊಂದು ತರಹ. ಇಲ್ಲಿ ಯಾವುದೇ ತರಹದ ವೇದನೆ ಉಂಟುಮಾಡುವ ಹಾಗೆ ಇರುವ ಎಲ್ಲ ಕಾರ್ಯ-ಅಕಾರ್ಯಗಳು ವಸ್ತುಗಳು-ವಿಷಯಗಳು ಕಂಟಕಪ್ರಾಯವಾಗಿರುವುವು. ಅಪಾಯಕಾರಕವಾದುದು, ವೇದನಾ ಮಯವಾದುದು, ಕ್ಲೇಶಕಾರಕವಾದುದು ಎಲ್ಲವೂ ಕಂಟಕವೆ. ಇವು ಇಂದ್ರಿಯ ಗಳಾದ ಕಣ್ಣು, ಕಿವಿ, ಮೂಗು, ಮನಸ್ಸು ಇವುಗಳಿಗೆ ತೊಂದರೆ ಉಂಟುಮಾಡು ವಂತಹದೆಲ್ಲವೂ ಕಂಟಕ. ಕಣ್ಣಿಗೆ ಅಸಹ್ಯವಾಗಿ ಕಾಣುವುದು, ಕಿವಿಗೆ ಅಸಹ್ಯ ವಾಗಿ ಕೇಳಿಸುವುದು, ಮೂಗಿಗೆ ಅಸಹ್ಯವಾಗಿ ವಾಸನೆ ಬರುವುದು, ವಿಶ್ರಾಂತಿಗೆ-ನಿದ್ರೆಗೆ ಅಸಹ್ಯವಾದುದು, ಜೀವಕ್ಕೆ ಅಪಾಯಕಾರಕವಾಗುವ ಹಾಗೆ ಅಸಹ್ಯವಾದುದು, ಆರೋಗ್ಯಕ್ಕೆ ಅಸಹ್ಯವಾಗಿರುವುದು ಎಲ್ಲವೂ ಕಂಟಕವೆ. ಇದು ಯಾವುದೇ ವ್ಯಕ್ತಿಗೆ ವೈಯಕ್ತಿಕವಾಗಿ ಆಗುವ ತೊಂದರೆಯಾಗಿದ್ದಾಗ ಅಲ್ಲ. ಸಾರ್ವಜನಿಕವಾಗಿ ಆಗಿ ವ್ಯಕ್ತಿಗೆ ಇಲ್ಲವೆ ಆಸ್ತಿಗೆ ತೊಂದರೆಯಾಗುವ ಹಾಗೆ ಇರಬೇಕು. ಹೊಲಸುಮಾಡಿ ಕೃತಿಯಿಂದ ತೊಂದರೆಯಾಗಬಹುದಾಗಿದೆ. ಆದ ಹೊಲಸನ್ನು ತೆಗೆಯದೆ-ಕಾರ್ಯ ಮಾಡದೆ ಇರುವಿಕೆಯಿಂದ ತೊಂದರೆ ಆಗಬಹುದಾಗಿದೆ. ಇಲ್ಲಿ ವಾತಾವರಣ ಕೆಡುವ ಹಾಗೆ ಆಗಿ ಆ ಪ್ರದೇಶದಲ್ಲಿಯ ಜನರಿಗೆ ಸಾರ್ವಜನಿಕವಾಗಿ ತೊಂದರೆ ಯಾಗುವ ಹಾಗೆ ಇದ್ದ ಪರಿಸ್ಥಿತಿಯೆ ಕಂಟಕ.

೨೨. ಜಕಾತಿ— ಇದು ಒಂದು ಬಗೆಯ ಕರ-ತೆರಿಗೆ. ಕರತೆರಿಗೆಗಳು ವ್ಯಕ್ತಿಯ ಮೇಲೆ ವಸ್ತುಗಳ ವಿಷಯವಾಗಿ—ಆಸ್ತಿಯ ವಿಷಯವಾಗಿ ಹಾಕಲಾಗು ವುದು. ಜಕಾತಿ ಒಂದು ವಿಶಿಷ್ಟಜಾತಿಯದು. ಇದು ಸರಕಿನ ಮೇಲೆ ಹಾಕಲಾದ ಕರ. ಅದೂ ಕೂಡ, ಗಡಿ ಪ್ರವೇಶ ಕಾಲಕ್ಕೆ ಹಾಕುವ ಕರ. ಪಟ್ಟಣ ಪಂಚಾ ಯತ-ಕ್ಷೇತ್ರದಲ್ಲಿ ಪ್ರವೇಶಮಾಡುವ ಕಾಲಕ್ಕೆ ಹಾಕುವ ಕರ. ಜಕಾತಿ ಕೊಡದಿ ದ್ದರೆ ವ್ಯಕ್ತಿಯನ್ನು ತಡೆಗಟ್ಟುವದಿಲ್ಲ. ಸರಕು ಒಳಗೆ ಬಿಡುವುದಿಲ್ಲ. ಸರಕು ಮುಖ್ಯವೇ ಹೊರತು ವ್ಯಕ್ತಿಯಲ್ಲ. ಇದೇ ಜಕಾತಿಯ ವೈಶಿಷ್ಟ್ಯ. ಕರ-ತೆರಿಗೆ ಗಳಲ್ಲಿ ಸಾಮಾನ್ಯವಾಗಿ ವ್ಯಕ್ತಿಯ ವೈಯಕ್ತಿಕ ಹೊಣೆಗಾರಿಕೆ ಇರುತ್ತದೆ. ವ್ಯಕ್ತಿ ಬೇಕಾದಲ್ಲಿರಲಿ. ಹೊಣೆ ತಪ್ಪಿಸಲು ಬರುವದಿಲ್ಲ. ಜಕಾತಿಯ ವಿಷಯ ಹಾಗಲ್ಲ. ಸರಕು ಗಡಿಯಾಚೆಯಿರುವಾಗ ಜಕಾತಿಯ ಪ್ರಶ್ನೆ ಹುಟ್ಟದು. ಗಡಿಯೊಳಗೆ ಒಮ್ಮೆ ಬಂದಿತೆಂದರೆ ಆ ಪ್ರಶ್ನೆ ಉಂಟಾಗುವದಿಲ್ಲ. ಗಡಿ ಪ್ರವೇಶಕಾಲಕ್ಕೆ ಕೊಡ ಬೇಕಾದ ಸರಕಿನ ಮೇಲಿನ ಕರವೇ ಜಕಾತಿ

೨೩. ಇದರ ಬಗ್ಗೆ ವಿಚಾರಮಾಡುವಾಗ ಕಂಟಕದ ಬಗ್ಗೆ ವಿವರಣೆಯು ತಿಳಿವು ಅಗತ್ಯ. ಯಾವ ವ್ಯಾಪಾರದಲ್ಲಿ-ವ್ಯವಹಾರದಲ್ಲಿ ಉಪಯೋಗಿಸಲಾಗುವ ವಸ್ತುಗಳು ಕಂಟಕಪ್ರಾಯವಾಗಿರುವುವೊ ಅಂತಹ ವ್ಯಾಪಾರವು ಕ್ಲೇಶಕಾರಕ—ಅಪಾಯಕಾರಕ—ವ್ಯಾಪಾರವಾಗುವುದು. ಆದ್ದರಿಂದ ಮೊದಲು ವ್ಯಾಪಾರದ ವಸ್ತುವು ಯಾವುದು ಎಂದು ನಿರ್ಧರಿಸಬೇಕು. ಅದು ಕಂಟಕಪ್ರಾಯವಾಗಿರುವುದೋ ಇಲ್ಲವೊ ನಿರ್ಣಯಿಸಬೇಕು. ಅದು ಕಂಟಕಪ್ರಾಯವಾಗಿದ್ದರೆ ಆ ವ್ಯಾಪಾರವು ಕ್ಲೇಶಕಾರಕ ಹಾಗೂ ಅಪಾಯಕಾರಕ ವ್ಯಾಪಾರ ಎಂದು ಗಣಿಸಲಾಗುವುದು. ಅದಕ್ಕಾಗಿ ಉಪಕಲಮು ೨೧ ನ್ನು ಲಕ್ಷಿಸಬೇಕು.

೨೪ ಇಲ್ಲಿ ಮಾಲಕೀ ಹಕ್ಕು ಮುಖ್ಯವಲ್ಲ; ಕಬಜಾ ಮುಖ್ಯ. ಭೂಮಿಯ ಕಬಜಾ, ಕಟ್ಟಡದ ಇಲ್ಲವೆ ಅದರ ಭಾಗದ ಕಬಜಾ ಯಾರ ಹತ್ತಿರ ಇರುವುದೋ ಅವನು ಆ ಆಸ್ತಿಯನ್ನು ಸ್ವಾಧೀನದಲ್ಲಿಟ್ಟುಕೊಂಡವ. ಕಬಜಾ ಹೇಗೆ ಬಂತು? ಇದು ಈ ಉಪಕಲಮಿಗಾಗಿ ಗೌಣ ವಿಷಯ. ಅದು ಅವನಿಗೆ ಬಾಡಿಗೆದಾರ ಎಂದು ಬಂದಿರಲಿ, ಲಾಯಸೆನ್ಸದಾರ ಎಂದು ಬಂದಿರಲಿ, ಅವನು ಅದಕ್ಕೆ ಬಾಡಿಗೆ ಕೊಡಲಿ, ಬಿಡಲಿ. ಅವನು ಮಾಲಕನೇ ಆಗಿರಲಿ, ಇವು ಗಣ್ಯವಿಷಯಗಳಾಗಿರದೆ, ಪ್ರತ್ಯಕ್ಷ ಕಬಜಾ ಇರುವುದು ಮುಖ್ಯ. ಅದೊಂದಿದ್ದರೆ, ಈ ಉಪಕಲಮಿನ ಅರ್ಥದಲ್ಲಿ ಅಧಿಕಾರ ಪಡೆದಂತೆ. ಸ್ವಾಧೀನ ಪಡೆದಂತೆ.

೨೫ ಕ್ಲೇಶಕಾರಕ ವಸ್ತು ಎಂತಹದು ಇರುವುದು ಎಂಬುದರ ವಿವರ ಕೊಡಲಾಗಿದೆ. ಹೊಲಸು ಯಾವುದೇ ಇರಲಿ, ಅದು ಕ್ಲೇಶಕಾರಕ. ಮನೆಯಲ್ಲಿಯ ಕಸ-ಹಳಸು ಇವು ಹೊಲಸು;- ಗಟಾರದ ಹೊಲಸು, ಹೊಲಸು ಎಂದು ಬೇರೆ ಹೇಳಬೇಕೆ? ತಂಬುಲ—ತಂಬಾಕದ ಉಗುಳು ಹೊಲಸೆಂದು ನಮ್ಮಲ್ಲಿ ಇನ್ನು ಬಹುಜನರು ತಿಳಿದಂತಿಲ್ಲ. ಅದಕ್ಕೆಂದೆ ಕಂಡಲ್ಲಿ ಪಿಚ್ ಎಂದು ಉಗುಳುವ ರೂಢಿ ಬಿದ್ದುಬಿಟ್ಟಿದೆ. ಆದರೆ ಅದು ನಿಜವಾಗಿ ಹೊಲಸು. ಕ್ಲೇಶಕಾರಕ ವಸ್ತು. ಅದರಿಂದ ಇನ್ನೊಬ್ಬರಿಗೆ ಅಪಾಯ ಸಂಭವಿಸುವ ಸಂಭವ ಇರುವುದು. ಕಾಗದ ಚೂರುಗಳು ಏನು ಹೊಲಸು, ಎನ್ನಬಹುದು. ಆದರೆ ಅದು ಹೊಲಸು ಕೂಡಿಹಾಕಲು ಸಹಾಯ ಮಾಡುವುದು. ಕಾಜಿನ ಚೂರುಗಳು, ಗಡಿಗೆಯ ಚೂರುಗಳು ಎಂತಹ ಅಪಾಯವನ್ನು ತರಬಹುದೆಂಬುದನ್ನು ಕಲ್ಪನೆ ಮಾಡುವಹಾಗಿದೆ. ಸ್ವಚ್ಛತೆಯ ದೃಷ್ಟಿಯಿಂದ ಚಾರ ಮಾಡಿದಾಗ ಈ ಉಪಕಲಮಿನಲ್ಲಿ ಹೇಳಲಾದ ಎಲ್ಲವೂ ಕ್ಲೇಶಕಾರಕ ವಸ್ತುಗಳೇ ಆಗುವುವು. ಯಾವುದು ಸ್ವಚ್ಛತೆಗೆ ಅ[illegible]ಯಾಗುವುದು ಅದು ಅಪಾಯಕಾರಿ-ಅದು ಕ್ಲೇಶಕಾರಕ.

೨೬. ಮೇಲೆ ಉಪಕಲಮು ೨೪ ರಲ್ಲಿ ಪ್ರತ್ಯಕ್ಷ ಕಬಜಾದ ವಿಷಯು ವಿದ್ದರೆ, ಇಲ್ಲಿ ಅಧಿಕಾರದ ಪ್ರಶ್ನೆ ಇದೆ. ಮಾಲಕನೆಂದರೆ ಯಾರು? ಮಾಲಕನ ಹಾಗೆ ಯಾರು ಅಧಿಕಾರ ನಡೆಸುವರೋ ಅವರೂ ಮಾಲಕರೆಂದು ಇಲ್ಲಿ ಹೇಳಲಾಗಿದೆ. ಅಂದರೆ ಅವನು ಮಾಲಕನೇ ಇರಬಹುದು; ಅವನ ಏಜೆಂಟನಾಗಿರಬಹುದು; ರಿಸೀವ್ಹರನಾಗಿರಬಹುದು; ಧರ್ಮದರ್ಶಿಯಾಗಿರಬಹುದು. ಇವರೆಲ್ಲರೂ ತಾತ್ಪೂರ್ತಿಕವಾಗಿ ಮಾಲಕನ ಸ್ಥಾನದಲ್ಲಿ ನಿಂತವರು; ಹಾಗೆ ನಿಂತು ಕೆಲಸ ಮಾಡಲು ಅಧಿಕಾರ ಪಡೆದವರು. ಭಾಡಿಗೆ ವಸೂಲಮಾಡುವ ಅಧಿಕಾರವಿದ ವನು-ಮಾಲಕನೆಂದು ತಿಳಿಯಬೇಕು. ಅಂದರೆ ಬಾಡಿಗೆ ವಸೂಲಿ-ವಸೂಲು ಮಾಡುವ ಅಧಿಕಾರ ಇವೆರಡು ಕೆಲಸ ನಡೆಸುವ ವ್ಯಕ್ತಿ-ಮಾಲಕ ಎಂಬ ಪದದಲ್ಲಿ ಬರುವನು. ಈ ಬಾಡಿಗೆಯು ಯಾವುದೇ ಭೂಮಿ-ಇಲ್ಲವೆ ಕಟ್ಟಡ-ಇಲ್ಲವೆ ಅದರ ಭಾಗಕ್ಕೆ ಸಂಬಂಧಿಸಿರಬೇಕು. ಆಸ್ತಿ-ಬಾಡಿಗೆ-ವಸೂಲು ಮಾಡುವ ಅಧಿಕಾರ, ಈ ಮೂರು ಅಂಶಗಳು ಇರುವಾಗ ಮಾಲಕ ಎಂಬ ಪದದ ಪ್ರಯೋಗವಾಗುವುದು.

೨೭. ಪಂಚಾಯತ ಎಂಬುವ ಶಬ್ದ ನಮ್ಮ ಭಾಷೆಯಲ್ಲಿ ಬಹು ರೂಢ ವಾಗಿದ್ದ ಶಬ್ದವಾಗಿದೆ. ಯಾರಾದರೂ ಮಧ್ಯಸ್ತಿಕೆ ಮಾಡುತ್ತಿದ್ದರೆ- ಅದಕ್ಕೆ ಪಂಚಾಯತಿ ಎಂದು ಕರೆಯುವುದುಂಟು. ಆದ್ದರಿಂದ ಈ ಶಬ್ದದ ವ್ಯಾಖ್ಯೆ ಮಾಡಲಾಗಿದ್ದು ಈ ಕಾಯದೆಗೆ ಸಂಬಂಧವಾಗಿ ಈ ಶಬ್ದವನ್ನು ಬಳಸಲಾಗಿದ್ದರೆ ಅದು ಗ್ರಾಮಪಂಚಾಯತ ಇಲ್ಲವೆ ಸಂದರ್ಭಾನುಸಾರ ಪಟ್ಟಣ ಪಂಚಾಯತ ವೆಂದೂ ಅದು ಈ ಕಾಯಿದೆಗೆ ಅನುಸಾರವಾಗಿ ಸ್ಥಾಪಿಸಲ್ಪಟ್ಟಂತಹದೆಂದೂ ಅರ್ಥ ವಾಗುತ್ತದೆ. ಅಂದರೆ ಮುಖ್ಯವಾಗಿ ಈ ಕಾಯಿದೆಗೆ ಅನುಸಾರವಾದ ಗ್ರಾಮ ಪಂಚಾಯತ ಇಲ್ಲವೆ ಪಟ್ಟಣ ಪಂಚಾಯತವೆಂದು ಹೇಳಿದಾಗ ಬೇರೆ ಕಾಯಿದೆಗನು ಸಾರವಾಗಿ ಸ್ಥಾಪಿತವಾದ ಪಂಚಾಯತ ಅಲ್ಲವೆಂದು ಸೂಚಿಸಿದ ಹಾಗೆ ಆಗುತ್ತ ದೆಂಬುದನ್ನು ಮರೆಯಲಾಗದು.

೨೮. ಗೊತ್ತು ಮಾಡಿದ್ದು— ಎಂಬುದು ಈ ಕಾಯಿದೆಗೆ ಅನ್ವಯಿಸಪೆ ಈ ಕಾಯಿದೆಯನ್ವಯವಾಗಿ ಮಾಡಿದ ನಿಯಮಗಳಲ್ಲಿ ಗೊತ್ತುಮಾಡಿದ್ದು. ನಿಯಮ ಗಳೂ ಕಾಯಿದೆಗಳ ಶಕ್ತಿ ಪಡೆದಿದ್ದರೂ ಗೊತ್ತುಮಾಡಿದ ವಿಷಯದ ಬಗ್ಗೆ ನಿಯಮ ಗಳನ್ನು ನೋಡಬೇಕು ಎಂದು ಇಲ್ಲಿಯ ಸೂಚನೆ.

೨೯. ಅಧ್ಯಕ್ಷ— ಪ್ರೆಸಿಡೆಂಟ ಎಂಬ ಪದಗಳು ಸಾಮಾನ್ಯ ಬಳಕೆಯಲ್ಲಿ ಯವು. ಪ್ರೆಸಿಡೆಂಟ ಎಂದ ಕೂಡಲೆ ಸಾಮಾನ್ಯವಾಗಿ ರಾಷ್ಟ್ರಪತಿ ಎಂಬ ಅರ್ಥವು ಹೊರಡುತ್ತದೆ; ಯಾವುದೇ ಸಂಸ್ಥೆಯ ಅಧ್ಯಕ್ಷ ಎಂದೂ ಅರ್ಥವಾಗ

ಬಹುದು. ಆದರೆ ಅದನ್ನು ತಪ್ಪಿಸಲು-ನಿರ್ದಿಷ್ಟವಾದ ಅರ್ಥವನ್ನು ಕೊಡಲಾಗಿದೆ. ಪ್ರೆಸಿಡೆಂಟ ಎಂಬುದು ತಾಲೂಕ ಬೋರ್ಡಿಗೆ ಮಾತ್ರ ಸಂಬಂಧಿಸಿದ ಶಬ್ದವೆಂದೂ ತಾಲೂಕ ಬೋರ್ಡಿನ ಪ್ರೆಸಿಡೆಂಟನೇ ಪ್ರೆಸಿಡೆಂಟ ಎಂಬ ಅರ್ಥದಲ್ಲಿ ಈ ಕಾಯಿದೆಯಲ್ಲಿ ಆ ಶಬ್ದವನ್ನು ಬಳಸಲಾಗಿದೆ.

೩೦. ಈ ಉಪಕಲಮು ವಿಚಾರಮಾಡುವಾಗ ಉಪಕಲಮು ೧೮ ಮತ್ತು ೩೨ ಇವುಗಳನ್ನು ಲಕ್ಷಕ್ಕೆ ತೆಗೆದುಕೊಳ್ಳಬೇಕು. ೧೮ ರಲ್ಲಿ ಮಾರ್ಕೆಟಿನ ವ್ಯಾಖ್ಯೆ ಮಾಡಲಾಗಿದ್ದು ೩೨ ರಲ್ಲಿ ಸಾರ್ವಜನಿಕ ಮಾರ್ಕೆಟಿನ ಬಗ್ಗೆ ಹೇಳಲಾಗಿದೆ. ಯಾವುದು ಮಾರ್ಕೆಟು ಅಹುದೋ ಮತ್ತು ಯಾವುದು ಸಾರ್ವಜನಿಕ ಮಾರ್ಕೆಟು ಅಲ್ಲವೊ ಅದು ಖಾಸಗಿ ಮಾರ್ಕೆಟು ಎಂದು ವ್ಯಾಖ್ಯೆ ಮಾಡಲಾಗಿದೆ. ಮುಖ್ಯವಾಗಿ ನಿರ್ಣಯಿಸಬೇಕಾದ ಸಂಗತಿಗಳು ಎರಡು. (೧) ಅದು ಮಾರ್ಕೆಟ ಆಗಿರಬೇಕು. (೨) ಅದು ಸಾರ್ವಜನಿಕ ಮಾರ್ಕೆಟ ಆಗಿರಬಾರದು. ಅಂತಹ ಸ್ಥಳವು ಖಾಸಗಿ ಮಾರ್ಕೆಟು ಎಂದು ಆಗುವುದು. ಖಾಸಗಿ ಶಬ್ದವನ್ನು ಸಾರ್ವಜನಿಕವಲ್ಲ ಎಂದು ಸೂಚಿಸಲಾಗಿದೆ. ಅದರ ಪ್ರತ್ಯಕ್ಷ ವ್ಯಾಖ್ಯೆ ಮಾಡಿಲ್ಲ.

೩೧. ತಾರಿಣಿ— ಎಂಬುದು ನದಿ-ಹಳ್ಳ-ತೊರೆ ಮುಂತಾದ ನೀರಿನ ಪ್ರದೇಶದಲ್ಲಿ ಒಂದು ದಂಡೆಯಿಂದ ಇನ್ನೊಂದು ದಂಡೆಗೆ ಸಾಗಿಸುವ ತೇಲುವ ವಾಹನ. ತಾರಿಣಿಯ ಅರ್ಥವನ್ನು ಇಲ್ಲಿ ಕೊಟ್ಟಿಲ್ಲ. ಇಲ್ಲಿ ಬರಿಯೆ ಸಾರ್ವಜನಿಕ ತಾರಿಣಿಯ ಬಗ್ಗೆ ಹೇಳಲಾಗಿದೆ. 'ಸಾರ್ವಜನಿಕ' ಎಂದು ಅದು ಹೇಗೆ ಆಗುವುದು? ಅದನ್ನು ಭಾಡಿಗೆಗಾಗಿ ಇಟ್ಟಿರಬೇಕು. ಅದು ಪ್ರವಾಸಿಕರ, ಪ್ರಾಣಿಗಳ, ಬಂಡಿ-ಚಕ್ಕಡಿ, ವಾಹನ-ಸರಕು-ಇವುಗಳನ್ನು ಸಾಗಾಟದ ಸಲುವಾಗಿ ಇರಬೇಕು. ಅಂದರೆ ಬಾಡಿಗೆ ಕೊಟ್ಟರೆ ಉಪಯೋಗಕ್ಕೆ ಆಸ್ಪದವುಂಟಾಗಬೇಕು. ಬಾಡಿಗೆ ಕೊಡುವವರು ಯಾರು ಬೇಕಾದವರು ಇದ್ದರೂ ಉಪಯೋಗಕ್ಕೆ ದೊರೆವಾಗ ಅದು ಸಾರ್ವಜನಿಕ ಎನ್ನಿಸುವುದು ಯಾವ ಭಿಡೆ ಮುರವತ್ತುಗಳ ಪ್ರಶ್ನೆ ಇಲ್ಲ. ಬಾಡಿಗೆಯನ್ನು ಕೊಟ್ಟರೆ-ಅದು ಮುಖ್ಯ-ಉಪಯೋಗಕ್ಕೆ ಅದು ದೊರೆಯುತ್ತಿದ್ದರೆ, ಅದು ಸಾರ್ವಜನಿಕವಾಗುವುದು. ಅದು ಏನನ್ನು ಸಾಗಾಟಮಾಡಬಹುದು ಎಂಬುದನ್ನು ಹೇಳಲಾಗಿದೆ. ಈ ಪಟ್ಟಿಯಲ್ಲಿ ಬರಲಾಗದೆ ಇದ್ದ ಯಾವುದನ್ನು ಅದು ಸಾಗಾಟಮಾಡದು. ಇವೇ ಸಾರ್ವಜನಿಕ ತಾರಿಣಿಯ ಬಗ್ಗೆ ಇದ್ದ ನಿರ್ಬಂಧಗಳು. ಇನ್ನು ಪ್ರವಾಸಿ ಎಂದರೆ ಯಾರು? ಬಾಡಿಗೆ ಕೊಟ್ಟು ದಾಟಬೇಕೆನ್ನುವವ ಪ್ರವಾಸಿ. ಪ್ರಾಣಿ ಎಂದರೆ ಜೀವಂತ ಪ್ರಾಣಿ ಎಂದು ಅರ್ಥ. ಬಂಡಿ-ಚಕ್ಕಡಿ, ವಾಹನ ಇವು ಗಾಲಿಯ ಮೇಲೆ ನಡೆಯುವಂತಹವು ಎಂದು ಸೂಚನೆ. ಅವುಗಳ ಆಕಾರ ರೂಪ ಹೇಗಾದರೂ ಇರಬಹುದು. ಅವುಗಳಿಗೆ ಗಾಲಿ ಇರಬೇಕಾದುದು

ಮಹತ್ವ. ಸರಕು ಶಬ್ದವು ತುಂಬ ಜಟಿಲವಾದುದು. ಬಹು ವ್ಯಾಪಕವಾದುದು. ಯಾವುದು ಸರಕು ಎಂದು ಹೇಳುವುದು ಕಠಿಣವಾದಂತೆ ಯಾವುದು, ಸರಕು ಅಲ್ಲ ಎಂದು ಹೇಳುವುದೂ ಅಷ್ಟೇ ಕಠಿಣವಾದೀತು. ಸೇಲ ಆಫ್ ಗುಡ್ಸ ಕಾಯಿದೆಯಲ್ಲಿ ಗೂಡ್ಸ (ಸರಕು) ಇದರ ವ್ಯಾಖ್ಯೆ ಮಾಡಲಾಗಿದೆ. "ಎಲ್ಲ ಬಗೆಯ ಜಂಗಮ ಆಸ್ತಿಯೆಲ್ಲವೂ ಸರಕು." ಎಂದು ಅಲ್ಲಿ ಹೇಳಿದೆ. ಸೃ-ಸರ-ಅಂದರೆ ಸರಿ. ಚಲನ-ಯಾವುದು ಚಲಿಸಲಿಕ್ಕೆ-ಒಂದು ಸ್ಥಾನದಿಂದ ಇನ್ನೊಂದು ಸ್ಥಾನಕ್ಕೆ ಒಯ್ಯಲು ಬರುತ್ತದೆಯೋ ಅದೇ ಸರಕು.

ಆ ಕಾಯಿದೆಯಲ್ಲಿ ಸರಕನ್ನು ಮಾರಾಟದ ದೃಷ್ಟಿಯಿಂದ ವ್ಯಾಖ್ಯೆ ಮಾಡಲಾಗಿದೆಯೆಂಬುದನ್ನು ಮರೆಯಲಾಗದು. ಆದ್ದರಿಂದ ಅಲ್ಲಿ ಸರಕು ಶಬ್ದದಲ್ಲಿ ವಿದ್ಯುತ್ ಗ್ಯಾಸು-ಮುಂತಾದ ಶಕ್ತಿಗಳೂ ಸರಕು ಎಂದು ಆಗಿವೆ. ಆದರೆ ಇಲ್ಲಿ ತಾರಣಿಯ ಸಂಬಂಧವಾಗಿ ಇರುವ ಸರಕು ಶಬ್ದವು ಒಂದು ಸ್ಥಳದಿಂದ ಇನ್ನೊಂದಕ್ಕೆ ಸ್ಥಳಾಂತರಿಸಲು ಯೋಗ್ಯವಾದ ವಸ್ತು ಎಂದೂ ಅದನ್ನು ತಾರಣಿಯ ಮುಖಾಂತರ ಸ್ಥಳಾಂತರಿಸಲು ಶಕ್ಯವಾಗಿರಬೇಕೆಂದೂ •ಅದಕ್ಕೆ ಬಾಡಿಗೆ ಕೊಡಬೇಕೆಂದೂ ಸೂಚಿತವಾದುದನ್ನು ಲಕ್ಷಕ್ಕೆ ತಂದರೆ ಸರಕು ಶಬ್ದಕ್ಕೆ ಅರ್ಥ ವ್ಯಾಪ್ತಿ ಎಷ್ಟು ಎಂಬುದು ಸ್ಪಷ್ಟವಾಗುವುದು.

೩೨. ಸಾರ್ವಜನಿಕ ಶಬ್ದವನ್ನು ಮೇಲಿನ ಉಪಕಲಮಿನಲ್ಲಿಯೂ ಬಳಸಲಾಗಿದೆ. ಅಲ್ಲಿ ಬಾಡಿಗೆಯ ವಿಷಯವು ಮುಖ್ಯವಾಗಿದ್ದುದು ನೆನಪಿಡಬೇಕು. ಯಾವುದು ಬಾಡಿಗೆಗಾಗಿ ದೊರೆವುದೋ ಅದು ಸಾರ್ವಜನಿಕ ಎಂಬ ಅರ್ಥ ಅಲ್ಲಿ ಬಂದಿದೆ. ಇಲ್ಲಿ ಸಾರ್ವಜನಿಕ ಎಂದರೆ ಯಾರೊಬ್ಬರ ಖಾಸಗಿ ಸೊತ್ತಲ್ಲ ಎಂಬುವ ಅರ್ಥದಲ್ಲಿ ಬಂದಿದೆ. ಅಂದರೆ ಪಂಚಾಯತದಿಂದ, ಇಲ್ಲವೆ ತಾಲೂಕ ಬೋರ್ಡಿನಿಂದ ಪಡೆದ- ಕಟ್ಟಿಸಲ್ಪಟ್ಟ, ಪೋಷಿಸಲ್ಪಟ್ಟ, ಸಂಚಾಲಿತ ಇಲ್ಲವೆ ಒಡೆತನವುಳ್ಳ ಎಂಬ ಅರ್ಥವು ಸಾರ್ವಜನಿಕ ಎಂಬ ಪದಕ್ಕೆ ಬಂದಿದೆ. ಯಾವ ಮಾರ್ಕೆಟಿನ ಬಗ್ಗೆ ಪಂಚಾಯತದ ಇಲ್ಲವೆ ತಾಲೂಕ ಬೋರ್ಡದ ಅಧಿಕಾರವು ಇರುವುದೋ ಅದು ಸಾರ್ವಜನಿಕ ಮಾರ್ಕೆಟು. ಅಂದರೆ ಆ ಮಾರ್ಕೆಟದ ಮೇಲೆ ಯಾವೊಬ್ಬ ಖಾಸಗಿ ವ್ಯಕ್ತಿಯ ಅಧಿಕಾರ ಇರುವುದಿಲ್ಲ ಎಂಬುದು ಒಂದು ಬದಿಯ ಲಕ್ಷಣವಾದರೆ, ಇನ್ನೊಂದು ಬದಿಯ ಲಕ್ಷಣವೇನೆಂದರೆ ಒಂದು ಚುನಾಯಿತ ಸಂಸ್ಥೆಯ ಅಧಿಕಾರಕ್ಕೆ ಒಳಪಟ್ಟಿರುವುದು. ಈ ಎರಡೂ ಲಕ್ಷಣ ಇರುವ ಮಾರ್ಕೆಟು ಸಾರ್ವಜನಿಕ ಮಾರ್ಕೆಟು. ಆ ಚುನಾಯಿತ ಸಂಸ್ಥೆಗಳು ಯಾವೆಂದರೆ ಪಂಚಾಯತ ಇಲ್ಲವೆ ತಾಲೂಕ ಬೋರ್ಡ ಎಂದೂ ಸ್ಪಷ್ಟಪಡಿಸಲಾಗಿದೆ. ಅಂದರೆ, ಯಾವುದೇ

ಮುನಸಿಪಾಲಟಿಯ ಅಧಿಕಾರಕ್ಕೆ ಒಳಗಾಗಿದ್ದ ಮಾರ್ಕೆಟು ಈ ಕಾಯದೆಯ ದೃಷ್ಟಿ ಯಿಂದ ಸಾರ್ವಜನಿಕ ಮಾರ್ಕೆಟು ಆಗಲಾರದು. ಅಥವಾ ಅದು ಈ ಕಾಯದೆಯ ಕಕ್ಷೆಯ ಹೊರಗಿನದು ಎಂದು ಅರ್ಥ.

೩೩ ಸಾರ್ವಜನಿಕ ಸ್ಥಳವು ಖಾಸಗಿ ಸ್ಥಳವಲ್ಲ. ಅದು ಯಾರೊಬ್ಬರ ಖಾಸಗಿ ಸೊತ್ತು-ಆಸ್ತಿ ಅಲ್ಲ. ಸಾರ್ವಜನಿಕರ ಉಪಯೋಗ-ಉಪಭೋಗಕ್ಕೆ ಮುಕ್ತವಾಗಿರುವುದು ಸಾರ್ವಜನಿಕ ಸ್ಥಳ. ಇಂತಹ ಸ್ಥಳವು ಪಂಚಾಯತದ ಇಲ್ಲವೆ ತಾಲೂಕ ಬೋರ್ಡಿನ ಅಧೀನವಾಗಿರಬಹುದು ಇಲ್ಲದಿರಬಹುದು. ಮೇಲಿನ ಉಪ ಕಲಮಿನಲ್ಲಿ ಸಾರ್ವಜನಿಕ ಮಾರ್ಕೆಟು ಎಂದು ಹೇಳುವಾಗ ಪಂಚಾಯತದ ಇಲ್ಲವೆ ತಾಲೂಕ ಬೋರ್ಡಿನ ಅಧಿಕಾರ ಆ ಮಾರ್ಕೆಟದ ಮೇಲೆ ಇದ್ದರೆ ಮಾತ್ರ ಸಾರ್ವ ಜನಿಕ ಎಂದು ನಿರ್ದಿಷ್ಟ ಪಡಿಸಲಾಗಿತ್ತು. ಸಾರ್ವಜನಿಕ ಸ್ಥಳದ ಬಗ್ಗೆ ಆ ನಿರ್ಬಂಧ ಇಲ್ಲ. ಸಾರ್ವಜನಿಕ ಸ್ಥಳ ಅಂದರೆ ಯಾವುದು ಖಾಸಗಿ ಒಡೆತನಕ್ಕೆ ಇಲ್ಲವೊ ಅದು ಸಾರ್ವಜನಿಕ ಸ್ಥಳ.

೩೪ ಸಾರ್ವಜನಿಕ ರಸ್ತೆಯು ಸಾರ್ವಜನಿಕ ಉಪಯೋಗಕ್ಕೆ ಅನುಕೂಲ ವಾಗಿರುವ ರಸ್ತೆಯು. ಸಾರ್ವಜನಿಕರಿಗೆ ಅಲ್ಲಿ ಹಾಯುವ ಹಕ್ಕು-ಅಧಿಕಾರ ಇದ್ದರೆ ಅದು ಸಾರ್ವಜನಿಕ ರಸ್ತೆ ಆಯಿತು. ಸಾರ್ವಜನಿಕರು ಹಾಯಲೇಬೇಕೆಂದಲ್ಲ; ಹಾದಾಡುವ ಹಕ್ಕು ಇದ್ದರೆ ಸಾಕು. ಆ ರಸ್ತೆ ರಹದಾರಿ ಇರಲಿ, ಬಿಡಲಿ, ಸಾರ್ವ ಜನಿಕರು— ಅಂದರೆ ಇಂತಹದೇ ವ್ಯಕ್ತಿ, ಎಂದು ಅಲ್ಲ-ಜನಸಾಮಾನ್ಯರು ಅಂದರೆ ಸಮಾಜದ ಜನರು-ಹಾದಾಡಬೇಕೆಂದು ಮನಸ್ಸು ಮಾಡಿ ಹಾದು ಹೋಗುವಾಗ ಯಾವುದೇ ವ್ಯಕ್ತಿಗೆ ಅವರನ್ನು ನಿರ್ಬಂಧಿಸುವ ಖಾಸಗಿ ಅಧಿಕಾರ ಎಲ್ಲಿ ಇರುವ ದಿಲ್ಲವೊ ಅದು ಸಾರ್ವಜನಿಕ ರಸ್ತೆ.

೩೫. ಭೂ-ಕಂದಾಯದ ಆಡಳಿತದಲ್ಲಿ ವಿಭಾಗಗಳನ್ನು ಮಾಡಿದ್ದಾರೆಂದು ಮೇಲೆ ಹೇಳಲಾಗಿದೆ. ಈ ಆಡಳಿತದ ಮೂಲ ಪ್ರಾದೇಶಿಕ ವಿಭಾಗವೇ ಗ್ರಾಮ. ಅದಕ್ಕೆ ಭೂಕಂದಾಯದ ಗ್ರಾಮ. ಎಂದು ಹೆಸರು. ಸರಕಾರದವರು ಅದನ್ನು ಗ್ರಾಮವೆಂದು ಭೂಕಂದಾಯದ ಬಗ್ಗೆ ಗೊತ್ತುಮಾಡಿರುವರು. ಇಲ್ಲಿ ಅದು ಗ್ರಾಮವಾಗಿರುವುದು ಮುಖ್ಯವಲ್ಲ. ಅದು ಸರಕಾರದಿಂದ ಗ್ರಾಮವೆಂದು ಗುರುತಿ ಸಲ್ಪಟ್ಟಿರಬೇಕು. ಮತ್ತು ಭೂಕಂದಾಯಕ್ಕಾಗಿ ಅದು ಗ್ರಾಮವೆಂದು ನಿರ್ದಿಷ್ಟ ಪಡಿಸಲ್ಪಟ್ಟಿರಬೇಕು. ಆಗ ಅದು ಭೂಕಂದಾಯದ ಗ್ರಾಮವೆಂದಾಗುವುದು.

ವಿವರಣೆಯಲ್ಲಿ ಒಂದು ಮಾತು ಹೇಳಲಾಗಿದೆ. ಪಟ್ಟಣಗಳು ಊರುಗಳು ಬೆಳೆದಾಗ ಸುತ್ತಮುತ್ತಲಿನ ಗ್ರಾಮಗಳ ಭಾಗಗಳು ಪಟ್ಟಣದ ಭಾಗಗಳಾಗಿ ಬಿಡುವುವು. ಸರಕಾರದ ಭೂಕಂದಾಯದ ಗ್ರಾಮಗಳ ಪಟ್ಟಿಯಲ್ಲಿ ಅವುಗಳ

ಹೆಸರು ಸಿಕ್ಕರೂ ಅವು ಪ್ರಾದೇಶಿಕವಾಗಿ ಪಟ್ಟಣದ ಇಲ್ಲವೆ ಊರುಗಳ ಆಡಳಿತ ವಿಭಾಗದ ಒಳಪ್ರದೇಶವಾಗಿರುವುವು. ಆಗ-ಆ ಗ್ರಾಮದ ಎಷ್ಟುಭಾಗವು ಪಟ್ಟಣದ ಪ್ರಾದೇಶಿಕ ಸಮಿತಿಯ ಅಧಿಕಾರಕ್ಕೆ, ಇಲ್ಲವೆ ಸ್ಯಾನಿಟರಿ ಬೋರ್ಡಿನ ಅಧಿಕಾರಕ್ಕೆ ಮುನಸಿಪಾಲಿಟಿಯ ಅಧಿಕಾರಕ್ಕೆ ಒಳಪಟ್ಟಿರುವುದೋ ಅಷ್ಟು ಭಾಗವನ್ನು ಬಿಟ್ಟು ಉಳಿದುದು ಮಾತ್ರ ಭೂಕಂದಾಯದ ಗ್ರಾಮವೆಂದು ಗಣಿಸಬೇಕು. ಅಂದರೆ ಆ ಭಾಗವು ನೇರವಾಗಿ ಭೂಕಂದಾಯದ ಆಡಳಿತದ ವಿಭಾಗವಾಗಿರುವುದು. ಅದರ ಮೇಲೆ ಬೇರೆ ಯಾವ ಸ್ಥಾನಿಕ ಅಧಿಕಾರ ಇರುವುದಿಲ್ಲ. ಒಟ್ಟಿನಲ್ಲಿ ಸ್ಥಾನಿಕ ಅಧಿಕಾರ ಕ್ಷೇತ್ರದ ಒಳಗೆ ಬಂದ ಭೂಕಂದಾಯದ ಗ್ರಾಮದ ಭಾಗವು ಭೂಕಂದಾಯದ ಆಡಳಿತಕ್ಕೆ ಸೇರಿದ್ದಲ್ಲ; ಹಾಗೆ ಸೇರಿದ್ದನ್ನು ಬಿಟ್ಟು ಉಳಿದ ಭಾಗವು ಭೂಕಂದಾಯದ ಗ್ರಾಮ. ಯಾವುದು ಭೂಕಂದಾಯದ ಗ್ರಾಮವು ಎಂಬ ಪ್ರಶ್ನೆಗೆ ಉತ್ತರಕೊಡಬೇಕಾದಾಗ, ಅದು ಸ್ಥಾನಿಕ ಅಧಿಕಾರದ ಕ್ಷೇತ್ರಕ್ಕೆ ಸೇರಿದೆಯೋ ಇಲ್ಲವೆ ನೇರವಾಗಿ ಭೂಕಂದಾಯದ ಆಡಳಿತಕ್ಕೆ ಒಳಪಟ್ಟಿರುವುದೋ ವಿಚಾರಿಸಿ—ಎಷ್ಟುಭಾಗ ಸ್ಥಾನಿಕ ಅಧಿಕಾರಕ್ಕೆ ಸೇರಿರುವುದೋ ಅಷ್ಟು ಬಿಟ್ಟು ಉಳಿದುದು ಮಾತ್ರ ಭೂಕಂದಾಯದ ಗ್ರಾಮವೆಂದು ತಿಳಿಯಬೇಕು.

೩೬. ಈ ಕಾಯಿದೆಗೆ ಅನೇಕ ಪರಿಶಿಷ್ಟಗಳನ್ನು ಜೋಡಿಸಲಾಗಿದೆ. ಪರಿಶಿಷ್ಟ, ಎಂದರೆ ಈ ಕಾಯಿದೆಗೆ ಜೋಡಿಸಲಾದ ಪರಿಶಿಷ್ಟ.

೩೭. ಕಾಲ ಕಾಲಕ್ಕೆ ಜಾರಿಯಲ್ಲಿರುವ ಪರಿಶಿಷ್ಟ ವರ್ಗಗಳು ಮತ್ತು ಪರಿಶಿಷ್ಟ ಪಂಗಡಗಳು ಇವುಗಳ ಪಟ್ಟಿಯನ್ನು ಮೈಸೂರ ರಾಜ್ಯಕ್ಕೆ ಸಂಬಂಧವಾಗಿದ್ದುದನ್ನು ನೋಡಬೇಕು.

೩೮. ರಸ್ತೆ ಎಂದರೆ ನನಗೆ ಗೊತ್ತಿಲ್ಲವೆ ? ಎಂದು ಎಲ್ಲರೂ ಹೇಳಬಹುದು. ಯಾವುದು ರಸ್ತೆ, ಎಂಬುದು ತಿಳಿದರೂ ಆ ಶಬ್ದದ ಹೊಟ್ಟೆಯಲ್ಲಿ ಏನೇನು ಬಂದೀತು ಎಂಬುದು ಸಾಮಾನ್ಯವಾಗಿ ತಿಳಿಯದು. ಅದಕ್ಕೆ ಇಲ್ಲಿ ವಿವರಿಸಲಾಗಿದೆ. ರಾಜಮಾರ್ಗವೂ ರಸ್ತೆ; ಹಳ್ಳ-ನದಿಗಳ-ಮೇಲೆ ಮಾಡಲಾದ ಫರಸಿ-ಅದೂ ರಸ್ತೆ; ಸೇತುವೆ-ಅದೂ ರಸ್ತೆ; ಕಣಿವೆ ಮಾರ್ಗ-ರಸ್ತೆ; ಕಮಾನು-ಅಂದರೆ ಸೇತುವೆಗಾಗಿ-ಇಲ್ಲವೆ ಫರಸಿಗಾಗಿ ಮಾಡಿದ ಕಮಾನು. ಅದರ ಮೇಲೆ ಹಾದಾಡಲು ಬರುವಂತಿರಬೇಕು, ಅದೂ ರಸ್ತೆ. ಮಾರ್ಗ-ಬೀದಿ, ಕಾಲುದಾರಿ-ಕೆಳದಾರಿ, ಸಂದಿ, ಪ್ರಾಣಿಗಳ ಮೇಲೆ ಹಾದು ಹೋಗಲು ಇದ್ದ ದಾರಿ. ಇವೆಲ್ಲವೂ ರಸ್ತೆ. ಅಂಗಣ, ಅದೂ ರಸ್ತೆ. ವಾಹನಗಳ ಓಡಾಟಕ್ಕೆ ಪ್ರತ್ಯೇಕವಾಗಿದ್ದು ಕಾಲದಾರಿ ಅದಕ್ಕೆ ಹೊಂದಿಕೊಂಡು ಇರುವ ಮಾರ್ಗದಲ್ಲಿ ಇವೆರಡೂ ಭಾಗಗಳು ರಸ್ತೆ. ಈ ಎಲ್ಲವೂ ರಹದಾರಿಗಳೇ ಇರಬೇಕೆಂಬ ನಿಯಮವಿಲ್ಲ. ಅವು ಹಾದಾಡಲು ಯೋಗ್ಯವಾಗಿದ್ದರೆ ಆಯಿತು, ರಸ್ತೆಯ ವ್ಯಾಖ್ಯೆಯಲ್ಲಿ ಬರುವುವು.

೩೯. ತಾಲೂಕ ಶಬ್ದವು ಭೂಕಂದಾಯ ಆಡಳಿತದ ವಿಭಾಗದ ಹೆಸರು. ಅದಕ್ಕೆ ಪೇಠಾ, ಮಹಾಲ ಎಂಬ ಹೆಸರುಗಳೂ ಇವೆ. ಮೂಲ ಘಟಕವು ಗ್ರಾಮವು. ಅನೇಕ ಗ್ರಾಮಗಳು ಕೂಡಿ ಒಂದು ತಾಲೂಕ-ಪೇಠಾ-ಮಹಾಲ ಆಗಿರುತ್ತದೆ. ಇವುಗಳ ಪ್ರಾದೇಶಿಕ ಗಡಿ ಕಾಲ ಕಾಲಕ್ಕೆ ನಿರ್ಣಯಿತವಾಗುವ ಸಂದರ್ಭ ಬರುವುದಿಲ್ಲ. ಆದ್ದರಿಂದ ಯಾವ ಕಾಲಕ್ಕೆ ತಾಲೂಕ-ಪೇಠಾ-ಮಹಾಲ ಎಂದು ಸಂಬೋಧಿಸಲಾಗುವುದೋ ಆ ಕಾಲಕ್ಕೆ ಅದರ ಪ್ರಾದೇಶಮಿತಿ ಎಷ್ಟು ಎಂದು ತಿಳಿದುಕೊಂಡು ಅದು ಆಗ ಇರುವ ಭೂಕಂದಾಯದ ಆಡಳಿತದ ತಾಲೂಕ ಎಂದು ತಿಳಿಯಬೇಕು.

೪೦. ತಹಶೀಲದಾರ— ಎಂಬವನು ತಾಲೂಕದ ಅಧಿಕಾರಿ. ಇವನಿಗೆ ಮೊದಲು ಮಾಮಲೇದಾರ ಎನ್ನುತ್ತಿದ್ದರು. ಆ ಹೆಸರು ಇಂದು ಕಡಿಮೆಯಾಗಿ ತಹಶೀಲದಾರ ಎಂಬ ಹೆಸರು ರೂಢಿಯಲ್ಲಿ ಬಂದಿದೆ. ಮಾಮಲೇದಾರ ಎಂದು ಕರೆವ ಕಾಲಕ್ಕೆ ಪೇಠಾ-ಮಹಾಲ-ಇವುಗಳ ಅಧಿಕಾರಿ ಮಹಾಲಕರಿ ಎಂದು ಕರೆಯಲ್ಪಡುತ್ತಿದ್ದರು. ಈಗ ಮಾಮಲೇದಾರನು ತಹಶೀಲದಾರ ಆದಾಗ್ಗೆ ಮಹಾಲಕರಿಯು ಡೆಪ್ಯೂಟಿ ತಹಶೀಲದಾರ ಎಂದು ಆಗಿದ್ದಾನೆ. ಆದರೂ ತಹಶೀಲದಾರ ಎಂಬ ಶಬ್ದದ ಉಪಯೋಗವಾದಾಗ ತಹಶೀಲದಾರ-ತಹಶೀಲದಾರ ಎಂಬ ಅರ್ಥವು ಸಂಬಂಧಾರ್ಥದಲ್ಲಿ ಹೊರಡುವುದು.

೪೧. ತಾಲೂಕ ಬೋರ್ಡ— ಅಂದರೆ ಈ ಕಾಯಿದೆಯನ್ವಯವಾಗಿ ರಚಿತವಾದ ತಾಲೂಕ ಅಭಿವೃದ್ಧಿ ಬೋರ್ಡ. ಅದಕ್ಕೆ ಒಮ್ಮೊಮ್ಮೆ ಬರಿಯ ಬೋರ್ಡ ಎಂದೂ ಕರೆಯಲಾಗುವುದು.

೪೨. ವಾಹನ ಎಂದರೆ ಗಾಲಿಗಳ ಸಹಾಯದಿಂದ ನಡೆಯುವ ವಾಹನ ಎಂದು ಅರ್ಥ. ಆದರೆ ಅದು ಸಾರ್ವಜನಿಕ ರಸ್ತೆಯ ಮೇಲೆ ಅಡ್ಡಾಡಲು ಸಮರ್ಥವಾಗಿರಬೇಕು. ರೇಲವೆ ಗಾಡಿ ,ಈ ಕಾಯಿದೆಯ ಅರ್ಥದಲ್ಲಿ ವಾಹನ ವಲ್ಲ. ವಿಮಾನು ಈ ಕಾಯಿದೆಯ ಅರ್ಥದಲ್ಲಿ ವಾಹನವಲ್ಲ. ಅದಕ್ಕೆ ಸಾಯಕಲ್ಲು, ಮೋಟರು, ಮೂರುಗಾಲಿ ಸಾಯಕಲ್ಲು, ಸಾಯಕಲ್ ರಿಕ್‌ಶಾ, ಆಟೋ ರಿಕ್‌ಶಾ ಮುಂತಾದ ರೂಪಗಳನ್ನು ಹೇಳಲಾಗಿದೆ.

೪೩. ಪಂಚಾಯತದ- ಅಂದರೆ ಈ ಕಾಯಿದೆಯ ಪ್ರಕಾರ ರಚಿತವಾದ ಪಂಚಾಯತದ ಉಪ ಚೇರಮನ್ನನೇ ವಾಯಿಸ ಚೇರಮನ್-ಬೇರೆ ಯಾರೂ ಅಲ್ಲ.

೪೪. ಈ ಕಾಯಿದೆಯ ಪ್ರಕಾರ ರಚಿತವಾದ ತಾಲೂಕ ಬೋರ್ಡದ ಉಪಾಧ್ಯಕ್ಷನೆ-ವಾಯಿಸ ಪ್ರೆಸಿಡೆಂಟ ಬೇರೆ ಯಾರೂ ಅಲ್ಲ.

೪೫. ಗ್ರಾಮ ಎಂದರೆ ಅದು ಭೂಕಂದಾಯ ಆಡಳಿತದ ದೃಷ್ಟಿಯಿಂದ ಗುರುತಿಸಲಾದ ಗ್ರಾಮವಿರಬೇಕು. ಅಲ್ಲದೆ ಈ ಕಾಯಿದೆಯ್ನು ಪ್ರಕಾರ ಗ್ರಾಮವೆಂದು ಸಾರಲ್ಪಟ್ಟಿರಬೇಕು. ಅಂದರೆ, ಒಂದೇ ಹಳ್ಳಿ-ಇಲ್ಲವೆ ಹಳ್ಳಿಗಳ ಗುಂಪು ಕೂಡಿ ಸಹ-ಈ ಕಾಯಿದೆಯ ಪ್ರಕಾರ ಒಂದು ಗ್ರಾಮವೆಂದು ಸಾರಲ್ಪಡಲಾಗುವುದು. ಈ ಕಾಯಿದೆಯು ನಿರ್ದಿಷ್ಟಪಡಿಸದೆ ಇದ್ದರೆ ಅದು ಗ್ರಾಮವಲ್ಲ. ಅದು ಭೂಕಂದಾಯ ಆಡಳಿತದ ಗ್ರಾಮ. ಈ ಕಾಯಿದೆ ಅನ್ವಯಿಸಬೇಕಾದರೆ ಅದು ಈ ಕಾಯಿದೆಯ ಪ್ರಕಾರ ಗ್ರಾಮವೆಂದು ಸಾರಲ್ಪಟ್ಟಿರಲೇಬೇಕು.

# ಭಾಗ ಎರಡು: ಪಂಚಾಯತಗಳು

## ಪ್ರಕರಣ ೨ : ಪಂಚಾಯತಗಳ ಸ್ಥಾಪನೆ ಮತ್ತು ಘಟನೆ-ರಚನೆ.

### ೩. ಗ್ರಾಮದ ನಿರ್ದೇಶನ

(೧) ಗೊತ್ತುಪಡಿಸಲಾದ ರೀತಿಯಲ್ಲಿ ಸರಕಾರವು ವಿಚಾರಣೆಯನ್ನು ನಡಸಿ ಯಾವುದೊಂದು ಭೂಕಂದಾಯ ಗ್ರಾಮ ಇಲ್ಲವೆ ಭೂಕಂದಾಯ ಗ್ರಾಮಗಳ ಗುಂಪು ಒಂದು ಸಾವಿರದಾ ಐದುನೂರಕ್ಕಿಂತ ಕಡಿಮೆ ಇಲ್ಲದಷ್ಟು, ಆದರೆ, ಹತ್ತು ಸಾವಿರಕಿಂತ ಹೆಚ್ಚಿಗೆ ಆಗದಷ್ಟು, ಜನಸಂಖ್ಯೆಯುಳ್ಳ ಪ್ರದೇಶವಾಗಿದೆಯೆಂದು ಯಾವಾಗ ಅದು ಮನವರಿಕೆ ಮಾಡಿಕೊಳ್ಳುವುದೋ ಆಗ ಅಧಿಕೃತ ಗಾಜೆಟದಲ್ಲಿ ಪ್ರಕಟನೆಯ ಮೂಲಕ ಆ ಪ್ರದೇಶವನ್ನು ಗ್ರಾಮವೆಂದು ಸಾರುವುದು.

ಆದರೆ ಯಾವುದೊಂದು ಭೂಕಂದಾಯದ ಗ್ರಾಮವು ಇಲ್ಲವೆ ಭೂಕಂದಾಯ ಗ್ರಾಮಗಳ ಗುಂಪು ಒಂದು ಸಾವಿರದ ಐದುನೂರರಕಿಂತ ಕಡಿಮೆ ಇಲ್ಲವೆ ಹತ್ತು ಸಾವಿರದಕಿಂತಲೂ ಹೆಚ್ಚು ಜನಸಂಖ್ಯೆಯುಳ್ಳ ಪ್ರದೇಶವಾಗಿರುವಾಗ ಸರಕಾರವು ವಿಶೇಷ ಕಾರಣಗಳ ಮೂಲಕ ಮತ್ತು ಅಧಿಕೃತ ಗ್ಯಾಜೆಟಿನಲ್ಲಿಯ ಪ್ರಕಟನೆಯ ಮೂಲಕ ಗ್ರಾಮವೆಂದು ಈ ಕಲಮಿನನ್ವಯವಾಗಿ ಸಾರಬಹುದು.

(೨) ತಾಲೂಕ ಬೋರ್ಡದೊಂದಿಗೆ ವಿಚಾರ ವಿನಿಮಯ ಮಾಡಿ ಸರಕಾರವು ಯಾವುದೇ ಕಾಲಕ್ಕೆ ಪ್ರಕಟನೆ ಹೊರಡಿಸಿ

(ಅ) ಯಾವುದೇ ಗ್ರಾಮದಲ್ಲಿ ಯಾವುದೇ ಭೂಕಂದಾಯ ಗ್ರಾಮವನ್ನು ಸೇರಿಸಬಹುದು. ಇಲ್ಲವೆ ಯಾವುದೇ ಗ್ರಾಮದಿಂದ ಯಾವುದೇ ಭೂಕಂದಾಯ ಗ್ರಾಮವನ್ನು ಬೇರ್ಪಡಿಸಬಹುದು; ಇಲ್ಲವೆ

(ಬ) ಯಾವುದೇ ಪ್ರದೇಶವು ಗ್ರಾಮವೆಂದು ಗಣಿಸಲ್ಪಡುವುದನ್ನು ನಿಲ್ಲಿಸಲಾಗಿದೆ.

ಎಂದು ಸಾರಬಹುದು.

(೩) ಐದು ಸಾವಿರದಕಿಂತ ಕಡಮೆ ಇಲ್ಲದಷ್ಟು ಜನಸಂಖ್ಯೆಯಿರುವ ಹಾಗೂ ವರುಷಕ್ಕೆ ಅದರ ಉತ್ಪನ್ನವು ಹತ್ತು ಸಾಪಿರ ರೂಪಾಯಿಕಿಂತ ಕಡಿಮೆ ಆಗಲಿಕ್ಕಿಲ್ಲವೆಂದು ಅಂದಾಜು ಮಾಡಲ್ಪಟ್ಟಂತಹ ಗ್ರಾಮವನ್ನು, ಪ್ರಕಟನೆ ಹೊರಡಿಸಿ, ಸರಕಾರವು ಪಂಚಾಯತ ಪಟ್ಟಣವೆಂದು ಸಾರಬಹುದು.

**ವಿವರಣೆ**— ಈ ಕಲಮಿನ ಉದ್ದೇಶಗಳಿಗಾಗಿ "ಜನಸಂಖ್ಯೆ" ಅಂದರೆ ಗೊತ್ತುಪಡಿಸಲಾದ ಪದ್ಧತಿಯಲ್ಲಿ ನಿರ್ದಿಷ್ಟಪಡಿಸಿದಂತಹ ಜನಸಂಖ್ಯೆ.

## ವಿವೇಚನೆ

ಇಲ್ಲಿ ಗ್ರಾಮವೆಂದರೇನು ಎಂಬುದರ ಬಗ್ಗೆ ಹೇಳಲಾಗಿದೆ. ಈ ಕಲಮಿನಲ್ಲಿ ಹೇಳಿದ ಗ್ರಾಮವು ಬೇರೆ–ಭೂಕಂದಾಯದ ಆಡಳಿತಕ್ಕಾಗಿ ನಿರ್ದಿಷ್ಟಪಡಿಸಿದ ಭೂಕಂದಾಯ ಗ್ರಾಮ ಬೇರೆ. ಇದನ್ನು ಮುಖ್ಯವಾಗಿ ತಿಳಿಯತಕ್ಕದ್ದು. ಈ ಕಲಮಿನಲ್ಲಿ ಹೇಳಿದ ಗ್ರಾಮದಲ್ಲಿ ಒಂದು-ಅಥವಾ ಹೆಚ್ಚು ಭೂಕಂದಾಯದ ಗ್ರಾಮಗಳು ಇರುವುವು. ಈ ಕಲಮಿನ ಪ್ರಕಾರ ಗ್ರಾಮವೆಂದು ಆಗಬೇಕಾದರೆ ಇಷ್ಟು ಲಕ್ಷಣಗಳು ಇರಬೇಕು.

೧. ಒಂದು ಪ್ರದೇಶದಲ್ಲಿ ಒಂದು ಅಥವಾ ಹೆಚ್ಚು ಭೂಕಂದಾಯದ ಗ್ರಾಮಗಳು ಇರುವುವು.

೨. ಆ ಪ್ರದೇಶದ ಜನಸಂಖ್ಯೆ ೧೫೦೦ ಕ್ಕಿಂತ ಕಡಿಮೆ ಆಗಲಾರದಷ್ಟು ೧೦,೦೦೦ ದಕಿಂತ ಹೆಚ್ಚು ಆಗದಷ್ಟು ಇರಬೇಕು.

೩. ಆ ಪ್ರದೇಶವನ್ನು ಸರಕಾರವು ಜನಸಂಖ್ಯೆಯ ಬಗ್ಗೆ ಗೊತ್ತುಪಡಿಸಲಾದ ರೀತಿಯಲ್ಲಿ ವಿಚಾರಿಸಿ, ಅಧಿಕೃತ ಗ್ಯಾಜೆಟದಲ್ಲಿ ಗ್ರಾಮವೆಂದು ಸಾರಬೇಕು.

ಆಗ ಅದು ಈ ಕಲಮಿನ ಪ್ರಕಾರ ಗ್ರಾಮವೆಂದು ಆಗುವುದು. ಆದರೆ ಇದಕ್ಕೆ ಒಂದು ಅಪವಾದವಿದೆ. ಜನಸಂಖ್ಯೆಯ ಮಿತಿಯು ಕಡಿಮೆ ೧೫೦೦-ಹೆಚ್ಚು ೧೦,೦೦೦, ಹೀಗೆ ಇರದೇ ಇದ್ದರೂ ಕೆಲವೊಂದು ವಿಶಿಷ್ಟ ಕಾರಣಗಳಿಗಾಗಿ, ೧೫೦೦ ಕ್ಕಿಂತ ಕಡಿಮೆ ಇದ್ದರೂ ಹತ್ತು ಸಾವಿರದಕಿಂತ ಹೆಚ್ಚು ಜನಸಂಖ್ಯೆ ಇದ್ದರೂ

ಸರಕಾರವು ಪ್ರಕಟನೆ ಹೊರಡಿಸಿ ಅದನ್ನು ಗ್ರಾಮವೆಂದು ಸಾರಬಹುದು ಆದರೆ ಇದು ಕೇವಲ ವಿಶೇಷ ಪ್ರಸಂಗದಲ್ಲಿ ಮಾತ್ರ. ಪ್ರಸಂಗದ ವೈಶಿಷ್ಟ್ಯದ ನಿರ್ಣಯವು ಸರಕಾರದ್ದು.

ಗ್ರಾಮದ ಜನಸಂಖ್ಯೆಯು ಸಾಧಾರಣವಾಗಿ ೧೫೦೦ ಕ್ಕಿಂತ ಹೆಚ್ಚು ೧೦,೦೦೦ ದಕಿಂತ ಕಡಿಮೆ ಇರಬೇಕು. ಎಂಬುದು ಅದರ ಸಾಮಾನ್ಯ ಲಕ್ಷಣ.

ಒಮ್ಮೆ ಗ್ರಾಮ ಎಂದು ನಿರ್ದಿಷ್ಟಪಡಿಸಿದ ಪ್ರದೇಶದಲ್ಲಿ ಹೊಸದಾಗಿ ಯಾವುದೇ ಭೂಕಂದಾಯ ಗ್ರಾಮವನ್ನು ಸೇರಿಸಬಹುದು. ಇಲ್ಲವೆ ಆ ಪ್ರದೇಶದಿಂದ ಯಾವುದೇ ಭೂಕಂದಾಯ ಗ್ರಾಮವನ್ನು ಹೊರಗೆ ಹಾಕಬಹುದು. ಹೀಗೆ ಮಾಡಿದ್ದರ ಬಗ್ಗೆ ಪ್ರಕಟನೆ ಹೊರಡಿಸಬೇಕು. ಒಮ್ಮೆ ಗ್ರಾಮವೆಂದು ನಿರ್ದಿಷ್ಟಪಡಿಸಿದ ಪ್ರದೇಶವನ್ನು ಗ್ರಾಮವಲ್ಲ, ಎಂದೂ ಸರಕಾರವು ಪ್ರಕಟನೆ ಹೊರಡಿಸಿ ಸಾರಬಹುದು.

ಗ್ರಾಮದ ಪ್ರಾದೇಶಿಕ ಮಿತಿಯಲ್ಲಿ ಸ್ಥಿತ್ಯಂತರ ಮಾಡುವ ಅಧಿಕಾರ ಸರಕಾರಕ್ಕೆ ಈ ಕಲಮಿನ ಮೂಲಕ ಇದೆ.

ಈ ಕಲಮು ಗ್ರಾಮ ಎಂಬುದರ ಬಗ್ಗೆ ಇದ್ದರೂ ಉಪ ಕಲಮು (೩) ರಲ್ಲಿ ಪಂಚಾಯತ ಪಟ್ಟಣದ ಬಗ್ಗೆ ಉಲ್ಲೇಖ ಮಾಡಲಾಗಿದೆ.

ಯಾವುದೊಂದು ಗ್ರಾಮದ ಜನಸಂಖ್ಯೆ ೫೦೦೦ ದ ಕಿಂತ ಕಡಿಮೆ ಇರದೇ ಇದ್ದಾಗ ಮತ್ತು ಅದರ ವಾರ್ಷಿಕ ಉತ್ಪನ್ನವು ೧೦,೦೦೦/= ರೂಪಾಯಿಗಳಷ್ಟು ಆಗಬಹುದೆಂಬ ಅಂದಾಜು ಇರುವಾಗ ಆ ಗ್ರಾಮವನ್ನು ಪಂಚಾಯತ ಪಟ್ಟಣವೆಂದು ಪ್ರಕಟನೆ ಹೊರಡಿಸಿ ಸರಕಾರವು ಸಾರಬಹುದು.

ಈ ಕಲಮಿನಲ್ಲಿ ಬಂದ ಜನಸಂಖ್ಯೆಯನ್ನು ಹೇಗೆ ಗೊತ್ತುಮಾಡುವುದು. ಅದಕ್ಕಾಗಿ ಪ್ರತ್ಯೇಕ ನಿಯಮಗಳನ್ನು ಮಾಡಲಾಗುವದೆಂದೂ ನಿಯಮಗಳಲ್ಲಿ ಹೇಳಿದ ರೀತಿಯ ಪ್ರಕಾರ ಜನಸಂಖ್ಯೆಯ ವ್ಯಾಪ್ತಿಯನ್ನು ಕಂಡು ಹಿಡಿಯಲಾಗುವುದು.

## ೪. ಪಂಚಾಯತಗಳ ಸ್ಥಾಪನೆ

೧. ಕಲಮು ೩ ರನ್ವಯವಾಗಿ ಸಾರಲಾದ ಪ್ರತಿಯೊಂದು ಗ್ರಾಮದಲ್ಲಿ ಒಂದು ಪಂಚಾಯತ ಇರತಕ್ಕದ್ದು.

೨. ಪಂಚಾಯತ ಪಟ್ಟಣವೆಂದು ಸಾರಲಾದ ಗ್ರಾಮಕ್ಕಾಗಿ ಸ್ಥಾಪಿತವಾದ ಪಂಚಾಯತವು ಪಟ್ಟಣ ಪಂಚಾಯತವೆಂದಾಗುವುದು. ಮತ್ತು ಯಾವುದೇ ಬೇರೆ ಗ್ರಾಮಕ್ಕಾಗಿ ಸ್ಥಾಪಿತವಾದ ಪಂಚಾಯತವು ಗ್ರಾಮಪಂಚಾಯತವೆಂದಾಗುವುದು.

**ವಿವೇಚನೆ—**

ಗ್ರಾಮವೆಂದು ಸಾರುವ ಕಾರ್ಯವು ಕಲಮು ೩ ರನ್ವಯವಾಗಿ ನಡೆವುದು. ಅಂತಹ ಒಂದು ಗ್ರಾಮಕ್ಕೆ ಒಂದು ಪಂಚಾಯತ ಇರತಕ್ಕದ್ದು. ಕಲಮು ೩ ರಲ್ಲಿ ಗ್ರಾಮ ಮತ್ತು ಪಂಚಾಯತ ಪಟ್ಟಣ ಎಂಬ ಎರಡು ಮಾದರಿಯ ಗ್ರಾಮಗಳು ಇರುವುವು ಅದಕ್ಕಾಗಿ ಆ ಪಂಚಾಯತಗಳ ಹೆಸರನ್ನು ಇಲ್ಲಿ ಹೇಳಲಾಗಿದೆ. ಪಂಚಾಯತ ಪಟ್ಟಣವೆಂಬ ಗ್ರಾಮಕ್ಕಾಗಿ ಸ್ಥಾಪಿತವಾದ ಪಂಚಾಯತವು ಪಟ್ಟಣ ಪಂಚಾಯತವೆಂದೂ ಉಳಿದೆಲ್ಲವೂ ಗ್ರಾಮಪಂಚಾಯತವೆಂದೂ ಕರೆಯಲ್ಪಡಬೇಕು. ಪಂಚಾಯತಗಳ ಹೆಸರಿನಿಂದಲೇ ಅವುಗಳ ವ್ಯಾಪ್ತಿಯನ್ನು ತಿಳಿಯಲು ಇದರಿಂದ ಅನುಕೂಲವಾಗುವುದು.

## ೫. ಪಂಚಾಯತಗಳ ರಚನೆ

೧. ಈ ಕಾಯಿದೆಯ ಕಕ್ಷೆಗಳಿಗಂಕಿತವಾಗಿ ಡೆಪ್ಯೂಟಿ ಕಮಿಶನರು ನಿರ್ದಿಷ್ಟಪಡಿಸಬಹುದಾದಂತೆ ಪಂಚಾಯತವು ಹನ್ನೊಂದರಕಿಂತ ಕಡಿಮೆ ಇಲ್ಲದಷ್ಟು ಇಲ್ಲವೆ ಹತ್ತೊಂಬತ್ತರಕಿಂತ ಹೆಚ್ಚು ಆಗದಷ್ಟು ಸಂಖ್ಯೆಯುಳ್ಳದ್ದಾಗಿದ್ದು ಅವರೆಲ್ಲರೂ ಚುನಾಯಿತರಾಗಿರಬೇಕು.

೨. ಗೊತ್ತು ಮಾಡಬಹುದಾದ ಸಂಖ್ಯೆಯಲ್ಲಿ ಯಾವುದೇ ಪಂಚಾಯತದಲ್ಲಿ ಪರಿಶಿಷ್ಟ ವರ್ಗಗಳ ಮತ್ತು ಸ್ತ್ರೀಯರ ಪ್ರತಿನಿಧಿಗಳಿಗಾಗಿ ಸ್ಥಳಗಳು ಕಾದಿಡಲ್ಪಟ್ಟಿರಬೇಕು. ಮತ್ತು ಹೀಗೆ ಸ್ತ್ರೀಯರ ಸಲುವಾಗಿ ಕಾದಿಟ್ಟ ಸ್ಥಳಗಳು ಎರಡರಕಿಂತ ಕಡಿಮೆ ಇರತಕ್ಕದ್ದಲ್ಲ.

ಆದರೆ, ಆ ಗ್ರಾಮದಲ್ಲಿಯ ಪರಿಶಿಷ್ಟ ವರ್ಗದವರ ಜನಸಂಖ್ಯೆಯನ್ನು ಅನುಲಕ್ಷಿಸಿ ಸ್ಥಳಗಳನ್ನು ಕಾದಿಡುವುದು ಅಗತ್ಯವೆಂದು ಸರಕಾರದ ಅಭಿಪ್ರಾಯವಾದ ಹೊರತು ಯಾವುದೇ ಪಂಚಾಯತದಲ್ಲಿ ಪರಿಶಿಷ್ಟ ವರ್ಗದ ಪ್ರತಿನಿಧಿಗಳಾಗಿ ಯಾವ ಸ್ಥಳವನ್ನು ಕಾದಿಡುವ ಕಾರಣವಿಲ್ಲ.

ಆದರೆ, ಭಾರತದ ರಾಜ್ಯಘಟನೆಯ ೩೩೪ ನೆಯ ನಿಬಂಧನೆಯಲ್ಲಿ ನಿರ್ದಿಷ್ಟಪಡಿಸಿದ ಕಾಲಾವಧಿ ಮುಗಿದ ನಂತರ ಈ ಉಪಕಲಮಿನಲ್ಲಿ ಹೇಳಿದ ಪರಿಶಿಷ್ಟ ವರ್ಗಗಳ ಸಂಬಂಧದಲ್ಲಿಯ ಸಂಗತಿಗಳು ಅಷ್ಟರ ಮಟ್ಟಿಗೆ ಅಧಿಕಾರ ಶಕ್ತಿಯನ್ನು ಕಳೆದುಕೊಳ್ಳುವುವು.

ಆದರೆ ಮೇಲೆ ಹೇಳಿದ ಉಪಕಲಮಿನಲ್ಲಿಯ ಎರಡನೆಯ ಅಪವಾದದಲ್ಲಿಯ ಮಾತುಗಳು ಪಂಚಾಯತದಲ್ಲಿಯ ಸದಸ್ಯರ ಅಧಿಕಾರ ಕಾಲಾವಧಿಯು ಮುಗಿಯುವ ವರೆಗೆ ಪ್ರಾತಿನಿಧ್ಯಕ್ಕೆ ಬಾಧೆ ತರಲಾರವು.

(೩) ಉಪಕಲಮು (೪) ರಲ್ಲಿ ಹೇಳಿದ ಮಾತುಗಳಿಗಂಕಿತವಾಗಿ ಕಮಿಶ ನರನು ಪ್ರಕಟನೆ ಹೊರಡಿಸಿ,

(ಅ) ಪ್ರತಿಯೊಂದು ಪಂಚಾಯತದ ಕ್ಷೇತ್ರಾಧಿಕಾರದಲ್ಲಿರುವ ಪ್ರದೇಶ ವನ್ನು ಅಂತಹ ಪಂಚಾಯತದ ಚುನಾವಣೆಯ ಸಲುವಾಗಿ ಮತದಾರ ಸಂಘ ಗಳನ್ನಾಗಿ ವಿಭಾಗ ಮಾಡಿ ನಿರ್ದಿಷ್ಟಪಡಿಸತಕ್ಕದ್ದು.

(ಬ) ಪ್ರತಿಯೊಂದು ಮತದಾರ ಸಂಘದ ಕ್ಷೇತ್ರ ವ್ಯಾಪ್ತಿಯನ್ನು ನಿರ್ದಿಷ್ಟ ಪಡಿಸತಕ್ಕದ್ದು.

(ಕ) ಪ್ರತಿಯೊಂದು ಮತದಾರ ಸಂಘಕ್ಕೆ ಹಂಚಿಹಾಕಿದ ಸ್ಥಳಗಳ ಸಂಖ್ಯೆ ಯನ್ನು-ಅದು ಎರಡು ಇಲ್ಲವೆ ಹೆಚ್ಚು ಇದ್ದು-ನಿರ್ದಿಷ್ಟಪಡಿಸತಕ್ಕದ್ದು.

(ಡ) ಪ್ರತಿಯೊಂದು ಮತದಾರ ಸಂಘದಲ್ಲಿ ಪರಿಶಿಷ್ಟ ವರ್ಗ ಹಾಗೂ ಸ್ತ್ರೀಯರಿಗಾಗಿ ಕಾದಿಟ್ಟ ಸ್ಥಳಗಳು ಯಾವುದಾದರೂ ಇದ್ದರೆ ಆ ಸ್ಥಳಗಳ ಸಂಖ್ಯೆ ಯನ್ನು ನಿರ್ದಿಷ್ಟಪಡಿಸತಕ್ಕದ್ದು.

(೪) ಪಂಚಾಯತದ ಕ್ಷೇತ್ರಾಧಿಕಾರದಲ್ಲಿಯ ಪ್ರದೇಶದಲ್ಲಿ ಪಂಚಾಯತದ ಪ್ರತಿಯೊಂದು ಮತದಾರ ಸಂಘದಿಂದ ಚುನಾಯಿತರಾಗುವ ಸದಸ್ಯರ ಸಂಖ್ಯೆಯು ಮತ್ತು ಕಳೆದ ಜನಗಣತಿಯ ಪ್ರಕಾರ ನಿರ್ದಿಷ್ಟವಾದ ಆ ಮತದಾರ ಸಂಘದ ಕ್ಷೇತ್ರದ ಜನಸಂಖ್ಯೆಯು ಶಕ್ಯವಾದಷ್ಟು ಒಂದೇ ಪ್ರಮಾಣದಲ್ಲಿ ಇರಬೇಕು.

(೫) ಯಾವುದಾದರೂ ಕಾರಣದ ಮೂಲಕ ಚುನಾವಣೆಯ ಪರಿಣಾಮ ದಿಂದ ಅಗತ್ಯವಿದ್ದು ಸದಸ್ಯರ ಸಂಖ್ಯೆಯುಕಿಂತ ಕಡಿಮೆ ಸದಸ್ಯರು ಚುನಾಯಿತ ರಾಗಿ ಬಂದಿದ್ದರೆ, ಅಗತ್ಯವಿದ್ದ ಸಂಖ್ಯೆಯು ಭರತಿಯಾಗುವಂತೆ ಚುನಾಯಿತರಾ ಗಲು ಅರ್ಹತೆ ಇರಬಹುದಾಗಿದ್ದ ವ್ಯಕ್ತಿಗಳನ್ನು ಅಷ್ಟು ಸಂಖ್ಯೆಯಲ್ಲಿ ಡೆಪ್ಯೂಟಿ ಕಮಿಶನರರು ನೇಮಿಸತಕ್ಕದ್ದು.

(೬) ಪಂಚಾಯತದ ಸದಸ್ಯರ ಸಂಖ್ಯೆಯು ಹನ್ನೊಂದರಕಿಂತಲೂ ಹೆಚ್ಚು ಇರಬೇಕೆಂದು ಡೆಪ್ಯೂಟಿ ಕಮಿಶನರರು ನಿರ್ದಿಷ್ಟಮಾಡಿರುವ ಸಂದರ್ಭದಲ್ಲಿ ಹನ್ನೊಂದರಕಿಂತ ಹೆಚ್ಚು ಸದಸ್ಯರನ್ನು ಚುನಾಯಿಸಿ ತಾರದೆ ಇರುವುದು ಪಂಚಾ ಯತದ ರಚನೆಗೆ ಬಾಧೆ ಉಂಟುಮಾಡಲಾರದು.

(೭) ಚುನಾಯಿತರಾದ ಮತ್ತು ನೇಮಕವಾದ ಸದಸ್ಯರ. ಹೆಸರುಗಳನ್ನು ಗೊತ್ತುಮಾಡಿದ ರೀತಿಯಲ್ಲಿ ಡೆಪ್ಯೂಟಿ ಕಮಿಶನರರು ಪ್ರಕಟಿಸತಕ್ಕದ್ದು.

**ವಿವೇಚನೆ**

ಪಂಚಾಯತದ ರಚನೆಯ ಬಗ್ಗೆ ಇಲ್ಲಿ ಹೇಳಲಾಗಿದೆ. ಪಂಚಾಯತದ ಸದಸ್ಯರು ಚುನಾಯಿತರಾದ ಸದಸ್ಯರು.

ಪಂಚಾಯತದಲ್ಲಿ ಕನಿಷ್ಟ ೧೧ ಜನ ಸದಸ್ಯರು ಹೆಚ್ಚೆಂದರೆ ೧೯ ಜನ ಸದಸ್ಯರು. ಯಾವ ಪಂಚಾಯತದಲ್ಲಿ ಈ ಪರಿಮಿತಿಯಲ್ಲಿ ಎಷ್ಟು ಜನ ಸದಸ್ಯರು ಇರಬೇಕೆಂಬುದನ್ನು ಡೆಪ್ಯೂಟಿ ಕಮಿಶನರರು ನಿರ್ದಿಷ್ಟಪಡಿಸುವರು. ವ್ಯಾಖ್ಯೆಗಳನ್ನು ಹೇಳಿದ ಕಲಮಿನಲ್ಲಿ ಡೆಪ್ಯೂಟಿ ಕಮಿಶನರು ಯಾರು ಎಂಬುದನ್ನು ಹೇಳಿಲ್ಲ. ಡೆಪ್ಯೂಟಿ ಕಮಿಶನರು ಜಿಲ್ಲೆಯ ಅಧಿಕಾರಿ. ಹಿಂದೆ ಇವರಿಗೆ ಕಲೆಕ್ಟರ ಎಂಬ ಹೆಸರು ಇದ್ದಿತು. ಜಿಲ್ಲಾಧಿಕಾರಿಯಾದ ಡೆಪ್ಯೂಟಿ ಕಮಿಶನರು ಪಂಚಾಯತದ ಸದಸ್ಯರ ಸಂಖ್ಯೆಯನ್ನು ನಿರ್ದಿಷ್ಟಪಡಿಸುವರು ಎಂಬುದು ಮುಖ್ಯಮಾತು.

ಹೀಗೆ ನಿರ್ದಿಷ್ಟವಾದ ಸಂಖ್ಯೆಯಲ್ಲಿ ಪರಿಶಿಷ್ಟ ವರ್ಗದವರಿಗೆ ಹಾಗೂ ಸ್ತ್ರೀಯರಿಗೆ ಕಾದಿಟ್ಟ ಪ್ರಾತಿನಿಧ್ಯವಿದೆ. ಪರಿಶಿಷ್ಟ ವರ್ಗದವರಿಗೆ ಇಂತಿಷ್ಟೇ ಸ್ಥಳಗಳನ್ನು ಕಾದಿಡಬೇಕೆಂದು ವಿಧಿಸಿಲ್ಲ. ಆದರೆ ಸ್ತ್ರೀಯರಿಗಾಗಿ ಕನಿಷ್ಟ ಎರಡು ಸ್ಥಳಗಳನ್ನು ಕಾದಿಡಬೇಕೆಂದು ವಿಧಿಸಲಾಗಿದೆ. ಅಂದರೆ ಯಾವುದೇ ಪಂಚಾಯತದಲ್ಲಿ ಎರಡರ ಕಿಂತ ಕಡಿಮೆ ಸ್ತ್ರೀ ಪ್ರಾತಿನಿಧ್ಯದ ಸ್ಥಳಗಳು ಇರತಕ್ಕದ್ದಲ್ಲ ಎಂದು ಹೇಳಿದಂತಾಯಿತು. ಪರಿಶಿಷ್ಟ ವರ್ಗದವರಿಗೆ ಸ್ಥಳಗಳನ್ನು ಕಾದಿಡಬೇಕೆಂದು ಸಾಮಾನ್ಯವಾಗಿ ಹೇಳಲಾಗಿದ್ದರೂ ಅದಕ್ಕೆ ಅಪವಾದವಿದೆ. ಯಾವುದೊಂದು ಗ್ರಾಮದಲ್ಲಿಯ ಪರಿಶಿಷ್ಟ ವರ್ಗದವರ ಜನಸಂಖ್ಯೆಯ ಮೇಲಿಂದ ಪರಿಶಿಷ್ಟವರ್ಗದವರಿಗೆ ಸ್ಥಳಗಳನ್ನು ಕಾದಿಡುವುದು ಅಗತ್ಯವೆಂದು ಸರಕಾರದ ಅಭಿಪ್ರಾಯವಾದರೆ ಮಾತ್ರ ಸ್ಥಳಗಳನ್ನು ಕಾದಿಡಲಾಗುವುದು. ಹಾಗೆ ಸರಕಾರದ ಅಭಿಪ್ರಾಯ ಆಗದಿದ್ದರೆ ಆ ಗ್ರಾಮದಲ್ಲಿಯ ಪಂಚಾಯತಕ್ಕಾಗಿ ಪರಿಶಿಷ್ಟ ವರ್ಗದವರಿಗಾಗಿ ಸ್ಥಳಗಳನ್ನು ಕಾದಿಡುವ ಅಗತ್ಯವಿಲ್ಲ, ಎಂದ ಹಾಗಾಯಿತು. ಒಂದು ವೇಳೆ ಕಾದಿಡುವ ಪರಿಸ್ಥಿತಿಯನ್ನು ಉಂಟುಮಾಡುವ ಹಾಗೆ ಯಾವುದೇ ಗ್ರಾಮದ ಜನಸಂಖ್ಯೆಯ ವಿತರಣೆ ಇದ್ದರೆ- ಈ ಸವಲತ್ತು ಒಂದು ಕಾಲಾವಧಿಯ ವರೆಗೆ ಮಾತ್ರ. ಈ ಕಾಲಾವಧಿಯನ್ನು ಭಾರತದ ರಾಜ್ಯಘಟನೆಯ ೩೩೪ ನೆಯ ನಿಬಂಧನೆಯು ನಿರ್ದಿಷ್ಟಪಡಿಸಿರುತ್ತದೆ. ಆ ನಿಬಂಧನೆಯಲ್ಲಿ ಹೀಗೆ ಹೇಳಲಾಗಿದೆ.

" ಲೋಕಸಭೆಯಲ್ಲಿ ಇಲ್ಲವೆ ರಾಜ್ಯಗಳ ಶಾಸನ ಸಭೆಗಳಲ್ಲಿ ಪರಿಶಿಷ್ಟ ವರ್ಗ ಹಾಗೂ ಪರಿಶಿಷ್ಟ ಪಂಗಡಗಳಿಗೆ ಈ ರಾಜ್ಯಘಟನೆಯು ಜಾರಿಯಲ್ಲಿ ಬಂದ ನಂತರ ಹತ್ತು ವರುಷಗಳ ವರೆಗೆ ಸ್ಥಳಗಳನ್ನು ಕಾದಿಡಬೇಕು. ಈ ಕಾಲಾವಧಿ ಮುಗಿದಾಗ ಸದಸ್ಯರಾಗಿರುವವರು ಆಯಾ ಸಭೆಗಳು ವಿಸರ್ಜಿಸುವ ವರೆಗೆ ಸದಸ್ಯರಾಗಿ ಉಳಿಯಬೇಕು. "

ಭಾರತದ ರಾಜ್ಯಘಟನೆಯು ೧೯೫೦ ರ ಜನವರಿ ೨೬ ಕ್ಕೆ ಜಾರಿಯಲ್ಲಿ ಬಂದಿದೆ. ಅಂದರೆ ಸ್ಥಳಕಾದಿಡುವಿಕೆಯು ೧೯೬೦ ರ ಜನವರಿ ೨೫ ರ ವರೆಗೆ ಎಂದು

ಹೇಳಿದ ಹಾಗಾಯಿತು. ಆ ನಂತರ ಪರಿಶಿಷ್ಟವರ್ಗದವರಿಗೆ ಸ್ಥಳಗಳನ್ನು ಕಾದಿಡುವ ಕಾರಣವಿಲ್ಲ. ಆದರೆ ಆ ತಾರೀಖಿಗೆ ಯಾರು ಸದಸ್ಯರಾಗಿ ಕೆಲಸ ಮಾಡುತ್ತಿರುವರೋ ಅವರು ತಮ್ಮ ಅಧಿಕಾರ ಕಾಲಾವಧಿಯವರೆಗೆ ಉಳಿಯಲು ಅಧಿಕಾರವಿದೆ, ಎಂಬುದೂ ರಾಜ್ಯಘಟನೆಯ ೩೩೪ ನೆಯ ನಿಬಂಧನೆಯ ಮೂಲಕ ಸ್ಪಷ್ಟವಾಗುವುದು.

೩ ನೆಯ ಉಪಕಲಮು ೪ ನೆಯ ಉಪಕಲಮಿಗೆ ಅಂಕಿತವಾಗಿದೆ. ೩ ನೆಯ ಉಪಕಲಮಿನ ಅಧಿಕಾರಿ ಕಮಿಶನರು ಎಂಬುದನ್ನು ಗಮನಿಸಬೇಕು. ಇದು ಚುನಾವಣೆಯ ಮತದಾರ ಸಂಘ-ಕ್ಷೇತ್ರಗಳಿಗೆ ಸಂಬಂಧಿಸಿದ್ದು ಅದೆ.

ಪಂಚಾಯತದ ಸದಸ್ಯರು ಚುನಾಯಿತರಾದ ಸದಸ್ಯರು ಎಂಬುದನ್ನು ಹೇಳಿದೆ. ಪಂಚಾಯತವು ಒಂದು ಪ್ರದೇಶಕ್ಕೆ ಇರುವುದು. ಅದು ಗ್ರಾಮ ಪಂಚಾಯತವಾಗಿರಬಹುದು; ಪಟ್ಟಣ ಪಂಚಾಯತವಾಗಿರಬಹುದು. ಗ್ರಾಮವಾಗಿದ್ದರೂ ಅದು ಒಂದೇ ಭೂಕಂದಾಯ ಗ್ರಾಮವಿದ್ದರೂ ಇರಬಹುದು; ಇಲ್ಲವೆ ಹಲವಾರು ಭೂಕಂದಾಯ ಗ್ರಾಮಗಳ ಗುಂಪಿಗೆ ಇರುವ ಪ್ರದೇಶವಾಗಿರಬಹುದು. ಆದ್ದರಿಂದ ಇಡಿ ಪ್ರದೇಶವನ್ನು ಬೇರೆ ಬೇರೆ ಮತದಾರ ಕ್ಷೇತ್ರ-ಸಂಘಗಳನ್ನಾಗಿ ಮಾಡಬೇಕಾಗುತ್ತದೆ. ಹೀಗೆ ಮತದಾರ ಕ್ಷೇತ್ರಗಳನ್ನು ವಿಭಾಗಿಸುವ ಕೆಲಸ ಕಮಿಶನರರದು. ಒಂದೊಂದು ಮತದಾರ ಕ್ಷೇತ್ರದ ಪ್ರಾದೇಶಿಕ ವ್ಯಾಪ್ತಿ ಎಷ್ಟಿರಬೇಕು; ಒಂದೊಂದು ಮತದಾರ ಕ್ಷೇತ್ರಕ್ಕೆ ಎಷ್ಟು ಸ್ಥಳಗಳು ಚುನಾವಣೆಯಾಗಬೇಕು.-ಯಾವುದೇ ಮತದಾರ ಕ್ಷೇತ್ರಕ್ಕೆ ಎರಡು ಸ್ಥಳಗಳು ಇರಲೇಬೇಕಿದ್ದು-ಹೆಚ್ಚು ಕೂಡ ಇರಬಹುದು. ಮತ್ತು ಪ್ರತಿಯೊಂದು ಮತದಾರ ಕ್ಷೇತ್ರದಲ್ಲಿ ಪರಿಶಿಷ್ಟ ವರ್ಗದವರಿಗೆ-ಸ್ತ್ರೀಯರಿಗೆ ಎಷ್ಟು ಸ್ಥಳಗಳು ಕಾದಿಡಲ್ಪಡಬೇಕು. ಇವೆಲ್ಲ ವಿಷಯಗಳ ನಿರ್ಣಯವನ್ನು ಕಮಿಶನರು ತೆಗೆದುಕೊಂಡು ನಿರ್ದಿಷ್ಟಪಡಿಸಿ ಪ್ರಕಟನೆ ಹೊರಡಿಸಬೇಕು.

ಮತದಾರ ಕ್ಷೇತ್ರದಲ್ಲಿ ಸ್ಥಳಗಳ ಸಂಖ್ಯೆಯನ್ನು ಹೇಗೆ ನಿರ್ಣಯಿಸಬೇಕು? ಎಂಬುದನ್ನು ಉಪಕಲಮು ೪ ರಲ್ಲಿ ಹೇಳಿದೆ. ಒಂದು ಮತದಾರ ಕ್ಷೇತ್ರವೆಂದರೆ ಅದಕ್ಕೆ ಪ್ರಾದೇಶಿಕ ಪರಿಮಿತಿ ಇರುವುದು. ಅಲ್ಲಿ ಇರುವ ಜನಸಂಖ್ಯೆಯು ಪ್ರಮಾಣ. ಈ ಜನಸಂಖ್ಯೆಯ ವ್ಯಾಪ್ತಿಯನ್ನು ಕಳೆದ ಜನಗಣತಿಯ ಅಂಕೆ ಸಂಖ್ಯೆಗಳಿಂದ ತಿಳಿಯಬೇಕು. ಪ್ರಾದೇಶಿಕ ಮಿತಿ-ಜನಸಂಖ್ಯೆ-ಹಾಗು ಸ್ಥಳಗಳ ಸಂಖ್ಯೆ ಇವು ಒಂದು ಪಂಚಾಯತ ಪ್ರದೇಶದಲ್ಲಿ ಶಕ್ಯವಾದಷ್ಟು ಮಟ್ಟಿಗೆ ಒಂದೇ ಪ್ರಮಾಣವನ್ನು ತೋರಬೇಕು. ಶಕ್ಯವಾದಷ್ಟು ಮಟ್ಟಿಗೆ ಎಂಬುದನ್ನು ಮರೆಯಲಾಗದು. ಯಾಕಂದರೆ ಯಾವೊಂದು ಪ್ರದೇಶದಲ್ಲಿದ್ದಷ್ಟು ಜನಸಂಖ್ಯೆಯು

ಮತ್ತೊಂದು ಪ್ರದೇಶದಲ್ಲಿ ಅಷ್ಟೇ ಸಂಖ್ಯೆಯಲ್ಲಿ ಸಾಮಾನ್ಯವಾಗಿ ಇರುವುದಿಲ್ಲ. ಆದ್ದರಿಂದ ಶಕ್ಯವಾದಷ್ಟು ಮಟ್ಟಿಗೆ, ಎಂಬ ಪದಪ್ರಯೋಗ ಮಾಡಲಾಗಿದೆ. ಅಂದರೆ ಮತದಾರ ಕ್ಷೇತ್ರ ನಿರ್ಮಿಸುವಾಗ ಯಾರಿಗೂ ಅನ್ಯಾಯವಾಗಿರಬಾರದೆಂದು ಎಂಬುದೇ ಉದ್ದೇಶ. ಅಲ್ಲದೆ ಯಾವುದೂ ಅವ್ಯವಹಾರಿಕವಾಗಿರಬಾರದೆಂದು ಕೆಲಸಮಾಡುವ ಅಧಿಕಾರಿಗಳಿಗೆ ನಿರ್ಣಯಾಧಿಕಾರ ಕೊಡಲಾಗಿದೆ. ಅವರು ಶಕ್ಯ ವಾದಷ್ಟು ಮಟ್ಟಿಗೆ-ಕ್ಷೇತ್ರ-ಜನಸಂಖ್ಯೆ-ಸ್ಥಳ ಇವುಗಳಲ್ಲಿ ಒಂದೇ ಪ್ರಮಾಣ ಉಂಟಾಗುವಂತೆ ಮತದಾರ ಕ್ಷೇತ್ರಗಳನ್ನು ವಿಭಾಗ ಮಾಡಬೇಕು ಎಂದು ಸೂಚಿಸಲಾಗಿದೆ.

ಈ ಪ್ರಕಾರ ನಿರ್ದಿಷ್ಟವಾಗಿ ಮತದಾರ ಸಂಘಗಳು-ಕ್ಷೇತ್ರಗಳು ಎಂದು ಪ್ರಕಟಿತವಾಗಿ ಚುನಾವಣೆ ನಡೆದು ಚುನಾವಣೆಯ ಫಲಿತಾಂಶವು ಪ್ರಕಟವಾದಾಗ ಚುನಾಯಿತ ಸದಸ್ಯರ ಸಂಖ್ಯೆಯು ೧೧ ರ ಕಿಂತಲೂ ಕಡಿಮೆಯಾಗಿದೆ ಎಂದು ಯಾವುದೇ ಕಾರಣದಿಂದ ಕಂಡುಬಂದರೆ, ಡೆಪ್ಯೂಟಿ ಕಮಿಶನರು, ಕಡಿಮೆಯಾದಷ್ಟು ಸ್ಥಳಗಳನ್ನು ಭರತಿ ಮಾಡಬೇಕು. ಹಾಗೆ ಭರತಿ ಮಾಡುವಾಗ ಯಾರು ಚುನಾಯಿತರಾಗಲು ಅರ್ಹತೆಯುಳ್ಳವರಿದ್ದರೊ ಅಂತಹರನ್ನೇ ನೇಮಕ ಮಾಡ ಬೇಕು, ಎಂದು ಹೇಳಿದೆ.

ಯಾವುದೇ ಕಾರಣದಿಂದ-ಎಂದರೆ ಒಮ್ಮೊಮ್ಮೆ ಚುನಾವಣೆಯಲ್ಲಿ ಅನೇಕ ಪ್ರಸಂಗಗಳುಂಟಾಗಿ-ಚುನಾವಣೆಯು ಪೂರ್ತಿ ಆಗದೆ, ಆದರೂ ಚುನಾಯಿತ ಸದಸ್ಯನು ಹಾಜರಿಯಲ್ಲಿ ಉಳಿಯಲಾರದೆ-ಒಟ್ಟಿನಲ್ಲಿ ನಿರ್ದಿಷ್ಟ ಸಂಖ್ಯೆಗೆ ಕಡಿಮೆ ಬೀಳಬಹುದು. ಆಗ ಮಾತ್ರ ನೇಮಕ ಹೊಂದಿದ ಸದಸ್ಯರು ಪಂಚಾಯತದ ಸದಸ್ಯರಾಗುವರು. ಇಲ್ಲದಿದ್ದರೆ ಪ್ರತಿಯೊಬ್ಬ ಸದಸ್ಯನೂ ಚುನಾಯಿತನಾದವನೇ ಇರಬೇಕು. ನಿರ್ದಿಷ್ಟ ಸಂಖ್ಯೆಗೆ ಕಡಿಮೆಯಾಗಿದೆ ಎಂಬ ಕಾರಣಕ್ಕಾಗಿ ಪಂಚಾ ಯತದ ರಚನೆಗೆ ವ್ಯತ್ಯಯ ಉಂಟಾಗಬಾರದೆಂದು ಈ ಅಧಿಕಾರವನ್ನು ಡೆಪ್ಯೂಟಿ ಕಮಿಶನರರಿಗೆ ಕೊಡಲಾಗಿದೆ. ಇದು ಆಪತ್ಕಾಲದ ಅಧಿಕಾರ ಪ್ರಯೋಗಾಧಿ ಕಾರ ಎಂಬುದನ್ನು ನೆನೆಯಬೇಕು.

ಯಾವುದೊಂದು ಪಂಚಾಯತದ ಸದಸ್ಯರ ಸಂಖ್ಯೆಯನ್ನು ನಿರ್ದಿಷ್ಟಪಡಿಸು ವಾಗ ಅದರ ಸದಸ್ಯರ ಸಂಖ್ಯೆಯು ೧೧ ರ ಕಿಂತಲೂ ಹೆಚ್ಚು ಆಗಿರಬೇಕು ಎಂದು ನಿರ್ದಿಷ್ಟಪಡಿಸಿದ ನಂತರ ಚುನಾವಣೆಯಾಗಿ ನಿರ್ದಿಷ್ಟಪಡಿಸಿದ ಸಂಖ್ಯೆಯಲ್ಲಿ ಸದಸ್ಯರು ಯಾವುದೇ ಕಾರಣದಿಂದ ಚುನಾಯಿತರಾಗಿ ಬಾರದೇ ಹೋದರೆ ಪಂಚಾಯತ ರಚನೆಗೆ ಇದರಿಂದ ಬಾಧೆ ಬರತಕ್ಕದ್ದಲ್ಲ. ಹನ್ನೊಂದು ಸದಸ್ಯರು

ಚುನಾಯಿತರಾಗಿದ್ದರೆ ಕೆಳಮಿತಿಯ ಸಂಖ್ಯೆಯಲ್ಲಿ ಸದಸ್ಯರು ಇರುವುದರಿಂದ ಅದು ಪಂಚಾಯತವಾಗಿ ರಚಿತವಾಗಬಹುದು. ಅಂದರೆ ಈ ಉಪಕಲಮು ೬ ರಲ್ಲಿ ಎರಡು ಮಾತು ಹೇಳಿದ ಹಾಗಾಯಿತು. ಹನ್ನೊಂದರಕಿಂತಲೂ ಹೆಚ್ಚು ಸದಸ್ಯರು ಇರಬೇಕೆಂದು ನಿರ್ದಿಷ್ಟವಾದಂತಹ ಪಂಚಾಯತದಲ್ಲಿ ಹನ್ನೊಂದು ಸದಸ್ಯರ ಚುನಾವಣೆಯಾಗಿದ್ದರೆ-ನಿರ್ದಿಷ್ಟಪಡಿಸಿದ ಸಂಖ್ಯೆಯಷ್ಟು ಸದಸ್ಯರು ಚುನಾಯಿತ ರಾಗಿಲ್ಲವೆಂಬುದು ಪಂಚಾಯತ ರಚನೆಗೆ ಅಡ್ಡಿಯಾಗದು.

ಪಂಚಾಯತ ರಚನೆಯು ಆದ ಮೇಲೆ-ಅದಕ್ಕೆ ಭರತಿ ಸದಸ್ಯರ ನೇಮಕ ಮಾಡುವ ಅವಶ್ಯಕತೆ ಬೀಳುವುದಿಲ್ಲ. ಉಪಕಲಮು ೫ ರಲ್ಲಿ ಹೇಳಿದ ಭರತಿ ಮಾಡುವ ಅಧಿಕಾರ ಡೆಪ್ಯೂಟಿ ಕಮಿಶನರರಿಗೆ ಕೇವಲ-ಪಂಚಾಯತ ರಚನೆಗೆ ಅತ್ಯಗತ್ಯವಿದ್ದ ಸಂಖ್ಯೆಯಷ್ಟು ಸದಸ್ಯರ ಚುನಾವಣೆ ಆಗದಿದ್ದರೆ ಮಾತ್ರ ಪ್ರಾಪ್ತ ವಾಗುವುದು ಎಂಬುದು ಸ್ಪಷ್ಟವದೆ. ಆದ್ದರಿಂದ ಉಪಕಲಮು ೫ ಮತ್ತು ೬ ಎರಡೂ ಕೂಡಿ ಓದಿದಾಗ-ನೇಮಕಮಾಡುವ ಅಧಿಕಾರವು ಉಪಕಲಮು ೬ ರಲ್ಲಿ ಉಂಟಾದ ಪರಿಸ್ಥಿತಿಯಲ್ಲಿ ಡೆಪ್ಯೂಟಿ ಕಮಿಶನರರಿಗೆ ಬರಲಾರದು ಎಂದು ಕಂಡು ಬರುವುದು. ಉಪಕಲಮು ೫ ರಲ್ಲಿ ಉಂಟಾಗುವ ಆಪತ್ ಪ್ರಸಂಗ ಉಪಕಲಮು ೬ ರಲ್ಲಿ ಇಲ್ಲವಾದ್ದರಿಂದ ಭರತಿಮಾಡಲು ನೇಮಕಮಾಡುವ ಅಧಿಕಾರವನ್ನು ಉಪ ಕಲಮು ೬ ರ ಸಂಬಂಧದಲ್ಲಿ ಡೆಪ್ಯೂಟಿ ಕಮಿಶನರರು ನಡೆಸಲಾರರು ಎಂಬಂತೆ ತೋರುವುದು.

ಚುನಾಯಿತರಾದ ಸದಸ್ಯರ-ಹಾಗೂ ನೇಮಕ ಹೊಂದಿದ ಸದಸ್ಯರ ಹೆಸರು ಗಳನ್ನು ಗೊತ್ತು ಮಾಡಿದ—ಅಂದರೆ ನಿಯಮಗಳ ಪ್ರಕಾರ— ಗೊತ್ತುಮಾಡಿದ ಪದ್ಧತಿಯಲ್ಲಿ ಡೆಪ್ಯೂಟಿ ಕಮೀಶನರರು ಪ್ರಕಟಿಸಬೇಕು. ಈ ಪ್ರಕಟನೆಯು ಪಂಚಾಯತ ರಚನೆಯಕಿಂತ ಮೊದಲು ನಡೆಯಬೇಕೆಂಬುದನ್ನು ಪ್ರತ್ಯೇಕ ಹೇಳ ಬೇಕಾಗಿಲ್ಲ.

## ೬. ಪಂಚಾಯತಗಳ ಸಂಸ್ಥೀಕರಣ

ಪ್ರತಿಯೊಂದು ಪಂಚಾಯತವು ಸಂದರ್ಭಾನುಸಾರವಾಗಿ "　　　　" ದ ಗ್ರಾಮಪಂಚಾಯತ ಇಲ್ಲವೆ "　　　　ಪಟ್ಟಣದ ಪಂಚಾಯತ " ಎಂಬ ಹೆಸರಿನಲ್ಲಿ ಒಂದು ಸಂಸ್ಥೆಯಾಗಿರತಕ್ಕದ್ದು ಮತ್ತು ಅದಕ್ಕೆ ಪರಂಪರಾಗತ ವಾರಸಾ ಮತ್ತು ಸಾಮಾನ್ಯ ಮುದ್ರೆ ಇರತಕ್ಕದ್ದು. ಮತ್ತು ಈ ಕಾಯಿದೆಯ ಅಂಕಿತವಾಗಿ ಇಲ್ಲವೆ ಈ ಕಾಯಿದೆಯಿಂದ ಇಲ್ಲವೆ ಬೇರೆ ಯಾವುದೇ ಕಾಯಿದೆಯಿಂದ ಹಾಕಲ್ಪಟ್ಟ ನಿರ್ಬಂಧಗಳಿಗಂಕಿತವಾಗಿ ಒಂದು ಸಂಸ್ಥೆಯ

ಸ್ವರೂಪ–ಸಾಮರ್ಥ್ಯದಿಂದಲೇ ವಾದಿ ಇಲ್ಲವೆ ಪ್ರತಿವಾದಿಯಾಗಿ ಕಾರ್ಯಾಚರಣೆ ನಡಸಲು ಅಧಿಕಾರವುಳ್ಳದ್ದಾಗಿರತಕ್ಕದ್ದು. ಯಾವ ಪ್ರದೇಶದ ಮೇಲೆ ಅದಕ್ಕೆ ಅಧಿಕಾರವಿರುವುದೋ ಆ ಕ್ಷೇತ್ರದ ಒಳಗೆ ಇಲ್ಲವೆ ಹೊರಗೆ·ಸ್ಥಾವರ ಇಲ್ಲವೆ ಜಂಗಮ ಆಸ್ತಿಗಳನ್ನು ಪಡೆಯಲು, ಧಾರಣಮಾಡಲು, ಹಸ್ತಾಂತರಿಸಲು ಅಧಿಕಾರವಿರತಕ್ಕದ್ದು. ಕರಾರುಗಳನ್ನು ಮಾಡಿಕೊಳ್ಳಲು, ಮತ್ತು ಯಾವ ಉದ್ದೇಶಗಳಿಗಾಗಿ ಅದು ರಚಿತ ವಾಗಿರುವುದೋ ಆ ಉದ್ದೇಶ ಸಾಧನೆಗಾಗಿ ಅಗತ್ಯವಿದ್ದ, ಯೋಗ್ಯವಾಗಿದ್ದ ಇಲ್ಲವೆ ಪ್ರಸಂಗೋಚಿತವಾಗಿದ್ದ ಎಲ್ಲ ಕೆಲಸ ಕಾರ್ಯಗಳನ್ನು ಮಾಡಲು ಅಧಿಕಾರ ಇರತಕ್ಕದ್ದು.

## ವಿವೇಚನೆ

ಪಂಚಾಯತವು ಪ್ರಾತಿನಿಧಿಕವಾದ ಸಂಸ್ಥೆಯು. ಅದರಲ್ಲಿಯ ಸದಸ್ಯರು ಕಾಲಾವಧಿಯ ಮಿತಿಯುಳ್ಳವರು. ಆದರೆ ಪಂಚಾಯತವು ಮಾತ್ರ ನಿತ್ಯವಾದ- ಶಾಶ್ವತವಾದ- ಪರಂಪರೆಯುಳ್ಳ ಸಂಸ್ಥೆಯು. ಸದಸ್ಯರು ವೈಯುಕ್ತಿಕವಾಗಿ ಏನೂ ಮಾಡಲಾರರು. ಸಂಸ್ಥೆಯು ತನ್ನ ಹೆಸರಿನಲ್ಲಿಯೆ ಎಲ್ಲವನ್ನು ಮಾಡಬೇಕು. ಅದರ ಹೆಸರು " ಗ್ರಾಮದ ಗ್ರಾಮಪಂಚಾಯತ" ಇಲ್ಲವೇ ಪಟ್ಟಣದ ಪಂಚಾಯತ ಎಂದು ಆಯಾ ಪಟ್ಟಣ ಇಲ್ಲವೆ ಗ್ರಾಮದ ಹೆಸರು ಜೋಡಿಸಿಕೊಂಡು ಹೆಸರು ಪಡೆಯುವುದು. ಅದೇ ಅದರ ಸಂಸ್ಥಾತ್ಮಕ ಅಸ್ತಿತ್ವ. ಇದರಲ್ಲಿಯ ಸದ್ಯಸರು ಯಾರು ಬಂದರೇನು ಯಾರು ಹೋದರೇನು? ಈ ಸಂಸ್ಥಾತ್ಮಕವಾದ ಹೆಸರು ನಿತ್ಯವಾದ ಪರಂಪರೆಯುಳ್ಳದ್ದು. ಇದಕ್ಕೆ ಒಂದು ಮುದ್ರೆ ಇರತಕ್ಕದ್ದು. ಹೆಸರು-ಮುದ್ರೆ ಇವು ಅದರ ಸಂಸ್ಥಾತ್ಮಕ ರೂಪದ ಲಕ್ಷಣಗಳು. ದಾವೆ ಮಾಡುವಾಗ ಇಲ್ಲವೆ ಯಾರಾದದೂ ಪಂಚಾಯತದ ಮೇಲೆ ದಾವೆ ಮಾಡಿದಾಗ ಪಂಚಾಯತವೇ ವಾದಿ-ಪ್ರತಿವಾದಿಯಾಗಿ ಪಕ್ಷಕಾರ ಆಗಬೇಕು. ಹೀಗೆ ಪಕ್ಷಕಾರ ಆಗಲು ಈ ಕಾಯಿದೆಯಿಂದ ಇಲ್ಲವೆ ಬೇರಾವ ಕಾಯದೆಯಿಂದ ಹಾಕಲ್ಪಟ್ಟ ನಿರ್ಬಂಧಗಳಿಗಂಕಿತವಾಗಿ ಆಗಬೇಕು. ಈ ನಿರ್ಬಂಧಗಳು ಅಂದರೆ ಕೆಲವೊಂದು ವಿಧಾನಾತ್ಮಕ ನಿರ್ಬಂಧಗಳು. ಸಂಸ್ಥೆಯು ವಾದಿ ಪ್ರತಿವಾದಿ ಆಗಬೇಕಾದರೆ ಯಾವ ಪೂರ್ವ ಭಾವಿಯಾದ ಕ್ರಮಗಳನ್ನು ಕೈಕೊಂಡಿರಬೇಕು ಎಂಬುದೇ ನಿರ್ಬಂಧಗಳು. ಆ ಬಗೆಯಾಗಿ ಕ್ರಮಗಳನ್ನು ಕೈಕೊಂಡಾಗ ಸಂಸ್ಥೆಗೆ ಕಾಯಿದೆ ಪ್ರಕಾರ ವ್ಯಕ್ತಿತ್ವವುಂಟಾಗುವುದು. ಹೀಗೆ ನ್ಯಾಯಾಲಯಲ್ಲಿ ಪಕ್ಷಕಾರ ಆಗಿ ಕಾಯಿದೆಯ ವ್ಯಕ್ತಿತ್ವವನ್ನು ಪಡೆಯಲು ಮಾಡಬೇಕಾದ ಕ್ರಮಗಳೇ ನಿರ್ಬಂಧಗಳು. ಆ ನಿರ್ಬಂಧಗಳನ್ನು ಅನುಲಕ್ಷಿಸಿ ಪಂಚಾಯತವು ವಾದಿ ಇಲ್ಲವೆ ಪ್ರತಿವಾದಿಯಾಗಬೇಕು.

ಪಂಚಾಯತವು ಆಸ್ತಿಯನ್ನು ಪಡೆಯಬಹುದು, ಧಾರಣಮಾಡಬಹುದು, ಹಸ್ತಾಂತರಿಸಬಹುದು. ಆಸ್ತಿ ಎಂದರೆ ಅದು ಸ್ಥಾವರ ಆಸ್ತಿಯಾಗಿರಬಹುದು ಇಲ್ಲವೆ ಜಂಗಮ ಆಸ್ತಿಯಾಗಿರಬಹುದು. ಆಸ್ತಿಯು ಪಂಚಾಯತ ಪ್ರದೇಶದ ಒಳಗೆ ಇರಬಹುದು ಇಲ್ಲವೆ ಹೊರಗೆ ಇರಬಹುದು. ಆಸ್ತಿಯು ಪಂಚಾಯತ ಪ್ರದೇಶದ ಹೊರಗೆ ಇದ್ದರೂ ಅದನ್ನು ಪಡೆಯಲು ಧಾರಣಮಾಡಲು, ಹಸ್ತಾಂತರಿಸಲು ಅಧಿಕಾರ ಇದೆ. ಈ ಎಲ್ಲ ವ್ಯವಹಾರಗಳು ಪಂಚಾಯತದ ಸಂಸ್ಥೆಯ ಹೆಸರಿನಿಂದ-ಅದರ ಮುದ್ರೆಯೊಂದಿಗೆ ಸಂಸ್ಥಾತ್ಮಕವಾಗಿ ನಡೆಯಬೇಕು.

ಅದರಂತೆ ಪಂಚಾಯತವು ಯಾವುದೇ ಕರಾರಿನಲ್ಲಿ ಭಾಗವಹಿಸಬಹುದು ಆಗ ಕೂಡ ಅದು ಸಂಸ್ಥೆಯಾಗಿಯೆ ಕರಾರಿನಲ್ಲಿ ಭಾಗವಹಿಸಬೇಕು.

ಸಂಸ್ಥೆಯೆಂದರೆ ಅನೇಕ ಕೆಲಸಗಳು ಉಂಟಾಗುವುವು. ನಿತ್ಯ ನೂತನವಾದ ಜೀವನದಲ್ಲಿ ಇಂತಹದೇ ಕೆಲಸ ಹುಟ್ಟುವುದು ಎಂದು ಮೊದಲೇ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಪಂಚಾಯತವು ಯಾವ ಯಾವ ಕೆಲಸಗಳನ್ನು ಮಾಡಬೇಕು. ಮಾಡಲು ಅಧಿಕಾರವಿದೆ, ಎಂಬುದನ್ನು ಯಾದಿ ಮಾಡಲು ಸಾಧ್ಯವಿಲ್ಲ. ಆದ್ದರಿಂದ-ಒಂದು ಬಗೆಯ ವ್ಯಾಪಕ ಅಧಿಕಾರವನ್ನು ಕೊಡಲಾಗಿದೆ. ಪಂಚಾಯತವು ಯಾವ ಉದ್ದೇಶಗಳಿಗಾಗಿ ರಚಿತವಾಗಿರುವುದೋ ಆ ಉದ್ದೇಶಗಳ ಸಾಧನೆಗಾಗಿ ಯಾವುದು ಅಗತ್ಯವಾದ ಕೆಲಸವಿರುವುದೋ, ಯಾವುದು ಯೋಗ್ಯವಾದ ಕೆಲಸವಿರುವುದೋ ಇಲ್ಲವೆ ಯಾವುದು ಆ ಪ್ರಸಂಗಕ್ಕೆ ಉಚಿತವಾಗಿ ಮಾಡಲೇಬೇಕಾಗುವುದೋ ಅದೆಲ್ಲವನ್ನು ಮಾಡಲು ಪಂಚಾಯತ ಸಂಸ್ಥೆಗೆ ಸಂಸ್ಥಾತ್ಮಕವಾಗಿ ಅಧಿಕಾರವಿದೆ. ಈ ವ್ಯಾಪಕ ಅಧಿಕಾರವನ್ನು ಚಲಾಯಿಸುವಾಗ ಆ ಕೆಲಸವು ಉದ್ದೇಶ ಸಾಧನೆಗಾಗಿ ಅಗತ್ಯ, ಯೋಗ್ಯ ಪ್ರಸಂಗೋಚಿತ, ಎಂದು ಮೊದಲು ನಿರ್ಣಯಿಸಬೇಕಾಗುವುದು ಎಂಬುದನ್ನು ಮರೆಯಕೂಡದು. ಹಾಗೆ ನಿರ್ಣಯಿಸಿದ ನಂತರ ಅದು ಸಂಸ್ಥೆಯ ಅಧಿಕಾರಕ್ಕೆ ಒಳಪಟ್ಟ ಕೆಲಸವೆಂದೇ ಅರ್ಥವಾಗುವುದು. ಅಧಿಕಾರವು ವ್ಯಾಪಕವಾಗಿರುವಾಗ ಅದರ ಚಲಾವಣೆಯು ಜಾಗರೂಕತೆಯಿಂದ ಕೂಡಿರಬೇಕಾಗುವುದು. ಇದನ್ನು ಪಂಚಾಯತವು ಸಂಸ್ಥಾತ್ಮಕವಾಗಿ ಕೆಲಸ ಮಾಡಬೇಕಾದಾಗ ಲಕ್ಷ್ಯದಲ್ಲಿಡಬೇಕಾಗುವುದು. ಯಾಕಂದರೆ ವ್ಯಕ್ತಿಗತವಾಗಿದ್ದ ಕೆಲಸವಾಗಿದ್ದರೆ ವೈಯುಕ್ತಿಕ ಹೊಣೆ ಇರುವುದು. ಸಂಸ್ಥೆ ಕೆಲಸ ಮಾಡುವಾಗ ಹೊಣೆಯು ಸಂಸ್ಥೆಯದು ಆಗುವುದು. ಅಂದರೆ ಇಡೀ ಪಂಚಾಯತದ್ದು ಆಗುವುದು.

## ೭. ಚುನಾವಣೆ

(೧) ಒಂದು ಪಂಚಾಯತದ ಸದಸ್ಯರ ಚುನಾವಣೆಯು ಆ ಸಂಬಂಧ ದಲ್ಲಿ ಡೆಪ್ಯೂಟಿ ಕಮಿಶನರರು ನೇಮಿಸಬಹುದಾದಂತಹ ದಿನಾಂಕಕ್ಕೆ (ತಾರೀಖಿಗೆ) ನಡೆಯತಕ್ಕದ್ದು.

(೨) ಈ ಕಾಯಿದೆಯ ಕಕ್ಷೆಗಳಿಗಂಕಿತವಾಗಿ ಇಂತಹ ಚುನಾವಣೆಯು ಗೊತ್ತುಪಡಿಸಿದ ಪದ್ಧತಿಯಲ್ಲಿ ಗುಪ್ತ ಮತದಾನ ರೀತಿಯಲ್ಲಿ ನಡೆಸಲ್ಪಡಬೇಕು.

## ವಿವೇಚನೆ

ಇದರಲ್ಲಿ ಪಂಚಾಯತದ ಸದಸ್ಯರ ಚುನಾವಣೆಯ ತಾರೀಖು ಹಾಗು ಚುನಾವಣೆಯ ರೀತಿ ಪದ್ಧತಿಗಳ ಬಗ್ಗೆ ಹೇಳಲಾಗಿದೆ.

ಚುನಾವಣೆಯ ತಾರೀಖನ್ನು ನಿರ್ಣಯಿಸುವವರು ಡೆಪ್ಯೂಟಿ ಕಮಿಶನರು. ಅವರು ಪೂರ್ವಭಾವಿಯಾಗಿ ಚುನಾವಣೆಯ ತಾರೀಖನ್ನು ಗೊತ್ತುಪಡಿಸುವರು. ಅಂದು ಚುನಾವಣೆಯು ನಡೆಯತಕ್ಕದ್ದು.

ಈ ಚುನಾವಣೆಯು ಗೊತ್ತುಪಡಿಸಿದ ರೀತಿಯಲ್ಲಿ ಗುಪ್ತಮತದಾನ ಪದ್ಧತಿ ಯಲ್ಲಿ ನಡೆಯಬೇಕು. ಈ ರೀತಿಯನ್ನು ಈ ಕಾಯಿದೆಯನ್ವಯವಾಗಿ ಮಾಡಲಾದ ನಿಯಮಗಳಲ್ಲಿ ಹೇಳಲಾಗಿರುವುದು. ಚು ನಾವಣೆಯ ರೀತಿ-ಪದ್ಧತಿಯು ನಿಯಮ ಗಳ ಅಂಕಿತವಾಗಿರುವುದು ಒಂದು ಭಾಗ. ಉಳಿದೆಲ್ಲವೂ ಈ ಕಾಯಿದೆಯ ಕಕ್ಷೆಗಳ ಅಂಕಿತವಾಗಿ ನಡೆಯತಕ್ಕದ್ದು. ಅಂದರೆ ಚುನಾವಣೆಯ ದಿನದಕಿಂತಲೂ ಮೊದಲು ಗೊತ್ತುಪಡಿಸಬಹುದಾದ ಸಂಗತಿಗಳು ಅನೇಕವಾಗಿವೆ. ಮತದಾರಯಾದಿ, ಮತ ದಾರ-ಕ್ಷೇತ್ರ, ಪರಿಶಿಷ್ಟವರ್ಗದ ಹಾಗೂ ಸ್ತ್ರೀಯರ ಪ್ರಾತಿನಿಧ್ಯ ಮುಂತಾದ ಎಲ್ಲವೂ ಈ ಕಾಯಿದೆಯ ಕಕ್ಷೆಗಳ ಅಂಕಿತವಾಗಿ ನಡೆಯತಕ್ಕದ್ದು ಎಂದು ಹೇಳಲಾಗಿದೆ. ಚುನಾವಣೆಯು ಪವಿತ್ರ ಕೆಲಸವಾಗಿರುವದರಿಂದ ಕಾಯಿದೇಬದ್ಧವಾಗಿ ಅದು ನಡೆಯಬೇಕಾಗಿರುವುದರಿಂದ, ನಂತರ ಯಾವುದೇ ಬಗೆಯ ತಂಟೆ ತಕರಾರು ಬರ ಬಾರದೆಂಬ ದೃಷ್ಟಿಯಿಂದ ಪ್ರತಿಯೊಂದು ಹಂತದಲ್ಲಿಯೂ ಕಾಯಿದೇಶೀರ ಕೆಲಸ ನಡೆಸಬೇಕಾಗುತ್ತದೆ. ಅದಕ್ಕಾಗಿ ಎಲ್ಲ ಬಗೆಯ ಜಾಗ್ರತೆ-ಎಚ್ಚರ-ಲಕ್ಷ್ಯ-ವ್ಯವಸ್ಥೆ ವಹಿಸಬೇಕಾಗುವದು.

ಚುನಾಯಿತ ಸದಸ್ಯರೇ ಪಂಚಾಯತವನ್ನು ರಚಿಸಬೇಕಾಗಿರುವದರಿಂದ ಸದಸ್ಯರು ಕಾಯಿದೇಬದ್ಧವಾದ ರೀತಿಯಲ್ಲಿ ಚುನಾಯಿತರಾಗುವಂತೆ ನೋಡಿಕೊಳ್ಳ ಬೇಕಾಗುವದು. ಯಾವುದೇ ಕಾರಣದಿಂದ ಸದಸ್ಯರ ನಿರ್ದಿಷ್ಟ ಸಂಖ್ಯೆಯು ಚುನಾಯಿತರಾಗದೇ ಇದ್ದರೆ— ನೇಮಕದ ಮೂಲಕ ಭರತಿಮಾಡುವ ಪ್ರಸಂಗ

ಬರುವುದು. ನೇಮಕವು ಆಪತ್ಪ್ರಸಂಗದ ಅಧಿಕಾರವೇ ಹೊರತು ಸಾಮಾನ್ಯ ಕಾಲದ ಅಧಿಕಾರವಲ್ಲ. ಅದರಂತೆ ಚುನಾವಣೆಯೆಂದರೆ ಸಾರ್ವಜನಿಕ ಹಣದವೆಚ್ಚ. ಆ ವೆಚ್ಚವು ಅಪವ್ಯಯವಾಗದಂತೆ ನೋಡಿಕೊಳ್ಳುವುದು ಅಗತ್ಯ. ಪಂಚಾಯತವು ಮಾಡಬಹುದಾದ ಕೆಲಸವನ್ನು ಯಾವ ವ್ಯಕ್ತಿಯೂ ಮಾಡಲು ಆಗದ್ದರಿಂದ ಪಂಚಾಯತ ರಚನೆಯ ಕಡೆಗೆ ಲಕ್ಷ್ಯ ಹೆಚ್ಚು ಇರಬೇಕು. ಅದಕ್ಕಾಗಿ ಚುನಾವಣೆಯು ಕಾಯಿದೆಬದ್ಧವಾಗಿ ವ್ಯವಸ್ಥಿತವಾಗಿ ನಡೆಯುವಂತೆ ನೋಡಿಕೊಳ್ಳಬೇಕು.

## ೮. ಪಂಚಾಯತದ ಸದಸ್ಯರನ್ನು ಆರಿಸಲು ತಪ್ಪಿದರೆ ಆಡಳಿತಗಾರನ ಇಲ್ಲವೆ ಆಡಳಿತ ಸಮಿತಿಯ ನೇಮಕ

(೧) ಗ್ರಾಮದ ಪಂಚಾಯತ ಸ್ಥಾಪನೆಯ ನಂತರ ತತ್‌ಕ್ಷಣದಲ್ಲಿ ಪಂಚಾಯತ ಸದಸ್ಯರ ಚುನಾವಣೆಯನ್ನು ನಡೆಸಲು ಯಾವುದೇ ತೊಡಕುಗಳುಂಟಾದ ಕಾರಣದಿಂದ ಇಂತಹ ಪಂಚಾಯತವು ರಚಿತವಾಗುವುದು ಅಸಾಧ್ಯವೆಂದು ಡೆಪ್ಯೂಟಿ ಕಮಿಶನರರಿಗೆ ಮನವರಿಕೆಯಾದರೆ, ಇಲ್ಲವೆ ಪಂಚಾಯತದ ಸದಸ್ಯರನ್ನು ಚುನಾಯಿಸಲು ತಪ್ಪಿದರೆ ಇಲ್ಲವೆ ಬೇರೆ ಯಾವುದಾದರೂ ಯೋಗ್ಯ ಕಾರಣಗಳಿದ್ದರೆ,ಇಲ್ಲವೆ ಸಾಧಾರಣ ಚುನಾವಣೆಯ ವೇಳೆಗೆ ಯಾವ ಸದಸ್ಯನೂ ಚುನಾಯಿತನಾಗದಿದ್ದರೆ, ಇಲ್ಲವೆ ಪಂಚಾಯತದ ಯಾವುದೇ ಸದಸ್ಯನ ಅಧಿಕಾರಕಾಲಾವಧಿಯು ಮುಗಿದಿದ್ದು ಮತ್ತು ಆ ಪಂಚಾಯತದ ಅಧಿಕಾರ ಕಾಲಾವಧಿಯು ಮುಗಿಯುವ ಮೊದಲೇ ಸಾಧಾರಣ ಚುನಾವಣೆಯನ್ನು ಪೂರ್ತಿಗೊಳಿಸಲು ಶಕ್ಯವಾಗದಿದ್ದರೆ, ಡೆಪ್ಯೂಟಿ ಕಮಿಶನರು ಪ್ರಕಟನೆ ಹೊರಡಿಸಿ,

(i) ಕಲಮು ೫ ರ ಉಪಕಲಮು (೧) ರನ್ವಯವಾಗಿ ನಿರ್ದಿಷ್ಟಪಡಿಸಲಾದ ಸಂಖ್ಯೆಯ ಸಮಾನವಾದ ಸಂಖ್ಯೆಯುಳ್ಳ ಚುನಾಯಿತರಾಗಲು ಅರ್ಹತೆಯುಳ್ಳ ವ್ಯಕ್ತಿಗಳಿಂದ ಕೂಡಿದ ಆಡಳಿತ ಸಮಿತಿಯನ್ನು ನೇಮಿಸತಕ್ಕದ್ದು; ಇಲ್ಲವೆ (ii) ಒಬ್ಬ ಆಡಳಿತಗಾರನನ್ನು ನೇಮಿಸತಕ್ಕದ್ದು.

(೨) ಉಪಕಲಮು (೧) ರನ್ವಯವಾಗಿ ಹೊರಡಿಸಿದ ಪ್ರಕಟನೆಯಲ್ಲಿ ಡೆಪ್ಯೂಟಿ ಕಮಿಶನರು ನಿರ್ದಿಷ್ಟಪಡಿಸಿದ ಆದರೂ ಒಂದು ವರುಷದಕಿಂತ ಹೆಚ್ಚಾಗದ ಕಾಲಾವಧಿಯವರೆಗೆ ಆಡಳಿತ ಸಮಿತಿಯ ಸದಸ್ಯರು ಇಲ್ಲವೆ ಆಡಳಿತಗಾರನು ಅಧಿಕಾರ ವಹಿಸಬೇಕು.

(೩) ಉಪಕಲಮು (೧) ರನ್ವಯವಾಗಿ ಆಡಳಿತ ಸಮಿತಿಯು ಇಲ್ಲವೆ ಆಡಳಿತಗಾರನು ನೇಮಕವಾದರೆ, ಪಂಚಾಯತದ ಎಲ್ಲ ಅಧಿಕಾರಗಳು ಮತ್ತು

ಕರ್ತವ್ಯಗಳು ಇಂತಹ ಆಡಳಿತ ಸಮಿತಿಯಿಂದ ಇಲ್ಲವೆ ಆಡಳಿತಗಾರನಿಂದ ನಿರ್ವಹಿಸಲ್ಪಡಬೇಕು ಮತ್ತು ಕಾರ್ಯಾಚರಣೆ ಮಾಡಲ್ಪಡಬೇಕು.

(೪) ಈ ಮೊದಲು ಹೇಳಲಾದ ಯಾವುದೇ ಮಾತುಗಳಿದ್ದರೂ ಈ ಕಾಯಿದೆಯ ಉದ್ದೇಶಗಳಿಗಾಗಿ ಆಡಳಿತ ಸಮಿತಿಯು ಇಲ್ಲವೆ ಆಡಳಿತಗಾರನು ಯೋಗ್ಯ ರೀತಿಯಲ್ಲಿ ರಚಿತವಾದ ಪಂಚಾಯತವೆಂದೇ ಗಣಿಸಲ್ಪಡತಕ್ಕದ್ದು.

ಆದರೆ, ಉಪಕಲಮು (೧) ರನ್ವಯವಾಗಿ ಆಡಳಿತ ಸಮಿತಿಯ ಇಲ್ಲವೆ ಆಡಳಿತಗಾರನ ನೇಮಕವಾದ ನಂತರ ಯಾವುದೇ ಕಾಲಕ್ಕೆ ಚುನಾವಣೆಯನ್ನು ನಡೆಸಲು ಯಾವುದೇ ಆತಂಕವಿಲ್ಲೆಂಬ ಬಗ್ಗೆ ಡೆಪ್ಯೂಟಿ ಕಮಿಶನರಿಗೆ ಮನವರಿಕೆ ಯಾದರೆ, ಯಾವ ಕಾಲಾವಧಿಗಾಗಿ ಆಡಳಿತ ಸಮಿತಿಯ ಇಲ್ಲವೆ ಆಡಳಿತಗಾರನ ನೇಮಕವು ಆಗಿದ್ದಿತೋ ಆ ಅಧಿಕಾರ ಕಾಲಾವಧಿಯು ಮುಗಿಯದೆ ಇದ್ದರೂ ಡೆಪ್ಯೂಟಿ ಕಮಿಶನರು ಪ್ರಕಟನೆ ಹೊರಡಿಸಿ, ಅದರಲ್ಲಿ ನಿರ್ದಿಷ್ಟಪಡಿಸಿದ ತಾರೀಖಿನಿಂದ ಆಡಳಿತ ಸಮಿತಿಯ ಸದಸ್ಯರು ಇಲ್ಲವೆ ಆಡಳಿತಗಾರನು ಅಧಿಕಾರ ಪದದಿಂದ ಮುಕ್ತರಾಗಿದ್ದಾರೆಂದು ನಿರ್ದೇಶಿಸಬಹುದು.

## ವಿವೇಚನೆ

ಪಂಚಾಯತದ ಸ್ಥಾಪನೆ ಬೇರೆ; ಪಂಚಾಯತದ ರಚನೆ ಬೇರೆ. ಸ್ಥಾಪನೆಯ ವಿಷಯ ಕಲಮು ೪ ರಲ್ಲಿ ಹೇಳಲಾಗಿದೆ; ರಚನೆಯ ವಿಷಯ ಕಲಮು ೫ ರಲ್ಲಿ ಹೇಳಲಾಗಿದೆ. ಗ್ರಾಮವೆಂದು ನಿರ್ದಿಷ್ಟವಾಗಿ ಇಲ್ಲವೆ ಪಟ್ಟಣವೆಂದು ನಿರ್ದಿಷ್ಟವಾಗಿ ಅಲ್ಲಿ ಒಂದು ಪಂಚಾಯತ ಇರತಕ್ಕದ್ದು ಎಂದು ನಿರ್ಣಯ ತೆಗೆದುಕೊಳ್ಳಲ್ಪಟ್ಟಾಗ ಅದರ ಸ್ಥಾಪನೆ ಆದಂತೆ. ಏಕೆಂದರೆ ಗ್ರಾಮವೆಂಬ ಪ್ರದೇಶಕ್ಕೆ ಪಟ್ಟಣ ಎಂಬ ಪ್ರದೇಶಕ್ಕೆ ಒಂದು ಪಂಚಾಯತ ಇರತಕ್ಕದ್ದು ಎಂದು ಕಾಯದೆಯು ಹೇಳುತ್ತದೆ. ಈ ಪ್ರದೇಶವು ಗ್ರಾಮವೆಂದು ಸಾರಲಾಗಿದೆಯೆಂದಕೂಡಲೆ ಅಲ್ಲಿ ಪಂಚಾಯತದ ಸ್ಥಾಪನೆ ಆದಂತೆ. ಅದರ ಸದಸ್ಯ ಸಂಖ್ಯೆ ಎಷ್ಟಿರಬೇಕು ಎಂಬ ನಿರ್ಣಯ ತೆಗೆದುಕೊಂಡನಂತರವಂತೂ ಸ್ಥಾಪನೆಯ ವಿಷಯ ಪೂರ್ತಿಯಾದಂತೆ. ನಂತರ ರಚನೆ.

ಪಂಚಾಯತದ ರಚನೆಯಾಗಬೇಕಾದರೆ ಸದಸ್ಯರ ಚುನಾವಣೆಯಾಗಬೇಕು. ಅದರ ಬಗ್ಗೆ ವಿವರಗಳನ್ನು ಕ್ರಮವನ್ನು ಕಲಮು ೫ ರಲ್ಲಿ ಹೇಳಲಾಗಿದೆ. ಸ್ಥಾಪನೆ ಆದ ಮೇಲೆ ರಚನೆ ಆಗದೆ ಹೋದರೆ ಏನು ಮಾಡಬೇಕು ಎಂಬ ಪ್ರಶ್ನೆಗೆ ಕಲಮು ೮ ರಲ್ಲಿ ಉತ್ತರ ಹೇಳಲಾಗಿದೆ. ರಚನೆಗೆ ಅನೇಕ ಆತಂಕಗಳು ಆಗಬಹುದಾಗಿದೆ.

ಚುನಾವಣೆ ಆಗದೆ ಇರಬಹುದು; ಚುನಾವಣೆಯಾದರೂ ಒಬ್ಬ ಸದಸ್ಯನೂ ಚುನಾಯಿತನಾಗದೇ ಹೋಗಬಹುದು. ಕಾಯಿದೇಶೀರ ರೀತಿಯಲ್ಲಿ ನಡೆಯಬೇಕಾದ ಚುನಾವಣೆಯು ಕಾಯಿದೇಶೀರ ರೀತಿಯಲ್ಲಿ ನಡೆಯಲು ಆತಂಕಗಳು ಉಂಟಾದರೆ ಚುನಾವಣೆ ಏನೋ ನಡೆವುದು ಆದರೆ ಸದಸ್ಯರು ಚುನಾಯಿತರೆಂದು ಆಗುವುದಿಲ್ಲ. ಅದರಂತೆ ಒಮ್ಮೆ ರಚಿತವಾದ ಪಂಚಾಯತದ ಕಾಲಾವಧಿ ಮುಗಿದು ಹೋಗಿ ಮುಂದಿನ ಚುನಾವಣೆ ಆಗದೇ ಉಳಿದು ಹೊಸ ಸದಸ್ಯರು ಅಧಿಕಾರ ವಹಿಸುವುದು ವಿಲಂಬವಾಗಬಹುದು. ಇವು ಯಾವುದೇ ಪ್ರಸಂಗ ತಂದೊಡ್ಡಿದಾಗ ಏನು ಮಾಡಬೇಕು? ಪಂಚಾಯತವು ಸಂಸ್ಥೆಯಾಗಿರುವುದರಿಂದ ಒಮ್ಮೆ ಪಂಚಾಯತವು ಸ್ಥಾಪನೆಯಾದ ಮೇಲೆ ಅಲ್ಲಿಯ ಅಧಿಕಾರ ನಡೆಸುವವರು ಬೇಕಲ್ಲ! ಆಗ ಒಂದು ದಾರಿಯನ್ನು ಸೂಚಿಸಲಾಗಿದೆ; ಅದರ ಬಗ್ಗೆ ಈ ಕಲಮಿನಲ್ಲಿ ಹೇಳಲಾಗಿದೆ. ಚುನಾವಣೆ ನಡೆದು ಆ ಪಂಚಾಯತಕ್ಕೆ ಎಷ್ಟು ಸದಸ್ಯರು ಆರಿಸಿಬಂದು ಪಂಚಾಯತದ ರಚನೆಯಾಗಬೇಕಿತ್ತೋ ಅಷ್ಟು ಜನರುಳ್ಳ ಒಂದು ಆಡಳಿತ ಸಮಿತಿಯನ್ನು ಡೆಪ್ಯೂಟಿ ಕಮಿಶನರು ನೇಮಕ ಮಾಡಬಹುದು. ಒಂದು ವೇಳೆ ಅರ್ಹತೆಯುಳ್ಳ ಅಷ್ಟು ಸದಸ್ಯರು ದೊರೆವುದು ಸಾಧ್ಯವಾಗದಿದ್ದಲ್ಲಿ ಒಬ್ಬ ಆಡಳಿತಗಾರನನ್ನು ಡೆಪ್ಯೂಟಿ ಕಮಿಶನರು ನೇಮಕಮಾಡತಕ್ಕದ್ದು.

ಈ ವ್ಯವಸ್ಥೆಯು ತಾತ್ಕಾಲಿಕವಾದರೂ ತಾತ್ಪೂರ್ತಿಕವಾದುದು ಎಂಬುದನ್ನು ಮರೆಯಲಾಗದು. ಕಾಯಿದೇಶೀರ ಪಂಚಾಯತದ ರಚನೆ ಆಗುವತನಕ, ಅದರ ರಚನೆಗೆ ಉಂಟಾಗುವ ಆತಂಕಗಳು ದೂರಾಗುವತನಕ ಈ ಮಧ್ಯಂತರ ವ್ಯವಸ್ಥೆಯು ಜಾರಿಯಲ್ಲಿ ಇರುವುದು. ಯಾವುದೇ ಕಾರಣದಿಂದ ಈ ಮಧ್ಯಂತರ ವ್ಯವಸ್ಥೆಗಾಗಿ ಬಂದ ಆಡಳಿತ ಸಮಿತಿ ಇಲ್ಲವೆ ಆಡಳಿತಗಾರ ಇವರ ಅಧಿಕಾರ ಕಾಲಾವಧಿ ಒಂದು ವರುಷದಕಿಂತಲೂ ಹೆಚ್ಚು ಆಗಿರಬಾರದೆಂದು ಅದಕ್ಕೆ ವಿಧಿಸಲಾಗಿದೆ. ಅಧಿಕಾರ ಕಾಲಾವಧಿ ಎಷ್ಟಿರಬೇಕೆಂಬುದು ಅವರ ನೇಮಕದ ಕಾಲಕ್ಕೆ ಪ್ರಕಟನೆಯಲ್ಲಿ ಡೆಪ್ಯೂಟಿ ಕಮಿಶನರು ನಿರ್ದಿಷ್ಟಪಡಿಸಿರತಕ್ಕದ್ದು. ಹೀಗೆ ನಿರ್ದಿಷ್ಟಪಡಿಸಿದ ಕಾಲಾವಧಿಯು ಮುಗಿಯದೇ ಇದ್ದರೂ ಅದರ ನೇಮಕದ ಕಾಲದ ಆತಂಕಗಳು ದೂರಾಗಿವೆಯೆಂದು ಡೆಪ್ಯೂಟಿ ಕಮಿನಶನರಿಗೆ ಮನವರಿಕೆಯಾದರೆ ಅವರು ಪ್ರಕಟನೆ ಹೊರಡಿಸಿ ಈ ಆಡಳಿತ ಸಮಿತಿಯ ಇಲ್ಲವೆ ಆಡಳಿತಗಾರರ ಅಧಿಕಾರ ಕಾಲಾವಧಿ ಮುಗಿಯಿತೆಂದು ನಿರ್ದೇಶಿಸಬಹುದು.

ಎಲ್ಲಿಯವರೆಗೆ ಅಧಿಕಾರದಲ್ಲಿ ಆಡಳಿತ ಸಮಿತಿಯು ಇಲ್ಲವೆ ಆಡಳಿತಗಾರನು ಇರುವರೋ ಅಲ್ಲಿಯವರೆಗೆ ಅವರು ಕಾಯಿದೇಶೀರವಾಗಿ ರಚಿತವಾದ ಪಂಚಾಯತಕ್ಕೆ

ಇರುವ ಎಲ್ಲ ಅಧಿಕಾರಗಳನ್ನು ಮತ್ತು ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು ಮತ್ತು ಕಾರ್ಯಮಾಡತಕ್ಕದ್ದು. ಕಾಯಿದೆಯ ದೃಷ್ಟಿಯಿಂದ ಆಡಳಿತ ಸಮಿತಿ ಇಲ್ಲವೆ ಆಡಳಿತಗಾರ ಇವರು ಯೋಗ್ಯವಾಗಿ ರಚಿತವಾದ ಪಂಚಾಯತ ವೆಂದೇ ಗಣಿಸಲ್ಪಡಬೇಕು ಎಂದು ಹೇಳಲಾಗಿದೆ.

ಹೀಗೆ ಮಧ್ಯಂತರ ವ್ಯವಸ್ಥೆ ಮಾಡಲ್ಪಟ್ಟಿರುವುದರಿಂದ ಯಾವ ಆತಂಕ ಬಂದರೂ ಪಂಚಾಯತದ ಕಾರ್ಯ ನಿಲ್ಲುವುದಿಲ್ಲ, ಅದು ನಿರಂತರವಾಗಿ ನಿರಾತಂಕ ವಾಗಿ ನಡೆಯುವ ಸಂಸ್ಥೆ ಎಂಬುದನ್ನು ಈ ಕಲಮು ಸಾರಿ–ಸಾರಿ ಹೇಳುವುದು.

## ೯. ಮತದಾರರ ಪಟ್ಟಿ

ಯಾವುದೇ ಪಂಚಾಯತದ ಮತದಾರ ಕ್ಷೇತ್ರದಲ್ಲಿ ಸೇರ್ಪಡೆಯಾಗಿದ್ದ ವಿಭಾಗಕ್ಕೆ ಆ ಕಾಲದಲ್ಲಿ ಜಾರಿಯಲ್ಲಿರುವ ಮೈಸೂರ ಶಾಸನಸಭೆಯ ಮತದಾರ ಕ್ಷೇತ್ರದ ಮತದಾರ ಪಟ್ಟಿಯೇ ಈ ಕಾಯಿದೆಯ ಉದ್ದೇಶಗಳಿಗಾಗಿ ಅಂತಹ ಪಂಚಾಯತ ಮತದಾರಕ್ಷೇತ್ರದ ಮತದಾರ ಪಟ್ಟಿಯೆಂದು ಗಣಿಸಲ್ಪಡಲಾಗುವುದು. ಪ್ರತಿಯೊಂದು ಪಂಚಾಯತ ಮತದಾರ ಕ್ಷೇತ್ರಕ್ಕಾಗಿ ಒಂದು ಮತದಾರ ಪಟ್ಟಿ ಯನ್ನು ಗೊತ್ತುಪಡಿಸಿದ ರೀತಿಯಲ್ಲಿ ಪಂಚಾಯತದ ಸೆಕ್ರೆಟರಿಯು ತಯಾರಿಸಿಡತಕ್ಕದ್ದು.

**ವಿವರಣೆ:** ಈ ಕಲಮಿನ ಉದ್ದೇಶಗಳಿಗಾಗಿ ಚುನಾವಣೆಯ ಮತದಾರ ಪಟ್ಟಿಯೆಂದರೆ, ಆ ಕಾಲಕ್ಕೆ ಜಾರಿಯಲ್ಲಿರುವ ೧೯೫೦ ರ ಜನತೆಯ ಪ್ರಾತಿನಿಧ್ಯ ಕಾಯಿದೆ (೧೯೫೦ ರ ಕೇಂದ್ರ ಕಾಯಿದೆ ನಂ XLIII)ಯ ಕಕ್ಷೆಗಳಿಗನ್ವಯ ವಾಗಿ ಸಿದ್ಧಪಡಿಸಲಾದ ಮತದಾರ ಪಟ್ಟಿಯೆಂದು ತಿಳಿಯಬೇಕು.

### ವಿವೇಚನೆ:

ಮತದಾರ ಪಟ್ಟಿಯಬಗ್ಗೆ ಇಲ್ಲಿ ವಿವೇಚಿಸಲಾಗಿದೆ. ಪಂಚಾಯತಕ್ಕೆ ಪ್ರತ್ಯೇಕ ಚುನಾವಣೆ ನಡೆದರೂ ಮತದಾರ ಪಟ್ಟಿಯು ಮಾತ್ರ ಪ್ರತ್ಯೇಕವಾಗಿ ತಯಾರಾಗ ಬೇಕಿಲ್ಲ. ಮೈಸೂರ ಶಾಸನಸಭೆಯ ಚುನಾವಣೆಗಾಗಿ ಸಿದ್ಧಪಡಿಸಲಾದ ಮತದಾರರ ಯಾದಿಯು ಮತದಾರ ಪಟ್ಟಿಯಾಗಿ ಪಂಚಾಯತದ ಚುನಾವಣೆಗೂ ಉಪಯೋಗ ಬೀಳುವುದು. ಮೈಸೂರ ಶಾಸನಸಭೆಯ ಯಾವ ಮತದಾರ ಕ್ಷೇತ್ರದಲ್ಲಿ ಯಾವು ದೊಂದು ಪಂಚಾಯತದ ಮತದಾರ ಕ್ಷೇತ್ರವು ಬರುವುದೋ ಆ ಪ್ರದೇಶಕ್ಕೆ ಅನ್ವ ಯಿಸುವ ಮೈಸೂರ ಶಾಸನಸಭೆಯ ಮತದಾರ ಪಟ್ಟಿಯೇ ಆ ಪಂಚಾಯತದ ಮತದಾರ ಕ್ಷೇತ್ರಕ್ಕೆ ಮತದಾರ ಪಟ್ಟಿಯಾಗಿ ಪರಿಣಮಿಸುವುದು. ಪಂಚಾಯತದ

ಸೆಕ್ರೆಟರಿಯು ಮಾತ್ರ ಅಂತಹ ಪಟ್ಟಿಯನ್ನು ಪಂಚಾಯತದ ಚುನಾವಣೆಯ ಕಾರ್ಯದ ಸಲುವಾಗಿ ಗೊತ್ತು ಮಾಡಿದ ರೀತಿಯಲ್ಲಿ ಪ್ರತಿಯೊಂದು ಪಂಚಾಯತ ಮತದಾರ ಕ್ಷೇತ್ರಕ್ಕೆ ಪ್ರತ್ಯೇಕವಾಗಿ ತಯಾರಿಸಿ ಇಡತಕ್ಕದ್ದು.

ಮೈಸೂರ ಶಾಸನಸಭೆಯ ಚುನಾವಣೆಗಾಗಿ ಮತದಾರ ಪಟ್ಟಿಯು ಹೇಗೆ ತಯಾರಾಗುವುದು? ೧೯೫೦ರ ಜನತಾ ಪ್ರಾತಿನಿಧ್ಯ ಕಾಯಿದೆಯ ಪ್ರಕಾರ ಸಿದ್ಧ ಪಡಿಸಲಾದ ಮತದಾರ ಪಟ್ಟಿಯೆ ಈ ಕಾಯಿದೆಯ ಉದ್ದೇಶಕ್ಕಾಗಿ ಹಿಡಿಯಲಾಗುವ ಮತದಾರ ಪಟ್ಟಿಯೆಂದು ತಿಳಿಯತಕ್ಕದ್ದು.

ಇಡೀ ಭಾರತಕ್ಕೆ ಮತದಾರ ಪಟ್ಟಿಯು ಒಮ್ಮೆ ಸಿದ್ಧವಾಯಿತೆಂದರೆ ಲೋಕ ಸಭೆಯ ಚುನಾವಣೆ, ರಾಜ್ಯಶಾಸನಸಭೆಯ ಚುನಾವಣೆ, ಮುನಸಿಪಾಲಿಟಿ ಚುನಾ ವಣೆ, ಪಂಚಾಯತ ಚುನಾವಣೆ, ಇವುಗಳಲ್ಲಿ ಅದೇ ಪಟ್ಟಿಯು ಉಪಯೋಗವಾಗು ವುದು. ಚುನಾವಣೆಗಳು ಬೇರೆ; ಮತದಾರ ಕ್ಷೇತ್ರಗಳು ಬೇರೆ. ಚುನಾಯಿತ ವಾಗುವ ಸಂಸ್ಥೆ ಬೇರೆ. ಆದರೂ ಆಯಾ ಪ್ರಾದೇಶಿಕ ಮತದಾರ ಕ್ಷೇತ್ರದಲ್ಲಿ ಬರುವ ಮತದಾರರು ಆಯಾ ಚುನಾವಣೆಗಳಲ್ಲಿ ಮತಹಾಕಲು ಅರ್ಹರು ಎಂಬುದು ಇದರಿಂದ ಸಿದ್ಧವಾಯಿತು, ಎಂಬುದನ್ನು ತಿಳಿಯಬೇಕು. ಇದರಿಂದ ದೇಶದಲ್ಲಿ ನಡೆವ ಎಲ್ಲ ಪ್ರಾತಿನಿಧಿಕ ಸಂಸ್ಥೆಗಳ ಚುನಾವಣೆಯಲ್ಲಿ ಭಾಗವಹಿಸುವ ಅಧಿಕಾರ ಪ್ರತಿಯೊಬ್ಬ ಮತದಾರನಿಗೆ ಇದೆಯೆಂದೂ ಅದರ ಮೂಲಕ ದೇಶದ ವಿವಿಧ ಸಂಸ್ಥೆ ಗಳ ಮುಖಾಂತರ ನಡೆವ ಆಡಳಿತದಲ್ಲಿ ಮತದಾರನ ಭಾಗ ಇದೆಯೆಂದೂ ಸ್ಪಷ್ಟವಾ ಗುವುದು. ಇದು ಪ್ರಜಾಸತ್ತೆಯಲ್ಲಿ ಅಧಿಕಾರ ವಿಕೇಂದ್ರೀಕರಣದ ಒಂದು ಲಕ್ಷಣ.

## ೧೦. ಸದಸ್ಯತ್ವದ ಅರ್ಹತೆ

ಯಾವುದೇ ಪಂಚಾಯತದ ಮತದಾರ ಕ್ಷೇತ್ರದ ಮತದಾರ ಪಟ್ಟಿಯಲ್ಲಿ ಯಾರ ಹೆಸರು ನಮೂದಾಗಿರುವುದೋ ಅಂತಹ ಪ್ರತಿಯೊಬ್ಬ ವ್ಯಕ್ತಿಯು, ಈ ಕಾಯಿದೆಯನ್ವಯವಾಗಿ ಇಲ್ಲವೆ ಆ ಕಾಲಕ್ಕೆ ಜಾರಿಯಲ್ಲಿರುವ ಬೇರೆ ಯಾವುದೇ ಕಾಯಿದೆಯನ್ವಯವಾಗಿ ಅನರ್ಹನೆಂದು ಆದ ಹೊರತು, ಪಂಚಾಯತದ ಸದಸ್ಯ ನೆಂದು ಚುನಾಯಿತನಾಗಲು ಅರ್ಹತೆಯುಳ್ಳವನೆಂದು ತಿಳಿಯತಕ್ಕದ್ದು.

ಆದರೆ, ಪರಿಶಿಷ್ಟ ವರ್ಗಗಳಿಗಾಗಿ ಇಲ್ಲವೆ ಸ್ತ್ರೀಯರಿಗಾಗಿ ಕಾದಿಟ್ಟ ಸ್ಥಳಗಳ ಸಂಬಂಧದಲ್ಲಿ ಸಂದರ್ಭಾನುಸಾರವಾಗಿ ಯಾರು ಯಾವುದೇ ಪರಿಶಿಷ್ಟವರ್ಗದ ಸದಸ್ಯನಲ್ಲವೊ ಇಲ್ಲವೆ ಯಾರು ಸ್ತ್ರೀಯಲ್ಲವೊ ಅವರು ಅಂತಹ ಸ್ಥಳಗಳಿಗೆ ಚುನಾ ಯಿತರಾಗಲು ಅರ್ಹರಲ್ಲ.

## ವಿವೇಚನೆ

ಅರ್ಹತೆಯು ವಿಷಯವು ಸದಸ್ಯರ ಸಂಬಂಧದಲ್ಲಿ ಬಂದಾಗ ಅದು ಕೇವಲ ಚುನಾವಣೆಯ ದೃಷ್ಟಿಯಿಂದ ಎಂದು ಗಮನಿಸತಕ್ಕದ್ದು. ಆಗ ಅರ್ಹತೆ ಎಂದರೇನು? ಯಾರ ಹೆಸರು ಪಂಚಾಯತದ ಮತದಾರ ಕ್ಷೇತ್ರದಲ್ಲಿಯ ಮತದಾರ ಪಟ್ಟಿಯಲ್ಲಿ ಬಂದಿದೆಯೋ ಅವರು ಆ ಪಂಚಾಯತದ ಸದಸ್ಯರಾಗಲು ಅರ್ಹರು ಎಂಬುದು ಸಾಮಾನ್ಯನಿಯಮ. ಆದರೆ ಅಂತಹವ್ಯಕ್ತಿಯು ಈ ಕಾಯಿದೆಯನ್ವಯವಾಗಿ ಇಲ್ಲವೆ ಚುನಾವಣೆಯ ಕಾಲಕ್ಕೆ ಜಾರಿಯಲ್ಲಿರುವ ಬೇರಾವ ಕಾಯಿದೆಯನ್ವಯವಾಗಿ ಅರ್ಹತೆಕಳೆದುಕೊಂಡು ಅನರ್ಹನೆಂದು ಆಗಿರಬಾರದು. ಅನರ್ಹತೆಯು ಬಗ್ಗೆ ಮುಂದಿನ ಕಲಮಿನಲ್ಲಿ ವಿವರವಾಗಿ ಹೇಳಲಾಗಿದೆ. ಅನರ್ಹನೆಂದು ಆಗದೆ ಇದ್ದು ಪಂಚಾ ಯತದ ಮತದಾರ ಕ್ಷೇತ್ರದ ಮತದಾರ ಪಟ್ಟಿಯಲ್ಲಿ ಹೆಸರು ಇದ್ದ ವ್ಯಕ್ತಿಯು ಆ ಪಂಚಾಯತದ ಚುನಾವಣೆಯಲ್ಲಿ ಸದಸ್ಯನೆಂದು ಚುನಾಯಿತನಾಗಲು ಅರ್ಹನು.

ಆದರೆ ಇಂತಹ ವ್ಯಕ್ತಿಗೂ ಒಂದು ಅಪವಾದವಿದೆ. ಅದು ಕಾದಿಟ್ಟ ಸ್ಥಳದ ನಿರ್ಬಂಧದಿಂದ ಉಂಟಾಗುವಂತಹದು. ಪರಿಶಿಷ್ಟ ವರ್ಗದ ಸ್ಥಳದ ಬಗ್ಗೆ ಚುನಾ ವಣೆಗೆ ನಿಲ್ಲುವವನು ಪರಿಶಿಷ್ಟ ವರ್ಗದವನು ಆಗಿರದೆ ಇದ್ದು ಉಳಿದ ದೃಷ್ಟಿಯಿಂದ ಅರ್ಹನಾಗಿದ್ದ ಅವನು ಆ ಮಟ್ಟಿಗೆ ಅನರ್ಹನೆಂದೇ ತಿಳಿಯಬೇಕು. ಅದರಂತೆ ಸ್ತ್ರೀಯರ ಸಲುವಾಗಿ ಕಾದಿಟ್ಟ ಸ್ಥಳದ ಚುನಾವಣೆ ನಡೆದಾಗ ಸ್ತ್ರೀಯಲ್ಲದ ಬೇರಾವ ವ್ಯಕ್ತಿಯು ಉಳಿದ ದೃಷ್ಟಿಯಿಂದ ಅರ್ಹತೆ ಇದ್ದರೂ ವಿಶಿಷ್ಟ ಕಾದಿಟ್ಟ ಪ್ರಾತಿನಿಧ್ಯದ ಮೂಲಕ ಅವನು ಆ ಸ್ಥಳಕ್ಕೆ ಚುನಾಯಿತನಾಗಲು ಅನರ್ಹನು.

ಅಂದರೆ ಮತದಾರ ಕ್ಷೇತ್ರದಲ್ಲಿ ಕಾದಿಟ್ಟ ಸ್ಥಳಗಳಿಗೆ ಎಲ್ಲರು ಮತದಾನ ಮಾಡಿದರೂ, ಮಾಡುವ ಹಕ್ಕು ಇದ್ದರೂ ಸದಸ್ಯರಾಗಲು ಆ ಕಾದಿಟ್ಟ ಸ್ಥಳದ ಅರ್ಹತೆಯುಳ್ಳವರು ಅಂದರೆ ಯಾರ ಪ್ರಾತಿನಿಧ್ಯವನ್ನು ಆ ಸ್ಥಳವು ಸೂಚಿಸುವುದೋ ಆ ವರ್ಗದವರು ಸದಸ್ಯರು ಇರಲೇಬೇಕು.

## ೧೧. ಸದಸ್ಯತ್ವದ ಅನರ್ಹತೆ,

(೧) ಪಂಚಾಯತದ ಸದಸ್ಯನೆಂದು ಆರಿಸಲ್ಪಡಲು ಮತ್ತು ಸದಸ್ಯನಾಗಿ ಉಳಿಯಲು ಈ ಕೆಳಗಿನ ಕಾರಣಗಳ ಮೂಲಕ ಒಂದು ವ್ಯಕ್ತಿಯು ಅನರ್ಹ ನಾಗುವನು.

(ಅ) ಆ ವ್ಯಕ್ತಿಗೆ ಇಪ್ಪತ್ತೊಂದು ವರುಷದ ವಯಸ್ಸಿನಕ್ಕಿಂತ ಕಡಿಮೆ ವಯ ಸ್ಸಿದ್ದರೆ, ಇಲ್ಲವೆ.

(ಬ) ಆ ಗ್ರಾಮದಲ್ಲಿ ಆ ವ್ಯಕ್ತಿಯು ಸಾಮಾನ್ಯವಾಗಿ ವಾಸವಾಗಿರದಿದ್ದರೆ, ಇಲ್ಲವೆ,

(ಕ) ನೈತಿಕ ದೋಷವುಳ್ಳಂತಹ ಅಪರಾಧಕ್ಕಾಗಿ ಫೌಜದಾರಿ ನ್ಯಾಯಾಲಯದಿಂದ ಕಾರಾವಾಸದ ಶಿಕ್ಷೆಗೆ ಆ ವ್ಯಕ್ತಿಯು ಒಳಪಟ್ಟಿದ್ದರೆ ಮತ್ತು ಆ ಅಪರಾಧವು ಆರು ತಿಂಗಳಕಿಂತ ಹೆಚ್ಚು ಕಾರಾವಾಸದ ಶಿಕ್ಷೆಗೆ ಯೋಗ್ಯವಾದಂತಹದು ಇದ್ದು ಅಂತಹ ಶಿಕ್ಷೆಯು ತದನಂತರದಲ್ಲಿ ಕಡಿಮೆಯಾಗದೆ ಇದ್ದು ಇಲ್ಲವೆ ಇಲ್ಲದಂತಾಗದೆ ಇದ್ದ ಆ ವ್ಯಕ್ತಿಯು ಕಾರಾವಾಸದ ಶಿಕ್ಷೆಗೆ ಒಳಪಟ್ಟಿದ್ದರೆ—

(ಡ) ೧೮೯೮ ರ ಕ್ರಿಮಿನಲ್ ಪ್ರೊಸೀಜರ ಕೋಡ (೧೮೯೮ ರ ಕೇಂದ್ರ ಕಾಯಿದೆ ನಂ. V)ದ ಕಲಮು ೧೧೦ ರನ್ವಯವಾಗಿ ಪ್ರಾರಂಭಿಸಲಾದ ಪ್ರಕರಣಗಳಲ್ಲಿ ಕ್ರಿಮಿನಲ್ ಪ್ರೊಸೀಜರ ಕೋಡದ ಕಲಮು ೧೧೮ ರನ್ವಯವಾಗಿ ಅವನ ವಿರುದ್ಧ ಹುಕುಮು ಮಾಡಲ್ಪಟ್ಟಿದ್ದರೆ ಮತ್ತು ಅಂತಹ ಹುಕುಮು ನಂತರದಲ್ಲಿ ಹೊರಳದೆ ಇಲ್ಲವೆ ರದ್ದು ಪಡಿಸದೆ ಇದ್ದರೆ, ಇಲ್ಲವೆ,

(ಇ) ಅವನು ಸರಕಾರದ ಸೇವೆಯಿಂದ ಇಲ್ಲವೆ ಯಾವುದೇ ಸ್ಥಾನಿಕ ಅಧಿಕಾರದ ಸೇವೆಯಿಂದ ಕಿತ್ತಿಹಾಕಲ್ಪಟ್ಟಿದ್ದರೆ (Dismiss) ಇಲ್ಲವೆ,

(ಫ) ಅವನು ವಕೀಲನಾಗಿದ್ದು ಯಾವುದೇ ಸಮರ್ಥ ನ್ಯಾಯಾಲಯದಿಂದ ಅವನು ಡಿಸ್‌ಮಿಸ್ ಇಲ್ಲವೆ ಸಸ್ಪೆಂಡ ಮಾಡಲ್ಪಟ್ಟಿದ್ದರೆ; ಸಸ್ಪೆಂಡ ಆಗಿದ್ದರೆ ಅನರ್ಹತೆಯು ಆ ಸಸ್ಪೆಂಡದ ಕಾಲಾವಧಿಯ ವರೆಗೆ ಮಾತ್ರ, ಇಲ್ಲವೆ,

(ಗ) ಅವನು ಮುಕ್ತನಾಗದೆ ಇದ್ದು ನಾದಾರಿಯಾಗಿದ್ದರೆ,

(ಹ) ಅವನು ಬಂಧುರವಲ್ಲದ ಮನಸ್ಸಿನವನಾಗಿದ್ದರೆ ಮತ್ತು ಹಾಗೆ ಅವನು ಇದ್ದಾನೆಂದು ಸಮರ್ಥ ನ್ಯಾಯಾಲಯದಿಂದ ಸಾರಲ್ಪಟ್ಟಿದ್ದರೆ, ಇಲ್ಲವೆ,

(ಈ) ಅವನು ಯಾವುದೇ ಸ್ಥಾನಿಕ ಅಧಿಕಾರಿದ ಸದಸ್ಯತ್ವದಿಂದ ತೆಗೆದು (removed) ಹಾಕಲ್ಪಟ್ಟಿದ್ದರೆ,

(ಜ) ಈ ಕಾಯದೆಯನ್ವಯವಾಗಿ ಮಾಡಲಾದ ನಿಯಮಗಳು ಆ ಧಾರಣ ಮಾಡಿದವನು ಅನರ್ಹನಲ್ಲನೆಂದು ಸಾರಿ ಹೇಳಿದಂತಹ ಅಧಿಕಾರ ಪದಗಳನ್ನು ಬಿಟ್ಟು ಬೇರೆ ಲಾಭದಾಯಕವಾದ ಅಧಿಕಾರ ಪದವನ್ನು ಭಾರತಸರಕಾರದಂಕಿತವಾಗಿ, ಇಲ್ಲವೆ ಮೈಸೂರ ಸರಕಾರದಂಕಿತವಾಗಿ, ಇಲ್ಲವೆ ಭಾರತದಲ್ಲಿಯ ಯಾವುದೇ ರಾಜ್ಯಸರಕಾರದಂಕಿತವಾಗಿ, ಇಲ್ಲವೆ ಮೇಲ್ಕಾಣಿಸದ ಸರಕಾರಗಳ ಅಂಕಿತವಾಗಿರುವ ಬೇರೆ ಯಾವುದೇ ಸ್ಥಾನಿಕ ಇಲ್ಲವೆ, ಇತರ ಅಧಿಕಾರದಂಕಿತವಾಗಿ ಧಾರಣ ಮಾಡಿದ್ದರೆ, ಇಲ್ಲವೆ,

(ಕಾ) ಇನ್ನು ಮುಂದೆ ಹೇಳಲಾದುದನ್ನು ಬಿಟ್ಟು, ಪಂಚಾಯತದ ಹುಕುಮಿನಿಂದ ನಡೆಯುವ ಯಾವುದೇ ಕೆಲಸದಲ್ಲಿ ಇಲ್ಲವೆ ಪಂಚಾಯತದ ಪರವಾಗಿ

ಇಲ್ಲವೆ ಪಂಚಾಯತದೊಂದಿಗೆ, ನಡೆದ ಯಾವುದೇ ಕರಾರಿನಲ್ಲಿ ಇಲ್ಲವೆ ಪಂಚಾಯತ ದಲ್ಲಿ ಇಲ್ಲವೆ ಅದರಂಕಿತವಾದ ಸೇವೆಯಲ್ಲಿ ಅವನಿಗೆ ಪ್ರತ್ಯಕ್ಷ ಇಲ್ಲವೆ ಅಪ್ರತ್ಯಕ್ಷ ವಾದ ಯಾವುದೇ ಪಾಲು ಇಲ್ಲವೆ ಹಿತಾಸಕ್ತಿ ಇದ್ದರೆ, ಇಲ್ಲವೆ,

(ಲ) ಅವನು ಪಂಚಾಯತದ ಪರವಾಗಿ ವಕೀಲನೆಂದು ವೇತನಕ್ಕಾಗಿ ಸೇವೆಯಲ್ಲಿದ್ದರೆ, ಇಲ್ಲವೆ ಪಂಚಾಯತದ ವಿರುದ್ಧವಾಗಿ ವಕೀಲನೆಂದು ಸೇವೆಯನ್ನು ಸ್ವೀಕರಿಸಿದ್ದರೆ, ಇಲ್ಲವೆ,

(ಮ) ಉಪಕಲಮು (೨)ರ ವಾಕ್ಯಾವಳಿ (ii) ದಕಿಂತವಾಗಿ ಅವನ ಸ್ಥಳವು ಖಾಲಿಯಾಗಿ ಅವನು ಸದಸ್ಯನಾಗಿ ಉಳಿಯದಿದ್ದರೆ ಪಂಚಾಯತಕ್ಕೆ ಸಲ್ಲಿಸಬೇಕಾ ಗಿದ್ದ ಫೀ ಇಲ್ಲವೆ ಕರದ ಬಗ್ಗೆ ಇರುವ ಹಣವನ್ನು ಎಲ್ಲಿಯ ವರೆಗೆ ಕೊಟ್ಟಿಲ್ಲವೊ ಅಲ್ಲಿಯ ವರೆಗೆ–ಅವನು ಅನರ್ಹನಾಗವುನು.

ಆದರೆ, (ಅ) ವಾಕ್ಯಾವಳಿ (ಡ) ದಲ್ಲಿ ಹೇಳಿದ ಅನರ್ಹತೆಯು ಜಾಮೀನು ಕೊಡಲು ಮಾಡಿದ ಹುಕುಮಿನಲ್ಲಿ ಕಾಣಿಸಿದ ಕಾಲಾವಧಿಯು ಮುಗಿದ ನಂತರ ಇಲ್ಲದಾಗುವದು.

(ಬ) ವ್ಯಾಕ್ಯಾವಳಿ (ಕ) (ಇ) ಇಲ್ಲವೆ (ಫ) ದಲ್ಲಿ ಹೇಳಿದ ಅನರ್ಹತೆಯು ಅಂತಹ ಶಿಕ್ಷೆಯ ಇಲ್ಲವೆ ಕಿತ್ತಿ ಹಾಕುವಿಕೆಯ ತಾರೀಖಿನಿಂದ ಐದು ವರುಷಗಳು ಮುಗಿದ ನಂತರ ಇಲ್ಲವೆ ಸರಕಾರದ ಆಜ್ಞೆಯಾದರೆ ಅದಕ್ಕೂ ಮೊದಲು ಇಲ್ಲ ದಂತಾಗುವುದು.

(ಕ) ವಾಕ್ಯಾವಳಿ (ಈ) ದಲ್ಲಿ ಹೇಳಿದ ಅನರ್ಹತೆಯು ತೆಗೆದು ಹಾಕು ವಿಕೆಯ ತಾರೀಖಿನಿಂದ ಐದು ವರುಷಗಳು ಮುಗಿದ ನಂತರ ಇಲ್ಲದಂತಾಗುವುದು.

(ಡ) ವ್ಯಾಕ್ಯಾವಳಿ (ಕಾ) ದನ್ವಯವಾಗಿ ಯಾವುದೇ ವ್ಯಕ್ತಿಯು, ಈ ಕೆಳಗೆ ಕಾಣಿಸಿದ ಕಾರಣಗಳಿಗಾಗಿ, ಅನರ್ಹತೆಯುಳ್ಳವನಾಗಿದ್ದಾನೆಂದು ಗಣಿಸಲ್ಪಡ ಬಾರದು—

(i) ಪಂಚಾಯತದೊಂದಿಗೆ ಇಲ್ಲವೆ ಪಂಚಾಯತದಿಂದ ಇಲ್ಲವೆ ಪಂಚಾ ಯತದ ಪರವಾಗಿ ಕರಾರು ಮಾಡಿಕೊಂಡ, ಇಲ್ಲವೆ ಸೇವೆ ವಹಿಸಿದ ಯಾವುದೇ ಜಾಯಿಂಟ ಸ್ಟಾಕ್ ಕಂಪನಿ, ಇಲ್ಲವೆ ಸೊಸಾಯಿಟಿ ರಜಿಸ್ಟ್ರೇಶನ್ ಕಾಯಿದೆಯ ಪ್ರಕಾರ ನೋಂದಾಯಿಸಲ್ಪಟ್ಟ ಯಾವುದೇ ಸಂಘ ಇಲ್ಲವೆ ಯಾವುದೇ ಸಹಕಾರಿ ಸಂಘ, ಇದರಲ್ಲಿ ಪಾಲು ಇಲ್ಲವೆ ಹಿತಾಸಕ್ತಿ ಇರುವ ಕಾರಣದಿಂದ, ಇಲ್ಲವೆ,

(ii) ಪಂಚಾಯತದ ವ್ಯವಹರಣೆಗಳ ಬಗ್ಗೆ ಯಾವುದೇ ಜಾಹೀರಾತು ಪ್ರಕಟಿಸಲ್ಪಟ್ಟಿರುವ ಯಾವುದೇ ವೃತ್ತಪತ್ರದ ಸಂಘಟನೆಯಲ್ಲಿ ಪಾಲು ಇಲ್ಲವೆ ಹಿತಾಸಕ್ತಿ ಇರುವ ಕಾರಣದಿಂದ, ಇಲ್ಲವೆ,

(iii) ಪಂಚಾಯತದಿಂದ ಇಲ್ಲವೆ ಪಂಚಾಯತದ ಪರವಾಗಿ ಎತ್ತಲಾದ ಸಾಲದಲ್ಲಿ ಡಿಬೆಂಚರ ಪಡೆದು ಇಲ್ಲವೆ ಬೇರೆ ಯಾವುದೇ ರೀತಿಯ ಸಂಬಂಧ ಇದೆಯೆಂಬ ಕಾರಣದಿಂದ,

ಅನರ್ಹತೆಯನ್ನು ಪಡೆದಿರುವನೆಂದು ಗಣಿಸಲ್ಪಡಬಾರದು.

(೨) ಪಂಚಾಯತದ ಯಾವುದೇ ಸದಸ್ಯನು,

(i) ಉಪಕಲಮು (೧)ರಲ್ಲಿ ಹೇಳಿದ ಯಾವುದೇ ಅನರ್ಹತೆಯುಳ್ಳವನಾದರೆ ಇಲ್ಲವೆ,

(ii) ಕಲಮು ೭೭ ರ ಉಪಕಲಮು (೧) ರನ್ವಯವಾಗಿ ಕೊಡಲಾದ ಬಿಲ್ಲಿನಲ್ಲಿ ಕಾಣಿಸಲಾದಂತಹ ಕರ ಇಲ್ಲವೆ ಫೀಯಲ್ಲಿ ಅದರಲ್ಲಿ ಹಣವು ಸಂದಾಯವಾಗಬೇಕೆಂದು ನಿರ್ದಿಷ್ಟಪಡಿಸಿದ ತಾರೀಖಿನಿಂದ ಮೂರು ತಿಂಗಳ ಒಳಗೆ ಪಂಚಾಯತದ ಕರ-ಇಲ್ಲವೆ ಫೀ ಬಾಕಿಯನ್ನು ಯಾವುದೇ ವ್ಯಕ್ತಿಯು ಕೊಡಲು ತಪ್ಪಿದರೆ, ಇಲ್ಲವೆ,

(iii) ಕಲಮು ೩೭ ರ ಉಪಕಲಮು (೪) ರಲ್ಲಿ ಹೇಳಿದ ಮಾತುಗಳಿಗೆ ವಿರುದ್ಧವಾಗಿ ಮತದಾನ ಮಾಡಿದರೆ ಇಲ್ಲವೆ ಚರ್ಚೆಯಲ್ಲಿ ಭಾಗವಹಿಸಿದರೆ, ಇಲ್ಲವೆ,

(iv) ಪಂಚಾಯತವು ದಯಪಾಲಿಸಿದ ಆರು ತಿಂಗಳಕಿಂತ ಹೆಚ್ಚಾಗದ ರಜೆಯ ಕಾಲಾವಧಿಯಲ್ಲಿ ಅವನು ಸತತ ನಾಲ್ಕು ತಿಂಗಳಕಿಂತ ಹೆಚ್ಚಿಗೆ ಗೈರಹಾಜರಿಯಾದರೆ, ಇಲ್ಲವೆ, ಪಂಚಾಯತದಿಂದ ರಜೆಯನ್ನು ಪಡೆಯದೆ, ಪಂಚಾಯತದ ಸಭೆಗಳಿಂದ ಸತತ ಆರು ತಿಂಗಳ ವರೆಗೆ ಗೈರಹಾಜರಿಯಾದರೆ,

ಅಂತಹ ವ್ಯಕ್ತಿಯ ಸ್ಥಳವು ಖಾಲಿಯಾಗಿದೆಯೆಂದಾಗುವುದು.

ಆದರೆ, ವಾಕ್ಯಾವಳಿ (iv) ರನ್ವಯವಾಗಿ ರಜೆಯ ಸಲುವಾಗಿ ಸದಸ್ಯರಿಂದ ಅರ್ಜಿ ಮಾಡಲ್ಪಟ್ಟರೆ, ಅರ್ಜಿಯ ತಾರೀಖಿನಿಂದ ಮೂರು ತಿಂಗಳ ಒಳಗೆ ಆ ಅರ್ಜಿಯ ಬಗ್ಗೆ ತನ್ನ ನಿರ್ಣಯವನ್ನು ಪಂಚಾಯತವು ಆ ಸದಸ್ಯನಿಗೆ ತಿಳಿಸಲು ತಪ್ಪಿದರೆ ಅರ್ಜಿ ಮಾಡಲಾದ ರಜೆಯು ಪಂಚಾಯತದಿಂದ ದಯಪಾಲಿಸಲ್ಪಟ್ಟಿದೆಯೆಂದು ಗಣಿಸಲ್ಪಡಲಾಗುವುದು.

(೩) ಉಪಕಲಮು (೨) ರನ್ವಯವಾಗಿ ಸ್ಥಳವು ಖಾಲಿಯಾಗಿದೆಯೋ ಇಲ್ಲವೊ ಎಂಬ ಬಗ್ಗೆ ಯಾವುದೇ ಪ್ರಶ್ನೆಯು ಎದ್ದಾಗ ಆ ಪ್ರಶ್ನೆಯನ್ನು ಡೆಪ್ಯೂಟಿ ಕಮಿಶನರರ ನಿರ್ಣಯಕ್ಕೆ ಕಳಿಸಬೇಕು ಮತ್ತು ಡೆಪ್ಯೂಟಿ ಕಮಿಶರನು, ಸಂಬಂಧಪಟ್ಟ ಸದಸ್ಯನಿಗೆ ತನಗೆ ಹೇಳಬೇಕಾದುದನ್ನು ಹೇಳಲು ಅವಕಾಶ ಮಾಡಿಕೊಟ್ಟು ಪ್ರಶ್ನೆಯ ಬಗ್ಗೆ ನಿರ್ಣಯ ತೆಗೆದುಕೊಳ್ಳತಕ್ಕದ್ದು.

**ವಿವೇಚನೆ**

ಈ ಕಲಮಿನಲ್ಲಿ ಸದಸ್ಯರು ಅನರ್ಹರು ಹೇಗೆ ಆಗುವರು ಎಂಬುದರ ಬಗ್ಗೆ ಹೇಳಲಾಗಿದೆ. ಪಂಚಾಯಿತಿಯ ಸದಸ್ಯರಾಗಲೂ ಸದಸ್ಯತ್ವ ಉಳಿಸಿಕೊಳ್ಳಲೂ ಅರ್ಹತೆ ಬೇಕು. ಅರ್ಹತೆ ಇಲ್ಲವೆ ಅನರ್ಹತೆ ಇದು ಕೇವಲ ಪಂಚಾಯಿತಿಯ ಸದಸ್ಯತ್ವದ ಸಂಬಂಧವಾಗಿ ಮಾತ್ರ ಇಲ್ಲಿ ಹೇಳಲಾಗಿದೆಯೆಂದು ಸ್ಪಷ್ಟವಾಗಿ ತಿಳಿಯತಕ್ಕದ್ದು.

ಪಂಚಾಯಿತಿಯು ಸಾರ್ವಜನಿಕ ಹೊಣೆಯುಳ್ಳ ಸಂಸ್ಥೆಯಾಗಿರುವುದರಿಂದ ಅಲ್ಲಿ ಅಲ್ಪವಯಿಗಳು ಬರಲಾರರು. ಪ್ರಬುದ್ಧ ವಯಸ್ಸಿನವರೇ ಇರಬೇಕು ಎಂಬುದು ಮುಖ್ಯ ಮಾತು. ಅಂದರೆ ಅವರಿಗೆ ೨೧ ವಯಸ್ಸಾದರೂ ಆಗಿರಲೇ ಬೇಕು. ಇದನ್ನು ಹೇಳುವ ಅವಶ್ಯಕತೆ ಇರಲಿಲ್ಲವೇನೋ ಎಂದು ಅನ್ನಿಸುತ್ತದೆ. ಯಾಕೆಂದರೆ ಸದಸ್ಯನಾಗುವವನು ಮತದಾರನಿರಬೇಕು; ಮತದಾರನಾಗಲು ೨೧ ವಯಸ್ಸು ಆಗಿರಬೇಕು. ಈ ವಯೋಮಿತಿಯು ಭಾರತದ ರಾಜ್ಯಘಟನೆಯ ೩೨೬ ನೆಯ ನಿಬಂಧನೆಯಲ್ಲಿ ಹೇಳಿದೆ. ಪಂಚಾಯಿತಿಯ ಮತದಾರ ಪಟ್ಟಿಯು ರಾಜ್ಯ ಶಾಸನಸಭೆ-ಹಾಗೂ-ಲೋಕಸಭೆಗಳ ಮತದಾರ ಪಟ್ಟಿಗಳೇ ಆಗಿರುವುದರಿಂದ ಅಲ್ಲಿ ಮತದಾರನು ೨೧ ವಯಸ್ಸಿನ ಮೇಲಿನವನೇ ಇರಬೇಕು. ಆದರೂ ವಯೋಮಿತಿಯು ಒಂದು ಅರ್ಹತೆಯ ಇಲ್ಲವೆ ಅನರ್ಹತೆಯ ವಿಷಯವಾಗಿದೆ ಎಂಬುದನ್ನು ಗಮನಿಸಬೇಕು.

ಪ್ರಜಾಸತ್ತೆಯು ಜನತೆಯ ಆಡಳಿತೆ. ಪಂಚಾಯಿತಿಯು ಸ್ವಾಯತ್ತಾತ್ಮಕ ಸಂಸ್ಥೆ. ಅದು ಆ ಪ್ರದೇಶದ ಜನರ ಅಧಿಕಾರಕ್ಕೆ ಒಳಪಟ್ಟ ಸಂಸ್ಥೆ. ಆದ್ದರಿಂದ ಅಲ್ಲಿ ಆ ಪ್ರದೇಶದ ಜನರಿಗೆ ಅಧಿಕಾರವಿರುವುದೇ ಹೊರತು ಹೊರಗಿನವರಿಗಲ್ಲ. ಆದ್ದರಿಂದ ಸಾಮಾನ್ಯವಾಗಿ ಆ ಪಂಚಾಯಿತಿ ಗ್ರಾಮದ ಹೊರಗೆ ಯಾರು ವಾಸಿಸುವರೋ ಅವರಿಗೆ ಆ ಪ್ರದೇಶದಲ್ಲಿ ಆಸ್ಥೆಯಿಲ್ಲವೆಂದೇ ಅರ್ಥ. ಆದ್ದರಿಂದ ಅಂತಹರು ಸದಸ್ಯರಾಗಲು ಅನರ್ಹರು ಎಂದು ಹೇಳಲಾಗಿದೆ.

ಪಂಚಾಯಿತಿಯಲ್ಲಿ ಪ್ರಾಮಾಣಿಕರು-ಸಜ್ಜನರು ಇರಬೇಕೆಂಬುದು ತತ್ವ. ಮೂಲಭೂತ ತತ್ವ. ಏಕೆಂದರೆ ಸಾರ್ವಜನಿಕ ರೀತಿಯಲ್ಲಿ ಅಧಿಕಾರ ನಡೆಸುವವರು ಸಕಲರ ವಿಶ್ವಾಸಕ್ಕೆ ಪಾತ್ರರಾಗಿರಬೇಕಾದ ವ್ಯಕ್ತಿಗಳಾಗಿರಬೇಕು. ನೈತಿಕ ದೃಷ್ಟಿಯಿಂದ ಯಾರು ಗಣ್ಯರಲ್ಲವೊ ಅಂತಹರು ಸದಸ್ಯರಾದರೆ, ಪಂಚಾಯಿತಿಯು ಜನತೆಯ ವಿಶ್ವಾಸ ಕಳೆದುಕೊಂಡಂತೆಯಾಗುವುದು. ಅದಕ್ಕೆ ಯಾರಾದರೂ ನೈತಿಕ ಅಧಃಪಾತದಕಾರಣಗಳಿಂದುಂಟಾದ ಅಪರಾಧಗಳನ್ನು ಮಾಡಿ ಅದರ ಮೂಲಕ ಶಿಕ್ಷೆಗೆ ಒಳಪಟ್ಟು, ಶಿಕ್ಷೆಯ ಅವಧಿ ೬ ತಿಂಗಳದಷ್ಟು ಇದ್ದರೆ, ಮತ್ತು ಆ ಶಿಕ್ಷೆಯು ರದ್ದಾಗದೆ, ಇದ್ದರೆ ಅಂತಹರು ಸದಸ್ಯರಾಗಲು ಅನರ್ಹರು ಎಂದು ಹೇಳಿದೆ.

ಶಿಕ್ಷೆ ಆರು ತಿಂಗಳು ಎಂದು ಹೇಳಿದ್ದಕ್ಕೆ ಕಾರಣವಿದೆ. ೬ ತಿಂಗಳ ಶಿಕ್ಷೆ ವಿಧಿಸುವಂತಹ ಅಪರಾಧಗಳು ಸಾಮಾನ್ಯವಲ್ಲ ಎಂದು ಲಕ್ಷಣ. ಸಮಾಜದ ದೃಷ್ಟಿಯಿಂದ ಘೋರ ಅಪರಾಧ ಮಾಡಿದವರು ಸಮಾಜದ ಕಲ್ಯಾಣ ಸಾಧಿಸುವುದು ಸಾಧ್ಯವಿಲ್ಲವೆಂದು ಈ ಅನರ್ಹತೆಯ ಲಕ್ಷಣವನ್ನು ಇಲ್ಲಿ ಹಾಕಲಾಗಿದೆ. ಯಾರಲ್ಲಿ ಅಸಾಮಾಜಿಕ ವೃತ್ತಿ ಇರುವುದೋ ಅಂತಹರು ಅನರ್ಹರು. ಶಿಕ್ಷೆ ಆದ ಕೂಡಲೆ ಅನರ್ಹತೆ ಬಂದಂತೆ. ಆದರೆ ಮುಂದೆ ಶಿಕ್ಷೆಯು ರದ್ದಾದರೆ, ಇಲ್ಲವೆ ಹುಕುಮು ಹೊರಳಿಸಲ್ಪಟ್ಟರೆ, ಅಪರಾಧವು ಕಡಿಮೆಯಾಗಿ ಅದು ಕೇವಲ ಅಪಾದನೆಯಾಗಿ ಸಾಬೀತಾಗದೆ ಉಳಿದದ್ದರಿಂದ ಅನರ್ಹತೆಯು ಅಂಟುವದಿಲ್ಲ.

ಇನ್ನು ಯಾರ ವಿರುದ್ಧ ಕ್ರಿಮಿನಲ ಪ್ರೊಸೀಜರ ಕೋಡದ ಕಲಮು ೧೦೮ ರನ್ವಯ ಹುಕುಮು ಮಾಡಲ್ಪಟ್ಟಿದೆಯೋ ಅವರು ಅನರ್ಹರು. ಈ ಹುಕುಮು ಆಗುವುದಕ್ಕೆ ಕಾರಣವು ಕ್ರಿ. ಪ್ರೊ ಕೋಡದ ೧೧೦ ನೆಯ ಕಲಮಿನ ಪ್ರಕಾರ ಆ ವ್ಯಕ್ತಿಯ ವಿರುದ್ಧ ಪ್ರಕರಣಗಳು ಪ್ರಾರಂಭವಾಗಿರಬೇಕು. ೧೦೮-ಮತ್ತು ೧೧೦-ಕಲಮುಗಳು ಏತಕ್ಕಾಗಿವೆ ಎಂಬುದನ್ನು ನೋಡಬೇಕು.

ಕಲಮು ೧೦೮-ಕ್ರಿ. ಪ್ರೊ. ಕೋಡದಲ್ಲಿ : ರಾಜದ್ರೋಹಾತ್ಮಕ ಸಂಗತಿಗಳನ್ನು ಪ್ರಸಾರ ಮಾಡುವಂತಹ ವ್ಯಕ್ತಿಗಳಿಂದ ಸದ್ವರ್ತನಕ್ಕಾಗಿ ಜಾಮೀನು ಪಡೆಯುವ ಬಗ್ಗೆ ಹೇಳಿದೆ.

ಕಲಮು ೧೧೦-ಕ್ರಿ. ಪ್ರೊ ಕೋಡದಲ್ಲಿ : ಪುನಃ ಪುನಃ ಅಪರಾಧ ಮಾಡುವವರ ಕಡೆಯಿಂದ ಸದ್ವರ್ತನೆಗಾಗಿ ಜಾಮೀನು ಪಡೆಯುವ ಬಗ್ಗೆ ಹೇಳಿದೆ.

ಭಾರತವು ಈಗ ಪ್ರಜಾಸತ್ತೆಯಾಗಿರುವುದರಿಂದ ರಾಜದ್ರೋಹ ಶಬ್ದದ ಅರ್ಥವು ರಾಷ್ಟ್ರದ್ರೋಹವು ಎಂದು ಆಗುತ್ತದೆ. ಆಳುವ ಅಧಿಕಾರದ ಸಂಕೇತವು ರಾಜನಾಗಿದ್ದಾಗ ರಾಜದ್ರೋಹವಾಗುತ್ತಿತ್ತು. ಆದರೆ ಈಗ 'ರಾಜ'ನು ವ್ಯಕ್ತಿಯಿರಲಿ ಇಲ್ಲವೆ ಒಂದು ಸಾಂಘಿಕ ಶಕ್ತಿಯಾಗಿರಲಿ,-ಅಂದರೆ ರಾಷ್ಟ್ರವಾಗಿರಲಿ, ದ್ರೋಹವು ಮುಖ್ಯವಾಗಿದ್ದು ಸ್ಥಾಪಿತ ಸರಕಾರಕ್ಕೆ ದ್ರೋಹವೆಂದು ಅರ್ಥವು ಹೊರಡುವುದು.

ಕ್ರಿ. ಪ್ರೊ. ಕೋ. ೧೧೦ ನೆಯ ಕಲಮಿನ ಪ್ರಕಾರ ಪ್ರಕರಣಗಳು ಪ್ರಾರಂಭವಾಗಬೇಕಾದರೆ ಅಪರಾಧಗಳು ಎಂತಹವಿರಬೇಕೆಂಬುದರ ಬಗ್ಗೆ ಆ ಕಲಮಿನಲ್ಲಿ ಹೇಳಲಾಗಿದೆ.

ಯಾರಾದರೂ ಮನೆ ಮುರಿಯುವುದು, ದರೋಡೆ ಮಾಡುವುದು, ಕಳ್ಳತನ ಮಾಡುವುದು, ಖೊಟ್ಟಿ ಬರೆಹ ಬರೆಯುವುದು, ಕಳ್ಳತನದಿಂದ ದೊರೆತ ಸರಕನ್ನು ಸ್ವೀಕರಿಸುವುದು, ಕಳ್ಳ ಮುಂತಾದವರಿಗೆ ಆಶ್ರಯ ಕೊಡುವುದು, ಹುಡುಗರನ್ನು-ಹುಡಿಗೆಯರನ್ನು ಓಡಿಸಿಕೊಂಡು ಹೋಗುವುದು, ಹಣ ಅಪಹರಣ ಮಾಡುವುದು, ಮೋಸ ಮಾಡುವುದು, ಆಸ್ತಿ ಹಾನಿ ಮಾಡುವುದು, ನಾಣ್ಯಕ್ಕೆ

ಸಂಬಂಧಪಟ್ಟ, ಸರಕಾರಿ ಸ್ಟಾಂಪಿಗೆ ಸಂಬಂಧಪಟ್ಟ ಅಪರಾಧ ಮಾಡುವುದು, ನೋಟುಗಳಿಗೆ ಸಂಬಂಧಪಟ್ಟ ಅಪರಾಧ ಮಾಡುವುದು, ಶಾಂತತಾಭಂಗ ಮಾಡುವುದು, ಮುಂತಾದ ಅಪರಾಧಗಳನ್ನು ಮಾಡಿದರೆ, ಅವರಿಗೆ ಶಿಕ್ಷೆಯಾಗಿ ಶಿಕ್ಷೆಯು ರದ್ದಾಗದೆ ಇದ್ದರೆ, ಅವರು ಅನರ್ಹರು. ಇಲ್ಲಿ ಕಾಣಿಸಿದ ಪಟ್ಟಿಯಲ್ಲಿಯ ಅಪರಾಧಗಳನ್ನು ನೆನೆದರೆ ಆ ಅಪರಾಧಿಯು ಸಮಾಜಕ್ಕೆ ಎಂತಹ ಗಂಡಾಂತರಕಾರಿ ವ್ಯಕ್ತಿ ಎಂಬುದು ತಿಳಿದುಬರುವುದು. ಇಂತಹನ ಕೈಯಲ್ಲಿ ಸಮಾಜಹಿತದ ಕೆಲಸ ಮಾಡುವ ಅಧಿಕಾರ ಕೊಡುವ ಹಾಗೆ ಸದಸ್ಯತ್ವದ ಅರ್ಹತೆಯನ್ನು ಹೇಗೆ ಕೊಡಬೇಕು? ಆದ್ದರಿಂದ ಅವನು ಸದಸ್ಯನಾಗಲು ಅನರ್ಹನು.

ನೌಕರಿಯಿಂದ ಯಾರನ್ನಾದರೂ ಕಿತ್ತಿಹಾಕಿದ್ದರೆ- Dismiss ಮಾಡಿದ್ದರೆ- ಅವನು ಅನರ್ಹತೆಯುಳ್ಳವನಾಗುವನು. ಸಾಮಾನ್ಯವಾಗಿ ಸದ್ವರ್ತನೆಯುಳ್ಳವರನ್ನು ನೌಕರಿಯಿಂದ ಕಿತ್ತಿಹಾಕುವುದಿಲ್ಲ. ಕಿತ್ತಿಹಾಕುವ ಪ್ರಸಂಗ ಬಂದಾಗ ಅವನ ಸದ್ವರ್ತನೆಯ ಬಗ್ಗೆ ಸಂಶಯ ಬಂದು ಸಂಶಯವು ಖಚಿತವಾಗಿದೆಯೆಂದೇ ಅರ್ಥ. ಆದ್ದರಿಂದ ಅಂತಹರೂ ಅನರ್ಹರು. ನೌಕರಿ ಸರಕಾರದ್ದು ಇಲ್ಲವೆ ಸ್ಥಾನಿಕ ಅಧಿಕಾರದ್ದು ಮಾತ್ರ ಆಗಿರಬೇಕು. ಇದು ಖಾಸಗಿ ನೌಕರಿಗೆ ಸಂಬಂಧಿಸಿಲ್ಲ.

ಕೆಲವೊಂದು ಕಾರಣಗಳ ಮೂಲಕ ಕೆಲವರು ವಕೀಲಿ ವೃತ್ತಿಯಲ್ಲಿ ಸಸ್ಪೆಂಡ ಆಗುವ ಪರಿಸ್ಥಿತಿ ಉಂಟಾಗುವುದು. ಇಲ್ಲವೆ ತೆಗೆದುಹಾಕುವ ಪ್ರಸಂಗವೂ ಬರುವುದು. ಇಲ್ಲಿ ವ್ಯಕ್ತಿಯ ಬಗ್ಗೆ ಸಂದೇಹವೇನೋ ಬರುವುದು. ಆ ಸಂದೇಹವು ಅವರ ಪ್ರಾಮಾಣಿಕ ನಡತೆಯ ಬಗ್ಗೆ ಬಂದಂತೆ. ವಕೀಲರು ಇತರರ ಕೆಲಸವನ್ನು ಫೀಗಾಗಿ ಮಾಡುವಂತಹರು. ಇಂತಹ ಪ್ರಸಂಗದಲ್ಲಿ ಅವರು ಒಳ್ಳೇ ವರ್ತನದವರೂ ಪ್ರಾಮಾಣಿಕರೂ ಆಗಿರುವುದು ಅಗತ್ಯವಿರುವುದು. ಇತರರ ಹಿತಚಿಂತನೆಯ ಕಾರ್ಯದಲ್ಲಿ ವ್ಯತ್ಯಯ ಬರುವ ಹಾಗೆ ವರ್ತನ ಇಟ್ಟುಕೊಂಡವನು ಸಾಮಾಜಿಕ ಸೇವಾ ಗುಣಹೀನನಾಗುವನು. ಆದ್ದರಿಂದ ಯಾರು ವೃತ್ತಿಯಿಂದ ತೆಗೆದು ಹಾಕಲ್ಪಟ್ಟಿರುವರೋ ಅವರು ಪೂರ್ತಿ ಅನರ್ಹರು. ಯಾರು ಸಸ್ಪೆಂಡ ಮಾಡಲ್ಪಟ್ಟಿರುವರೋ ಅವರು ಆ ಅವಧಿಯ ಮುಟ್ಟಿಗೆ ಅನರ್ಹರು. ಏಕಂದರೆ-ಅವರ ವರ್ತನವು ತಾತ್ಪೂರ್ತಿಕವಾಗಿ ತಪ್ಪಿದೆ; ಅದು ಸುಧಾರಿಸಲು ಶಕ್ಯವಿದೆ; ಅಂತಹರಿಂದ ಹಾನಿಯಾಗದು ಎಂದು ಲಕ್ಷಿಸಿ ಅವರ ಅನರ್ಹತೆಯು ಸಸ್ಪೆಂಡ ಆದ ಕಾಲಾವಧಿಯ ವರೆಗೆ ಮಿತಗೊಳಿಸಲ್ಪಟ್ಟಿರುವುದು.

ನಾದಾರಿಯಿದ್ದರೆ ಅವನೂ ಅನರ್ಹ. ಸ್ವಂತದ ವ್ಯವಹಾರವನ್ನು ಸರಿಯಾಗಿ ನೋಡಿಕೊಳ್ಳಲಿಕ್ಕೆ ಆಗದೆ, ಇಲ್ಲವೆ ಋಣವನ್ನು ತೀರಿಸಲಿಕ್ಕೆ ಆಗದೆ

ಇದ್ದವನು ನಾದಾರಿಯಾಗುತ್ತಾನೆ. ಅಂತಹನ ಕೈಯಲ್ಲಿ ಸಾರ್ವಜನಿಕ ಹಿತವುಳ್ಳ ಸಂಸ್ಥೆಯ ಅಧಿಕಾರ ಹೇಗೆ ಕೊಡಬಹುದು. ಆದರೆ, ನಾದಾರಿಯು ಒಮ್ಮೊಮ್ಮೆ ತಾತ್ಪೂರ್ತಿಕ ಆಪತ್ತು. ಅದು ಮುಗಿದ ಮೇಲೆ ನಾದಾರಿತನದಿಂದ ಮುಕ್ತನಾದ ಮೇಲೆ ಅವನಲ್ಲಿಯ ಅನರ್ಹತೆಯು ಹೋಗುವುದು. ಎಲ್ಲಿಯವರೆಗೆ ಅವನು ಮುಕ್ತನಾಗದ ನಾದಾರಿ ಇರುವನೋ ಅಲ್ಲಿಯವರೆಗೆ ಅವನು ಅನರ್ಹತೆಯುಳ್ಳವನು.

ಅ-ಬಂಧುರ ಮನಸ್ಸುಳ್ಳವನು ಎಂದರೆ ಸಾಮಾನ್ಯವಾಗಿ ಅವನಿಗೆ ಹುಚ್ಚನೆಂದು ಕರೆಯುವರು. ಹುಚ್ಚ ಎಂದರೆ ತೀವ್ರವಾದ ಭಾವನೆ ಉಂಟಾಗುವುದು; ಅಲ್ಲದೆ ಹುಚ್ಚನಾಗಿರದೆ ಇದ್ದರೂ ಮನೋವೈಕಲ್ಯವಿದ್ದರೆ ಅಂತಹನೂ ಸಾರ್ವಜನಿಕ ಸೇವೆಯಲ್ಲಿ ಅನರ್ಹನಾಗುತ್ತಾನೆ. ಸಮತೋಲವಿಲ್ಲದ ಮನಸ್ಸುಳ್ಳವನು ಅನರ್ಹನೆಂದೂ ಅವನ ಮನಸ್ಸಿನ ಸ್ಥಿತಿಯು ಹಾಗೆ ಇವೆಯೆಂದೂ ಸಮರ್ಥ ನ್ಯಾಯಾಲಯವು ನಿರ್ಣಯಕೊಟ್ಟಿರಬೇಕು. ಅಂದರೆ ಸುಮ್ಮನೇ ಯಾರಾದರೂ ಕೂಡಿಕೊಂಡು ಯಾವನೊಬ್ಬನು ಸಮತೋಲ ಮನಸ್ಸಿನವನಲ್ಲವೆಂದು ಹೇಳಿದರಲ್ಲ. ಅವನ ಮನಸ್ಸಿನ ಸ್ಥಿತಿಯ ಬಗ್ಗೆ ಸಮರ್ಥ ನ್ಯಾಯಾಲಯವು—ಅಂದರೆ ಇಂತಹ ವಿಷಯಗಳನ್ನು ನಿರ್ಣಯ ಮಾಡುವ ಅಧಿಕಾರವುಳ್ಳ ನ್ಯಾಯಾಲಯವು- ನಿರ್ಣಯ ಹೇಳಿದ್ದರೆ ಮಾತ್ರ ಅವನು ಸದಸ್ಯತ್ವಕ್ಕೆ ಅನರ್ಹತೆಯುಳ್ಳವನಾಗುತ್ತಾನೆ.

ಯಾವುದೇ ಸ್ಥಾನಿಕ ಅಧಿಕಾರದ ಸದಸ್ಯತ್ವದಿಂದ ತೆಗೆದುಹಾಕಲ್ಪಟ್ಟಿದ್ದರೆ ಅದೂ ಅನರ್ಹತೆಯನ್ನುಂಟುಮಾಡುವುದು. ಪಂಚಾಯತವು ಒಂದು ಸ್ಥಾನಿಕ ಅಧಿಕಾರ. ಸ್ಥಾನಿಕ ಅಧಿಕಾರದಲ್ಲಿ ಕೆಲಸಮಾಡಲು ಯೋಗ್ಯನಾಗಿಲ್ಲವೆಂದು ಹೇಳುವಂತೆ ಇರುವುದು ಸದಸ್ಯತ್ವದಿಂದ ತೆಗೆದುಹಾಕಿದ ಸಂಗತಿ. ಆದ್ದರಿಂದ ಅಂತಹನಿಗೆ ಅನರ್ಹತೆ ಬರುವುದು.

ಯಾರಾದರೂ ಎಲ್ಲಿಯಾದರೂ ಲಾಭದೊರೆವಂತಹ ಸ್ಥಾನದಲ್ಲಿದ್ದರೆ, ಅವರಿಗೆ ಅನರ್ಹತೆಯು ಸಾಮಾನ್ಯವಾಗಿ ಬರುವುದು. ಈ ಲಾಭದೊರೆವ ಸ್ಥಾನವು ಕೇಂದ್ರಸರಕಾರದ ಇಲ್ಲವೆ ಬೇರೆ ರಾಜ್ಯ ಸರಕಾರದ, ಇಲ್ಲವೆ ಮೈಸೂರ ಸರಕಾರದ ಇಲ್ಲವೆ ಯಾವುದೇ ಸ್ಥಾನಿಕ ಅಧಿಕಾರ ಇದರ ಅಧಿಕಾರದಲ್ಲಿ ಇರುವಂತಹ ಅಧಿಕಾರ ಪದವಾಗಿರಬೇಕು. ಮತ್ತು ಈ ಕಾಯಿದೆಯನ್ವಯವಾಗಿರುವ ನಿಯಮಗಳ ಮೂಲಕ ಅನರ್ಹನಲ್ಲ ಎಂದು ಸಾರಿರಬಾರದು. ಅಂದರೆ ಸರಕಾರದ ಇಲ್ಲವೆ ಬೇರೆ ಸೇವೆಯಲ್ಲಿಯ ಲಾಭದ ಅಧಿಕಾರದ ಪದದಲ್ಲಿದ್ದರೂ ನಿಯಗಳು ಅನರ್ಹನಲ್ಲವೆಂದು ಸಾರಿದ್ದರೆ, ಅನರ್ಹತೆ ಬರುವುದಿಲ್ಲ; ಇಲ್ಲವಾದರೆ ಅನರ್ಹತೆ ಬರುವುದು. ಆದ್ದರಿಂದ ಎರಡು ಸಂಗತಿಗಳನ್ನು ನೋಡಬೇಕು. ಮೊದಲು ಯಾವ ಲಾಭದ ಸ್ಥಾನದಲ್ಲಿ ಇರುವನು, ಎಂಬುದನ್ನೂ ಅದು ಈ ಉಪ

ಕಲಮಿನ ಪ್ರಕಾರ ಅನರ್ಹತೆಯನ್ನು ತರುವುದೋ ಹೇಗೆ? ಅಥವಾ ನಿಯಮಗಳಲ್ಲಿ ಅನರ್ಹತೆಯನ್ನು ಹೋಗಲಾಡಿಸುವಂತಹ ಸಂದರ್ಭ ಇದೆಯೆ. ಆಗ ಅನರ್ಹತೆಯ ಬಗ್ಗೆ ಸ್ಪಷ್ಟವಾಗಿ ತಿಳಿವುದು. ಲಾಭದ ಅಧಿಕಾರ ಪದದಲ್ಲಿ ಇದ್ದವರು ಸಾಮಾನ್ಯ ವಾಗಿ ಸ್ವತಂತ್ರರಾಗಿರಲಾರರು. ಅಂತಹರು ನಿಷ್ಪಕ್ಷಪಾತತನದಿಂದ ಸಾರ್ವಜನಿಕ ಸೇವೆಮಾಡಲಾರರು ಎಂದು ಅಭಿಪ್ರಾಯವಿದೆ.

ಪಂಚಾಯತದ ಮುಂಖಾಂತರ ನಡೆಯುವ ಕೆಲಸಗಳಲ್ಲಿ ಯಾವುದೇ ಪಾಲು-ಇಲ್ಲವೆ ಹಿತಾಸಕ್ತಿ ಇದ್ದರೆ ಅದೂ ಅನರ್ಹತೆಯನ್ನು ತರುವುದು. ಪಾಲು-ಇಲ್ಲವೆ ಹಿತಾಸಕ್ತಿ ಇದ್ದಾಗ ಸ್ವಾರ್ಥವು ಮುಂದೆ ಬರುವುದೇ ಹೊರತು ಸಾರ್ವಜನಿಕ ಹಿತ ಮುಂದೆ ಬರುವುದಿಲ್ಲ. ಆದ್ದರಿಂದ ಅದು ಅನರ್ಹತೆಯ ಲಕ್ಷಣ.

ಪಂಚಾಯತದಿಂದ ವೇತನಿತನಾಗಿ ಇರುವ ವಕೀಲನು ಇಲ್ಲವೆ ಪಂಚಾಯತದ ವಿರುದ್ಧವಾಗಿ ವಕಾಲತ ನಡೆಸುವವನೂ ಅನರ್ಹತೆಯನ್ನು ಪಡೆಯುವನು. ಮೊದಲ ನೆಯ ಪ್ರಕಾರದಲ್ಲಿ ಸ್ವತಂತ್ರತೆ ಇರದು; ಎರಡನೆಯ ಪ್ರಕಾರದಲ್ಲಿ ವಿರೋಧಭಾವ ಇರುವುದು. ಎಂದೂ ಪಂಚಾಯತದ ಹಿತವನ್ನು ಸರಿಯಾಗಿ ನೋಡಲಾರವು. ಆದ್ದರಿಂದ ಅನರ್ಹತೆಯನ್ನು ತರುವುವು.

ಪಂಚಾಯತವು ಸಾರ್ವಜನಿಕರ ಹಿತಕ್ಕಾಗಿ ಇರುವುದು. ಅದರ ಕಾರ್ಯ ನಡೆಯಬೇಕಾದರೆ ಅದಕ್ಕೆ ಸಲ್ಲಿಸಬೇಕಾದ ಫೀ ಇಲ್ಲವೆ ಕರ ಎಲ್ಲರೂ ಕೊಡಬೇಕಾ ಗುವುದು. ಪಂಚಾಯತದ ಸದಸ್ಯನು ತಾನೇ ಬಾಕಿ ಇಟ್ಟುಕೊಂಡರೆ, ಇತರರಿಂದ ವಸೂಲು ಮಾಡಲು ಸಾಧ್ಯವಾಗದು. ಇತರರಿಗೆ ಬಾಕಿ ಉಳಿಯಲು ಧೈರ್ಯ ಬರುವುದು. ಸದಸ್ಯನು ಪಂಚಾಯತ ಕ್ಷೇತ್ರದಲ್ಲಿ ಇತರರಿಗೆ ಮಾದರಿಯಾಗಿರ ಬೇಕು. ಪಂಚಾಯತದಿಂದ ಬಿಲ್ಲು ಬಂದನಂತರ ಮೂರು ತಿಂಗಳದ ವರೆಗೆಯೂ ಸದಸ್ಯನು ತನ್ನ ಬಾಕಿ ಕೊಡದಿದ್ದರೆ, ಆ ಮೂಲಕ ಅವನ ಸ್ಥಳವು ಖಾಲಿಯಾಗು ವುದು. ಎಲ್ಲಿಯ ವರೆಗೆ ಬಾಕಿ ಇಟ್ಟುಕೊಂಡಿರುವನೋ ಅಲ್ಲಿಯ ವರೆಗೆ ಅವನಿಗೆ ಅನರ್ಹತೆ ಅಂಟುವುದು. ಈ ಬಿಲ್ಲು ಬಾಕಿಗಾಗಿ ಈ ಕಾಯಿದೆಯ ಕಲಮು ೭೭ರಲ್ಲಿ ಹೇಳಲಾಗಿರುವುದಲ್ಲದೆ, ಇದೇ ಕಲಮಿನ ಎರಡನೆಯ ಉಪಕಲಮಿನ (ii) ವಾಕ್ಯಾವಳಿಯಲ್ಲಿ ಹೇಳಲಾಗಿದೆ.

ಸದಸ್ಯತ್ವದ ಅನರ್ಹತೆಯ ಲಕ್ಷಣಗಳ ವಿವರಗಳನ್ನು ನೋಡಿದರೆ ಒಂದು ಸಂಗತಿ ಸ್ಪಷ್ಟವಾಗುವುದು. ಸದಸ್ಯನಾಗುವವನು ನಿಜವಾಗಿ ಯೋಗ್ಯತೆಯುಳ್ಳ ವನು ಇರಬೇಕು. ಅವನು ಒಳ್ಳೆಯ ವರ್ತನದವನೂ, ಸ್ವಾರ್ಥರಹಿತನೂ, ಪ್ರಬುದ್ಧನೂ, ಪ್ರಾಮಾಣಿಕನೂ, ಇತರರ ಅಳಕು ಇಲ್ಲದವನೂ ಮಾದರಿಯ ಸದ್ಗೃಹಸ್ಥನೂ ಆಗಿರಬೇಕೆಂಬುದು ಇಲ್ಲಿ ಕಾಣಿಸಿದ ವಿವರಗಳಿಂದ ತಿಳಿದುಬರುವುದು.

ಅನರ್ಹತೆಯಲ್ಲಿ ಶಾಶ್ವತ ಅನರ್ಹತೆಯನ್ನುಂಟುಮಾಡುವ ಪ್ರಸಂಗಗಳೂ ಇವೆ; ತಾತ್ಪೂರ್ತಿಕವಾಗಿ ಅನರ್ಹತೆಯನ್ನು ತರುವಂತಹವೂ ಇವೆ. ತಾತ್ಪೂರ್ತಿಕವಾಗಿದ್ದವು ಪರಿಹಾರ ಯೋಗ್ಯವಾಗಿವೆ. ಯಾವ ಕಾರಣದ ಮೂಲಕ ಅನರ್ಹತೆಯುಂಟಾಗಿರುವುದೋ ಅದು ಇಲ್ಲದಾಗುವ ಹಾಗೆ ಕೆಲಸ ಮಾಡಿದರೆ ಅನರ್ಹತೆಯು, ಹೊಸ ಪರಿಸ್ಥಿತಿ ನಿರ್ಮಾಣವಾದುದರಿಂದ ದೂರಾಗುವುದು. ಉಪಕಲಮು (ಡ) ದಲ್ಲಿ ಜಾಮೀನು ಕೊಡಲಾದ ಕಾಲಾವಧಿಯು ಮುಗಿದ ನಂತರ ಅನರ್ಹತೆಯು ಹೋಗುವುದು. ಉಪಕಲಮು ಕ, ಇ, ಘ, ಈ ಗಳಲ್ಲಿಯ ಅನರ್ಹತೆಯು ಆಯಾ ಘಟನೆಯ ನಂತರ ಐದು ವರುಷಗಳು ಮುಗಿದ ಮೇಲೆ ದೂರಾಗುವುದು.

ಉಪಕಲಮು (ಕಾ) ದಲ್ಲಿ ಹೇಳಿದ ಮಾತಿನ ಬಗ್ಗೆ ಉಪಕಲಮು (ಮ) ದಲ್ಲಿಯ ವಾಕ್ಯಾವಳಿ (ಡ) ದಲ್ಲಿ ವಿವರಣೆ ಕೊಡಲಾಗಿದೆ. ಪಂಚಾಯತದಿಂದ ಪಡೆದ ಕೆಲಸದಲ್ಲಿ ಇಲ್ಲವೆ ಕರಾರಿನಲ್ಲಿ ಪಾಲು ಇಲ್ಲವೆ ಹಿತಾಸಕ್ತಿ ಇರಬಾರದು ಎಂದು (ಕ) ದಲ್ಲಿ ಹೇಳಲಾಗಿದೆ. ಪಾಲು ಎಂದರೆ ಯಾವ ಪಾಲಿಗೆ ಬಾಧೆ ಇಲ್ಲ; ಯಾವ ಹಿತಾಸಕ್ತಿಗೆ ಬಾಧೆ ಇಲ್ಲ, ಎಂಬುದನ್ನು ಉಪಕಲಮು (ಮ) ದಲ್ಲಿಯ (ಡ) ವಾಕ್ಯಾವಳಿಯಲ್ಲಿ ಹೀಗೆ ಹೇಳಲಾಗಿದೆ : ಯಾವುದೇ ಜಾಯಿಂಟ ಸ್ಟಾಕ್ ಕಂಪನಿಯಲ್ಲಿ ಪಾಲುದಾರ ಇದ್ದು ಆ ಕಂಪನಿಯು ಪಂಚಾಯತದ ಕೆಲಸ ಕೈಕೊಂಡಿದ್ದಕ್ಕೆ ಅದು ಅನರ್ಹತೆಯನ್ನುಂಟು ಮಾಡುವಂತಹ ಪಾಲು ಅಲ್ಲ. ಏಕೆಂದರೆ ಕಂಪನಿಗೂ ಪಾಲುದಾರರಿಗೂ ಇರುವ ಸಂಬಂಧ ಪಾಲಿನ ಮೇಲಿನ ಲಾಭಾಂಶವೇ ಹೊರತು, ಬೇರೆ ಅಲ್ಲ. ಮೇಲಾಗಿ ಕಂಪನಿಯು ಏನು ಕೆಲಸ ಮಾಡುತ್ತಿರುವುದೆಂಬುದು ಕೂಡ ಪಾಲದಾರನಿಗೆ ಸಾಮಾನ್ಯವಾಗಿ ಗೊತ್ತಿರುವುದಿಲ್ಲ. ಆದ್ದರಿಂದ ಅಂತಹ ಪಾಲದಾರರು ಪಂಚಾಯತದ ಹಿತಾಸಕ್ತಿಯ ವಿರುದ್ಧ ಲಾಭ ಪಡೆದುಕೊಳ್ಳಲು ಸಾಧ್ಯವಿಲ್ಲ. ಆದಕ್ಕಾಗಿ ಅನರ್ಹತೆಯುಂಟಾಗುವುದಿಲ್ಲ. ಅದರಂತೆ, ಸೊಸಾಯಿಟಿ ರಜಿಸ್ಟ್ರೇಶನ ಕಾಯಿದೆಯನ್ವಯವಾಗಿ ನೋಂದಾಯಿಸಲಾದ ಸಂಸ್ಥೆಯಲ್ಲಿ ಪಾಲುದಾರ ಇದ್ದರೆ, ಇಲ್ಲವೆ ಯಾವುದೇ ಸಹಕಾರಿ ಸಂಘದ ಪಾಲದಾರನಿದ್ದರೆ, ಆನರ್ಹತೆ ಉಂಟಾಗದು. ಇಂತಹ ದೊಡ್ಡ ಕಂಪನಿ-ಸಂಘಗಳಲ್ಲಿ ಪಾಲದಾರನಿಗೂ ಪ್ರತ್ಯಕ್ಷ ಕಂಪನಿಯ ಕೆಲಸ ಮಾಡುವವರಿಗೂ ಯಾವ ಹಿತಸಂಬಂಧ ಇರುವುದಿಲ್ಲ. ಸಾಂಘಿಕವಾಗಿ ಚಟುವಟಿಕೆಗಳು ನಡೆವುದರಿಂದ ವೈಯುಕ್ತಿಕ ಆಸೆ ಆಕಾಂಕ್ಷೆಗಳಿಗೆ ಅಲ್ಲಿ ಆಸ್ಪದವಿಲ್ಲ. ಆದ್ದರಿಂದ ಅದು ಅನರ್ಹತೆ ತರುವಂತಹ ಪಾಲು ಅಲ್ಲ. ಈ ಲಕ್ಷಣಗಳ ಮೂಲಕ ವೃತ್ತಪತ್ರಿಕೆಯಲ್ಲಿ ಪಾಲು ಇದ್ದರೆ ಅದರಲ್ಲಿ ಪಂಚಾಯತವು ಜಾಹೀರಾತು ಕೊಟ್ಟಿದ್ದರೆ, ಅನರ್ಹತೆಗೆ ಕಾರಣವಾಗುವುದಿಲ್ಲ. ಪಂಚಾಯತವು ಸಾಲ ಎತ್ತುವಾಗ ಯಾರಾದರೂ

ಡಿಬೆಂಚರ ಪಡೆದುಕೊಂಡಿದ್ದರೆ ಅದೂ ಅನರ್ಹತೆಯನ್ನು ಉಂಟುಮಾಡುವುದಿಲ್ಲ. ಕಾರಣವೆಂದರೆ ವೈಯುಕ್ತಿಕ ಸ್ವಾರ್ಥ ಸಾಧನೆಗೆ ಇಂತಹ ಮೇಲ್ಕಾಣಿಸಿದ ಪರಿಸ್ಥಿತಿಗಳಲ್ಲಿ ಆಸ್ಪದವಿಲ್ಲದ್ದರಿಂದ ಅವು ಅನರ್ಹತೆಗೆ ಕಾರಣವಾಗುವುದಿಲ್ಲ.

ಇದುವರೆಗೆ ವಿವರಿಸಲಾದ ಸಂಗತಿಗಳು ಸದಸ್ಯನಾಗಿ ಚುನಾಯಿತನಾಗುವ ಪೂರ್ವದಲ್ಲಿ ಇರಬೇಕಾದ ಅರ್ಹತೆಯ ಇಲ್ಲವೆ ಅನರ್ಹತೆಯ ಬಗ್ಗೆ ಮಾತುಗಳು. ಉಪಕಲಮು ೨ ಹಾಗೂ ೩ ಚುನಾಯಿತರಾದ ಸದಸ್ಯರ ಬಗ್ಗೆ ಅವರು ತಮ್ಮ ಸ್ಥಳದಲ್ಲಿ ಉಳಿಯುದ ಹಾಗೆ ಉಂಟುಮಾಡಬಹುದಾದ ಅನರ್ಹತೆಯ ಬಗ್ಗೆ

ಉಪಕಲಮು ೧ ರಲ್ಲಿ ಹೇಳಿದ ಯಾವುದೇ ಅನರ್ಹತೆಯು ಚುನಾಯಿತನಾದ ಸದಸ್ಯನಿಗೆ ಅಂಟಿದರೆ, ಅವನು ಸ್ಥಳ ಖಾಲಿ ಮಾಡಬೇಕಾಗುವುದು. ಅಂದರೆ ಅನರ್ಹತೆ ಯಾವಾಗ ಉಂಟಾದರೂ ಅವನು ಆ ಕ್ಷಣದಿಂದ ಸದಸ್ಯತ್ವಕ್ಕೆ ಎರವಾಗಬೇಕಾಗುವುದು.

ಪಂಚಾಯತಕ್ಕೆ ತಾನೇ ಬಾಕಿ ಕೊಡಬೇಕಾಗಿದ್ದು ಮೂರು ತಿಂಗಳು ಕಳೆದರೂ ಅವನು ಬಾಕಿಯಾಗಿಯೆ ಉಳಿದರೆ ಸದಸ್ಯತ್ವವು ಹೋಗಿ ಆ ಸ್ಥಳ ಖಾಲಿಯಾಗುವುದು.

ಪಂಚಾಯತದ ಕೆಲಸ ನಡೆದಾಗ ಸ್ವಾರ್ಥಸಾಧಿಸಲು ಬಯಸಿದರೆ ಅವರ ಸದಸ್ಯತ್ವದ ಸ್ಥಳವು ಖಾಲಿಯಾಗುವುದು. ಈ ಕಾಯಿದೆಯ ಕಲಮು ೩೭ ರ ಉಪಕಲಮು ೪ ರಲ್ಲಿ ಹೇಳಿದ ಸಂಗತಿಯು ಚರ್ಚೆಬಂದಾಗ ಮತದಾನಮಾಡಿದರೆ ಇಲ್ಲವೆ ಚರ್ಚೆಯಲ್ಲಿ ಭಾಗವಹಿಸಿದರೆ, ಅವನು ಸ್ವಾರ್ಥಸಾಧಿಸಿದಂತೆ.

೩೭ ನೆಯ ಕಲಮಿನ ಉಪಕಲಮು (೪) ರಲ್ಲಿ ಏನು ಹೇಳಿದೆ? ಪಂಚಾಯತದ ಸಭೆಯೆದುರು ವಿಷಯವು ಚರ್ಚೆಗೆ ಬಂದಾಗ, ಆ ವಿಷಯದಲ್ಲಿ ಯಾವ ಸದಸ್ಯನಿಗೆ-ಆರ್ಥಿಕ ಹಿತಾಸಕ್ತಿ ಇರುವುದೋ ಅವನು ಮತದಾನ ಮಾಡಬಾರದು. ಹಾಗೂ ಚರ್ಚೆಯಲ್ಲಿ ಭಾಗವಹಿಸಬಾರದು.

ಹೀಗಿದ್ದಾಗ ಯಾರಾದರೂ ಮತದಾನ ಮಾಡಿದರೆ, ಇಲ್ಲವೆ ಚರ್ಚೆಯಲ್ಲಿ ಭಾಗವಹಿಸಿದರೆ, ಅವರು ತಮ್ಮ ಹಿತವನ್ನು ಮುಂದೆ ಮಾಡಿಕೊಂಡು ಸ್ವಾರ್ಥ ಸಾಧಿಸಲು ಸದಸ್ಯರಾಗಿದ್ದಾರೆಂದು ಧ್ವನಿತವಾಗುವುದು. ಹಾಗೆ ಯಾವುದೇ ಸಭೆಯಲ್ಲಿ ಅಂತಹ ವಿಷಯವು ಚರ್ಚೆಗೆ ಬಂದರೆ ಆಗ ಮತದಾನ ಮಾಡಬಾರದು ಹಾಗೂ ಚರ್ಚೆಯಲ್ಲಿ ಭಾಗವಹಿಸಬಾರದು.

ಪಂಚಾಯತದ ಕಾರ್ಯವು ನಡೆಯಲೇಬೇಕಲ್ಲವೆ? ಸದಸ್ಯರಾದವರು ತಮ್ಮ ಭಾಗದ ಕರ್ತವ್ಯವನ್ನು ಮಾಡಬೇಕಲ್ಲ. ಪಂಚಾಯತದ ಸಭೆಗಳಿಗೆ

ಹಾಜರಿರುವುದು ಸದಸ್ಯರ ಪ್ರಾಥಮಿಕ ಕರ್ತವ್ಯ. ಬೇರೆ ತಮ್ಮ ಕೆಲಸಗಳಿದ್ದರೆ ರಜೆ ಪಡೆದು ಗೈರಹಾಜರಿ ಉಳಿಯಬಹುದು. ಆದರೆ, ರಜೆ ಪಡೆಯದೆ ಗೈರಹಾಜರಿ ಉಳಿದರೆ, ಕರ್ತವ್ಯಚ್ಯುತಿಯಾಗುವುದು. ರಜೆ ಪಡೆಯದೆ ೬ ತಿಂಗಳ ಗೈರಹಾಜರಿ ಉಳಿದರೆ ಸದಸ್ಯತ್ವವು ಹೋಗುವುದು. ಆರುತಿಂಗಳಕಿಂತ ಹೆಚ್ಚು ಆಗದಷ್ಟು ರಜೆ ಪಡೆದ ಹೊರತು ಸತತ ನಾಲ್ಕು ತಿಂಗಳು ಯಾವುದೇ ಸದಸ್ಯನು ಪಂಚಾಯತದ ಸಭೆಗಳಿಂದ ಗೈರಹಾಜರಿ ಉಳಿದರೆ, ಅವನು ಸದಸ್ಯತ್ವವನ್ನು ಕಳೆದುಕೊಳ್ಳುವನು. ಆ ಸ್ಥಳವು ಖಾಲಿಯಾಗುವುದು.

ಯಾರಿಗೆ ತಮ್ಮ ಕೆಲಸವೇ ಮುಖ್ಯವಾಗಿರುವುದೋ ತಿಂಗಳಾನುಗಟ್ಟಲೆ ಪಂಚಾಯತದ ಸಭೆಗೆ ಹಾಜರಿರಲು ಸಾಧ್ಯವಾಗುವುದಿಲ್ಲವೊ ಅಂತಹ ಸದಸ್ಯರಿಂದ ಯಾವ ಕೆಲಸವಾದೀತು. ಆದ್ದರಿಂದ ರಜೆ ಪಡೆಯದೆ ಗೈರ ಹಾಜರಿಯಾಗಿ ಉಳಿವುದು ಒಳ್ಳೆಯ ಲಕ್ಷಣವಲ್ಲ. ಪಂಚಾಯತದ ಕೆಲಸ ದುರ್ಲಕ್ಷ್ಯ ಮಾಡುವ ಸದಸ್ಯರು ತಮ್ಮ ಸ್ಥಳವನ್ನು ಖಾಲಿ ಮಾಡಬೇಕಾಗುವುದೆಂಬ ಸೂಚನೆ ಇದರಲ್ಲಿ ಇದೆ. ಆದರೆ ರಜೆಗಾಗಿ ಸದಸ್ಯರು ಅರ್ಜಿ ಮಾಡಿದ್ದು ಆ ಅರ್ಜಿ ನಿಕಾಲೆಯೇ ಆಗದೆ ಉಳಿದರೆ–ಇಲ್ಲವೆ ಆ ಬಗ್ಗೆ ಏನು ನಿರ್ಣಯ ಕೊಡಲಾಯಿತು ಎಂಬುದನ್ನು ಅರ್ಜಿ ತಾರೀಖಿನಿಂದ ೩ ತಿಂಗಳ ವರೆಗೂ ಪಂಚಾಯತದಿಂದ ಏನೂ ತಿಳಿಯದೆ ಹೋದರೆ ಕೇಳಿದ ರಜೆಯು ದಯಪಾಲಿಸಲ್ಪಟ್ಟಿದೆಯೆಂದು ತಿಳಿದು ಗೈರ ಹಾಜರಿ ಉಳಿಯಲಡ್ಡಿಯಿಲ್ಲ. ಹಾಗೂ ಅದು ಕರ್ತ್ಯವ್ಯಚ್ಯುತಿ ಎನ್ನಿಸಲಾರದು.

ಮೇಲ್ಕಾಣಿಸಿದ ಪ್ರಸಂಗಗಳು ಉಂಟಾಗಿ ಸ್ಥಳವು ಖಾಲಿಯಾಗಿದೆಯೋ ಇಲ್ಲವೊ ಎಂಬ ಪ್ರಶ್ನೆ ಬಂದಾಗ ಡೆಪ್ಯೂಟಿ ಕಮಿಶನರರೇ ನಿರ್ಣಯಾಧಿಕಾರಿ ಅಂದರೆ, ಡೆಪ್ಯೂಟಿ ಕಮಿಶನರು ನಿರ್ಣಯಿಸಿದ ಹೊರತು ಯಾವುದೇ ಸ್ಥಳವು ಖಾಲಿಯಾದಂತೆ ಅಲ್ಲ ಎಂದು ಸೂಚನೆ. ಈ ಪ್ರಶ್ನೆಯು ಡೆಪ್ಯೂಟಿ ಕಮಿಶನರ ರೆದುರು ಬಂದಾಗ ಅವರು ವಿಚಾರಣೆ ನಡೆಸಿ ಸಂಬಂಧಪಟ್ಟ ಸದಸ್ಯರಿಗೆ ತಮ್ಮ ಹೇಳಿಕೆ ಕೊಡಲು ಎಲ್ಲ ಅವಕಾಶ ಕಲ್ಪಿಸಿಕೊಟ್ಟು ಆ ಬಗ್ಗೆ ನಿರ್ಣಯ ಕೊಡಬೇಕು.

ಸದಸ್ಯನು ಚುನಾಯಿತನಾಗಿದ್ದಾನೆಂದು ಡೆಪ್ಯೂಟಿ ಕಮಿಶನರು ಹೇಗೆ ಸಾರುವರೋ ಹಾಗೆಯೆ ಸ್ಥಳವು ಖಾಲಿಯಾಗಿದೆಯೆಂದು ನಿರ್ಣಯಿಸಿ ಹೇಳ ಬೇಕಾಗುವುದು. ಅಂದರೆ ಮುಂದಿನ ಕ್ರಮ ಕೈಕೊಳ್ಳಲು ಅನುಕೂಲವಾಗು ವುದು. ಸದಸ್ಯನ ಗೈರ ಹಾಜರಿಯು ಕ್ರಮಾಗತವಾಗಿದೆಯೋ ಕಾಯಿದೆ ವಿರುದ್ಧ

ವಾಗಿದೆಯೋ ಸದಸ್ಯನ ತಪ್ಪಿನಿಂದ ಆಗಿದೆಯೋ ಪಂಚಾಯತದ ತಪ್ಪಿನಿಂದ ಆಗಿದೆಯೋ ವಿಚಾರಣೆ ಮಾಡದೆ ಸ್ಥಳ ಖಾಲಿಯಾಯಿತು ಎಂದು ನಿರ್ಣಯಿಸ ಬಾರದು ಎಂಬುದೇ ಈ ಉಪಕಲಮಿನ ಉದ್ದೇಶ.

## ೧೨. ಏಕ ಕಾಲಕ್ಕೆ ಬೇರೆ ಬೇರೆ ಮತದಾರ ಸಂಘದಿಂದ ಸದಸ್ಯನಾಗಲು ನಿರ್ಬಂಧ

(೧) ಒಂದು ವ್ಯಕ್ತಿಯು ಒಂದರಕಿಂತ ಹೆಚ್ಚು ಪಂಚಾಯತ ಮತದಾರ ಸಂಘದಿಂದ ಚುನಾಯಿತನಾಗಿದ್ದರೆ, ತಾನು ಯಾವ ಒಂದು ಮತದಾರ ಸಂಘಕ್ಕೆ ಸೇವೆ ಸಲ್ಲಿಸಬೇಕೆಂಬುದನ್ನು ಗೊತ್ತುಪಡಿಸಿದ ಕಾಲಾವಧಿಯಲ್ಲಿ ಬರೆಹದ ಮೂಲಕ, ಅದನ್ನು ತಾನೇ ಸಹಿ ಮಾಡಿ ನೋಟೀಸನ್ನು ಅಸಿಸ್ಟಂಟ ಕಮಿಶನರರಿಗೆ ಇಲ್ಲವೆ ಈ ಸಂಬಂಧದಲ್ಲಿ ಅವನಿಂದ ಅಧಿಕಾರ ಪಡೆದ ಬೇರೆ ಯಾವುದೇ ಅಧಿಕಾರಿಗೆ, ಕೊಟ್ಟು ಆರಿಸಿಕೊಳ್ಳಬೇಕು. ಮತ್ತು ಹೀಗೆ ಮಾಡಿದ ಆಯ್ಕೆಯು ನಿರ್ಣಾಯಕ ವಾಗಿರುವುದು.

(೨) ಇಂತಹ ಆಯ್ಕೆಯನ್ನು ಮಾಡಿದಾಗ, ಆ ವ್ಯಕ್ತಿಯು ಸೇವೆಸಲ್ಲಿಸಲು ಆರಿಸಿಕೊಂಡ ಮತದಾರ ಸಂಘವನ್ನು ಬಿಟ್ಟು ಬೇರೆ ಮತದಾರ ಸಂಘ ಇಲ್ಲವೆ ಸಂಘ ಗಳು ಬೇರೆ ವ್ಯಕ್ತಿ ಇಲ್ಲವೆ ವ್ಯಕ್ತಿಗಳನ್ನು ಚುನಾಯಿಸಲು ಯೋಜಿಸಲ್ಪಡಬೇಕು.

(೩) ಉಪಕಲಮು (೧) ರಲ್ಲಿ ಸೂಚಿಸಲಾದಂತೆ ಯಾವುದೇ ಉಮೇದ ವಾರನು ತನ್ನ ಆಯ್ಕೆಯ ನಿರ್ಣಯಮಾಡದಿದ್ದರೆ, ಇಂತಹ ವ್ಯಕ್ತಿಯ ಚುನಾ ವಣೆಯು ರದ್ದಾಗುವುದು ಮತ್ತು ಸಂಬಂಧಪಟ್ಟ ಮತದಾರ ಸಂಘಗಳು ಬೇರೆ ವ್ಯಕ್ತಿಯನ್ನು ಇಲ್ಲವೆ ವ್ಯಕ್ತಿಗಳನ್ನು ಚುನಾಯಿಸಲು ಯೋಜಿಸಲ್ಪಡಬೇಕು.

### ವಿವೇಚನೆ

ಪಂಚಾಯತಕ್ಕೆ ಇಂತಿಷ್ಟೇ ಸದಸ್ಯರು ಇರಬೇಕೆಂದು ಅದು ಸ್ಥಾಪನೆಯಾಗುವ ವೇಳೆಗೆ ನಿರ್ದಿಷ್ಟಪಡಿಸಲಾಗಿರುವುದು. ಅಷ್ಟು ಸದಸ್ಯರನ್ನು ಚುನಾಯಿಸಿ ಅದರ ರಚನೆಯಾಗಬೇಕಾಗುವುದು. ಯಾವುದೇ ವ್ಯಕ್ತಿಯು ಒಂದರಕಿಂತ ಹೆಚ್ಚು ಮತ ದಾರ ಸಂಘದಿಂದ ಚುನಾವಣೆಗೆ ನಿಲ್ಲಬಹುದು. ಏಕೆಂದರೆ ಎಲ್ಲಿ ತಾನು ಆರಿಸಿ ಬರುಬಹುದೋ ಎಂಬುದು ಅವನಿಗೆ ತಿಳಿಯದ್ದರಿಂದ ಎಲ್ಲ ಕಡೆಗೂ ಸ್ಪರ್ಧೆ ಮಾಡ ಬಹುದಾಗಿದೆ. ಆದರೆ ಚುನಾವಣೆಯ ಫಲಿತಾಂಶವು ಹೊರಬಿದ್ದಾಗ ಆ ವ್ಯಕ್ತಿಯು ಒಂದರಕಿಂತಲೂ ಹೆಚ್ಚು ಮತದಾರ ಸಂಘದಲ್ಲಿ ಆರಿಸಲ್ಪಟ್ಟಿದ್ದರೆ, ಅವನು ಎಲ್ಲ ಮತದಾರ ಸಂಘದಲ್ಲಿಯೂ ಚುನಾಯಿತ ಉಮೇದುವಾರನಾಗಲಿಕ್ಕೆ ಬರುವುದಿಲ್ಲ.

ಅದಕ್ಕಾಗಿ ಅವನು ತಾನು ಯಾವ ಮತದಾರ ಕ್ಷೇತ್ರದ ಪ್ರತಿನಿಧಿಯಾಗಬೇಕೆಂಬ ಇಚ್ಛೆಯುಳ್ಳವನಾಗಿರುವನು ಎಂಬುದನ್ನು ನಿರ್ಣಯಿಸಬೇಕಾಗುತ್ತದೆ. ಈ ನಿರ್ಣಯ ತೆಗೆದುಕೊಳ್ಳದಿದ್ದರೆ ಪಂಚಾಯತ ರಚನೆಗೆ ಅಗತ್ಯವಿದ್ದ ಸದಸ್ಯರ ಸಂಖ್ಯೆಯು ದೊರೆವುದಿಲ್ಲ. ಆದ್ದರಿಂದ ಅಂತಹ ಚುನಾಯಿತ ಉಮೇದವಾರನು ತನ್ನ ನಿರ್ಣಯ ತೆಗೆದುಕೊಳ್ಳಬೇಕಾಗುವುದು. ಆ ನಿರ್ಣಯ ತೆಗೆದುಕೊಳ್ಳಲು ಒಂದು ಕ್ರಮವನ್ನು ಗೊತ್ತುಮಾಡಲಾಗಿದೆ. ತನ್ನ ಇಚ್ಛೆ ಏನಿರುವುದೆಂಬುದನ್ನು ತಾನು ಯಾವ ಮತ ದಾರ ಕ್ಷೇತ್ರ ಪ್ರತಿನಿಧಿಯಾಗಿ ಸೇವೆ ಸಲ್ಲಿಸಲು ಆರಿಸಿಕೊಂಡಿರುವನೋ ಅದನ್ನು ಬರೆಹದ ಮೂಲಕ ನೋಟಿಸಿನಲ್ಲಿ ಕಾಣಿಸಿ-ತಾನೇ ಸಹಿ ಮಾಡಿ-ಅಸಿಸ್ಟಂಟ ಕಮಿಶ ನರ ಕಡೆಗೆ ಸಾದರ ಪಡಿಸಬೇಕು. ಅಸಿಸ್ಟಂಟ ಕಮಿಶನರು ಆ ಬಗ್ಗೆ ಅಧಿಕಾರ ವಹಿಸಿಕೊಟ್ಟ ವ್ಯಕ್ತಿಯ ಕಡೆಗೂ ಕೊಡಬಹುದು. ಹೀಗೆ ಒಮ್ಮೆ ನಿರ್ಣಯ ತೆಗೆದು ಕೊಂಡ ನಂತರ ಅದು ಕೊನೆಯ ನಿರ್ಣಯವಾಗುವುದು. ಅದನ್ನು ಬದಲಿಸಲು ಬರುವುದಿಲ್ಲ. ಈ ನಿರ್ಣಯವನ್ನು ಅವನು ಗೊತ್ತುಮಾಡಿದ ಕಾಲಾವಧಿಯಲ್ಲಿ ತೆಗೆದುಕೊಳ್ಳಬೇಕು.

ಅನೇಕ ಮತದಾರ ಕ್ಷೇತ್ರದಿಂದ ಆರಿಸಿ ಬಂದಂತಹ ವ್ಯಕ್ತಿಯು ತಾನು ಯಾವ ಮತದಾರ ಕ್ಷೇತ್ರದ ಪ್ರತಿನಿಧಿಯಾಗಿ ಉಳಿಯಬೇಕೆಂಬ ತನ್ನ ಇಚ್ಛೆಯನ್ನು ಮೇಲೆಹೇಳಿದ ಉಪಕಲಮು ೧ರಲ್ಲಿಯ ಕ್ರಮದಂತೆ ವ್ಯಕ್ತಪಡಿಸದಿದ್ದರೆ ಆ ವ್ಯಕ್ತಿಯ ಚುನಾವಣೆಯು ರದ್ದಾಗುವುದು. ಮತ್ತು ಸಂಬಂಧಪಟ್ಟ ಆ ಮತದಾರ ಕ್ಷೇತ್ರ ಗಳು ಮತ್ತೊಬ್ಬ ವ್ಯಕ್ತಿಯನ್ನು ಆರಿಸುವುದಕ್ಕಾಗಿ ಯೋಜಿಸಲ್ಪಡಲಾಗುವುವು.

ಒಂದು ವ್ಯಕ್ತಿಯು ಒಂದೇ ಮತದಾರ ಕ್ಷೇತ್ರದ ಪ್ರತಿನಿಧಿಯಾಗಲು ಸಾಧ್ಯ ವೆಂಬುದೇ ಇದರಲ್ಲಿಯ ಮಾತು. ಆ ವ್ಯಕ್ತಿಗೆ ತನ್ನ ಮತದಾರ ಕ್ಷೇತ್ರ ಆರಿಸಿ ಕೊಳ್ಳುವ ಆಸ್ಪದ ಕೊಟ್ಟರೂ ಅವನು ಅದರ ಉಪಯೋಗ ಮಾಡದಿದ್ದರೆ ಅವನ ಚುನಾವಣೆಯೇ ರದ್ದಾಗುವುದು.

## ೧೩. ಚುನಾವಣೆಗಳ ಕಾಯಿದೆ ಬದ್ಧತೆಯನ್ನು ನಿರ್ಣಯಿಸುವುದು

(೧) ಚುನಾವಣೆಯ ಫಲಿತಾಂಶವು ಪ್ರಕಟವಾದ ನಂತರ ಹದಿನೈದು ದಿವಸಗಳಲ್ಲಿ ಯಾವುದೇ ಕಾಲಕ್ಕೆ, ಚುನಾವಣೆಗೆ ನಿಂತ ಯಾವುದೇ ಉಮೇದ ವಾರನು ಇಲ್ಲವೆ ಆ ಚುನಾವಣೆಯಲ್ಲಿ ಮತದಾನ ಮಾಡಲು ಅರ್ಹನಿದ್ದ ಯಾವುದೇ ವ್ಯಕ್ತಿಯು, ವೆಚ್ಚದ ಸಲುವಾಗಿ ಭದ್ರತೆಯೆಂದು ಐವತ್ತು ರೂಪಾಯಿ ಗಳ ಠೇವಿನೊಂದಿಗೆ ಆ ಗ್ರಾಮವು ಯಾವ ಮುನ್ಸಿಫ್‌ನ ಪ್ರಾದೇಶಿಕ ಅಧಿಕಾರ ಕ್ಷೇತ್ರದಲ್ಲಿ ಬರುವುದೋ ಅಂತಹ ಮುನಸೀಫರಿಗೆ ಆ ಚುನಾವಣೆಯ ಕಾಯಿದೆ ಬಾಧ್ಯತೆಯನ್ನು ನಿರ್ಣಯಿಸುವುದರ ಸಲುವಾಗಿ ಅರ್ಜಿ ಮಾಡಬಹುದು.

**ವಿವರಣೆ :** ಈ ಕಲಮಿನ ಉದ್ದೇಶಗಳಿಗಾಗಿ ಮುನಸೀಫ್ ಎಂದರೆ (i) ಮುಂಬಯಿ ಪ್ರದೇಶಕ್ಕಾಗಿ ಜ್ಯೂನಿಯರ ಡಿವಿಜನದ ಸಿವಿಲ್ ಜಜ್ಜ, ಎಂದೂ (ii) ಮದ್ರಾಸ ಪ್ರದೇಶಕ್ಕಾಗಿ ಜಿಲ್ಲಾ ಮುನಸೀಫ್ ಎಂದೂ ಅರ್ಥವಾಗುತ್ತದೆ.

(೨) ತನಗೆ ಅವಶ್ಯವೆಂದು ಕಂಡಂತಹ ವಿಚಾರಣೆಯನ್ನು ನಡಸಿದ ನಂತರ ಮುನಸೀಫನು ಚುನಾವಣೆಯ ಪ್ರಕಟಿತ ಫಲಿತಾಂಶವನ್ನು ಸ್ಥಿರೀಕರಿಸುವ ಇಲ್ಲವೆ ತಿದ್ದುಪಡಿ ಮಾಡುವ ಇಲ್ಲವೆ ಚುನಾವಣೆಯನ್ನು ಅಲ್ಲಗಳೆಯುವ ಹುಕುಮನ್ನು ಮಾಡತಕ್ಕದ್ದು. ಮೇಲ್ಕಾಣಿಸಿದ ವಿಚಾರಣೆಯ ಸಲುವಾಗಿ ಮುನಸೀಫನು ದಿವಾಣಿ ನ್ಯಾಯಾಲಯದ ಯಾವುದೇ ಅಧಿಕಾರಗಳನ್ನು ಚಲಾಯಿಸಬಹುದು. ತನಗೆ ಯೋಗ್ಯ ಕಂಡಂತಹ ರೀತಿಯಲ್ಲಿ ಅವನು ವಿಚಾರಣೆಯ ವೆಚ್ಚವನ್ನು ಕೊಡಿಸಬಹುದು. ಮತ್ತು ಇಂತಹ ವೆಚ್ಚವು ೧೯೦೮ ರ (೧೯೦೮ ರ ಕೇಂದ್ರ ಕಾಯಿದೆ ನಂ. V) ಸಿವಿಲ ಪ್ರೊಸೀಜರ ಕೋಡದನ್ವಯವಾಗಿ ನಡೆದ ದಾವೆಯಲ್ಲಿ ಕೊಡಿಸಲ್ಪಾದ ಕೋರ್ಟ ವೆಚ್ಚವನ್ನು ವಸೂಲು ಮಾಡುವಂತೆ ಮಾಡಲ್ಪಡಲಾಗುವುದು. ಮತ್ತು ಅವನ ನಿರ್ಣಯವೇ ಕೊನೆಯದು. ಅವನು ಚುನಾವಣೆಯನ್ನು ಅಲ್ಲಗಳೆದ ನಿರ್ಣಯ ಕೊಟ್ಟರೆ, ಆ ಸಂಗತಿಯನ್ನು ಕೂಡಲೆ ಡೆಪ್ಯೂಟಿ ಕಮೀಶನರರಿಗೆ ತಿಳಿಸತಕ್ಕದ್ದು. ಹೊಸ ಚುನಾವಣೆಯನ್ನು ನಡೆಸಲು ಆವಶ್ಯಕ ಕ್ರಮಗಳನ್ನು ಡೆಪ್ಯೂಟಿ ಕಮಿಶನರು ತೆಗೆದುಕೊಳ್ಳತಕ್ಕದ್ದು.

(೩) ಉಪಕಲಮು (೨) ರಲ್ಲಿ ಹೇಳಿದ ಮಾತುಗಳಿಗಂಕಿತವಾಗಿ

(ಎ) ಮುನಸೀಫರ ಅಭಿಪ್ರಾಯವು

(ಅ) ಚುನಾವಣೆಯಾದ ತಾರೀಖಿಗೆ ಚುನಾಯಿತನಾದ ಉಮೇದವಾರನು ಈ ಕಾಯಿದೆಯನ್ವಯವಾಗಿ ಅರ್ಹತೆ ಪಡೆದವನು ಆಗಿದ್ದಿಲ್ಲವೆಂದು ಇಲ್ಲವೆ ಆ ಸ್ಥಳವನ್ನು ಭರತಿ ಮಾಡಲು ಆಯ್ಕೆಗೊಳ್ಳಲು ಅನರ್ಹತೆಯುಳ್ಳವನಾಗಿದ್ದನೆಂದು ಆಗಿದ್ದರೆ; ಇಲ್ಲವೆ

(ಬ) ಚುನಾಯಿತನಾದ ಉಮೇದವಾರನಿಂದ, ಇಲ್ಲವೆ, ಅವನ ಚುನಾವಣೆ ಏಜೆಂಟನಿಂದ, ಇಲ್ಲವೆ ಚುನಾಯಿತನಾದ ಉಮೇದವಾರನ ಇಲ್ಲವೆ ಅವನ ಚುನಾವಣೆ ಏಜೆಂಟನ ಸಮ್ಮತಿಯಿಂದ ಬೇರೆ ಯಾವುದೇ ವ್ಯಕ್ತಿಯಿಂದ ಯಾವುದಾದರೂ ಕಲುಷಿತ ವ್ಯವಹರಣೆ ಮಾಡಲ್ಪಟ್ಟಿದೆಯೆಂದು ಆಗಿದ್ದರೆ; ಇಲ್ಲವೆ

(ಕ) ಯಾವುದೇ ನಾಮಕರಣ ಪತ್ರವು ಯೋಗ್ಯ ಕಾರಣವಿಲ್ಲದೆ ತಿರಸ್ಕೃತವಾಗಿದೆಂದು ಆಗಿದ್ದರೆ; ಇಲ್ಲವೆ

(ಡ) ಚುನಾಯಿತನಾದ ಉಮೇದವಾರನ ಸಂಬಂಧವಾಗಿ ಈ ಕೆಳಗಿನ ಕಾರಣಗಳ ಮೂಲಕ ಚುನಾವಣೆಯ ಫಲಿತಾಂಶವು ಬಾಧಿಸಲ್ಪಟ್ಟಿದೆ, ಎಂದು ಆಗಿದ್ದರೆ—

(i) ಯಾವುದೇ ನಾಮಕರಣ ಪತ್ರವು ಅಯೋಗ್ಯವಾಗಿ ಸ್ವೀಕರಿಸಲ್ಪಟ್ಟಿರುವುದರಿಂದ, ಇಲ್ಲವೆ

(ii) ಚುನಾಯಿತನಾದ ಉಮೇದುವಾರನ ಹಿತಕ್ಕಾಗಿ,ಆ ಉಮೇದುವಾರನಲ್ಲದ ಇಲ್ಲವೆ ಅವನ ಚುನಾವಣೆ ಏಜಂಟನಲ್ಲದ ಇಲ್ಲವೆ ಉಮೇದವಾರನ ಇಲ್ಲವೆ ಅವನ ಚುನಾವಣೆ ಏಜಂಟನ ಸಮ್ಮತಿ ಪಡೆದ ಬೇರೆ ಯಾವುದೇ ವ್ಯಕ್ತಿಯಿಂದ ಯಾವುದೇ ಕಲುಷಿತ ವ್ಯವಹರಣೆ ನಡೆಸಲ್ಪಟ್ಟದ್ದರಿಂದ; ಇಲ್ಲವೆ

(iii) ಯಾವುದೇ ಮತವನ್ನು ಅಯೋಗ್ಯವಾಗಿ ಸ್ವೀಕರಿಸಿದ್ದುದರಿಂದ ನಿರಾಕರಿಸಿದ್ದರಿಂದ ಇಲ್ಲವೆ ತಳ್ಳಿಹಾಕಿದ್ದರಿಂದ ಇಲ್ಲವೆ ರದ್ದಾದಂತಹ ಮತವನ್ನು ಸ್ವೀಕರಿಸಿದ್ದರಿಂದ; ಇಲ್ಲವೆ

(iv) ಈ ಕಾಯಿದೆಯ ಕಕ್ಷೆಗಳ ಇಲ್ಲವೆ ಈ ಕಾಯಿದೆಯನ್ವಯವಾಗಿ ಮಾಡಲಾದ ಯಾವುದೇ ನಿಯಮಗಳ ಇಲ್ಲವೆ ಹುಕುಮುಗಳ ಯಾವುದೇ ಉಲ್ಲಂಘನೆಯಿಂದ,

ಆಗ ಚುನಾಯಿತರಾದ ಯಾವುದೇ ಇಲ್ಲವೆ ಎಲ್ಲ ಉಮೇದವಾರರ ಚುನಾವಣೆಯು ರದ್ದೆಂದು ಮುನಸೀಫರು ಸಾರತಕ್ಕದ್ದು. ಮತ್ತು ಅರ್ಜದಾರನು ಇಲ್ಲವೆ ಬೇರೆ ಯಾವುದೇ ಉಮೇದವಾರನು ಯೋಗ್ಯರೀತಿಯಲ್ಲಿ ಚುನಾಯಿತನಾಗಿದ್ದಾನೆಂದು ಸಾರತಕ್ಕದ್ದು;

(ಬಿ) ಮೇಲಿನ ವಾಕ್ಯಾವಳಿ (ಎ) ಇದು ಯಾವುದಾದರೂ ಪ್ರಕರಣಕ್ಕೆ ಅನ್ವಯಿಸದಿದ್ದರೆ, ಇಬ್ಬರು ಇಲ್ಲವೆ ಹೆಚ್ಚು ಉಮೇದುವಾರರ ನಡುವೆ ಚುನಾವಣೆಯ ಕಾಯಿದೆಬದ್ಧತೆಯ ಬಗ್ಗೆ ವಾದವುಂಟಾಗಿದ್ದರೆ, ಇಂತಹ ಪ್ರತಿಯೊಬ್ಬ ಉಮೇದುವಾರನ ಪರವಾಗಿ ಹಾಕಲ್ಪಟ್ಟ ಮತಗಳ ಪರಿಶೀಲನೆ ಹಾಗೂ ಎಣಿಕೆ ಮಾಡಿದ ನಂತರ ಯಾವ ಉಮೇದುವಾರನಿಗೆ ಹೆಚ್ಚು ಸಂಖ್ಯೆಯಲ್ಲಿ ಕಾಯಿದೇಶೀರ ಮತಗಳು ಬಿದ್ದಿರುತ್ತವೆಯೆಂದು ಕಂಡುಬರುತ್ತದೆಯೋ ಅವನು ಯೋಗ್ಯರೀತಿಯಲ್ಲಿ ಚುನಾಯಿತನಾಗಿದ್ದಾನೆಂದು ಮುನಸೀಫನು ಸಾರತಕ್ಕದ್ದು :

ಆದರೆ ಇಂತಹ ಎಣಿಕೆಯ ಉದ್ದೇಶಕ್ಕಾಗಿ ಯಾವುದೇ ಮತವು ಒಬ್ಬ ಅನರ್ಹ ವ್ಯಕ್ತಿಯಿಂದ ಕೊಡಲ್ಪಟ್ಟಿದೆಯೆಂದು ಇಲ್ಲವೆ ಅದನ್ನು ಕೊಡುವಾಗ ಇಲ್ಲವೆ ಪಡೆಯುವಾಗ ಯಾವುದೇ ನಿರ್ದಿಷ್ಟ ಇಲ್ಲವೆ ಅನಿರ್ದಿಷ್ಟ ವ್ಯಕ್ತಿಯಿಂದ ಯಾವುದೇ ಕಲುಷಿತ

ವ್ಯವಹರಣೆ ನಡೆಸಲ್ಪಟ್ಟಿದೆಯೆಂದು ಮುನಸೀಫನಿಗೆ ಕಂಡುಬಂದರೆ ಆ ಮತವು ಕಾಯಿದೇಶೀರ ಮತವು ಎಂದು ಗಣಿಸತಕ್ಕದ್ದಲ್ಲ.

ಆದರೆ, ಇಂತಹ ಎಣಿಕೆಯು ಮುಗಿದನಂತರ ಉಮೇದವಾರರ ನಡುವೆ ಸಮಸಂಖ್ಯೆಯ ಮತಗಳು ಇವೆಯೆಂದು ಕಂಡುಬಂದರೆ, ಮತ್ತು ಒಂದು ಮತವನ್ನು ಕೂಡಿಸುವುದರಿಂದ ಯಾವೊಬ್ಬ ಉಮೇದವಾರನು ಚುನಾಯಿತನೆಂದು ಸಾರಲ್ಪಡಲು ಅಧಿಕಾರವುಳ್ಳವನಾಗುವನೆಂದು ಕಂಡುಬಂದರೆ, ಮುನಸೀಫನು ನಿರ್ಣಯಿಸಬಹುದಾದ ರೀತಿಯಲ್ಲಿ ಅವನ ಸಮಕ್ಷಮ ಚೀಟಿ ಹಾಕಿ ಆರಿಸಿ ಅಂತಹ ಉಮೇದುವಾರ ಇಲ್ಲವೆ ಉಮೇದುವಾರರ ಪರವಾಗಿ ಕಾಯಿದೇಶೀರ ಮತಗಳ ಸಂಖ್ಯೆಗೆ ಒಂದು ಹೆಚ್ಚಿನ ಮತವನ್ನು ಸೇರಿಸತಕ್ಕದ್ದು.

(ಳ) ಈ ಕೆಳಗೆ ಹೇಳಿದಂತೆ ಮಾಡಿದರೆ, ಒಂದು ವ್ಯಕ್ತಿಯು ಕಲುಷಿತ ವ್ಯವಹರಣೆಯನ್ನು ಮಾಡಿದ್ದಾನೆಂದು ಪರಿಗಣಿಸಲ್ಪಡತಕ್ಕದ್ದು.

(ಅ) ಯಾವುದೇ ಉಮೇದವಾರನ ಪರವಾಗಿ ಮತವನ್ನು ಕೊಡಲು ಇಲ್ಲವೆ ಕೊಡದೆ ಇರಲು ಯಾವುದೇ ಮತದಾರರನ್ನು ಮನವೊಲಿಸುವ ಉದ್ದೇಶದಿಂದ ಯಾರಾದರೂ ಯಾವುದೇ ಹಣ ಇಲ್ಲವೆ ಬೆಲೆಯುಳ್ಳ ಸಂಭಾವನೆ ಕೊಡಮಾಡಿದ್ದರೆ ಇಲ್ಲವೆ ಕೊಟ್ಟರೆ, ಇಲ್ಲವೆ ವೈಯುಕ್ತಿಕ ಲಾಭದ ಆಮಿಷದ ವಚನ ಮುಂದೆ ಮಾಡಿದರೆ ಇಲ್ಲವೆ ಯಾವುದೇ ವ್ಯಕ್ತಿಗೆ ಅಪಾಯ ಮಾಡುವ ಯಾವುದೇ ಹೆದರಿಕೆಯನ್ನು ಮುಂದೆ ಮಾಡಿದರೆ,

(ಬ) ಯಾವನು ಮತದಾನ ಮಾಡುವನೋ ಆ ವ್ಯಕ್ತಿಯಾಗಿರದೆ, ಆ ಮತದಾರನ ಹೆಸರಿನಲ್ಲಿ ಯಾರಾದರೂ ಮತ ಕೊಟ್ಟರೆ, ಪಡೆದರೆ, ಇಲ್ಲವೆ ಕೊಡುವುದನ್ನು ಪ್ರೋತ್ಸಾಹಿಸಿದರೆ,

(ಕ) ಯಾವುದೇ ಮತದಾನ ಕಟ್ಟೆಗೆ ಮತ್ತು ಅಲ್ಲಿಂದ ಮರಳಿ ಯಾವುದೇ ಮತದಾರನ (ತನ್ನ ಹಾಗೂ ತನ್ನ ಕುಟುಂಬದ ಸದಸ್ಯರು ಇಲ್ಲವೆ ತನ್ನ ಎಜಂಟ ಇವರನ್ನು ಬಿಟ್ಟು) ಸಾಗಾಟದ ಸಲುವಾಗಿ ಯಾರಾದರೂ ಯಾವುದೇ ವಾಹನ ಇಲ್ಲವೆ ನಾವೆಯನ್ನು ಹಣಕ್ಕಾಗಿ ಇಲ್ಲವೆ ಬೇರೆ ರೀತಿಯಿಂದ ಬಾಡಿಗೆ ಹಿಡಿದರೆ, ಇಲ್ಲವೆ ಪಡೆದರೆ,

ಅವರು ಕಲುಷಿತ ವ್ಯವಹರಣೆ ಮಾಡಿದ್ದಾರೆಂದು ಪರಿಗಣಿಸಲ್ಪಡತಕ್ಕದ್ದು.

ಆದರೆ, ಮತದಾನ ಕಟ್ಟೆಗೆ ಇಲ್ಲವೆ ಅಲ್ಲಿಂದ ಮರಳಿ ಸಾಗಾಟದ ಸಲುವಾಗಿ ಯಾವೊಬ್ಬ ಮತದಾರನು ಇಲ್ಲವೆ ಅನೇಕ ಮತದಾರರು ತಮ್ಮ ಸಾಮೂಹಿಕ ವೆಚ್ಚದಿಂದ ವಾಹನವನ್ನು ಇಲ್ಲವೆ ನಾವೆಯನ್ನು ಬಾಡಿಗೆ ಹಿಡಿದುದು—ಮತ್ತು

ಹೀಗೆ ಬಾಡಿಗೆ ಹಿಡಿಯಲಾದ ವಾಹನ-ಇಲ್ಲವೆ ನಾವೆಯು ಯಾಂತ್ರಿಕ ಶಕ್ತಿಯಿಂದ ನಡೆಯುವಂತಹದು ಆಗಿರದೆ ಇದ್ದರೆ, ಈ ವಾಕ್ಯಾವಳಿಯನ್ವಯವಾಗಿ ಅದು ಕಲುಷಿತ ವ್ಯವಹರಣೆಯೆಂದು ಪರಿಗಣಿಸಲ್ಪಡತಕ್ಕದ್ದಲ್ಲ.

ಆದರೆ ಯಾವುದೇ ಮತದಾರನಿಂದ ತನ್ನ ಸ್ವಂತದ ವೆಚ್ಚದಿಂದ ಯಾವುದೇ ಸಾರ್ವಜನಿಕ ವಾಹನ ಇಲ್ಲವೆ ನಾವೆ, ಇಲ್ಲವೆ ಯಾವುದೇ ಟ್ರಾಮು ಗಾಡಿ ಇಲ್ಲವೆ ರೈಲವೆ ವಾಹನವು ಇಂತಹ ಯಾವುದೇ ಮತದಾನ ಕಟ್ಟೆ ಇಲ್ಲವೆ ಮತದಾನಕ್ಕಾಗಿ ಗೊತ್ತುಮಾಡಿದ ಸ್ಥಳಕ್ಕೆ ಹೋಗಲು ಇಲ್ಲವೆ ಅಲ್ಲಿಂದ ಮರಳಿ ಬರಲು ಉಪಯೋಗಿಸಲ್ಪಟ್ಟಿದ್ದರೆ ಅದು ಈ ವಾಕ್ಯಾವಳಿಯನ್ವಯವಾಗಿ ಕಲುಷಿತ ವ್ಯವಹರಣೆಯೆಂದು ಪರಿಗಣಿಸಲ್ಪಡತಕ್ಕದ್ದಲ್ಲ.

ಅದು ಅವನ ತಿಳಿವಳಿಕೆಯಿಂದ ಮತ್ತು ಸಮ್ಮತಿಯಿಂದ ನಡಸಲ್ಪಟ್ಟಿದ್ದಾಗಿದ್ದರೆ ಇಲ್ಲವೆ ಚುನಾವಣೆಯ ಸಂಬಂಧವಾಗಿ ಅಂತಹ ಉಮೇದವಾರನ ಸಾಮಾನ್ಯ ಇಲ್ಲವೆ ನಿರ್ದಿಷ್ಟ ಅಧಿಕಾರದ ಮೂಲಕ ಕಾರ್ಯಮಾಡುತ್ತಿರುವ ವ್ಯಕ್ತಿಯಿಂದ ನಡೆಸಲ್ಪಟ್ಟಿದ್ದಾಗಿದ್ದರೆ, ಆ ಕಲುಷಿತ ವ್ಯವಹಾರಣೆಯು ಆ ಉಮೇದುವಾರನಿಂದ ನಡೆಸಲ್ಪಟ್ಟಿದೆಯೆಂದು ಪರಿಗಣಿಸಲ್ಪಡತಕ್ಕದ್ದು.

**ವಿವರಣೆ** ೧ : " ವೈಯಕ್ತಿಕ ಲಾಭದ ಆಮಿಷದ ವಚನ " ಎಂಬ ಪದ ಪ್ರಯೋಗವು (i) ಪಂಚಾಯತದ ಎದುರು ವಿಚಾರಣೆಗಾಗಿ ಬರಬಹುದಾದಂತಹ ಯಾವುದೇ ವಿಶಿಷ್ಟ ಯೋಜನೆಗೆ ಅನುಕೂಲವಾಗಿ ಇಲ್ಲವೆ ಪ್ರತಿಕೂಲವಾಗಿ ಮತದಾನ ಮಾಡುವ ವಚನವನ್ನು ಒಳಗೊಳ್ಳುವದಿಲ್ಲ, ಆದರೆ

(ii) ಮೇಲೆ ಹೇಳಿದ್ದಕ್ಕೆ ಅಂಕಿತವಾಗಿ ಆ ವ್ಯಕ್ತಿಯ ಸ್ವಂತ ಲಾಭಕ್ಕಾಗಿ ಇಲ್ಲವೆ ಯಾವ ವ್ಯಕ್ತಿಯಲ್ಲಿ ಅವನಿಗೆ ಹಿತಾಸಕ್ತಿ ಇದೆಯೋ ಆ ಯಾವುದೇ ವ್ಯಕ್ತಿಯ ಲಾಭಕ್ಕಾಗಿ ಕೊಟ್ಟ ವಚನವನ್ನು ಒಳಗೊಳ್ಳುತ್ತದೆ.

ವಿವರಣೆ ೨ : " ವಾಹನ " ಎಂದರೆ ರಸ್ತೆಯ ಮೇಲೆ ಸಾರಿಗೆಯ ಉದ್ದೇಶದಿಂದ ಉಪಯೋಗಿಸಲ್ಪಡುವ ಇಲ್ಲವೆ ಉಪಯೋಗಿಸಲು ಸಮರ್ಥವಾದ ಯಾವುದೇ ವಾಹನ-ಅದು ಯಾಂತ್ರಿಕ ಶಕ್ತಿಯಿಂದ ನಡೆಸಲ್ಪಡಲಿ ಬಿಡಲಿ, ಅದು ಇತರ ವಾಹನಗಳನ್ನು ಎಳೆಯುವದಕ್ಕಾಗಿ ಇರಲಿ ಇಲ್ಲದಿರಲಿ.

(೫) ಚುನಾವಣೆಗೆ ಸಂಬಂಧವಾಗಿ ಮಾಡಲಾದ ನಿಯಮಗಳನ್ನು ಕಾರ್ಯಕಾರಿಮಾಡುವುದರ ಸಲುವಾಗಿ ಹೊಣೆಗಾರಿಕೆಯುಳ್ಳ ಅಧಿಕಾರಿಯು ಯಾವುದೇ ತಪ್ಪು ಮಾಡಿರುವನೆಂಬ ಕಾರಣವನ್ನು ಇಲ್ಲವೆ ಕಲುಷಿತ ರೀತಿಯಲ್ಲಿ ಉಂಟಾಗದೆ ಇದ್ದ ಅಕ್ರಮ ಇಲ್ಲವೆ ವಿಧಾನರಾಹಿತ್ಯದ ಕಾರಣವನ್ನು ಮಾತ್ರ ಆಧರಿಸಿ

ಚುನಾವಣೆಯ ಕಾಯಿದೆಬದ್ಧತೆಯ ಪ್ರಶ್ನೆಯನ್ನು ಎತ್ತಲಾಗಿದ್ದರೆ, ಮುನಸೀಫನು ಆ ಚುನಾವಣೆಯನ್ನು ಅಲ್ಲಗಳೆಯತಕ್ಕದ್ದಲ್ಲ.

ವಿವರಣೆ: ಈ ಉಪಕಲಮಿನಲ್ಲಿಯ 'ತಪ್ಪು' ಎಂಬ ಶಬ್ದವು ಈ ಕಾಯಿದೆಯ ಕಕ್ಷೆಗಳ ಇಲ್ಲವೆ ಅದರನ್ವಯವಾಗಿ ಮಾಡಿದ ನಿಯಮಗಳ ಯಾವುದೇ ಉಲ್ಲಂಘನೆ ಇಲ್ಲವೆ ಕಾರ್ಯಕಾರಿ ಮಾಡುದನ್ನು ಬಿಟ್ಟಿರುವಿಕೆ, ಇಲ್ಲವೆ ಮಾಡಬೇಕಾದುದನ್ನು ಮಾಡದೆ ಇರೋಣ–ಯಾವುದರಿಂದ ಚುನಾವಣೆಯ ಫಲಿತಾಂಶವು ಸತ್ವತಃ ಬಾಧಿಸಲ್ಪಟ್ಟಿದೆಯೋ ಅಂತಹವನ್ನು ಒಳಗೊಳ್ಳುವುದಿಲ್ಲ.

(೬) ಉಪಕಲಮು (೩) ರಲ್ಲಿಯ ವಾಕ್ಯಾವಳಿ (ಎ) ದಲ್ಲಿ (ಬ) ವಾಕ್ಯದನ್ವಯವಾಗಿ ಮುನಸೀಫನು ಚುನಾವಣೆಯನ್ನು ಅಲ್ಲಗಳೆದರೆ, ಆವನಿಗೆ ಅದು ಯೋಗ್ಯವಾಗಿ ಕಂಡರೆ, ಈ ಕಲಮಿನ ಪ್ರಕಾರ, ಯಾರಿಂದ ಕಲುಷಿತ ವ್ಯವಹರಣೆಯು ಮಾಡಲ್ಪಟ್ಟಿದೆಯೋ ಅಂತಹ ಯಾವುದೇ ವ್ಯಕ್ತಿಯು ಐದು ವರುಷಗಳ ಕಾಲಾವಧಿ ಮಿಕ್ಕದಷ್ಟು ಕಾಲಾವಧಿಯ ವರೆಗೆ ಯಾವುದೇ ಸ್ಥಾನಿಕ ಅಧಿಕಾರದ ಸದಸ್ಯನಾಗಲು ಅನರ್ಹತೆಯುಳ್ಳವನಾಗಿದ್ದಾನೆಂದು ಅವನು ಸಾರಬಹುದು.

ಆದರೆ, ಚುನಾಯಿತನಾಗಿರುವ ಉಮೇದುವಾರನನ್ನಲ್ಲದೆ, ಮತ್ತು ಅಂತಹ ವ್ಯಕ್ತಿಗೆ ಅಂತಹ ಸಾರುವಿಕೆಯನ್ನು ಏಕೆ ಮಾಡಬಾರದೆಂಬ ಬಗ್ಗೆ ಕಾರಣ ತೋರಿಸಲು ಎಲ್ಲ ಅವಕಾಶ ಮಾಡಿಕೊಡದೆ, ಯಾವುದೇ ವ್ಯಕ್ತಿಯ ಸಂಬಂಧವಾಗಿ ಇಂತಹ ಸಾರುವಿಕೆಯು ಮಾಡಲ್ಪಡಲಾಗದು.

ಆದರೆ, ಆ ಸಂಬಂಧದಲ್ಲಿ ಸರಕಾರ ಹುಕುಮಿನ ಮೂಲಕ ಅಂತಹ ಅನರ್ಹತೆಯಿಂದ ಯಾವುದೇ ಕಾಲಕ್ಕೆ ಇಂತಹ ವ್ಯಕ್ತಿಯನ್ನು ಮುಕ್ತ ಮಾಡಬಹುದು.

(೭) ಈ ಕಲಮಿನನ್ವಯವಾಗಿ ಕೊಡಲಾದ ಮುನಸೀಫನ ನಿರ್ಣಯವು ಕೊನೆಯದು ಹಾಗೂ ನಿರ್ಣಾಯಕವೂ ಆಗಿರತಕ್ಕದ್ದು.

## ವಿವೇಚನೆ

ಚುನಾವಣೆಗಳು ಕಾಯಿದೇಬದ್ಧವಾಗಿರಬೇಕಾದುದು ಮುಖ್ಯ ಹಾಗೂ ಅವಶ್ಯ. ಆದರೆ ಚುನಾವಣೆಯ ಭರದಲ್ಲಿ ಯಾರಾದರೂ ಏನಾದರೂ ಮಾಡುವ ಸಂಭವ ಇರುವುದುಂಟು. ಹಾಗೇನಾದರೂ ಆದರೆ, ಮತ್ತು ಅದರಿಂದ ಚುನಾಯಿತ ಸದಸ್ಯರಲ್ಲಿ ತಂಟೆ ತಕರಾರು ಇಲ್ಲವೆ ಚುನಾವಣೆಯ ಕಾಯಿದೆ ಬದ್ಧತೆಯ ಬಗ್ಗೆ ಪ್ರಶ್ನೆಗಳು ಉಂಟಾದರೆ ಏನು ಮಾಡಬೇಕು, ಯಾವ ಕ್ರಮ ಕೈಕೊಳ್ಳಬೇಕು ಎಂಬ ಬಗ್ಗೆ ಈ ಕಲಮಿನಲ್ಲಿ ಹೇಳಲಾಗಿದೆ. ಇದರಲ್ಲಿ ಏಳು

ಉಪಕಲಮುಗಳಿದ್ದು ಅವುಗಳಲ್ಲಿ ಅನೇಕ ಉಪಕಲಮುಗಳಿಗೆ ಮತ್ತೆ ವ್ಯಾಖ್ಯಾವಳಿಗಳು ಇವೆ. ಇದು ಒಂದು ಬಹು ವ್ಯಾಪಕ ಹಾಗೂ ಬಹು ಮಹತ್ವದ ಕಲಮು ಆಗಿದೆ.

ಚುನಾವಣೆಯು ಕಾಯಿದೆಬದ್ಧವಾಗಿಲ್ಲ ಎಂದು ಅರ್ಜಿ ಮಾಡಬೇಕೆಂದು ಅನಿಸಿದರೆ, ಯಾರು ಮಾಡಬೇಕು ಮತ್ತು ಎಂದು ಮಾಡಬೇಕು, ಹೇಗೆ ಮಾಡಬೇಕು, ಎಲ್ಲಿ ಮಾಡಬೇಕು ಎಂಬುದನ್ನು ಮೊದಲು ಹೇಳಲಾಗಿದೆ.

ಚುನಾವಣೆಯ ಫಲಿತಾಂಶವು ಪ್ರಕಟವಾದ ೧೫ ದಿನಗಳ ಒಳಗೆ ಅರ್ಜಿ ಮಾಡಬೇಕು.

ಚುನಾವಣೆಗೆ ನಿಂತ ಯಾವುದೇ ಉಮೇದುವಾರ ಇಲ್ಲವೆ ಆ ಚುನಾವಣೆಯಲ್ಲಿ ಮತದಾನ ಮಾಡಲು ಅರ್ಹತೆಯುಳ್ಳ ಯಾವುದೇ ವ್ಯಕ್ತಿ ಅರ್ಜಿ ಮಾಡಬಹುದು. ಅಂದರೆ ಚುನಾವಣೆಯಲ್ಲಿ ಉಮೇದುವಾರನಷ್ಟೇ ಅಲ್ಲದೆ ಮತದಾರನೂ ಅಷ್ಟೇ ಅಧಿಕಾರ ಪಡೆದವನಾಗಿದ್ದಾನೆಂಬುದು ಸ್ಪಷ್ಟವಾಗುವುದಲ್ಲದೆ, ಕಾಯಿದೆಬದ್ಧ ಚುನಾವಣೆಯಾಗಿರಬೇಕೆಂಬ ಬಗ್ಗೆ ಮತದಾರನಿಗೂ ಆಸ್ಥೆ ಇರುವುದು, ಎಂಬುದನ್ನು ಈ ಅಧಿಕಾರವು ಸಾರಿ ಹೇಳುವುದು.

ಅರ್ಜಿ ಮಾಡುವವರು ಅರ್ಜಿಯ ಜತೆಗೆ ಚೌಕಶಿಯ ವೆಚ್ಚಕ್ಕಾಗಿ ೫೦ ರೂಪಾಯಿ ಭದ್ರತೆಯ ಠೇವು ಇಡಬೇಕು. ಅಂದರೆ ಕಂಡ ಕಂಡವರು ಅರ್ಜಿ ಮಾಡಿ ಸಾರ್ವಜನಿಕರ ಹಾಗೂ ಸರಕಾರದ ವೇಳೆ, ಹಣ ಇದರ ದುರುಪಯೋಗ ಮಾಡಬಾರದು. ಕೇವಲ ಆಸ್ಥೆಯಿದ್ದವರು ಮಾತ್ರ ಅರ್ಜಿ ಮಾಡಿರಬೇಕೆಂಬುದಕ್ಕೆ ಈ ನಿರ್ಬಂಧ ಹಾಕಲಾಗಿರುವುದೆಂದು ತೋರುತ್ತದೆ.

ಯಾವ ಗ್ರಾಮದ ಚುನಾವಣೆಯ ಬಗ್ಗೆ ಪ್ರಶ್ನೆಯೆತ್ತಿ ಅದರ ಕಾಯಿದೆಬದ್ಧತೆಯನ್ನು ನಿರ್ಣಯಿಸಬೇಕಾಗಿದೆಯೋ ಆ ಗ್ರಾಮವು ಯಾವ ಮುನಸೀಫರ ಪ್ರಾದೇಶಿಕ ಅಧಿಕಾರ ಕ್ಷೇತ್ರದಲ್ಲಿ ಇರುವುದೋ ಆ ಮುನಸೀಫರ ಕೋರ್ಟಿನಲ್ಲಿ ಅರ್ಜಿಯನ್ನು ಸಾದರಪಡಿಸಬೇಕು. ಮುನಸೀಫ ಶಬ್ದವು ಸಾಮಾನ್ಯವಾಗಿ ಎಲ್ಲರಿಗೂ ತಿಳಿದರೂ ಬೇರೆ ಬೇರೆ ಭಾಗಗಳಲ್ಲಿ ಅವರಿಗೆ ಕಾಯಿದೇಶೀರ ಹೆಸರುಗಳು ಬೇರೆಯಾಗಿವೆ. ಮುನಸೀಫ ಎಂದರೆ ಮೈಸೂರ ರಾಜ್ಯದ ಮುಂಬಯಿ ಭಾಗದಲ್ಲಿ ಅಂದರೆ ಧಾರವಾಡ, ಬೆಳಗಾಂವ, ವಿಜಾಪೂರ, ಕಾರವಾರ ಜಿಲ್ಲೆಗಳಲ್ಲಿ ಜ್ಯೂನಿಯರ ಡಿವಿಜನದ ಸಿ ವಿ ಲ್ ಜ ಜ್ಜ, ಎಂದು ತಿಳಿಯಬೇಕು. ಅಂದರೆ ಅದು ಈ ಭಾಗಕ್ಕೆ ಮುನಸೀಪರ ಕೋರ್ಟ ಎಂದು ಅರ್ಥ. ಅದರಂತೆ ಮೈಸೂರ ರಾಜ್ಯದ ಮದ್ರಾಸ ವಿಭಾಗಕ್ಕೆ ಮುನಸೀಫ ಎಂದರೆ ಜಿಲ್ಲಾ ಮುನಸೀಫ

ಎಂದು ಅರ್ಥ. ೧೯೫೬ ರ ನವ್ಹಂಬರ ೧ ಕ್ಕೆ ಮೈಸೂರ ರಾಜ್ಯವು ಪುನರ್ಘಟಿತ ರಾಜ್ಯ. ಮೊದಲು ಮುಂಬೈ, ಮದ್ರಾಸ, ಹೈದರಾಬಾದ, ಕೊಡಗು, ಮೈಸೂರು ಎಂದು ಇದ್ದುವುಗಳಲ್ಲಿ ಕನ್ನಡ ವಿಭಾಗಗಳು ಒಂದಾಗಿ ಕೂಡಿಕೊಂಡು ಹೊಸದಾಗಿ ರಾಜ್ಯ ನಿರ್ಮಾಣ ಆಯಿತು. ಬೇರೆ ಬೇರೆ ಪ್ರಾಂತದಲ್ಲಿ ಅಧಿಕಾರಿಗಳಿಗೆ ಬೇರೆ ಬೇರೆ ಹೆಸರು ಹಾಗೂ ಅಧಿಕಾರ ವ್ಯಾಪ್ತಿ ಇದ್ದಿತು. ಕಾಯಿದೆಗಳು ಎಲ್ಲವೂ ಸಮೀಕರಣ ಆಗುವತನಕ ಗುರುತು ಹಿಡಿಯಬೇಕಾದ ಪ್ರಸಂಗ ಬಂದಾಗ ಯಾವ ಹೆಸರಿನ ಅಧಿಕಾರಿಗೆ ಯಾವ ಪ್ರದೇಶದಲ್ಲಿ ಏನು ಕರೆವರು ಎಂಬುದು ತಿಳಿಯ ಬೇಕಾಗುವುದು.

ಅರ್ಜಿಯು ಸಾದರ ಪಡಿಸಲ್ಪಟ್ಟಮೇಲೆ ಮುನಸೀಫರು ವಿಚಾರಣೆ ಪ್ರಾರಂಭಿಸುವರು. ಆಗ ಅವರು ಸಿವಿಲ ಪ್ರೊಸೀಜರ ಕೋಡಿನಲ್ಲಿ ಹೇಳಲಾದ ದಿವಾಣಿ ನ್ಯಾಯಾಲಯದ ಬಗ್ಗೆ ಇರುವ ಎಲ್ಲ ಅಧಿಕಾರಗಳನ್ನು ಚಲಾಯಿಸಲು ಸಮರ್ಥರಾಗುತ್ತಾರೆ. ಅಂದರೆ ಅವರ ಅಧಿಕಾರಗಳು ಸಿವಿಲ್ ಪ್ರೊಸೀಜರ ಕೋಡದಿಂದ ಬರುವವೆಂದ ಮೇಲೆ ಅವರ ಕೊರ್ಟಿನಲ್ಲಿ ನಡೆವ ವಿಚಾರಣಾಕ್ರಮವು ಕೂಡ ಸಿವಿಲ್ ಪ್ರೊಸೀಜರ ಕೋಡಿನಲ್ಲಿ ನಿವೇದಿಸಲಾದಂತೆ ಎಂದು ಧ್ವನಿತವಾಗುತ್ತದೆ. ಆ ಅಧಿಕಾರಗಳನ್ನು ಪಡೆದು ಚೌಕಶಿ ಮಾಡಿ ಮುನಸೀಫರು ಹುಕುಮು ಮಾಡಬಹುದು. ಹುಕುಮಿನಿಂದ ಚುನಾವಣೆಯ ಫಲಿತಾಂಶನ್ನು ಸ್ಥಿರೀಕರಿಸಬಹುದು ತಿದ್ದುಪಡಿ ಮಾಡಬಹುದು. ಇಲ್ಲವೆ ಚುನಾವಣೆಯನ್ನು ಅಲ್ಲಗಳೆಯಬಹುದು. ಈ ವಿಚಾರಣೆಯು ಒಂದು ದಾವೆಯ ಸ್ವರೂಪದಲ್ಲಿ ಬಂದಂತಾಗಿ ಅದರ ಕೋರ್ಟ ಖರ್ಚು ದಾವೆಯ ಖರ್ಚು ವಸೂಲಾಗುವಂತೆ ವಸೂಲಾಗಬೇಕು ಎಂದು ಹೇಳಲಾಗಿದೆ. ಇದರ ಬಗ್ಗೆ ಮುನಸೀಫರ ನಿರ್ಣಯವೇ ಕೊನೆಯದು.

ಚುನಾವಣೆಯನ್ನು ಅಲ್ಲಗಳೆವ ಸಂದರ್ಭ ಬಂದು ಹುಕುಮು ಮಾಡಿದರೆ ಆ ಸಂಗತಿಯನ್ನು ಮುನಸೀಫನು ಕೂಡಲೆ ಡೆಪ್ಯೂಟಿ ಕಮಿಶನರರಿಗೆ ತಿಳಿಸಬೇಕು. ಏಕಂದರೆ ಡೆಪ್ಯೂಟಿ ಕಮಿಶನರರು ಹೊಸ ಚುನಾವಣೆಗಾಗಿ ವ್ಯವಸ್ಥೆ ಮಾಡಬೇಕಾಗುತ್ತದೆ. ಚುನಾವಣೆಯ ಫಲಿತಾಂಶದ ಬಗ್ಗೆ ಹುಕುಮು ಹೊರಡಿಸುವುದು ಕರ್ತವ್ಯವಾಗಿರುವಂತೆ, ಚುನಾವಣೆಯು ಅಲ್ಲಗಳೆಯಲ್ಪಟ್ಟದ್ದರೆ, ಅದನ್ನು ಡೆಪ್ಯೂಟಿ ಕಮಿಶನರರಿಗೆ ತಿಳಿಸುವುದೂ ಮುನಸೀಫರ ಕರ್ತವ್ಯವಾಗಿದೆಯೆಂದು ಸ್ಪಷ್ಟವಾಗುತ್ತದೆ.

ಚುನಾವಣೆಯ ಫಲಿತಾಂಶದಲ್ಲಿ ವ್ಯತ್ಯಯ ಉಂಟಾಗಲಿಕ್ಕೆ ಅನೇಕ ಕಾರಣಗಳು ಇವೆ. ಚುನಾಯಿತನಾದವನು ಅರ್ಹತೆಯುಳ್ಳವನು ಇರದೇ ಇರಬಹುದು; ಅನರ್ಹತೆಯುಳ್ಳವನು ಆಗಿರಬಹುದು. ಅಲ್ಲದೆ ಅವನು ಚುನಾವಣೆಯ ಕಾಲಕ್ಕೆ

ಕಲುಷಿತ ವ್ಯವಹರಣೆ ನಡೆವುದಕ್ಕೆ ಕಾರಣವಾಗಿರಬಹುದು. ಅಲ್ಲದೆ, ನಾಮುಕರಣ ಪತ್ರವು ಸರಿಯಾಗಿ ಇರದೇ ಇರುವ ಸಂದರ್ಭ ಬಂದಿರಬಹುದು. ಮತದಾನವು ಸರಿಯಾಗಿ ಆಗಿರದೇ ಇರಬಹುದು. ಇಲ್ಲವೆ ಕಾಯಿದೆಯು ಹೇಳಿದ ಕ್ರಮದಲ್ಲಿ ಏನಾದರೂ ತಪ್ಪಾಗಿರಬಹುದು. ಹೀಗಾಗಿ ಫಲಿತಾಂಶಕ್ಕೆ ವ್ಯತ್ಯಯ ಉಂಟಾಗುವ ಪ್ರಸಂಗ ಬರುವುದು.

ಚುನಾವಣೆಯ ತಾರೀಖು ಘೋಷಿಸಲ್ಪಡುವ ತಾರೀಖಿನಿಂದ ಚುನಾವಣೆಯ ಫಲಿತಾಂಶವು ಪ್ರಕಟವಾಗುವ ತಾರೀಖಿನ ವರೆಗೆ ನಡೆದ ಪ್ರತಿಯೊಂದು ಕಾರ್ಯವು ಕಾಯಿದೆಬದ್ಧವಾಗಿರಬೇಕಾಗುವುದರಿಂದ ಯಾವುದೇ ಮಧ್ಯಂತರ ಸ್ಥಿತಿಯಲ್ಲಿ ಏನಾದರೂ ದೋಷವು ಸೇರಿಕೊಂಡು ಚುನಾವಣೆಯ ಕಾಯಿದೆಬದ್ಧತೆಗೆ ಆತಂಕ ತಂದರೆ ಆಗ ಅವೆಲ್ಲವುಗಳ ಚೌಕಶಿಯಾಗಿ ಚುನಾವಣೆಗೆ ಯಾವ ವ್ಯತ್ಯಯವುಂಟಾಗಿದೆ ಎಂಬುದರ ನಿರ್ಣಯ ಮಾಡಬೇಕಾಗುವುದು.

ಅರ್ಹತೆಯ ಇಲ್ಲವೆ ಅನರ್ಹತೆಯ ಪ್ರಶ್ನೆಯನ್ನು ಯಾವ ತಾರೀಖಿಗೆ ಸಂಬಂಧವಾಗಿ ನಿರ್ಣಯಿಸಬೇಕು ? ಚುನಾವಣೆಯು ನಡೆಯುವ ತಾರೀಖಿಗೆ ಅರ್ಹನಾಗಿರಬೇಕೆಂದು ಸ್ಪಷ್ಟವಾಗಿ ಹೇಳಿದೆ. ಅರ್ಹತೆಯು ಚುನಾವಣೆಯ ತಾರೀಖಿನ ದೃಷ್ಟಿಯಿಂದ ಲಕ್ಷಿಸಲ್ಪಡಬೇಕು. ಅನರ್ಹತೆಯು ಕೂಡ ಆ ತಾರೀಖಿನ ದೃಷ್ಟಿಯಿಂದ ವಿಚಾರಿಸಲ್ಪಡಬೇಕಲ್ಲದೆ, ಉಮೇದವಾರನು ತನ್ನ ಚುನಾಯಿತ ಸ್ಥಳದಲ್ಲಿ ಆರಿಸಲ್ಪಡಲು ಅನರ್ಹತೆಯುಳ್ಳವನಾಗಿದ್ದಾನೆಂಬುದನ್ನೂ ವಿಚಾರಿಸಬೇಕಾಗುವುದು. ಅನರ್ಹತೆಯು ಚುನಾವಣೆಯ ತಾರೀಖಿನ ನಂತರವೂ ವಿಚಾರಿಸಬೇಕಾದ ಸಂಗತಿ–ಎಂಬುದು ಇಲ್ಲಿ ತಿಳಿಯಬೇಕಾದ ಮಾತು. ಅರ್ಹತೆ ಅನರ್ಹತೆಯ ಬಗ್ಗೆ ಕಲಮು ೧೦ ಹಾಗೂ ೧೧ ಲಕ್ಷದಲ್ಲಿಡಬೇಕು.

ಚುನಾವಣೆಯ ಕಾಲದಲ್ಲಿ ನಡೆದ ಕಲುಷಿತ ವ್ಯವಹರಣೆಯಿಂದ ಚುನಾವಣೆಯು ರದ್ದಾಗುವ ಪ್ರಸಂಗ ಇರುವುದು. ಉಮೇದುವಾರನು ಅರ್ಹನಿರಬಹುದು, ಅನರ್ಹನಾಗಿರಲಿಕ್ಕಿಲ್ಲ. ಆದರೆ ಚುನಾವಣೆಯು ನಡೆದ ಕಾಲಕ್ಕೆ ಕಲುಷಿತ ವ್ಯವಹರಣೆ ನಡೆಸಿದ್ದರೆ ಅವನ ಚುನಾವಣೆಗೆ ಧಕ್ಕೆಯಾಗುವುದು. ಚುನಾವಣೆಯೆಂದರೆ ಮತದಾರರ ಅಭಿಪ್ರಾಯ–ಉಮೇದವಾರರ ಬಗ್ಗೆ ಇದ್ದುದನ್ನು ತಮ್ಮ ಮತದಿಂದ ವ್ಯಕ್ತಪಡಿಸಿದ್ದು. ಈ ಅಭಿಪ್ರಾಯವು ಮುಕ್ತ ಮನಸ್ಸಿನಿಂದ ಹಾಗು ಯಾವ್ದೆ ಭಿಡೆ ಮುರವತ್ತುಗಳು ಇಲ್ಲವೆ,ಆಮಿಷಅಂಜಿಕೆಯಿಲ್ಲದೆ ಕೊಡಲ್ಪಟ್ಟಿರಬೇಕು. ಹಾಗೆ ಆಗದೆ, ಒಲುಮೆ–ಒತ್ತಾಯಗಳಿಂದ ಆಮಿಷ ಅಂಜಿಕೆಯಿಂದ ಕೊಡಲಾಗಿದ್ದರೆ ಅದು ಸರಿಯಾದ ಚುನಾವಣೆಯಲ್ಲ, ಹಾಗೂ ಹಾಗೆ ಚುನಾಯಿತನಾದವನ ಚುನಾವಣೆಯು ಕಾಯದೆಬದ್ಧವಲ್ಲ.

ಈ ಕಲುಷಿತ ವ್ಯವಹರಣೆ ಯಾರು ಮಾಡಿರಬೇಕು ? ಉಮೇದವಾರ ನಾಗಲೀ ಇಲ್ಲವೆ ಅವನ ಚುನಾವಣೆಯ ಏಜೆಂಟನಾಗಲೀ ಮಾಡಿರಬೇಕು. ಬೇರೆಯವರು ಮಾಡಿದ್ದರೆ ಅದಕ್ಕೆ ಉಮೇದುವಾರನ ಸಮ್ಮತಿ ಇರಬೇಕು. ಅಂದರೆ ಅವರ ಹೊಣೆಗಾರಿಕೆಯು ಉಮೇದುವಾರನದಾಗಿ ಆ ಚುನಾವಣೆಯು ರದ್ದಾದದ್ದೆಂದು ಸಾರಲು ಬರುವುದು.

ನಾಮಕರಣ ಪತ್ರವು ಅಕ್ರಮವಾಗಿ ಸ್ವೀಕೃತವಾಗಿ, ಯಾವುದೇ ಕಲುಷಿತ ವ್ಯವಹರಣೆ ನಡೆದು, ಯಾವುದೇ ಮತವು ನಿರಾಕರಿಸಲ್ಪಟ್ಟು ಇಲ್ಲವೆ ರದ್ದಾದ ಮತವು ಸ್ವೀಕೃತವಾಗಿ ಇಲ್ಲಿ ಕಾಯಿದೆಯ ಇಲ್ಲವೆ ಈ ಕಾಯಿದೆಯ ಯಾವುದೇ ನಿಯಮ-ಹುಕುಮುಗಳು ಅನುಕರಿಸಲಾಗದೆ ಇದ್ದು ತತ್‌ಪರಿಣಾಮವಾಗಿ ಯಾವುದೇ ಚುನಾವಣೆಯ ಫಲಿತಾಂಶವು ಸತ್ವತಃ ಬಾಧಿಸಲ್ಪಟ್ಟಿದ್ದರೆ, ಆಗ ಚುನಾವಣೆಯು ರದ್ದಾಗುವುದು. ಹೀಗೆ ಚುನಾವಣೆಯು ಯಾರದು ರದ್ದಾಗು ವುದೋ ಅದರ ಪರಿಣಾಮವಾಗಿ ಬೇರೆಯವರು ಚುನಾಯಿತರಾದರೆ, ಅವರು ಚುನಾಯಿತರಾಗಿದ್ದಾರೆಂದು ಅವರು ಅರ್ಜಿದಾರನಿರಲಿ ಇಲ್ಲವೆ ಬೇರೆ ಯಾರಾ ದರೂ ಆಗಿರಲಿ, ಅವರು ಚುನಾಯಿತರಾಗಿದ್ದಾರೆಂದು ಸಾರಬೇಕಾಗುವುದು.

ಇದು ಸಾಮಾನ್ಯ ಕ್ರಮವು. ಎಲ್ಲ ಚುನಾವಣೆಗಳಿಗೆ ಅನ್ವಯ ವಾಗುವುದು. ಉಳಿದೆಲ್ಲವೂ ಸರಿಯಾಗಿ ಕಾಯಿದೇಬದ್ಧವಾಗಿ ಇರುವಾಗ್ಯ ಮತಗಳ ಸಂಖ್ಯೆಯಲ್ಲಿ ಹೆಚ್ಚು ಕಡಿಮೆಯಾಗಿದೆಯೆಂದು ಇಬ್ಬರು ಇಲ್ಲವೆ, ಹೆಚ್ಚು ಉಮೇದು ವಾರರು ತಂಟೆಗೆ ತೊಡಗಿದ್ದರೆ, ಆ ಬಗ್ಗೆ ಅರ್ಜಿ ಮಾಡಿದರೆ, ಮುನಸೀಫನು ಆ ಉಮೇದುವಾರರಿಗೆ ಬಿದ್ದ ಮತಗಳ ಪರಿಶೀಲನೆ ಮಾಡಬೇಕು. ಮತ್ತು ಅವುಗಳನ್ನು ಎಣಿಸಬೇಕು. ಎಣಿಸಿದ ನಂತರ ಯಾವ ಉಮೇದುವಾರನಿಗೆ ಹೆಚ್ಚಿನ ಸಭೆಯಲ್ಲಿ ಕಾಯಿದೇಶೀರ ಮತಗಳು ಬಿದ್ದಿರುವುವೋ ಅವನು ಯೋಗ್ಯ ರೀತಿಯಲ್ಲಿ ಚುನಾ ಯಿತನಾಗಿದ್ದಾನೆಂದು ಸಾರಲಾಗುವುದು. ಕಾಯಿದೇಶೀರ ಮತಗಳು ಎಂದರೆ, ಅನರ್ಹನಾದವನು ಮತ ಹಾಕಿದರೆ ಅದು ಕಾಯಿದೇಶೀರ ಮತವಲ್ಲ. ಮತ ಹಾಕುವಲ್ಲಿ, ದೊರಕಿಸುವಲ್ಲಿ ಯಾರಾದರೂ ಕಲುಷಿತ ವ್ಯವಹರಣೆ ಮಾಡಿದ್ದರೆ ಆ ಮತವು ಕಾಯಿದೇಶೀರ ಮತವಲ್ಲ. ಇಂತಹ ಮತಗಳನ್ನು ಬಿಟ್ಟು ಎಣಿಕೆ ಹಾಕ ಬೇಕು. ಹೀಗೆ ಎಣಿಕೆ ಹಾಕಿದ ಮೇಲೆ, ಉಮೇದುವಾರರಿಗೆ ಸಮ ಸಂಖ್ಯೆಯಲ್ಲಿ ಮತಗಳು ಬಿದ್ದಿವೆಯೆಂದು ಕಂಡುಬಂದು ಒಂದು ಹೆಚ್ಚಿನ ಮತವನ್ನು ಹಾಕುವುದ ರಿಂದ ಯಾರೊಬ್ಬರು ಚುನಾಯಿತರಾಗುವರೆಂದು ಕಂಡುಬಂದರೆ, ಒಂದು ಮತ ವನ್ನು ಹೆಚ್ಚಿಗೆ ಕೊಡಬೇಕು. ಈ ಹೆಚ್ಚಿನ ಮತವನ್ನು ಯಾರಿಗೆ ಕೊಡಬೇಕು ಮತ್ತು ಹೇಗೆ ಕೊಡಬೇಕು ? ಮುನಸೀಫರು ಗೊತ್ತುಮಾಡುವ ರೀತಿಯಲ್ಲಿ,

ಅವರ ಸಮಕ್ಷಮ ಚೀಟಿ ಹಾಕಿ ಆರಿಸಿ ತೆಗೆದು ಯಾರ ಹೆಸರು ಬರುವುದೋ ಅವರಿಗೆ ಆ ಹೆಚ್ಚಿನ ಮತವನ್ನು ಕೊಡಲಾಗುವುದು. ಆಗ ಆ ಹೆಚ್ಚಿನ ಮತವನ್ನು ಪಡೆದವನು ಚುನಾಯಿತನಾದನೆಂದು ಸಾರಲಾಗುವುದು. ಈ ಬಗೆಯಾಗಿ ಚೀಟಿ ಹಾಕುವ ಪದ್ಧತಿಯಿಂದ ಇಡಿ ಚುನಾವಣೆಯು ಕ್ರಮಗೊಳಿಸಲ್ಪಡುವುದು. ಇಲ್ಲವಾದರೆ ಒಂದು ಮತದ ನಿರ್ಣಯದ ಸಲುವಾಗಿ ಮತ್ತೊಮ್ಮೆ ಚುನಾವಣೆಯನ್ನೆ ನಡೆಸುವ ಪ್ರಸಂಗ ಬರುತ್ತಿತ್ತು. ಒಂದೇ ಮತದ ನಿರ್ಣಯ ಬೇಕಾಗಿರುವುದರಿಂದ ಈ ಪದ್ಧತಿಯು ಅನುಕೂಲವೂ ಸುಲಭವೂ ಪಕ್ಷಪಾತ ಇಲ್ಲದ್ದು ಆಗುವುದು.

ಕಲುಷಿತ ವ್ಯವಹರಣೆ ಮಾಡಿದ್ದಾರೆಂದು ಹೇಗೆ ನಿರ್ಣಯಿಸಬೇಕು ? ಮತ ಯಾಚನೆಯು ಯಾರ ಮೇಲೆಯೂ ಒತ್ತಾಯ ತರುವಂತೆ ಇರಬಾರದು. ಮತ ಹಾಕುವವನಿಗೆ ಮತದಾನದ ಸ್ವಾತಂತ್ರ್ಯವಿರಬೇಕೆಂಬುದೇ ಉದ್ದೇಶ. ಮತದಾನದ ಸ್ವಾತಂತ್ರ್ಯವು ಹೋಗುವ ಹಾಗೆ ಮಾಡಿದ ಕೃತಿಯು ಕಲುಷಿತ ವ್ಯವಹರಣೆ ಅನಿಸುವುದೆಂದು ಹೇಳುವುದು ಸಾಮಾನ್ಯ ಮಾತು. ಆದರೆ ನಿರ್ದಿಷ್ಟವಾಗಿ ಗೊತ್ತುಪಡಿಸಿದ ಹೊರತು, ಕಲುಷಿತ ವ್ಯವಹರಣೆಯ ಆಪಾದನೆ ಮಾಡುವುದಾದರೂ ಹೇಗೆ? ಯಾವೊಬ್ಬ ಉಮೇದುವಾರನಿಗೆ ಮತ ಹಾಕಬೇಕೆಂದು ಹೇಳಿ, ಮತ ಹಾಕಿದರೆ, ಹಣವನ್ನು ಇಲ್ಲವೆ ಬೆಲೆಯುಳ್ಳ ಸಂಭಾವನೆಯನ್ನು ಇಲ್ಲವೆ ಬೇರೆ ಯಾವುದೇ ವೈಯುಕ್ತಿಕ ಲಾಭದ ಆಮಿಷ ತೋರಿಸಿ ಅದರ ವಚನದ ಮೂಲಕ ಮತದಾನದ ಸ್ವಾತಂತ್ರ್ಯ ಅಪಹರಣ ಮಾಡಿ ಯಾರಿಗೆ ಮತವನ್ನು ದೊರಕಿಸಲಾಗಿರುವುದೋ ಅಂತಹ ಉಮೇದುವಾರನ ಪರವಾಗಿ ಕಲುಷಿತ ವ್ಯವಹರಣೆ ನಡೆಯಿತೆಂದು ತಿಳಿಯಬಹುದು. ಆಸೆ ಆಮಿಷ ತೋರುವುದು ಒಂದು ಬಗೆಯ ಮತದಾರನ ಸ್ವಾತಂತ್ರ್ಯದ ಅಪಹರಣವಾದರೆ,ಹೆದರಿಕೆ-ಅಪಾಯದ ಹೆದರಿಕೆ ಹುಟ್ಟಿಸಿ, ಮತ ಪಡೆದಾಗಲೂ ಮತದಾನದ ಸ್ವಾತಂತ್ರ್ಯವು ಕಸಿದುಕೊಂಡಂತೆ ಆಗುವುದು. ಮತದಾರರಲ್ಲಿ ಭಯ ಹುಟ್ಟಿಸಿ ಮತಪಡೆದರೆ ಭಯಕ್ಕಾಗಿ ಮತದಾನ ಮಾಡುವನೇ ಹೊರತು ಅವನು ತನ್ನ ಅಭಿಪ್ರಾಯ ವ್ಯಕ್ತ ಮಾಡಲು ಮತದಾನ ಮಾಡಿದ ಹಾಗಾಗುವುದಿಲ್ಲ. ಆದ್ದರಿಂದ ಅದು ಕಲುಷಿತ ವ್ಯವಹರಣೆಯೆಂದು ಆಗುವುದು.

ಮತ ಇರುವುದು ಒಬ್ಬರ ಹೆಸರಿನಲ್ಲಿ; ಅವನೇ ತಾನೆಂದು ಸಾಧಿಸಿ ಮತದಾನ ಮಾಡಿದರೆ, ಹೀಗೆ ಮಾಡಲು ಹಚ್ಚಿದರೆ, ಅದು ಕಲುಷಿತ ವ್ಯವಹರಣೆಯಾಗುವದು. ಇಲ್ಲಿ ಸ್ವಾತಂತ್ರ್ಯದ ಪ್ರಶ್ನೆ ಹುಟ್ಟುವುದಿಲ್ಲ. ಏಕೆಂದರೆ ಮತದಾನ ಮಾಡುವವನು ಆ ಹೆಸರಿನ ಮತದ ಅಧಿಕಾರಿಯೆ ಅಲ್ಲ. ಯಾರೋ ಅವನು ಮತಹಾಕಿದರೆ, ಆ ಮತದಾರನು ಮತಹಾಕಿದಂತೆ ಆಗಲಿಲ್ಲ. ಅಂದರೆ ಮತವು ಯಾರದು

ಇರುವುದೋ ಅವರೇ ಹಾಕಬೇಕು. ಆವರು ತಮ್ಮ ಮತಹಾಕುವಾಗ ಯಾವ ಹೆದರಿಕೆ ಬೆದರಿಕೆ ಆಸೆ ಆಮಿಷಕ್ಕೆ ಒಳಗಾಗಿರಬಾರದು, ಎಂದು ಸೂಚಿತವಾಯಿತು.

ಮತದಾನದಲ್ಲಿ ಸ್ವಾತಂತ್ರ್ಯವಿರಬೇಕೆಂದು ಒಂದು ಬದಿಯಿಂದ ಹೇಳಿದರೆ, ಮತದಾನವು ಒಂದು ಕರ್ತವ್ಯ ಎಂದು ತಿಳಿಯಬೇಕೆಂದು ಇನ್ನೊಂದು ಬದಿಯಿಂದ ಹೇಳಲಾಗಿದೆ. ಪ್ರಜಾಸತ್ತೆಯಲ್ಲಿ ಮತದಾನವು ಪವಿತ್ರಕೆಲಸ. ಅದನ್ನು ಭಕ್ತಿಯಿಂದ, ವಿಶ್ವಾಸದಿಂದ, ಕರ್ತವ್ಯವೆಂದು ಮಾಡಬೇಕು. ಅಂದರೆ ಮತಹಾಕುವವನು ಮತದಾನ ಕಟ್ಟೆಗೆ ತಾನೇ ಹೋಗಿ—ನಡೆದುಕೊಂಡು ಹೋಗಿ, ಇಲ್ಲವೆ ವಾಹನಮಾಡಿಕೊಂಡು–ತನ್ನ ವೆಚ್ಚದಿಂದ ವಾಹನ ಮಾಡಿಕೊಂಡು ಹೋಗಿ ಮತದಾನ ಮಾಡಬೇಕು. ನಮ್ಮ ದೇಶದಲ್ಲಿ ಇನ್ನೂ ಜನ ಮತದಾನದ ಬಗ್ಗೆ ತಮ್ಮ ಕರ್ತವ್ಯವನ್ನು ತಿಳಿದಿಲ್ಲ. ತಾವು ಮತದಾನ ಮಾಡುವುದು ಉಮೇದುವಾರನ ಮೇಲೆ ಉಪಕಾರ ಮಾಡುತ್ತಿದ್ದೇವೆಂಬ ಭಾವನೆವುಳ್ಳವರಾಗಿದ್ದಾರೆ. ತಮ್ಮ ಸರಕಾರ-ಸ್ಥಾನಿಕ ಅಧಿಕಾರವನ್ನು ಸ್ಥಾಪಿಸುವದರಲ್ಲಿ ತಮ್ಮ ಪಾಲಿಗೆ ಬಂದ ಕರ್ತವ್ಯ ನಿರ್ವಹಿಸಬೇಕೆಂದು ತಿಳಿದಿಲ್ಲ. ಹಾಗೆ ತಿಳಿದು, ಯೋಗ್ಯ ಉಮೇದುವಾರನು ಆರಿಸಿ ಬರುವಂತೆ ನೋಡಿಕೊಳ್ಳುವುದು ಮತದಾರನ ಕರ್ತವ್ಯವಾಗಿದೆ. ಹಾಗೆ ಕರ್ತವ್ಯ ನಡೆಸುವ ಬುದ್ಧಿ ಪ್ರವೃತ್ತಿಯು ಸಾಮಾನ್ಯ ಮತದಾರನಲ್ಲಿ ಎಂದು ಬರುವುದೋ ಅಂದು ಚುನಾವಣೆಗಳು ಪ್ರಜಾಸತ್ತೆಯ ಪ್ರತೀಕವಾಗುವುವು.

ಆದರೆ ಇದು ಕಾಲಾಂತರದಲ್ಲಿ ಸಾಧಿಸುವಂತಹ ವಿಷಯವಾಗಿದೆ. ಬಾಲ್ಯಾವಸ್ಥೆಯಲ್ಲಿದ್ದ ಪ್ರಜಾಸತ್ತೆಯಲ್ಲಿ ಎಲ್ಲ ಮತದಾರರೂ ಕರ್ತವ್ಯ ಬುದ್ಧಿಯುವರಾಗಿರದೆ ತಾವು ಉಮೇದುವಾರರಿಗೆ ಉಪಕಾರ ಮಾಡುತ್ತೇವೆ ಅದಕ್ಕೆ ಉಮೇದವಾರನು ತಮಗೆ ಪ್ರತಿಫಲ ಏಕೆ ಕೊಡಬಾರದು ಎಂಬ ದೃಷ್ಟಿಯುಳ್ಳವರಾಗಿರುವರು. ಈ ಪ್ರವೃತ್ತಿ ಇಲ್ಲವೆ ಮನೋಭೂಮಿಕೆಯ ಲಾಭ ಪಡೆಯಬೇಕೆಂದು ಉಮೇದುವಾರರು ಮತದಾರರಿಗೆ ಇಲ್ಲದ ಆಸೆ–ಆಮಿಷ–ಹಣ–ಸಂಭಾವನೆ ಕೊಡುತ್ತಾರೆ–ಕೊಡುವ ವಚನ ಕೊಡುತ್ತಾರೆ. ಅದರಂತೆ–ಮತದಾನ ಕಟ್ಟೆಗೆ ಹೋಗಿ ಬರಲು ಮತದಾರರಿಗೆ ವಾಹನ ಸೌಕರ್ಯ ಒದಗಿಸಿ ಕೊಡುತ್ತಾರೆ. ಹೀಗೆ ತಮ್ಮ ವಾಹನದಲ್ಲಿ, ತಾವು ಬಾಡಿಗೆ ಕೊಟ್ಟ ವಾಹನದಲ್ಲಿ ಉಮೇದುವಾರರು ಮತದಾರರನ್ನು ಮತದಾನ ಕಟ್ಟೆಗೆ ಕರೆತರುವುದು-ಮರಳಿ ಕಳಿಸುವುದು ಕಲುಷಿತ ವ್ಯವಹರಣೆಯಾಗುವುದು. ಉಮೇದುವಾರ ಇಲ್ಲವೆ ಅವನ ಮನೆಯ ಜನರು ಅವನ ಏಜೆಂಟ ಇವರು ಉಮೇದವಾರನು ಬಾಡಿಗೆಯಿಂದ ಹಿಡಿದ ವಾಹನದಲ್ಲಿ ಬಂದು ಮತದಾನ ಮಾಡಿದರೆ ಅದು ಕಲುಷಿತ ವ್ಯವಹರಣೆಯಲ್ಲ. ಇಲ್ಲಿ ಆಮಿಷದ ಪ್ರಶ್ನೆಯಿಲ್ಲ.

ಮತದಾರನು ಇಲ್ಲವೆ ಮತದಾರರು ವಾಹನದಲ್ಲಿ ಬಂದರೆಂಬುದು ಕಲುಷಿತ ವ್ಯವಹರಣೆಯಲ್ಲ. ಅವರು ಒಬ್ಬರು ಇಲ್ಲವೆ ಹಲವಾರು ಜನರು ಕೂಡಿ ತಮ್ಮ ಸ್ವಂತದ ವೆಚ್ಚದಿಂದ ತಮ್ಮ ಸ್ವಂತದ ಸೌಕರ್ಯಕ್ಕಾಗಿ ವಾಹನವನ್ನು ಮಾಡಿಕೊಂಡು ಬರಬಹುದು. ಆಗ ಅದು ಕಲುಷಿತ ವ್ಯವಹರಣೆ ಅನಿಸಲಾರದು. ಇನ್ನು ಈ ವಾಹನವು ಇಲ್ಲವೆ ನಾವೆಯು ಯಾಂತ್ರಿಕ ಶಕ್ತಿಯಿಂದ ಸಂಚಾಲಿತವಾಗಿರಬಾರದು ಎಂದು ಇಲ್ಲಿ ಹೇಳಲಾಗಿದೆ. ಪಂಚಾಯತದ ಚುನಾವಣೆಯೆಂದರೆ ಗ್ರಾಮಾಂತರಗಳಲ್ಲಿ ನಡೆಯುವಂತಹದು. ಮತದಾನದ ಕಟ್ಟೆಗಳು ಸಮೀಪದಲ್ಲಿಯೆ ಇರುವುವು. ಚಕ್ಕಡಿ-ಬಂಡಿ-ನಾವೆ ಇದರಲ್ಲಿ ಬಂದರೆ ಮತದಾರನ ಸ್ಥಾನಮಾನಕ್ಕೂ ಅವನು ಕ್ರಮಿಸಬೇಕಾದ ಅಂತರಕ್ಕೂ ಸರಿಹೋಗುವುದು. ಯಾಂತ್ರಿಕ ಶಕ್ತಿಯಿಂದ ಸಂಚಾಲಿತವಾದ ವಾಹನವೆಂದರೆ, ಅದು ದೂರ ಚಲಿಸುವ-ಬೇಗ ಚಲಿಸುವ ವಾಹನವೆಂದು ಆಗುವುದು. ಆದ್ದರಿಂದ ಅಂತಹದನ್ನು ಮತದಾರನು ತನ್ನ ಸ್ವಂತ ವೆಚ್ಚದಿಂದ ಬಾಡಿಗೆ ಪಡೆದಿರಲಾರನು ಎಂಬ ಸಂಶಯು ಬರುವುದು. ಆದ್ದರಿಂದ ಆ ನಿರ್ಬಂಧ ಹಾಕಲಾಗಿದೆ. ಯಾಂತ್ರಿಕ ಶಕ್ತಿ ಸಂಚಾಲಿತ ವಾಹನವು ಉಮೇದುವಾರನೇ ಬಾಡಿಗೆ ಹಿಡಿದು ಬೇಗನೇ ಮತದಾರನು ಬರುವಂತೆ, ಬಹು ಜನರು ಬೇಗ ಬರುವಂತೆ ಮಾಡಿದ ಸೌಕರ್ಯ ಸಾಧನೆಯೆಂದು ಅರ್ಥವಾಗುವುದು. ಆದ್ದರಿಂದ ಅದು ಕಲುಷಿತ ವ್ಯವಹರಣೆಯಲ್ಲಿ ಬರುವುದು. ಆದರೆ ಇಂತಹ ಯಾಂತ್ರಿಕ ಶಕ್ತಿ ಸಂಚಾಲಿತ ವಾಹನವು ಸಾರ್ವಜನಿಕ ವಾಹನವಾಗಿದ್ದರೆ, ಟ್ರಾಮು-ರೇಲವೆ ಆಗಿದ್ದರೆ, ಅದು ಕಲಷಿತ ವ್ಯವಹರಣೆಗಾಗಿ ತಂದ ವಾಹನವಾಗುವುದಿಲ್ಲ. ಏಕೆಂದರೆ ಅದರ ಸಂಚಾಲನವು ಉಮೇದುವಾರನ ನಿಯಂತ್ರಣಕ್ಕೆ ಒಳಗಾಗಿರುವುದಿಲ್ಲ. ಅದು ಸಾರ್ವಜನಿಕ ವಾಹನವಾಗಿರುತ್ತದೆ. ಅದರ ನಿಯಂತ್ರಣವು ಬೇರೆ ಅಧಿಕಾರಿಗಳ ಕೈಯಲ್ಲಿ ಇರುತ್ತದೆ. ಅಂದರೆ ವಾಹನವು ಉಮೇದವಾರನ ನಿಯಂತ್ರಣದಲ್ಲಿರಬಾರದೆಂದು ಇದರಿಂದ ಸೂಚನೆ ಹೊರಡುತ್ತದೆ. ಬೇರೆಯವರ ನಿಯಂತ್ರಣದಲ್ಲಿರುವ ಯಾಂತ್ರಿಕಶಕ್ತಿ ಸಂಚಾಲಿತ ವಾಹನವನ್ನು ಮತದಾರರು ಉಪಯೋಗಿಸಿದರೆ ಅದು ಉಮೇಧವಾರನ ಪರವಾಗಿ ನಡೆದ ಕಲುಷಿತ ವ್ಯವಹರಣೆಯೆಂದು ಆಗದು.

ಕಲುಷಿತ ವ್ಯವಹರಣೆಯು ಉಮೇದವಾರನ ಪರವಾಗಿ ಆಗಿರಬೇಕು. ಅಂದರೆ ಆ ವ್ಯವಹರಣೆಯು ಅವನ ತಿಳಿವಳಿಕೆಯಲ್ಲಿದ್ದರೆ, ಇಲ್ಲವೆ ಅದಕ್ಕೆ ಅವನು ಸಮ್ಮತಿಸಿದ್ದರೆ, ಇಲ್ಲವೆ ಅವನ ಪರವಾಗಿ ದುಡಿಯುವ ಬೇರೆ ಯಾವುದೇ ವ್ಯಕ್ತಿಗೆ ಗೊತ್ತಿದ್ದರೆ-ಸಮ್ಮತಿಸಿದ್ದರೆ-ಅದು ಉಮೇದವಾರನೇ ಮಾಡಿದ ಹಾಗೆ. ಏಕೆಂದರೆ ಲಾಭವಾಗುವುದು ಉಮೇದವಾರನಿಗೆ. ಅವನಿಗೆ ಲಾಭವಾಗಬೇಕೆಂದು ಬಯಸುವವರು

ಅವನಲ್ಲಿ ಆಸ್ಥೆ ಇದ್ದವರು,ಅವನ ಏಜೆಂಟರು. ಏಜೆಂಟರು ಮಾಡಿದುದು ಮಾಲಕನು ಮಾಡಿದಂತೆ. ಆದ್ದರಿಂದ ಉಮೇದುವಾರನ ತಿಳಿವಳಿಕೆಗೆ ಬಂದ, ಅವನು ಸಮ್ಮತಿಸಿದ ಹಾಗೂ ಅವನ ಏಜೆಂಟನು ನಡೆಸಿದ ಎಲ್ಲ ವ್ಯವಹರಣೆಗಳು ಕಲುಷಿತವೆಂಬ ಸದರಿನಲ್ಲಿ ಬಂದರೆ, ಅವು ಉಮೇದವಾರನೇ ಮಾಡಿದ ಕಲುಷಿತ ವ್ಯವಹರಣೆಯೆಂದು ಗಣಿಸಲ್ಪಡಲಾಗುವುದು. ಏಜೆಂಟನಿಗೆ ಸಾಮಾನ್ಯ ಅಧಿಕಾರ ಇಲ್ಲವೆ ನಿರ್ದಿಷ್ಟ ಅಧಿಕಾರ ಇದ್ದರೆ ಆಯಿತು. ಎಂದರೆ ವ್ಯವಹರಣೆಗೂ, ಉಮೇದವಾರನಿಗೂ ಸಂಬಂಧ ಬರುವಂತೆ ಇರಬೇಕು. ಇವನಿಗೆ ಯಾವ ರೀತಿಯ ಸಂಬಂಧ ಇರದೆ ಆದ ವ್ಯವಹರಣೆಯು ಕಲುಷಿತ ವ್ಯವಹರಣೆಯ ವ್ಯಾಖ್ಯೆಯಲ್ಲಿ ಬಂದರೂ ಅದರಿಂದ ಉಮೇದುವಾರನ ಜವಾಬುದಾರಿಯಿಲ್ಲ ಎಂದು ಇಲ್ಲಿ ಸೂಚಿಸಿದ ಸಂಗತಿ. ಸಂಬಂಧ ಬಂದರೆ ಯಾರೇ ಮಾಡಿದ್ದರೂ ಅದು ಉಮೇದುವಾರನೇ ಮಾಡಿಸಿದ್ದಾನೆ-ಮಾಡಿದ್ದಾನೆ ಎಂಬ ಅರ್ಥ ಹೊರಡುವುದು.

"ವೈಯಿಕ್ತಿಕ ಲಾಭದ ಆಮಿಷ" ಎಂಬ ಪದಪ್ರಯೋಗ ಮಾಡಲಾಗಿದೆ. ಮುಂದೆ ಪಂಚಾಯತವು ರಚಿತವಾದ ಮೇಲೆ ಅಲ್ಲಿಯ ಸಭೆಯ ಮುಂದೆ ಬಂದ ಯಾವುದೇ ಯೋಜನೆಗೆ ಅನುಕೂಲ-ಪ್ರತಿಕೂಲ ಮತಕೊಡುವೆಂದು ವಚನ ಕೊಟ್ಟರೆ, ಅದು ವೈಯಿಕ್ತಿಕ ಲಾಭದ ಆಮಿಷವೆಂದು ಆಗಲಾರದು. ಏಕೆಂದರೆ, ಅದು ಒಂದು ಯೋಜನೆಗೆ ಸಂಬಂಧಪಟ್ಟದ್ದು. ಮತ್ತು ಅದು ಚುನಾವಣೆ ನಡೆವ ಕಾಲಕ್ಕೆ ತೋರಿದ ಆಸೆ-ಆಮಿಷ ಎಂದೂ ಆಗಲಾರದು. ಅಲ್ಲದೆ ಅದರಲ್ಲಿ ವೈಯುಕ್ತಿಕ ಲಾಭದ ವಿಷಯ ಇರದೆ ಯೋಜನೆ ಎಂದ ಮೇಲೆ ಸಾರ್ವಜನಿಕ ಹಿತಸಂಬಂಧ ಇರುವುದು. ಆದರೆ ಆ ಯೋಜನೆಯಲ್ಲಿ ಮತದಾರನ ಇಲ್ಲವೆ ಅವನಿಗೆ ಯಾರಲ್ಲಿ ಹಿತಾಸಕ್ತಿ ಇದೆಯೋ ಅವರ ಲಾಭವಿದ್ದರೆ, ಆಗ ಮಾತ್ರ ಅದು ಯೋಜನೆಯ ಸಾರ್ವಜನಿಕ ರೂಪ ಕಳೆದುಕೊಂಡು ವೈಯುಕ್ತಿಕ ಲಾಭವಾಗುವುದು. ಅಂತಹ ಲಾಭದ ವಚನವು ವೈಯುಕ್ತಿಕ ಲಾಭದ ಆಮಿಷದ ವಚನವೆಂಬ ಶಬ್ದದ ಅರ್ಥದಲ್ಲಿ ಬರುವುದು.

ವಾಹನ, ಎಂಬುದರ ವ್ಯಾಖ್ಯೆಯು ಈ ಕಾಯಿದೆಯ ೨ ನೆಯ ಕಲಮಿನ ಉಪಕಲಮು (೩೨) ರಲ್ಲಿ ಹೇಳಲಾಗಿದೆ. ಕಲುಷಿತ ವ್ಯವಹರಣೆಯ ಸಂಬಂಧವಾಗಿ ಈ ಕಲಮಿನಲ್ಲಿ ಬಳಸಲಾದ 'ವಾಹನ' ಶಬ್ದದ ವಿವರಣೆ ಕೊಡುವುದು ಅಗತ್ಯವೆನ್ನಿಸಿದೆ. ಇದು ಮೂಲ ವ್ಯಾಖ್ಯೆಗೆ ಪೋಷಕವಾಗಿದೆ. ರಸ್ತೆಯ ಮೇಲೆ ಸಾರಿಗೆ ಮಾಡಲು ಸಮರ್ಥವಾಗಿರುವಂತಹದು ವಾಹನ ಎಂದು ಆಗುವುದು. ವ್ಯಾಖ್ಯೆಯಲ್ಲಿ ಯಾಂತ್ರಿಕ ಶಕ್ತಿಯಿಂದ ಸಂಚಾಲಿತವಾಗಿರಬಹುದೊ ಇಲ್ಲವೊ ಎಂಬುದರ ಬಗ್ಗೆ ಹೇಳಿಲ್ಲ. ಆದರೆ ಈ ಕಲಮಿನ

ಉಪಕಲಮು (೮) ರ ವಾಕ್ಯಾವಳಿ (ಕ) ದಲ್ಲಿಯ ಮೊದಲನೆಯ ಅಪವಾದ ದಲ್ಲಿ ಆ ಪದಪ್ರಯೋಗ ಮಾಡಲಾಗಿದೆ. ಅದಕ್ಕೆ ಇಲ್ಲಿ ವಿವರಣೆ ಕೊಡ ಲಾಗಿದೆ. •ವಿವವರಣೆಯು ಆ ಅಪವಾದದಲ್ಲಿ ಬಂದ ಅರ್ಥಕ್ಕೆ ವ್ಯತ್ಯಯ ಬರದಂತೆ ತಿಳಿಯಲ್ಪಡಬೇಕು. ಆದ್ದರಿಂದ ವಾಹನವೆಂದರೆ, ಅದು ರಸ್ತೆಯಮೇಲೆ ಸಾರಿಗೆಗಾಗಿ ಉಪಯೋಗವಾಗಲು ಯೋಗ್ಯವಾಗಿರಬೇಕು-ಸಮರ್ಥವಾಗಿರಬೇಕು. ಅದು ಯಂತ್ರ ಶಕ್ತಿ ಸಂಚಾಲಿತವೂ ಆಗಿರಬಹುದು ಇಲ್ಲವೆ ಹಾಗೆ ಆಗಿರದೆ ಇರಬಹುದು. ಅದನ್ನು ಬೇರೆ ವಾಹನಗಳನ್ನು ಎಳೆಯುವದಕ್ಕೆ ಬಳಸುವಂತಹದು ಇರಬಹುದು ಇಲ್ಲವೆ ಇರದೆ ಇರಬಹುದು. ಯಂತ್ರಶಕ್ತಿ ಸಂಚಾಲಿತವಾಗಿದ್ದರೆ— ಅದು ಮೇಲೆ ಹೇಳಿದ ಅಪವಾದದಲ್ಲಿ ಬಂದು ನಿರ್ಬಂಧ ತೋರಿತ್ತು. ಆದರೆ ಈ ವಿವರಣೆಯಿಂದ ಒಂದು ಬಗೆಯ ಸವಲತ್ತು ತೋರಿದಂತಾಗಿದೆ. ಅಲ್ಲಿ ಅಪವಾದ ದಲ್ಲಿ ಹಾಕಿದ ನಿರ್ಬಂಧದಿಂದ ಯಂತ್ರಶಕ್ತಿ ಸಂಚಾಲಿತ ವಾಹನವು ಎಂದರೆ ವೇಗದ ಸೌಕರ್ಯ ಎಂಬ ಅರ್ಥ ತೋರುವದೆಂದು ಕಂಡುಬರುತ್ತದೆ. ಇಲ್ಲಿ ವಿವರಣೆಯಲ್ಲಿ ಯಂತ್ರಶಕ್ತಿಯು ಎಳೆಯುವ ಸಾಮರ್ಥ್ಯದ ಬಗ್ಗೆ ಎಂದು ಅರ್ಥ ಸೂಚಿಸುವಂತಿದೆ. ಅಂದರೆ ಟ್ರಾಕ್ಟರು ಮುಂತಾದವು. ಇವು ಜನರನ್ನು ಸಾಗಿಸುವ ವಾಹನಗಳಲ್ಲ. ಆದರೂ ಯಂತ್ರಶಕ್ತಿ ಸಂಚಾಲಿತ. ಆದ್ದರಿಂದ ಈ ವಿವರಣೆ ಹಾಗೂ ಆ ಅಪವಾದ ಇವುಗಳನ್ನು ಜೋಡಿಸಿ ಅರ್ಥಮಾಡಬೇಕು.

ಚುನಾವಣೆಯಲ್ಲಿ ಉಮೇದವಾರರ ಕಡೆಯಿಂದ ತಪ್ಪುಗಳು ಆಗುವ ಸಂಭವ ಇದ್ದಂತೆ ಚುನಾವಣೆ ನಡಿಸುವ ಅಧಿಕಾರಿಗಳ ಕಡೆಯಿಂದನೂ ತಪ್ಪು ಆಗುವುದುಂಟು. ಆ ತಪ್ಪುಗಳು ಚುನಾವಣೆಯ ಫಲಿತಾಂಶದ ಮೇಲೆ ಯಾವ ಪರಿಣಾಮವನ್ನುಂಟು ಮಾಡುವುವು? ಇಲ್ಲಿ ಉಂಟಾದ ತಪ್ಪುಗಳು ಚುನಾವಣೆಯ್ನು ನಡಸುವ ಅಧಿಕಾರಿ ಯಿಂದ ಆಗಿರಬೇಕು. ಮತ್ತು ಈ ತಪ್ಪುಗಳು ಇಲ್ಲವೆ ಅಕ್ರಮಗಳು ಇಲ್ಲವೆ ವಿಧಾನ ರಾಹಿತ್ಯವು ಆ ಅಧಿಕಾರಿಯಿಂದ ನಡೆದು ಅವು ಕಲುಷಿತ ವ್ಯವಹರಣೆಗಳ ಮೂಲಕ ವಾಗಿ ಕಾರಣವಾಗಿರಬಾರದು. ಅಂದರೆ ಅಂತಹ ತಪ್ಪುಗಳು ಇರುವುವೆಂದ ಕಾರಣ ದಿಂದ ಚುನಾವಣೆಯು ಅಲ್ಲಗಳೆಯಲ್ಪಡಬಾರದು. ಬುದ್ಧಿಪೂರ್ವಕವಾಗಿ ಇಲ್ಲವೆ ದುಷ್ಟಬುದ್ಧಿಯಿಂದ ಮಾಡಿದುವಲ್ಲವೆಂದು ಕಂಡುಬಂದ ಮೇಲೆ ಆ ತಪ್ಪುಗಳು ಸಾಧುವೃತ್ತಿಯಿಂದ ಆಗಿರುವುವೆಂದಹಾಗಾಯಿತು. ಮಾನವಯೋಗ್ಯವಾದ ತಪ್ಪು ಗಳು ಎಂದ ಹಾಗಾಯಿತು. ಆ ಕಾರಣದಿಂದ ಮುನಸೀಫರು ಅಂತಹ ಚುನಾ ವಣೆಯನ್ನು ಅಲ್ಲಗಳೆಯಬಾರದು. ಆದರೆ 'ತಪ್ಪು' ಎಂದರೇನು ಎಂಬ ಬಗ್ಗೆ ವಿವರಣೆಯಲ್ಲಿ ಹೇಳಲಾಗಿದೆ. ಕಾಯಿದೆಯ ಪ್ರಕಾರ ಹೇಳಲಾದ ಮತ್ತು ನಿರ್ದಿಷ್ಟ ಪಡಿಸಿದ ಮತ್ತು ಅಗತ್ಯವಾಗಿ ಅನುಸರಿಸಲೇಬೇಕಾದಂತಹ ವಿಷಯಗಳಲ್ಲಿ ಕ್ರಮ ದಲ್ಲಿ ಆದಂತಹ ತಪ್ಪು ಎಂದು ಅರ್ಥ ಮಾಡಬಾರದು. ಅಂತಹ ತಪ್ಪು ಆಗಿದ್ದರೆ

ಅದು ಬೇಕಾಯಿದೇಶೀರ ವ್ಯವಹರಣೆಯೇ ಆಗಿಬಿಡುವುದು. ಕಾಯಿದೆಯ ಕಕ್ಷೆ ಗಳ ಉಲ್ಲಂಘನೆ ಆಗಿಬಿಡುವುದು. ಕಾಯಿದೆಯ ಪ್ರಕಾರ ನಡೆಯಬೇಕಾದುದು ಕಾಯಿದೆಯನ್ನು ಅಲಕ್ಷಿಸಿ ಇಲ್ಲವೆ ದುರ್ಲಕ್ಷಿಸಿ ನಡೆಸಲ್ಪಟ್ಟರೆ, ಅದು ಕಾಯಿದೆ ಬದ್ಧವಾಗಿದೆಯೆಂದು ಹೇಗೆ ಹೇಳಲಿಕ್ಕೆ ಬಂದೀತು. ಈ ಮಾದರಿಯ ತಪ್ಪು ಆಗಿದ್ದರೆ ಅದು ಕ್ಷಮ್ಯವಲ್ಲ. ಏಕಂದರೆ, ಇಂತಹ ತಪ್ಪುಗಳಿಂದ ಚುನಾವಣೆಯ ಫಲಿತಾಂಶವೇ ಸತ್ವತಃ ಬಾಧಿಸಲ್ಪಟ್ಟಿರುವುದು.

ತಪ್ಪು ಅಂದರೆ ಕಾಯಿದೆ ಉಲ್ಲಂಘನೆ ಆಗಿರದೆ ಇದ್ದ ತಪ್ಪು. ಚುನಾವಣೆಯ ಫಲಿತಾಂಶಕ್ಕೆ ಬಾಧೆ ಬರದೆ ಇದ್ದ ತಪ್ಪು. ಹೀಗಿದ್ದಲ್ಲಿ ಅಧಿಕಾರಿಯಿಂದ ದುಷ್ಟ ಹೇತುವಿನಿಂದ ಆಗಿರದೆ ಇದ್ದಂತಹ ತಪ್ಪು. ಅದು ಸದ್‌ಹೇತುವಿನಿಂದ ಕೈತಪ್ಪಿ ನಿಂದ ಆಗಿದ್ದರೆ ಮಾತ್ರ ಕ್ಷಮ್ಯವಾಗಿರುವುದು. ಚುನಾವಣೆ ನಡೆಸುವವರು ಕಾಯಿದೇ ಪ್ರಕಾರ ನಡೆಸಬೇಕು. ಉಮೇದವಾರರು ಯಾವರೀತಿಯ ಕಲುಷಿತ ವ್ಯವಹರಣೆ ನಡೆಸಬಾರದು. ಅಂದರೆ ಮಾತ್ರ ಚುನಾವಣೆಯ ಫಲಿತಾಂಶವು ಕಾಯಿದೇಬದ್ಧವಾಗುವುದು ಎಂದು ಇಲ್ಲಿ ಹೇಳಲಾಗಿದೆ.

ಹೀಗೆ ಮೇಲೆ ವಿವರಿಸಲಾದ ೩ ನೆಯ ಉಪಕಲಮಿನ ವಾಕ್ಯಾವಳಿ (ಎ) ದಲ್ಲಿಯ ವ್ಯಾಕ್ಯ (ಬ) ದಲ್ಲಿ ಹೇಳಿದಂತೆ-ಮುನಸೀಫನು ಚುನಾವಣೆಯನ್ನು ಅಲ್ಲ ಗಳೆವ ಹುಕುಮು ಮಾಡಿದರೆ, ಯಾವ ವ್ಯಕ್ತಿಯು ಕಲುಷಿತ ವ್ಯವಹರಣೆ ಮಾಡಿ ರುವನೆಂಬ ಕಾರಣಕ್ಕಾಗಿ ಚುನಾವಣೆಯು ಅಲ್ಲಗಳೆಯಲ್ಪಟ್ಟಿರುವುದೋ ಅಂತಹ ವ್ಯಕ್ತಿಯನ್ನು-ಮುನಸೀಫರಿಗೆ ಯೋಗ್ಯವೆನಿಸಿದರೆ-ಮುಂದಿನ ಐದು ವರುಷಗಳ ಕಿಂತ ಹೆಚ್ಚಾಗದ ನಿರ್ದಿಷ್ಟ ಕಾಲಾವಧಿಯ ವರೆಗೆ ಚುನಾವಣೆಗಾಗಿ ಅನರ್ಹತೆ ಯನ್ನು ಪಡೆದವನೆಂದು ಸಾರಬಹುದು. ಈ ಸಂದರ್ಭದಲ್ಲಿ ಮುನಸೀಫರಿಗೆ ನಿರ್ಣಯಾಧಿಕಾರದ ಸ್ವಾತಂತ್ರ್ಯ ಕೊಡಲಾಗಿದೆ. ಈ ಸ್ವಾತಂತ್ರ್ಯ ಹಾಗೂ ನಿರ್ಣಯಾಧಿಕಾರವು ಸ್ವಚ್ಛಂದವಾಗಿಲ್ಲ. ಮುನಸೀಫರು ತಮಗೆ ಯೋಗ್ಯವೆಂದು ಅನ್ನಿಸುವ ನಿರ್ಣಯಕ್ಕೆ ಬರುವ ಮೊದಲು ಸಂಬಂಧಪಟ್ಟ ಚುನಾಯಿತ ವ್ಯಕ್ತಿಗೆ ತನ್ನ ವಾದ-ಇಲ್ಲವೆ ಪಕ್ಷ ಸಮರ್ಥನೆ ಮಾಡಿಕೊಳ್ಳುವ ಅವಕಾಶ ಕೊಡಬೇಕು. ಮತ್ತು ಇಂತಹ ಸಾರುವಿಕೆಯು ಚುನಾಯಿತನಾದ ಹಾಗೂ ಕಲುಷಿತ ವ್ಯವಹರ ಣೆಯ ಬಗ್ಗೆ ಚುನಾವಣೆ ಅಲ್ಲಗಳೆಯಲ್ಪಟ್ಟ ವ್ಯಕ್ತಿಗೆ ಮಾತ್ರ ಸಂಬಂಧಪಟ್ಟಿರ ಬೇಕು. ಅಂದರೆ ಕಲುಷಿತ ವ್ಯವಹರಣೆ ಮಾಡಿದ್ದ ಮತ್ತು ಚುನಾವಣೆಯಲ್ಲಿ ಸೋತಿದ್ದ ವ್ಯಕ್ತಿಯ ಬಗ್ಗೆ ಈ ಬಗೆಯ ಅನರ್ಹತೆಯ ನಿರ್ಣಯ ಕೊಡಬಾರದು ಎಂದು ಸ್ಪಷ್ಟವಾಗಿರುವುದನ್ನು ಗಮನಿಸಬೇಕು. ಸೋತವನ ಬಗ್ಗೆ ಮತದಾ ರರೇ ಅಭಿಪ್ರಾಯ ಕೊಟ್ಟಿರುವರು. ಗೆದ್ದವನ ಬಗ್ಗೆ ಮತದಾರರು ಸ್ವತಂತ್ರ

ಹಾಗೂ ನಿರಾತಂಕ ಅಭಿಪ್ರಾಯ ಕೊಟ್ಟಿರಲು ಸಾಧ್ಯವಿಲ್ಲವಾದ ಕಾರಣ, ಹಾಗೂ ಅಂತಹ ರೀತಿಯಲ್ಲಿ ಚುನಾಯಿತನಾದ ವ್ಯಕ್ತಿಯು ಅಸಾಮಾಜಿಕ ಪ್ರವೃತ್ತಿಯುವ ನೆಂದು ತೋರಿಸಲೂ ಹಾಗೂ ಅವನಿಗೆ ಅವನು ಮಾಡಿದ ಕಲುಷಿತ-ವ್ಯವಹರಣೆಗಾಗಿ ಶಿಕ್ಷೆಯಾಗಿಯೂ ಪರಿಣಮಿಸಬೇಕೆಂದು ಐದು ವರುಷದ ಅವಧಿಯು ಮೀರದಷ್ಟು ಅವಧಿಯ ವರೆಗೆ ಚುನಾವಣೆಗಾಗಿ ಅನರ್ಹತೆಯುಳ್ಳವನಾಗಿದ್ದಾನೆಂದು ಮುನಸೀಫರು ಸಾರಬಹುದು.

ಇಂತಹ ರೀತಿಯಲ್ಲಿ ಶಿಕ್ಷಿತನಾದ ವ್ಯಕ್ತಿಗೂ ಒಂದು ಪರಿಹಾರ ಉಂಟು. ಅದನ್ನು ಸರಕಾರವೇ ಒದಗಿಸಲು ಸಾಧ್ಯವಿದೆ. ಸರಕಾರದವರು ಹುಕುಮ ಹೊರಡಿಸಿ ಅವನನ್ನು ಅನರ್ಹತೆಯಿಂದ ಮುಕ್ತ ಮಾಡಬಹುದು. ಅಂದರೆ ಮುನಸೀಫರ ಹುಕುಮಿನ ಮೇಲೆ ಸರಕಾರಕ್ಕೆ ನಿವೇದನೆ ಮಾಡಿಕೊಳ್ಳಲು ಅವಕಾಶವಿದೆಯೆಂದು ಸೂಚಿಸಿದಂತಾಯಿತು. ಆದರೆ ಇದು ಕ್ರಮ ಪ್ರಾಪ್ತ ಅಪೀಲು ಮಾಡಿಕೊಳ್ಳುವ ಅಧಿಕಾರವಲ್ಲವೆಂಬುದನ್ನು ಉಪಕಲಮು (೨) ರಲ್ಲಿ ನಿರ್ದಿಷ್ಟಪಡಿಸಲಾಗಿದೆ. ಅಂದರೆ ಈ ಕಲಮಿನ ಪ್ರಕಾರ ಮುನಸೀಫರು ಮಾಡಿದ ಹುಕುಮು ಕೊನೆಯದೂ ನಿರ್ಣಾಯಕವೂ ಆಗಿರುವುದು ಎಂದು ಸ್ಪಷ್ಟವಾಗಿ ಹೇಳಲಾಗಿದೆ.

ಅಂದರೆ ಸರಕಾರವು ಉಪಕಲಮು (೬) ರ ಎರಡನೆಯ ಅಪವಾದದಲ್ಲಿ ಹೇಳಿದಂತೆ ಅನರ್ಹತೆಯಿಂದ ಯಾರನ್ನಾದರೂ ಮುಕ್ತಮಾಡಬೇಕೆಂದು ಬಯಸಿದರೆ ಮಾಡಬಹುದು ಎಂಬ ಅವಕಾಶವು ಸರಕಾರಕ್ಕೆ ಇದೆಯೆಂದು ಹೇಳಿದಂತೆ ಎಂದು ತಿಳಿಯಬೇಕು.

## ೧೪. ಒಂದು ಸದಸ್ಯ ಸ್ಥಳವು ತೆರವಾದರೆ ಹೊಸ ಚುನಾವಣೆ ಇಲ್ಲವೆ ನೇಮಕ

ಕಲಮು ೧೧ ರ ಉಪಕಲಮು (೨) ರನ್ವಯವಾಗಿ ಯಾವುದೇ ಸದಸ್ಯನ ಸ್ಥಳವು ತೆರವಾಗಿದೆಯೆಂದು ಡೆಪ್ಯೂಟಿ ಕಮಿಶನರು ಸಾರಿದರೆ ಹಾಗೆ ಉಂಟಾಗಿ ತೆರವಾದ ಸ್ಥಳಕ್ಕಾಗಿ ಹೊಸ ಚುನಾವಣೆ ಇಲ್ಲವೆ ನೇಮಕವು ಈ ಕಾಯಿದೆಯ ಕಕ್ಷೆಗಳಿಗನುಸಾರವಾಗಿ ನಡೆಸಲ್ಪಡತಕ್ಕದ್ದು ಇಲ್ಲವೆ ಮಾಡಲ್ಪಡತಕ್ಕದ್ದು.

### ವಿವೇಚನೆ

ಕಲಮು ೧೧ ಸದಸ್ಯನಲ್ಲಿಯ ಅನರ್ಹತೆಯ ಬಗ್ಗೆ ಇದೆ. ಸದಸ್ಯನು ಚುನಾಯಿತನಾಗಿ ಕಲಮು ೧೧ ರ ಉಪಕಲಮು (೨) ರನ್ವಯವಾಗಿ ಗೈರವರ್ತನ

ಮಾಡಿದ್ದಾದರೆ ಅವನ ಸ್ಥಳವು ಖಾಲಿಯಾಗುವುದು. ಅಂದರೆ ಅವನು ಸದಸ್ಯತ್ವಕ್ಕೆ ಅನರ್ಹತೆ ಪಡೆದು ಎರವಾಗುವನು. ಹಾಗೆ ಸ್ಥಳವು ಖಾಲಿಯಾದರೆ ಅದಕ್ಕಾಗಿ ಮುಂದೆ ಹೊಸ ಚುನಾವಣೆ ನಡೆಸಲ್ಪಡಬೇಕು. ಇಲ್ಲವೆ ಅದಕ್ಕೆ ಒಬ್ಬರನ್ನು ನೇಮಕಮಾಡಿ ಭರತಿಮಾಡಬೇಕು. ಇಲ್ಲವಾದರೆ, ರಚಿತವಾದ ಪಂಚಾಯತವು ಪೂರ್ತಿ ಸದಸ್ಯರನ್ನುಳ್ಳ ಸಂಸ್ಥೆಯಾಗದು. ಅದರ ಸದಸ್ಯರ ಸಂಖ್ಯೆ ಇಂತಿಷ್ಟೆಂದು ಸ್ಥಾಪನೆಯ ಕಾಲಕ್ಕೆ ನಿರ್ದಿಷ್ಟಪಡಿಸಲ್ಪಟ್ಟ ನಂತರ ಸಂಖ್ಯೆಯಲ್ಲಿ ಯಾವುದೇ ಕಾರಣದಿಂದ ಕಡಿಮೆಯಾದರೆ ಅವು ಭರತಿಮಾಡಲ್ಪಡಬೇಕು. ಭರತಿಮಾಡಲು ಎರಡು ದಾರಿ. ಚುನಾವಣೆಯು ನಡೆಸಲ್ಪಡಬೇಕು ಇಲ್ಲವೆ ನೇಮಕ ಮಾಡಲ್ಪಡಬೇಕು. ಇವೆರಡೂ ನಡೆವ ಮೊದಲು ಆ ಸ್ಥಳವು ತೆರವಾಗಿದೆಯೆಂದು ಡೆಪ್ಯೂಟಿ ಕಮಿಶನರು ಸಾರಬೇಕು. ಸಾರುವ ಕಾರ್ಯವೂ ಹೊಸ ಚುನಾವಣೆ ನಡೆಸುವ ಕಾರ್ಯವೂ ಇಲ್ಲವೆ ನೇಮಕ ಮಾಡಿ ಭರತಿ ಮಾಡುವ ಕೆಲಸವೂ ಎಲ್ಲವೂ ಡೆಪ್ಯೂಟಿ ಕಮಿಶನರದು. ಈ ಸಂಬಂಧವಾಗಿ ಕಲಮು ೫, ೧೧, ೧೩ ಇವುಗಳನ್ನು ನೋಡಿದಾಗ ಈ ೧೪ ನೆಯ ಕಲಮಿನಲ್ಲಿಯ ಅಧಿಕಾರದ ಪ್ರಸಂಗದ ಅರ್ಥವಾಗುವುದು.

## ೧೫. ಮತದಾನ ಕಟ್ಟೆಯಲ್ಲಿ ಇಲ್ಲವೆ ಹತ್ತಿರ ಮತಯಾಚನೆಗೆ ನಿರ್ಬಂಧ

(೧) ಯಾವುದೇ ಮತದಾನ ಕಟ್ಟೆಯಲ್ಲಿ ಯಾವ ತಾರೀಖು ಇಲ್ಲವೆ ತಾರೀಖುಗಳ ದಿನ ಮತದಾನ ನಡೆಯುವುದೋ ಅಂದು ಕೆಳಗೆ ಕಾಣಿಸಿದ ಕಾರ್ಯಗಳನ್ನು ಮತದಾನ ಕಟ್ಟೆಯಲ್ಲಿ ಇಲ್ಲವೆ ಮತದಾನ ಕಟ್ಟೆಯಿಂದ ಒಂದು ನೂರು ಯಾರ್ಡ ಅಂತರದೊಳಗೆ ಯಾವುದೇ ಸಾರ್ವಜನಿಕ ಇಲ್ಲವೆ ಖಾಸಗಿ ಸ್ಥಳದಲ್ಲಿ ಯಾವ ವ್ಯಕ್ತಿಯೂ ಮಾಡತಕ್ಕದ್ದಲ್ಲ; ಅವು ಯಾವುವೆಂದರೆ—

(ಅ) ಮತಗಳಿಗಾಗಿ ಮತ ಯಾಚನೆ ಮಾಡುವುದು; ಇಲ್ಲವೆ

(ಬ) ಯಾವುದೇ ಮತದಾರನಿಂದ ಮತ ಯಾಚನೆ ಮಾಡುವುದು; ಇಲ್ಲವೆ

(ಕ) ಚುನಾವಣೆಯಲ್ಲಿ ಯಾವುದೇ ಮತದಾರನು ಮತದಾನ ಮಾಡಬಾರದೆಂದು ಮನ ಒಲಿಸುವುದು; ಇಲ್ಲವೆ.

(ಡ) ಚುನಾವಣೆಗೆ ಸಂಬಂಧವಾಗಿ ಅಧಿಕೃತ ನೋಟೀಸು ಅಲ್ಲದ ಬೇರೆ ಯಾವ ನೋಟೀಸು ಇಲ್ಲವೆ ಬರೆದ ಹಲಗೆ ಪ್ರದರ್ಶಿಸುವುದು.

(೨) ಉಪಕಲಮು (೧) ರ ಕಕ್ಷೆಗಳ ವಿರುದ್ಧವಾಗಿ ಯಾವುದೇ ವ್ಯಕ್ತಿಯು ವರ್ತಿಸಿದರೆ, ಅವನ ಅಪರಾಧವು ಸಾಬೀತಾದರೆ, ಎರಡು ನೂರಾ ಐವತ್ತು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಶಿಕ್ಷಿಸಲ್ಪಡುತ್ತಾನೆ.

(೩) ಈ ಕಲಮಿನನ್ವಯವಾಗಿರುವ ಶಿಕ್ಷಾರ್ಹವಾದ ಅಪರಾಧವು ವಾರಂಟು ಪತ್ರವಿಲ್ಲದೆ ಬಂಧನಯೋಗ್ಯವಾದ (cognizable) ಅಪರಾಧವು.

**ವಿವೇಚನೆ**

ಮತದಾನವು ಮತದಾರನ ಸ್ವತಂತ್ರ ಹಾಗೂ ನಿರಾತಂಕ ಅಭಿಪ್ರಾಯವಾಗಿರಬೇಕಾದುದು ಅಗತ್ಯವೆಂದು ನಿರ್ಧರಿಸಲಾದ ಮೇಲೆ ಆ ಬಗ್ಗೆ ಜಾಗರೂಕತೆ ವಹಿಸುವುದು ಸರಕಾರದ ಕರ್ತವ್ಯವಾಗುವುದು. ಗುಪ್ತ ಮತದಾನದ ಪದ್ಧತಿಯನ್ನು ಅನುಸರಿಸುವ ಕಾರಣವು ಯಾರು ಯಾರಿಗೆ ಮತ ಹಾಕಿದರು ಎಂಬುದು ತಿಳಿಯು ಬಾರದು ಎಂದು ಇದೆ. ಅದರಂತೆ ಮತದಾನ ಮಾಡುವವನ ಮನಸ್ಸು ಮುಕ್ತವಾಗಿರಬೇಕು. ಮತದಾನಕಟ್ಟೆಗೆ ಹೋಗುವಾದ ಅವನಿಗೆ ಯಾವ ಆತಂಕವೂ ಪ್ರಭಾವವೂ ಆಗಿಶಬಾರದೆಂದು ಮತದಾನ ಕಟ್ಟೆಯ ಸುತ್ತು ಒಂದು ನೂರು ಯಾರ್ಡುಗಳಲ್ಲಿ ಯಾವ ಉಮೇದುವಾರನು ಮತಯಾಚನೆ ಮಾಡಬಾರದು. ಮತಹಾಕಲು ಹಾಕದಿರಲು ಯಾರನ್ನೂ ಮನವೊಲಿಸಬಾರದು. ಮತ್ತು ತನ್ನ ಗುರುತು ತೋರಿಸುವ-ಪ್ರಚಾರ ಸಾಧನೆಯ ನೋಟೀಸು ಮುಂತಾದ ಯಾವುದನ್ನು ಅಲ್ಲಿ ಅಂಟಿಸಬಾರದು. ಮತದಾರನು ಮತದಾನ ಕಟ್ಟೆಯ ಆವಾರದಿಂದ ನೂರು ಯಾರ್ಡು ಒಳಗೆ ಬಂದಾಗ ಅವನು ಸಂಪೂರ್ಣ ಸ್ವತಂತ್ರ ಮನೋವೃತ್ತಿಯವನಾಗಿ ಉಳಿವ ವಾತಾವರಣ ಅಲ್ಲಿರಬೇಕೆಂದು ವಿಧಿಸಲಾಗಿದೆ. ಇದನ್ನು ತಪ್ಪಿಸುವ ಇಲ್ಲವೆ ಇದಕ್ಕೆ ಅಡ್ಡಿ ಮಾಡುವ ಹಾಗೆ ಯಾದಾದರೂ ಮಾಡಿದರೆ ಅದು ಅಪರಾಧವೆನ್ನಿಸುವುದು. ಅಪರಾಧ ನಡೆವ ಸ್ಥಳವು ಸಾರ್ವಜನಿಕ ಸ್ಥಳವಾಗಿರಬಹುದು ಇಲ್ಲವೆ ಖಾಸಗಿ ಸ್ಥಳವಾಗಬಹುದು. ಅಪರಾಧವಾಗಿದೆಯೆಂದು ಕಂಡುಬಂದರೆ ಅದು ಸಾಬೀತು ಮಾಡಲ್ಪಟ್ಟರೆ, ಅಪರಾಧಿಗೆ ಎರಡುನೂರಾ ಐವತ್ತು ರೂಪಾಯಿಗಳವರೆಗೆ ದಂಡ ವಿಧಿಸಲಾಗುವುದು. ಈ ಅಪರಾಧವು ವಾರಂಟುಇಲ್ಲದೆ ಬಂಧಿಸಲು ಯೋಗ್ಯವಾಗಿದೆ.

**೧೩. ಮತದಾನ ಕಟ್ಟೆಯಲ್ಲಿ ಇಲ್ಲವೆ ಅದರ ಹತ್ತಿರ ಅಕ್ರಮ ವರ್ತನೆಗೆ ದಂಡನೆ.**

(೧) ಯಾವುದೇ ಮತದಾನ ಕಟ್ಟೆಯಲ್ಲಿ ಯಾವ ತಾರೀಖುಗಳ ದಿನ ಮತದಾನ ನಡೆಯುವುದೋ ಅಂದು ಮತದಾನ ಕಟ್ಟೆಗೆ ಮತದಾನದ ಸಲುವಾಗಿ ಸಂದರ್ಶಿಸುವ ಯಾವದೇ ವ್ಯಕ್ತಿಗೆ ಮನನೋಯಿಸುವ ಹಾಗೆ, ಇಲ್ಲವೆ ಮತದಾನ ಕಟ್ಟೆಯಲ್ಲಿ ಕರ್ತವ್ಯಮಾಡುತ್ತಿರುವ ಅಧಿಕಾರಿಗಳ ಮತ್ತು ಇತರ ವ್ಯಕ್ತಿಗಳ ಕೆಲಸಕ್ಕೆ ಆತಂಕವನ್ನುಂಟುಮಾಡುವಹಾಗೆ,

(ಅ) ಮತದಾನ ಕಟ್ಟೆಯಲ್ಲಿ ಇಲ್ಲವೆ ಮತದಾನ ಕಟ್ಟೆಯ ಬಾಗಿಲಲ್ಲಿ ಇಲ್ಲವೆ ಮತದಾನ ಕಟ್ಟೆಯ ನೆರೆಹೊರೆಯಲ್ಲಿ ಯಾವುದೇ ಸಾರ್ವಜನಿಕ ಇಲ್ಲವೆ ಖಾಸಗಿ ಸ್ಥಳದಲ್ಲಿ ಮಾನವ ಧ್ವನಿಯನ್ನು ಪ್ರತಿಧ್ವನಿಸಲು ಇಲ್ಲವೆ ವಿಸ್ತರಿಸಲು ಯಾವುದೇ ಉಪಕರಣ ಅಂದರೆ ಮೆಗ್ಯಾಫೋನ ಇಲ್ಲವೆ ಧ್ವನಿ (Loud Speakar) ವಿಸ್ತಾರಕ್ಷೇಪದಂತಹಗಳನ್ನು ಯಾವುದೇ ವ್ಯಕ್ತಿಯು ಉಪಯೋಗಿಸಬಾರದು. ಇಲ್ಲವೆ ನಡೆಸಬಾರದು.

(ಬ) ಮತದಾನ ಕಟ್ಟೆಯಲ್ಲಿ ಇಲ್ಲವೆ ಮತದಾನ ಕಟ್ಟೆಯ ಬಾಗಿಲಲ್ಲಿ ಇಲ್ಲವೆ ಮತದಾನ ಕಟ್ಟೆಯ ನೆರೆಹೊರೆಯಲ್ಲಿ ಯಾವುದೇ ಸಾರ್ವಜನಿಕ ಇಲ್ಲವೆ ಖಾಸಗೀ ಸ್ಥಳದಲ್ಲಿ ಯಾವುದೇ ವ್ಯಕ್ತಿಯು ಒದರಬಾರದು. ಇಲ್ಲವೆ ಅಕ್ರಮವಾದ ವರ್ತನೆಯುಳ್ಳಂತಹ ಬೇರೆ ಕಾರ್ಯ ಮಾಡಬಾರದು.

(೨) ಉಪಕಲಮು (೧) ರ ಕಕ್ಷೆಗಳ ವಿರುದ್ಧವಾಗಿ ಯಾವುದೇ ವ್ಯಕ್ತಿಯು ವರ್ತಿಸಿದರೆ ಇಲ್ಲವೆ ವರ್ತಿಸುವ ಹಾಗೆ ಯಾವುದೇ ವ್ಯಕ್ತಿಯು ಬುದ್ಧಿಪೂರ್ವಕವಾಗಿ ಸಹಾಯ ಮಾಡಿದರೆ ಇಲ್ಲವೆ ಪ್ರೋತ್ಸಾಹಿಸಿದರೆ, ಅಪರಾಧವು ಸಾಬೀತಾದರೆ, ಅವನು ಎರಡು ನೂರಾ ಐವತ್ತು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಶಿಕ್ಷಿಸಲ್ಪಡುವನು.

(೩) ಈ ಕಲಮಿನ ಪ್ರಕಾರ ಯಾವುದೇ ವ್ಯಕ್ತಿಯು ಅಪರಾಧವನ್ನು ಮಾಡುತ್ತಿದ್ದಾನೆಂದು ಇಲ್ಲವೆ ಮಾಡಿದ್ದಾನೆಂದು ಮತದಾನ ಕಟ್ಟೆಯ ಮುಖ್ಯ ಅಧಿಕಾರಿಗೆ ನಂಬಲು ಕಾರಣಗಳಿದ್ದರೆ, ಅಂತಹ ವ್ಯಕ್ತಿಯನ್ನು ಬಂಧಿಸಲು ಯಾವುದೇ ಪೋಲೀಸ ಅಧಿಕಾರಿಗೆ ಅವನು ನಿರ್ದೇಶಿಸಬಹುದು. ಮತ್ತು ಆನಂತರ ಆ ಪೋಲೀಸು ಅಧಿಕಾರಿಯು ಆ ವ್ಯಕ್ತಿಯನ್ನು ಬಂಧಿಸತಕ್ಕದ್ದು.

(೪) ಉಪಕಲಮು (೧) ಕಕ್ಷೆಗಳ ವಿರುದ್ಧವಾಗಿ ನಡೆಯುವ ಕೃತ್ಯಗಳನ್ನು ತಡೆಯಲಿಕ್ಕೆ ಯಾವುದೇ ಪೋಲೀಸು ಅಧಿಕಾರಿಯು ಯೋಗ್ಯವಾದಂತಹ ಆವಶ್ಯಕ ಕ್ರಮಗಳನ್ನು ತೆಗೆದುಕೊಳ್ಳಬಹುದು ಮತ್ತು ಶಕ್ತಿಯನ್ನು ಉಪಯೋಗಿಸಬಹುದು. ಮತ್ತು ಆ ಕೃತ್ಯಗಳನ್ನು ಮಾಡಲಿಕ್ಕೆ ಉಪಯೋಗಿಸಿದ ಉಪಕರಣಗಳನ್ನು ಜಪ್ತಮಾಡಬಹುದು.

## ವಿವೇಚನೆ

ಮತದಾನ ಕಟ್ಟೆಯ ಸುತ್ತಮುತ್ತಲೂ ಉಮೇದುವಾರರ ಪ್ರಭಾವ ಬೀರುವಂತಹ ಕೃತ್ಯಗಳು ನಡೆಯಬಾರದು. ಚುನಾವಣೆಯ ಕಾರ್ಯವು ಪ್ರಶಾಂತ ಹಾಗೂ ಸುವ್ಯವಸ್ಥಿತವಾದ ರೀತಿಯಲ್ಲಿ ನಡೆಯಬೇಕು. ಇದರ ವ್ಯತಿರಿಕ್ತವಾಗಿ ನಡೆಸಲಾದ ಕೃತ್ಯಗಳು ಅಕ್ರಮ ವರ್ತನವಾಗುವುದು. ಅಂತಹ ವರ್ತನದ ಬಗ್ಗೆ ಇಲ್ಲಿ ಹೇಳಲಾಗಿದೆಯಲ್ಲದೆ, ಅದಕ್ಕಾಗಿ ಶಿಕ್ಷೆ ಏನೆಂಬುದನ್ನು ಹೇಳಲಾಗಿದೆ.

ಮತದಾನದ ಕಟ್ಟೆಯಲ್ಲಿ, ಅದರ ಬಾಗಿಲದಲ್ಲಿ, ಅದರ ನೆರೆಹೊರೆಯಲ್ಲಿ ಯಾವುದೇ ಸಾರ್ವಜನಿಕ ಇಲ್ಲವೆ ಖಾಸಗೀ ಸ್ಥಳದಿಂದ ಯಾರೂ ಒದರಾಟ ಚೀರಾಟ, ಕೂಗು ಹಾಕುವುದು, ಜೈಜೈಕಾರಮಾಡುವುದು. ಉಮೇದುವಾರನ ಪ್ರಚಾರಮಾಡುವುದು ಇವುಗಳನ್ನು ಮಾನವ ಧ್ವನಿಯಿಂದ ಇಲ್ಲವೆ ಅವನ ಧ್ವನಿಯನ್ನು ವಿಸ್ತರಿಸುವ ಯಾಂತ್ರಿಕ .ಉಪಕರಣಗಳಿಂದ ಮಾಡಬಾರದು. ಈ ಕಾರ್ಯದಿಂದ ಮತದಾನ ಕಟ್ಟೆಗೆ ಬರುವ ಮತದಾರರಿಗೆ ಹಾಗು ಮತದಾನ ಕಟ್ಟೆಯಲ್ಲಿ ಕೆಲಸದಲ್ಲಿ ನಿರತರಾದವರಿಗೆ ಅವರ ಕೆಲಸದಲ್ಲಿ ವ್ಯತ್ಯಯ ವುಂಟಾಗಬಾರದು. ವ್ಯತ್ಯಯ ಉಂಟಾದರೆ ಅದು ಅಪರಾಧ. ಅದಕ್ಕೆ ೨೫೦ ರೂಪಾಯಿಗಳ ವರೆಗೆ ದಂಡ. ಪೋಲೀಸು ಅಧಿಕಾರಿಯು ಅಂತಹ ವ್ಯಕ್ತಿಯನ್ನು ಬಂಧಿಸಬಹುದು. ಉಪಕರಣಗಳ ಜಪ್ತ ಮಾಡಬಹುದು ಇತರ ರೀತಿಯ ಯೋಗ್ಯ ಕ್ರಮ ಕೈಕೊಳ್ಳಬಹುದು. ಅಂದರೆ ಚುನಾವಣೆಯ ಕಾರ್ಯವು ಯಾವ ಅಶಾಂತಿ ಇಲ್ಲದೆ ನಡೆಯುವಂತೆ ನೋಡಿಕೊಳ್ಳಲಾಗುವುದು. ಅಕ್ರಮ ವರ್ತನೆಯ ಬಗ್ಗೆ ಮತದಾನ ಕಟ್ಟೆಯ ಮುಖ್ಯ ಅಧಿಕಾರಿಗೆ ಹಾಗೂ ಅವರ ನಿರ್ದೇಶನದಲ್ಲಿ ಪೋಲೀಸ ಅಧಿಕಾರಿಗೆ ಅಧಿಕಾರ ಕೊಡಲಾಗಿದೆ. ಈ ಅಧಿಕಾರದ ಮೂಲಕ ವ್ಯಕ್ತಿಯ ಬಂಧನ-ಉಪಕರಣಗಳ ಜಪ್ತಿ ಮಾಡಲು ಬರುವುದು.

## ೧೭ ಮತದಾನ ಕಟ್ಟೆಯಲ್ಲಿಯ ದುರ್ವರ್ತನೆಗೆ ದಂಡನೆ

(೧) ಯಾವುದೇ ಮತದಾನ ಕಟ್ಟೆಯಲ್ಲಿ ಯಾವುದೇ ವ್ಯಕ್ತಿಯು ಮತದಾನಕ್ಕಾಗಿ ಗೊತ್ತು ಮಾಡಲಾದ ಸಮಯದಲ್ಲಿ ದುರ್ವರ್ತನೆ ಮಾಡಿದರೆ, ಇಲ್ಲವೆ ಮುಖ್ಯ ಅಧಿಕಾರಿಯ ಕಾಯಿದೇಶೀರ ನಿರ್ದೇಶನವನ್ನು ಪಾಲಿಸಲು ತಪ್ಪಿದರೆ, ಆ ಮುಖ್ಯ ಅಧಿಕಾರಿಯಿಂದ ಇಲ್ಲವೆ ಕರ್ತವ್ಯ ಕಾರ್ಯದಲ್ಲಿ ನಿರತನಾದ ಯಾವುದೇ ಪೋಲೀಸು ಅಧಿಕಾರಿಯಿಂದ ಇಲ್ಲವೆ ಈ ಸಂಬಂಧದಲ್ಲಿ ಮುಖ್ಯ ಅಧಿಕಾರಿಯಿಂದ ಅಧಿಕೃತನಾದ ಯಾವುದೇ ವ್ಯಕ್ತಿಯಿಂದ ಹೊರಗೆ ಹಾಕಿಸಲ್ಪಡಬಹುದು.

(೨) ಉಪಕಲಮು (೧) ರಿಂದ ದಯಪಾಲಿಸಲಾದ ಅಧಿಕಾರಗಳು ಮತದಾನ ಕಟ್ಟೆಯಲ್ಲಿ ಮತದಾನ ಮಾಡಲು ಉಳಿದೆಲ್ಲ ರೀತಿಯಲ್ಲಿ ಪಾತ್ರನಾಗಿದ್ದ ಯಾವುದೇ ಮತದಾರನು ಆ ಕಟ್ಟೆಯಲ್ಲಿ ಮತದಾನ ಮಾಡುವುದಕ್ಕೆ ಇದ್ದ ಅವಕಾಶವನ್ನು ತಡೆಯುವಂತೆಯಾಗುವ ಹಾಗೆ ಉಪಯೋಗಿಸಲ್ಪಡಬಾರದು.

(೩) ಮತದಾನ ಕಟ್ಟೆಯಿಂದ ಯಾವುದೇ ವ್ಯಕ್ತಿಯು ಮೇಲ್ಕಾಣಿಸಿದ ರೀತಿಯಲ್ಲಿ ಹೊರಗೆ ಹಾಕಲ್ಪಟ್ಟಿದ್ದು ಅವನು ಪುನಃ ಮತದಾನ ಕಟ್ಟೆಯನ್ನು

ಅಲ್ಲಿಯ ಮುಖ್ಯ ಅಧಿಕಾರಿಯ ಪರವಾನಗಿ ಇಲ್ಲದೆ ಪ್ರವೇಶಿಸಿದರೆ, ಅವನ ಅಪರಾಧವು ಸಾಬೀತಾದರೆ, ಎರಡು ನೂರಾ ಐವತ್ತು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಶಿಕ್ಷಿತನಾಗುವನು.

(೪) ಉಪಕಲಮು (೩) ರನ್ವಯವಾಗಿ ಶಿಕ್ಷಾರ್ಹವಾಗಿರುವ ಅಪರಾಧವು ವಾರಂಟು ಪತ್ರವಿಲ್ಲದ ಬಂಧನಯೋಗ್ಯವಾಗಿರುವಂಥ ಅಪರಾಧವು.

## ವಿವೇಚನೆ

ಮತದಾನ ಕಟ್ಟೆಯಲ್ಲಿ ಯಾವುದೇ ರೀತಿಯು ಗೈರವರ್ತನೆ ನಡೆದರೆ ಅಲ್ಲಿಯ ಚುನಾವಣೆಯ ಕಾರ್ಯಕ್ಕೆ ಅಡ್ಡಿಯಾಗುವುದು. ಮತದಾನವು ಸರಿಯಾಗಿ ನಡೆಯಲಿಕ್ಕಿಲ್ಲ. ಆದ್ದರಿಂದ ಅಲ್ಲಿ ದುರ್ವರ್ತನೆ ಮಾಡಿದವರಿಗೆ ದಂಡನೆ. ಮತದಾನ ಕಟ್ಟೆಯಲ್ಲಿಯ ಮುಖ್ಯ ಅಧಿಕಾರಿಯದೆ ಪೂರ್ಣ ಅಧಿಕಾರ. ಅವನು ಮಾಡಿದ ಕಾಯಿದೇಶೀರ ನಿರ್ದೇಶನವನ್ನು ಯಾರಾದರೂ ಪಾಲಿಸಲು ತಪ್ಪಿದರೆ ಅದು ದುರ್ವರ್ತನೆಯಾಗುವುದು. ಆಗ ಆ ಮುಖ್ಯ ಅಧಿಕಾರಿಯು ಇಂತಹ ದುರ್ವರ್ತನೆ ಮಾಡಿದ ವ್ಯಕ್ತಿಯನ್ನು ಪೋಲೀಸು ಅಧಿಕಾರಿಯ ಕಡೆಯಿಂದ ಹೊರಗೆ ಹಾಕಿಸಬಹುದು. ಹೀಗೆ ಹೊರಗೆ ಹಾಕಿಸುವ ಅಧಿಕಾರವು ಮತದಾರನು ಮತ ಹಾಕುವ ಅವಕಾಶವನ್ನು ತಪ್ಪಿಸುವ ಹಾಗೆ ಉಪಯೋಗಿಸತಕ್ಕದ್ದಲ್ಲ. ದುರ್ವರ್ತನೆಗೆ ತಡೆಯಿದೆಯೆ ಹೊರತು ಮತದಾನಕ್ಕಲ್ಲ. ಮತದಾನ ತಡೆಯುವಂತೆ ಮತದಾನದ ಆಸ್ಪದ ತಪ್ಪುವಂತೆ ಈ ಅಧಿಕಾರ ನಡೆಸತಕ್ಕದ್ದಲ್ಲ

ಒಮ್ಮೆ ಹೊರಗೆ ಹಾಕಲಾದ ವ್ಯಕ್ತಿಯು ಪುನಃ ಮತದಾನ ಕಟ್ಟೆಯಲ್ಲಿ ಮುಖ್ಯ ಅಧಿಕಾರಿಯ ಅಪ್ಪಣೆಯಿಲ್ಲದೆ ಪ್ರವೇಶ ಮಾಡಿದರೆ ಅದು ಅಪರಾಧವಾಗುವುದು. ಈ ಅಪರಾಧಕ್ಕಾಗಿ ಪೋಲೀಸರು ಕೂಡಲೆ ಅವರನ್ನು ಯಾವ ವಾರಂಟ ಇಲ್ಲದೆ ಬಂಧಿಸಬಹುದು. ಈ ಅಪರಾಧವು ಸಾಬೀತಾದರೆ, ೨೫೦|= ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡ ಹಾಕಬಹುದಾಗಿದೆ.

## ೧೮ ಮತದಾನದ ಗುಪ್ತತೆಯನ್ನು ಕಾಯಿದುಕೊಳ್ಳುವುದು

(೧) ಚುನಾವಣೆಯಲ್ಲಿ ಮತಗಳನ್ನು ಎಣಿಸುವ ಇಲ್ಲವೆ ದಾಖಲೆ ಮಾಡುವ ಸಂಬಂಧದಲ್ಲಿ ಯಾವುದೇ ಕರ್ತವ್ಯವನ್ನು ಮಾಡುತ್ತಿರುವ ಪ್ರತಿಯೊಬ್ಬ ಅಧಿಕಾರಿ, ಕಾರಕೂನ, ಏಜೆಂಟ ಇಲ್ಲವೆ ಬೇರೆ ವ್ಯಕ್ತಿಯು ಮತದಾನದ ಗುಪ್ತತೆಯನ್ನು ಕಾಯಿದುಕೊಳ್ಳತಕ್ಕದ್ದು. ಮತ್ತು ಕಾಯಿದುಕೊಳ್ಳಲು ನೆರವಾಗತಕ್ಕದ್ದು. ಮತ್ತು (ಯಾವುದೇ ಕಾಯಿದೆಯಿಂದ ಇಲ್ಲವೆ ಕಾಯಿದೆಯನ್ವಯವಾಗಿ

ಅಧಿಕೃತವಾದ ಉದ್ದೇಶಗಳ ಹೊರತು) ಇಂತಹ ಗುಪ್ತತೆಯನ್ನು ಭಂಗ ಪಡಿಸುವ ಹವಣಿಕೆಯುಳ್ಳಂತಹ ಯಾವ ಮಾಹಿತಿಯನ್ನೂ ಯಾವುದೇ ವ್ಯಕ್ತಿಗೆ ತಿಳಿಸ ತಕ್ಕದ್ದಲ್ಲ.

(೨) ಉಪಕಲಮು (೧) ರ ಕಕ್ಷೆಗಳ ವಿರುದ್ಧವಾಗಿ ಯಾವುದೇ ವ್ಯಕ್ತಿಯು ವರ್ತಿಸಿದರೆ, ಅವನ ಅಪರಾಧವು ಸಾಬೀತಾದರೆ, ಅವನು ಮೂರು ತಿಂಗಳ ವರೆಗೆ ವ್ಯಾಪಿಸಬಹುದಾದಷ್ಟು ಕಾರಾವಾಸ ಇಲ್ಲವೆ ದಂಡ, ಇಲ್ಲವೆ ಎರಡೂ ದಂಡನೆ ಗಳಿಂದ ಶಿಕ್ಷಿತನಾಗುವನು.

## ವಿವೇಚನೆ

ಚುನಾವಣೆಯು ಗುಪ್ತ ಮತದಾನ ಪದ್ಧತಿಯ ಮೇಲೆ ನಡೆಯುವುದು. ಆದ್ದರಿಂದ ಅದರ ಗುಪ್ತತೆಯನ್ನು ಕಾಯಿದುಕೊಳ್ಳುವುದು ಅತ್ಯಂತ ಅಗತ್ಯದ ಹಾಗೂ ಮಹತ್ವದ ಕರ್ತವ್ಯವಾಗಿರುವುದು. ಮತಗಳನ್ನು ಎಣಿಸುವ ಇಲ್ಲವೆ ದಾಖಲೆ ಮಾಡುವ ಕಾರ್ಯದಲ್ಲಿ ತೊಡಗಿದ ಅಧಿಕಾರಿ, ಕಾರಕೂನ, ಏಜೆಂಟ ಇಲ್ಲವೆ ಬೇರೆ ಯಾವುದೇ ವ್ಯಕ್ತಿ ಇವರಿಗೆ ಗುಪ್ತವಾಗಿದ್ದ ಸಂಗತಿಯ ತಿಳಿವಳಿಕೆ ಇರುವುದು. ಇವರು ಅದನ್ನು ಬಹಿರಂಗ ಮಾಡಲಿಕ್ಕೆ ಸಾಧ್ಯವಿರುತ್ತದೆ. ಆದ್ದರಿಂದ ಅವರು ಬಹಿರಂಗಗೊಳಿಸಬಾರದು ಎಂದು ವಿಧಿಸಲಾಗಿದೆ. ಒಂದು ವೇಳೆ ಅವರು ಗುಪ್ತತೆಯ ಭಂಗ ಮಾಡುವಂತಹ ಯಾವುದೇ ಮಾಹಿತಿ ಯನ್ನು ಯಾರಿಗಾದರೂ ತಿಳಿಸಿದರೆ ಅದು ಅಪರಾಧವಾಗುವುದು. ಅದು ಸಾಬೀ ತಾದರೆ ಅಪರಾಧಿಗೆ ೩ ತಿಂಗಳ ವರೆಗೆ ಆಗುವಷ್ಟು ಕಾರಾವಾಸ ಇಲ್ಲವೆ ದಂಡ ಇಲ್ಲವೆ ಎರಡೂ ರೀತಿಯ ಶಿಕ್ಷೆಯು ವಿಧಿಸಲ್ಪಡುವುದು.

ಆದರೆ ಇದಕ್ಕೆ ಒಂದು ಅಪವಾದವಿದೆ: ಯಾವುದೇ ಕಾಯಿದೆಯಿಂದ ಇಲ್ಲವೆ ಅದರನ್ವಯವಾಗಿ ಅಧಿಕಾರ ಪಡೆದಾಗ ಗುಪ್ತತೆಯುಳ್ಳ ಮಾಹಿತಿ ಕೊಡ ಲಾದರೆ ಅದು ಅಪರಾಧವಾಗಲಾರದು. ಏಕೆಂದರೆ ಕಾಯಿದೆಯ ಅಧಿಕಾರ ಅಲ್ಲಿ ಇರುತ್ತದೆ.

## ೧೯. ಚುನಾವಣೆಯಲ್ಲಿಯ ಅಧಿಕಾರಿ ಮುಂತಾದವರು ಉಮೇದು ವಾರರ ಪರವಾಗಿ ಕೆಲಸ ಮಾಡಕೂಡದು ಇಲ್ಲವೆ ಪ್ರಭಾವ ಬೀರಕೂಡದು.

(೧) ಯಾರು ಚುನಾವಣೆಯ ಅಧಿಕಾರಿಯಾಗಿರುವರೋ ಇಲ್ಲವೆ ಚುನಾ ವಣೆಯ ಮತದಾನ ಕಟ್ಟೆಯಲ್ಲಿ ಮುಖ್ಯ ಅಧಿಕಾರಿಯಾಗಿರುವರೋ ಇಲ್ಲವೆ ಪೋಲೀಸ ಅಧಿಕಾರಿಯಾಗಿರುವರೋ ಇಲ್ಲವೆ ಚುನಾವಣೆ ಅಧಿಕಾರಿಯಿಂದ ಇಲ್ಲವೆ ಮುಖ್ಯ

ಅಧಿಕಾರಿಯಿಂದ ಚುನಾವಣೆಯ ಸಂಬಂಧವಾಗಿ ಯಾವುದೇ ಕರ್ತವ್ಯಗಳನ್ನು ಮಾಡಲು ನೇಮಕವಾದ ಅಧಿಕಾರಿಯಾಗಿರುವನೋ ಇಲ್ಲವೆ ಕಾರಕೂನನಾಗಿರುವನೋ ಆ ವ್ಯಕ್ತಿಯು ಚುನಾವಣೆಯ ನಡೆವಳಿಕೆಯಲ್ಲಿ ಇಲ್ಲವೆ ವ್ಯವಸ್ಥೆಯಲ್ಲಿ ಉಮೇದುವಾರನ ಚುನಾವಣೆಯ ಪ್ರಗತಿಯನ್ನು ಮುಂದುವರಿಸಲು ಮತವನ್ನು ಕೊಡುವುದರ ಹೊರತು ಬೇರೆ ಯಾವ ಕಾರ್ಯ ಮಾಡಕೂಡದು.

(೨) ಮೇಲೆ ಹೇಳಲಾದ ಯಾವುದೇ ವ್ಯಕ್ತಿಯು ಮತ್ತು ಪೋಲೀಸು ದಳದ ಯಾವುದೇ ಸದಸ್ಯನು.

(ಅ) ಚುನಾವಣೆಯಲ್ಲಿ ತನ್ನ ಮತವನ್ನು ಕೊಡಲು ಯಾವುದೇ ವ್ಯಕ್ತಿಯ ಮನವೊಲಿಸುವ ಪ್ರಯತ್ನಮಾಡಬಾರದು. ಇಲ್ಲವೆ

(ಬ) ಚುನಾವಣೆಯಲ್ಲಿ ತನ್ನ ಮತವನ್ನು ಕೊಡದೆ ಇರಲು ಯಾವುದೇ ವ್ಯಕ್ತಿಯ ಮನವೊಲಿಸುವ ಪ್ರಯತ್ನ ಮಾಡಕೂಡದು. ಇಲ್ಲವೆ

(ಕ) ಚುನಾವಣೆಯಲ್ಲಿ ಯಾವುದೇ ರೀತಿಯಲ್ಲಿ ಯಾವುದೇ ವ್ಯಕ್ತಿಯ ಮತದಾನದ ಮೇಲೆ ಪ್ರಭಾವ ಬೀರುವ ಪ್ರಯತ್ನ ಮಾಡಕೂಡದು

(೩) ಉಪಕಲಮು (೧) ಇಲ್ಲವೆ (೨) ಇದರ ಕಕ್ಷೆಗಳ ವಿರುದ್ಧವಾಗಿ ಯಾರಾದರೂ ವರ್ತಿಸಿದರೆ; ಅವರ ಅಪರಾಧವು ಸಾಬೀತಾದರೆ, ಅಪರಾಧಿಯು ಆರು ತಿಂಗಳವರೆಗೆ ವ್ಯಾಪಿಸಬಹುದಾದಷ್ಟು ಕಾರಾವಾಸ ಇಲ್ಲವೆ ದಂಡ ಇಲ್ಲವೆ ಎರಡೂ ದಂಡನೆಗಳಿಂದ ಶಿಕ್ಷಿತನಾಗುವನು.

## ವಿವೇಚನೆ

ಉಮೇದುವಾರರು ಜನತೆಯ ಪ್ರತಿನಿಧಿಗಳಾಗಿ ಆರಿಸಿ ಬಂದು ಪಂಚಾಯತದ ಸದಸ್ಯರಾಗುವರು. ಆ ಮತದಾರ ಕ್ಷೇತ್ರದಲ್ಲಿಯ ಪ್ರತಿಯೊಬ್ಬ ಮತದಾರನಿಗೂ ಮತಹಾಕುವ ಅಧಿಕಾರವಿದೆ. ಅವನು ಚುನಾವಣೆಯನ್ನು ನಡೆಸುವ ಅಧಿಕಾರಿ ಇರಲಿ, ಕಾರಕೂನ ಇರಲಿ, ಮುಖ್ಯಾಧಿಕಾರಿ ಇರಲಿ. ಈ ಅಧಿಕಾರಿಗಳಿಗೆ ತಮ್ಮ ಮತಹಾಕುವ ಅಧಿಕಾರದ ಹೊರತು ಉಮೇದವಾರರ ಪರವಾಗಿ ಬೇರೆ ಏನನ್ನೂ ಮಾಡಲು ಬರುವದಿಲ್ಲ. ಅವರು ಯಾವುದೇ ಪಕ್ಷ ವಹಿಸಲು ಬರುವುದಿಲ್ಲ. ಅವರ ಸರಕಾರದ ನಿಷ್ಪಕ್ಷಪಾತ ದೃಷ್ಟಿಯ ಪ್ರತೀಕವಾಗಿರುತ್ತಾರೆ. ಯಾವ ಪಕ್ಷಪಾತವಿಲ್ಲದೆ ಚುನಾವಣೆ ನಡಸುವ ಜವಾಬದಾರಿ ಅವರದು. ಆದ್ದರಿಂದ ಅವರು ಯಾವುದೇ ಉಮೇದುವಾರನ ಪರವಾಗಿ ಯಾರಿಗೂ ಮತಹಾಕಲು ಹೇಳಕೂಡದು, ಮನವೊಲಿಸಕೂಡದು. ತಮ್ಮ ಅಧಿಕಾರಪದದ ಮೂಲಕ ಯಾವುದೇ ಉಮೇದುವಾರರ ಪರವಾಗಿ ಪ್ರಭಾವ ಬೀರಕೂಡದು.

ಒಂದು ವೇಳೆ ಮೇಲೆ ಹೇಳಿದ ಅಧಿಕಾರಿ ವರ್ಗದವರು ಯಾರಾದರೂ ಹಾಗೆ ಮಾಡಿದರೆ, ಅದು ಅಪರಾಧವೆನ್ನಿಸುವುದು. ಆ ಅಪರಾಧವು ಸಾಬೀತಾದರೆ ಅಪ ರಾಧಿಗೆ ಆರುತಿಂಗಳ ವರೆಗೆ ಆಗಬಹುದಾದಷ್ಟು ಕಾರಾವಾಸ, ಇಲ್ಲವೆ ದಂಡ-ಇಲ್ಲವೆ ಎರಡೂ ರೀತಿಯ ದಂಡನೆಯಿಂದೆ ಶಿಕ್ಷೆಯಾಗಬಹುದು.

## ೨೦. ಚುನಾವಣೆಗೆ ಸಂಬಂಧವಾಗಿ ಅಧಿಕೃತ ಕರ್ತವ್ಯಗಳಲ್ಲಿ ಚ್ಯುತಿ

(೧) ಯಾರಿಗೆ ಈ ಕಲಮು ಅನ್ವಯಿಸುವುದೋ ಅಂತಹ ಯಾವುದೇ ವ್ಯಕ್ತಿಯು ಯಾವುದೇ ಯೋಗ್ಯ ಕಾರಣವಿಲ್ಲದೆ, ತನ್ನ ಅಧಿಕೃತ ಕರ್ತವ್ಯದಲ್ಲಿ ಯಾವುದೇ ಕಾರ್ಯ ಇಲ್ಲವೆ ಅಕಾರ್ಯದಿಂದ ಚ್ಯುತಿಯುಂಟಾಗಿ ಅಪರಾಧಿಯಾದರೆ, ಅವನ ಅಪರಾಧವು ಸಾಬೀತಾದರೆ ಐದುನೂರು ರೂಪಾಯಿಗಳ ವರೆಗೆ ವ್ಯಾಪಿಸ ಬಹುದಾದಷ್ಟು ದಂಡದಿಂದ ಶಿಕ್ಷಿತನಾಗುವನು.

(೨) ಮೇಲೆ ಹೇಳಿದಂತಹ ಕಾರ್ಯ ಇಲ್ಲವೆ ಅಕಾರ್ಯದ ಸಂಬಂಧವಾಗಿ ಅಂತಹ ವ್ಯಕ್ತಿಯ ವಿರುದ್ಧವಾಗಿ ಲುಕಸಾನು ಭರಪಾಯಿಗಾಗಿ ಯಾವುದೇ ದಾವೆ ಇಲ್ಲವೆ ಕಾಯಿದೇಶೀರ ಮೊಕದ್ದಮೆಗಳು ನಡೆಯಲಾಗದು.

(೩) ಈ ಕಲಮು ಅನ್ವಯಿಸುವಂತಹ ವ್ಯಕ್ತಿಗಳು ಅಂದರೆ, ಚುನಾವ ಣೆಯ ಅಧಿಕಾರಿಗಳು, ಮತದಾನ ಕಟ್ಟೆಯಲ್ಲಿಯ ಮುಖ್ಯಅಧಿಕಾರಿಗಳು ಪೋಲಿಂಗ ಅಧಿಕಾರಿಗಳು, ಮತ್ತು ನಾಮುಕರಣ ಪತ್ರವನ್ನು ಸ್ವೀಕರಿಸಲು ಇಲ್ಲವೆ, ಉಮೇದು ವಾರಿಯನ್ನು ಹಿಂತೆಗೆದುಕೊಳ್ಳಲು, ಇಲ್ಲವೆ ಚುನಾವಣೆಯಲ್ಲಿ ಮತಗಳ ದಾಖಲೆ ಮಾಡಲು ಇಲ್ಲವೆ ಎಣಿಕೆಮಾಡಲು ಈ ಸಂಬಂಧವಾಗಿ ಯಾವುದೇ ಕರ್ತವ್ಯ ಮಾಡಲು ನೇಮುಕವಾದಂತಹ ಯಾವುದೇ ಬೇರೆ ವ್ಯಕ್ತಿ; ಮತ್ತು ಈ ಕಲಮಿನ ಉದ್ದೇಶಗಳಿಗಾಗಿ "ಅಧಿಕೃತ ಕರ್ತವ್ಯ" ಎಂಬ ಪದದ ಅರ್ಥವನ್ನು ಇದಕ್ಕನು ಸಾರವಾಗಿಯೇ ಅರ್ಥಮಾಡತಕ್ಕದ್ದು. ಆದರೆ ಈ ಕಾಯಿದೆಯಂಕಿತವಾಗಿ ಇಲ್ಲವೆ ಈ ಕಾಯಿದೆಯನ್ವಯವಾಗಿ ಹೇಳದೆ ಇದ್ದ ಬೇರೆ ಕರ್ತವ್ಯಗಳನ್ನು ಆ ಪದಪ್ರಯೋ ಗವು ಒಳಗೊಳ್ಳುವುದಿಲ್ಲ.

### ವಿವೇಚನೆ

ಈ ಕಲಮು ಯಾರಿಗೆ ಅನ್ವಯಿಸುವುದೆಂಬುವರ ಬಗ್ಗೆ ಈ ಕಲಮಿನ ಉಪಕಲಮು (೩) ರಲ್ಲಿ ಹೇಳಿದೆ. ಚುನಾವಣೆಯ ಕಾರ್ಯಕ್ಕೆ ಸಂಬಂಧಪಟ್ಟ ಅಧಿಕಾರಿಗಳೆಲ್ಲರಿಗೂ ಈ ಕಲಮು ಅನ್ವಯಿಸುವುದು. ಅವರಿಗೆ ಅವರ ಅಧಿಕೃತ ಕರ್ತವ್ಯಗಳ ಬಗ್ಗೆ ಮಾತ್ರ ಈ ಕಲಮು ಅನ್ವಯಿಸುವುದು. ಅಧಿಕೃತ ಅಂದರೆ ಈ ಕಾಯಿದೆಯಿಂದ ಹೇಳಲಾದ ಹಾಗೂ ಅಧಿಕಾರಕೊಟ್ಟ ಕರ್ತವ್ಯಗಳು ಮಾತ್ರ

ಅಧಿಕೃತ ಕರ್ತವ್ಯಗಳೇ ಹೊರತು, ಬೇರೆ ಯಾವುದೇ ಕಾಯಿದೆಯಿಂದ ಹೇಳಿದ ಕರ್ತವ್ಯಗಳನ್ನು ಈ ಕಲಮಿನ ವಿಚಾರಮಾಡುವಾಗ ಲಕ್ಷ್ಯಕ್ಕೆ ತರಲಾಗದು ಎಂದು ಅರ್ಥ. ಕಾರಣವೆಂದರೆ ಚುನಾವಣೆಯ ಅಧಿಕಾರಿ, ಪೋಲಿಂಗ ಆಫೀಸರ, ಇಲ್ಲವೆ ಮತದಾನಕಟ್ಟೆಯಲ್ಲಿಯು ಮುಖ್ಯಾಧಿಕಾರಿ, ಅಥವಾ ಈ ಚುನಾವಣೆಗೆ ಸಂಬಂಧ ಪಟ್ಟ ಮತಗಳ ಎಣಿಕೆ, ದಾಖಲೆ ಮುಂತಾಗಿ ಮಾಡುವ ಅಧಿಕಾರಿಗಳು ತಾತ್ಪೂರ್ತಿಕ ಕೆಲವೊಂದು ಕಾಲಾವಧಿಯ ವರೆಗೆ ಚುನಾವಣೆಯ ಕಾರ್ಯವಮಾಡಲು ನೇಮಕ ವಾದ ಅಧಿಕಾರಿಗಳು. ಅವರು ಜೀವನದಲ್ಲಿ ಬೇರೆ ಬೇರೆ ಕರ್ತವ್ಯಗಳನ್ನು ಮಾಡು ತ್ತಿರುವ ಅಧಿಕಾರಿಗಳು ಆಗಿರುವರು. ಅಧಿಕೃತ ಕರ್ತವ್ಯವೆಂದರೆ ಅವರು ಜೀವನದಲ್ಲಿ ಮಾಡುತ್ತಿರುವ ಬೇರೆ ಕಾಯಿದೆಗಳನ್ವಯುವಾಗಿದ್ದ ಕರ್ತವ್ಯಗಳಲ್ಲ. ಕೇವಲ ಈ ಕಾಯಿದೆಯಲ್ಲಿ ಹೇಳಿದ, ಚುನಾವಣೆಗೆ ಸಂಬಂಧವಾದ ಅಧಿಕೃತ ಕರ್ತವ್ಯವೆಂದು ತಿಳಿಯಬೇಕೆಂದು ಸ್ಪಷ್ಟವಾಗಿ ಹೇಳಿದೆ. ಆದ್ದರಿಂದ ಕರ್ತವ್ಯಚ್ಯುತಿಯ ವಿಷಯವು ಬಂದಾಗ ಅದು ಚುನಾವಣೆಗೆ ಸಂಬಂಧಪಟ್ಟ ಅಧಿಕೃತ ಕರ್ತವ್ಯಗಳ ಚ್ಯುತಿಯೆಂದೂ ಚುನಾವಣೆಗೆ ಸಂಬಂಧವಾದ ಅಧಿಕಾರಿಗಳಿಂದ ಆದ ಕರ್ತವ್ಯಚ್ಯುತಿ ಎಂದೂ ಅರ್ಥಮಾಡಬೇಕು.

ಕರ್ತವ್ಯಚ್ಯುತಿಯಾದರೆ ಅದಕ್ಕೆ ದಂಡನೆ ಇದೆ. ಈ ಕರ್ತವ್ಯಚ್ಯುತಿಯು ಯಾವುದೇ ಯೋಗ್ಯಕಾರಣವಿಲ್ಲದೆ ಆಗಿರಬೇಕು, ಅಂದರೆ ದಂಡನೆ. ಅಂದರೆ ಯಾವುದೇ ಯೋಗ್ಯ ಕಾರಣವಿದ್ದು ಕರ್ತವ್ಯಚ್ಯುತಿಯಾದರೆ ಅದು ಅಪರಾಧ ವೆನ್ನಿಸುವುದಿಲ್ಲ. ಅದು ಅಪರಾಧವಾಗಿದ್ದು ಸಾಬೀತಾದರೆ ಆ ಅಪರಾಧಿಗೆ ಐದು ನೂರರ ವರೆಗೆ ವ್ಯಾಪಿಸಬಹುದಾದಷ್ಟು ದಂಡದ ಶಿಕ್ಷೆ ಹೇಳಿದೆ.

ಕರ್ತವ್ಯಮಾಡಲು ಹಚ್ಚಿದವರು ಸರಕಾರದವರು. ಆದ್ದರಿಂದ ಕರ್ತವ್ಯದಲ್ಲಿ ಚ್ಯುತಿಯಾಗಿ ಅದು ಅಪರಾಧವೆಂದು ಪರಿಣಮಿಸಿದರೆ ಆಗ ಸರಕಾರವೇ ದಂಡಿಸು ವುದು. ಈ ಕರ್ತವ್ಯಚ್ಯುತಿಯಿಂದ ಚುನಾವಣೆಯಲ್ಲಿಯ ಉಮೇದವಾರರಿಗೆ ಹಾನಿಯಾಗಿರುವ ಸಂಭವವಿದೆ. ಆದರೂ ಅಂತಹ ಕರ್ತವ್ಯಚ್ಯುತಿಯಿಂದಾದ ಹಾನಿ ಭರಪಾಯಿಸಿಕೊಳ್ಳಲು ಆ ಅಧಿಕಾರಿಯ ವಿರುದ್ಧ ಯಾವುದೇ ದಾವೆ ಇಲ್ಲವೆ ಕಾಯದೇಶೀರ ಮೊಕದ್ದಮೆ ನಡೆಸಲು ಅವಕಾಶವಿಲ್ಲವೆಂದು ಈ ಕಲಮಿನಲ್ಲಿ ಸ್ಪಷ್ಟಪಡಿಸಲಾಗಿದೆ.

## ೨೧. ಮತದಾನ ಪತ್ರಗಳನ್ನು ಮತದಾನ ಕಟ್ಟೆಯಿಂದ ತೆಗೆದು ಕೊಂಡು ಹೋಗುವುದು ಅಪರಾಧ.

(೧) ಮತದಾನ ಕಟ್ಟೆಯಿಂದ ಮತದಾನ ಪತ್ರವನ್ನು ಯಾವುದೇ ವ್ಯಕ್ತಿಯು ಯಾವುದೇ ಚುನಾವಣೆಯ ಕಾಲಕ್ಕೆ ಮೋಸದಿಂದ ಹೊರಗೆ ತೆಗೆದುಕೊಂಡು

ಹೋದರೆ ಇಲ್ಲವೆ ಹೋಗುವ ಪ್ರಯತ್ನಮಾಡಿದರೆ, ಇಲ್ಲವೆ ಇಂತಹ ಕಾರ್ಯವನ್ನು ನಡೆಸಲು ಬುದ್ಧಿಪೂರ್ವಕವಾಗಿ ನೆರವಾದರೆ ಇಲ್ಲವೆ ಪ್ರೋತ್ಸಾಹಿಸಿದರೆ, ಅಪರಾಧವು ಸಾಬೀತಾದರೆ, ಅಪರಾಧಿಯು ಒಂದು ವರುಷದವರೆಗೆ ವ್ಯಾಪಿಸಬಹುದಾದಷ್ಟು ಕಾರಾವಾಸ ಇಲ್ಲವೆ ಐದುನೂರು ರೂಪಾಯಿಗಳವರೆಗೆ ವ್ಯಾಪಿಸಬಹುದಾದಷ್ಟು ದಂಡ, ಇಲ್ಲವೆ ಎರಡೂ ದಂಡನೆಗಳಿಂದ ಶಿಕ್ಷಿತನಾಗುವನು.

(೨) ಉಪಕಲಮು (೧) ರನ್ವಯವಾಗಿ ಯಾವುದೇ ವ್ಯಕ್ತಿಯು ಅಪರಾಧ ವನ್ನು ಮಾಡುತ್ತಿದ್ದಾನೆಂದು ಮತದಾನಕಟ್ಟೆಯಲ್ಲಿಯ ಮುಖ್ಯ ಅಧಿಕಾರಿಗೆ ನಂಬಲು ಕಾರಣವಿದ್ದರೆ, ಆ ಅಧಿಕಾರಿಯು ಆ ವ್ಯಕ್ತಿಯು ಮತದಾನ ಕಟ್ಟೆಯನ್ನು ಬಿಟ್ಟು ಹೋಗುವುದಕ್ಕೆ ಮುಂಚಿತವಾಗಿ ಬಂಧಿಸಬಹುದು ಇಲ್ಲವೆ ಅಂತಹ ವ್ಯಕ್ತಿ ಯನ್ನು ಬಂಧಿಸಲು ಪೋಲೀಸುಅಧಿಕಾರಿಗೆ ನಿರ್ದೇಶಿಸಬಹುದು. ಮತ್ತು ಅಂತಹ ವ್ಯಕ್ತಿಯ ಅಂಗ ಜಡತಿ ಮಾಡಬಹುದು ಇಲ್ಲವೆ ಪೋಲೀಸ ಅಧಿಕಾರಿಯಿಂದ ಮಾಡಿಸಬಹುದು:

ಆದರೆ ಹೆಂಗಸಿನ ಅಂಗ ಜಡತಿ ಮಾಡಿಸುವುದು ಅವಶ್ಯವೆನಿಸಿದಾಗ ಅಂತಹ ಜಡತಿಯು ಇನ್ನೊಬ್ಬ ಹೆಂಗಸಿನಿಂದ, ಸೌಜನ್ಯ-ಮರ್ಯಾದೆಗಳನ್ನು ಲಕ್ಷಿಸಿ, ಮಾಡಿಸಬೇಕು.

(೩) ಅಂಗ ಜಡತಿ ಮಾಡಿ ಬಂಧಿಸಲ್ಪಟ್ಟ ವ್ಯಕ್ತಿಯ ಹತ್ತರ ಸಿಕ್ಕ ಯಾವುದೇ ಮತದಾನ ಪತ್ರವು ಮುಖ್ಯ ಅಧಿಕಾರಿಯಿಂದ ಪೋಲೀಸು ಅಧಿಕಾರಿಗೆ ಭದ್ರವಾಗಿಡ ಲಿಕ್ಕೆ ಕೊಡಲ್ಪಡಬೇಕು. ಇಲ್ಲವೆ ಅಂಗಜಡತಿಯು ಪೋಲೀಸು ಅಧಿಕಾರಿಯಿಂದ ಮಾಡಲ್ಪಟಾಗ ಸಿಕ್ಕ ಮತದಾನ ಪತ್ರವನ್ನು ಆ ಪೋಲೀಸು ಅಧಿಕಾರಿಯ ತನ್ನ ಹತ್ತಿರ ಭದ್ರವಾಗಿ ಇಟ್ಟುಕೊಳ್ಳಬೇಕು.

(೪) ಉಪಕಲಮು (೧) ರನ್ವಯವಾಗಿರುವ ಅಪರಾಧವು ವಾರಂಟು ಪತ್ರವಿದೆ ಬಂಧನಯೋಗ್ಯವಾದ ಅಪರಾಧವು ಆಗಿರುವುದು.

## ವಿವೇಚನೆ

ಮತದಾನ ಕಟ್ಟೆಯಲ್ಲಿ ಪ್ರವೇಶ ಮಾಡುವವರು ಮತದಾರರು. ಮತದಾನ ಮಾಡುವ ಉದ್ದೇಶದಿಂದ ಬಂದಿರುವರು, ಎಂದು ತಿಳಿಯಲಾಗಿರುವುದು. ಮತ ಪತ್ರಿಕೆಯನ್ನು ಮತದಾನಕಟ್ಟೆಯಲ್ಲಿ ಮತದಾನಮಾಡಲು ಕೊಟ್ಟಿರುವರು. ಹಾಗೆ ಮಾಡದೆ ಯಾರಾದರೂ ಮೋಸದಿಂದ ಮತದಾನ ಪತ್ರಿಕೆಯನ್ನು ಮತದಾನಕಟ್ಟೆ ಯಿಂದ ಹೊರಗೆ ತೆಗೆದುಕೊಂಡು ಹೋಗುವುದು ಅಪರಾಧವಾಗುವುದು. ಅಪರಾಧ

ಮಾಡುವವನೂ ಅಪರಾಧಿ; ಅಪರಾಧಮಾಡುವಂತೆ ನೆರವಾದವನೂ ಪ್ರೋತ್ಸಾಹಿಸಿದವನೂ ಅಪರಾಧಿ. ಅಪರಾಧವು ಸಾಬೀತಾದರೆ, ಒಂದು ವರುಷದ ವರೆಗೆ ಕಾರಾವಾಸ, ಇಲ್ಲವೆ ೫೦೦/-ರೂಪಾಯಿಗಳ ವರೆಗೆ ದಂಡ ಇಲ್ಲವೆ ಎರಡೂ ದಂಡನೆಗಳ ಶಿಕ್ಷೆ.

ಅಪರಾಧ ಮಾಡುವ ವ್ಯಕ್ತಿಯನ್ನು ಇಲ್ಲವೆ ಅಪರಾಧಮಾಡಿದ ವ್ಯಕ್ತಿಯನ್ನು ಮತದಾನ ಕಟ್ಟೆಯ ಮುಖ್ಯ ಅಧಿಕಾರಿಯು ಬಂಧಿಸಬಹುದು. ಇಲ್ಲವೆ ಆ ಅಧಿಕಾರಿಯು ಪೋಲೀಸು ಅಧಿಕಾರಿಗೆ ಹೇಳಿ ಅವನನ್ನು ಬಂಧನಮಾಡಿಸಬಹುದು. ಇಲ್ಲಿ ಒಂದು ಮುಖ್ಯವಾದ ಮಾತು. ಈ ಬಂಧನವು ಆ ಅಪರಾಧಿಯು ಮತದಾನ ಕಟ್ಟೆಯನ್ನು ಬಿಟ್ಟು ಹೊರಗೆ ಹೋಗುವುದರಕಿಂತ ಮುಂಚಿತವಾಗಿ ಆಗಬೇಕು. ಅಂದರೆ,ಮತದಾನಕಟ್ಟೆ ಬಿಟ್ಟು ಹೊರಗೆ ಹೋದ ಮೇಲೆ ಬಂಧನವು ಕಾಯಿದೇಶೀರ ಎನ್ನಿಸಲಾರದು ಇಲ್ಲವೆ ಮುಖ್ಯ ಅಧಿಕಾರಿಗೆ ಬಂಧಿಸುವ ಇಲ್ಲವೆ ಬಂಧನ ಮಾಡಿಸುವ ಅಧಿಕಾರ ಉಳಿಯದು ಎಂದು ಇದರಿಂದ ಸೂಚಿತವಾಗುವುದು. ಅಪರಾಧವಾಗುವ ಕಾರ್ಯವು ಮತದಾನ ಕಟ್ಟೆಯಲ್ಲಿ ಆಗಬೇಕು. ಹಾಗೂ ಮತದಾನ ಕಟ್ಟೆಯ ಮುಖ್ಯ ಅಧಿಕಾರಿಯ ಅಧಿಕಾರಕ್ಷೇತ್ರವು ಇರುವ ಸ್ಥಳದಲ್ಲಿ ಆಗಬೇಕು. ಅಂದರೆ ಅಪರಾಧಿಯ ಬಂಧನವನ್ನು ಮುಖ್ಯ ಅಧಿಕಾರಿಯಾಗಲೀ ಇಲ್ಲವೆ ಅವನ ನಿರ್ದೇಶನದಿಂದ ಪೋಲೀಸು ಅಧಿಕಾರಿಯಾಗಲೀ ಮಾಡಬಹುದಾಗಿದೆ. ಬಂಧಿಸಲ್ಪಟ್ಟ ವ್ಯಕ್ತಿಯ ಅಂಗ ಜಡತಿಯನ್ನು ಮಾಡುವ ಇಲ್ಲವೆ ಪೋಲೀಸ ಅಧಿಕಾರಿಯಿಂದ ಮಾಡಿಸುವ ಅಧಿಕಾರವು ಮತದಾನಕಟ್ಟೆಯ ಮುಖ್ಯಅಧಿಕಾರಿಗೆ ಇದೆ. ಅಂದರೆ ಬಂಧನ, ಅಂಗಜಡತಿ ಇವು ಕೇವಲ ಮುಖ್ಯಅಧಿಕಾರಿ ಇಲ್ಲವೆ ಅವನ ಆದೇಶದಮೇರೆಗೆ ಪೋಲೀಸಅಧಿಕಾರಿ ಇವರೇ ಮಾಡಬಲ್ಲರು, ಇವರೇ ಮಾಡುವ ಅಧಿಕಾರವುಳ್ಳವರು ಎಂದು ಅರ್ಥ. ಮತ್ತು ಮುಖ್ಯ ಅಧಿಕಾರಿಯ ಆದೇಶವಿಲ್ಲದೆ ಪೋಲೀಸಅಧಿಕಾರಿಯು ಸ್ವತಂತ್ರವಾಗಿ ಬಂಧನ-ಇಲ್ಲವೆ ಅಂಗಜಡತಿ ನಡೆಸಬಾರದು ಎಂದೂ ಸೂಚಿತವಾದಂತೆ.

ಅಪರಾಧಿ ವ್ಯಕ್ತಿಯು ಹೆಂಗಸಾಗಿದ್ದರೆ, ಅಂಗ ಜಡತಿ ಮಾಡಿಸುವ ಪ್ರಸಂಗ ಬಂದಾಗ ಹೆಂಗಸಿನಿಂದಲೇ ಮಾಡಿಸಬೇಕು. ಮತ್ತು ಹಾಗೆ ಅಂಗ ಜಡತಿಮಾಡುವಾಗ ಸೌಜನ್ಯ-ಸಭ್ಯತೆಯ ಮರ್ಯಾದೆಯನ್ನು ಮೀರದ ಹಾಗೆ ಅಂಗ ಜಡತಿ ಮಾಡಬೇಕು, ಎಂದು ಸ್ಪಷ್ಟವಾಗಿ ವಿಧಿಸಲಾಗಿದೆ.

ಹೀಗೆ ಅಂಗ ಜಡತಿ ಮಾಡಿದಾಗ ದೊರೆತ ಮತದಾನ ಪತ್ರಿಕೆಯನ್ನು ಯಾರ ಹತ್ತಿರ ಇಡಬೇಕು? ಮುಖ್ಯ ಅಧಿಕಾರಿಯು ಅಂಗ ಜಡತಿಯನ್ನು ಸ್ವತಃ ನಡೆಸಿದಾಗ ಸಿಕ್ಕರೆ, ಅವನು ಅದನ್ನು ಭದ್ರತೆಗಾಗಿ ಪೋಲೀಸ ಅಧಿಕಾರಿಯ ಹತ್ತಿರ ಕೊಡಬೇಕು.

ಮುಖ್ಯ ಅಧಿಕಾರಿಯ ಆದೇಶದ ಮೇರೆಗೆ ಪೋಲೀಸ ಅಧಿಕಾರಿಯು ಅಂಗ ಜಡತಿ ನಡೆಸಿದಾಗ ಸಿಕ್ಕರೆ ಆ ಪೋಲೀಸ ಅಧಿಕಾರಿಯು ಆ ಮತದಾನ ಪತ್ರಿಕೆಯನ್ನು ತನ್ನ ಹತ್ತಿರ ಭದ್ರತೆಗಾಗಿ ಇಟ್ಟುಕೊಳ್ಳಬೇಕು. ಅಂದರೆ ಅಂಗ ಜಡತಿ ಯಾರೇ ನಡಸಲಿ ಭದ್ರತೆಗಾಗಿ ಆ ಮತದಾನ ಪತ್ರಿಕೆಯನ್ನು ಪೋಲೀಸ ಅಧಿಕಾರಿಯ ಹತ್ತಿರವೇ ಇಡಬೇಕು.

ಈ ಕಲಮಿನ ಪ್ರಕಾರ ಆದ ಅಪರಾಧವು ವಾರಂಟ ಇಲ್ಲದೆ ಬಂಧನಮಾಡಲು ಯೋಗ್ಯವಾದಂತಹ ಅಪರಾಧವು.

## ೨೨. ಇತರ ಅಪರಾಧಗಳು ಮತ್ತು ಅವುಗಳಿಗಾಗಿ ದಂಡನೆ.

(೧) ಯಾವುದೇ ಚುನಾವಣೆಯಲ್ಲಿ ಈ ಕೆಳಗೆ ಹೇಳಿದಂತೆ ಮಾಡಲಾದರೆ, ಆ ವ್ಯಕ್ತಿಯು ಅಪರಾಧ ಮಾಡಿದಂತೆ.

(ಅ) ಯಾವುದೇ ನಾಮಕರಣ ಪತ್ರವನ್ನು ಮೋಸದಿಂದ ರೂಪುಗೆಡಿಸಿದರೆ ಇಲ್ಲವೆ ಮೋಸದಿಂದ ಹಾಳು ಮಾಡಿದರೆ; ಇಲ್ಲವೆ

(ಬ) ಚುನಾವಣೆಯ ಅಧಿಕಾರಿಯ ಆಜ್ಞೆಯನ್ವಯವಾಗಿ ಅಂಟಿಸಲಾದ ಯಾವುದೇ ನೋಟೀಸು ಇಲ್ಲವೆ ದಾಖಲೆ ಕಾಗದ ಇಲ್ಲವೆ ಯಾವುದೇ ಯಾದಿ, ಮೋಸದಿಂದ ರೂಪುಗೆಡಿಸಿದರೆ, ಹಾಳು ಮಾಡಿದರೆ, ಇಲ್ಲವೆ ತೆಗೆದುಹಾಕಿದರೆ; ಇಲ್ಲವೆ,

(ಕ) ಯಾವುದೇ ಮತದಾನ ಪತ್ರಿಕೆಯನ್ನು ಇಲ್ಲವೆ ಯಾವುದೇ ಮತದಾನ ಪತ್ರಿಕೆಯ ಮೇಲಿನ ಅಧಿಕೃತ ಚಿನ್ಹವನ್ನು ಮೋಸದಿಂದ ರೂಪುಗೆಡಿಸಿದರೆ ಇಲ್ಲವೆ ಮೋಸದಿಂದ ಹಾಳುಮಾಡಿದರೆ; ಇಲ್ಲವೆ

(ಡ) ಯೋಗ್ಯ ಅಧಿಕಾರವಿಲ್ಲದೆ ಯಾವುದೇ ವ್ಯಕ್ತಿಗೆ ಯಾವುದೇ ಮತದಾನ ಪತ್ರಿಕೆಯನ್ನು ಪೂರೈಸಿದರೆ; ಇಲ್ಲವೆ

(ಇ) ಮತದಾನ ಪತ್ರಿಕೆಯನ್ನು ಹಾಕುವುದರ ಸಲುವಾಗಿ ಕಾಯಿದೆ ಯಿಂದ ಅಧಿಕರಿಸಲ್ಪಟ್ಟಿದ್ದು ಮತದಾನ ಪತ್ರಿಕೆಯ ಬದಲು ಬೇರೆ ಏನನ್ನಾದರೂ ಮೋಸದಿಂದ ಮತಪೆಟ್ಟಿಗೆಯಲ್ಲಿ ಹಾಕಿದರೆ; ಇಲ್ಲವೆ,

(ಫ) ಆ ಚುನಾವಣೆಯ ಉದ್ದೇಶಗಳಿಗಾಗಿ ಉಪಯೋಗವಿರುವ ಮತ ಪೆಟ್ಟಿಗೆ ಇಲ್ಲವೆ ಮತದಾನ ಪತ್ರಿಕೆಗಳು ಇವುಗಳನ್ನು ಯೋಗ್ಯ ಅಧಿಕಾರವಿಲ್ಲದೆ ಹಾಳುಮಾಡಿದರೆ, ತೆಗೆದುಕೊಂಡರೆ, ಬಿಚ್ಚಿದರೆ ಇಲ್ಲವೆ ಇತರ ರೀತಿಯಲ್ಲಿ ಕೈ ಹಾಕಿ ದರೆ; ಇಲ್ಲವೆ,

(ಗ) ಸಂದರ್ಭಾನುಸಾರವಾಗಿ, ಮೋಸದಿಂದ ಇಲ್ಲವೆ ಯೋಗ್ಯ ಅಧಿಕಾರ ವಿಲ್ಲದೆ ಮೇಲೆ ಹೇಳಿದವುಗಳಲ್ಲಿಯ ಯಾವುದೇ ಕಾರ್ಯಗಳನ್ನು ಮಾಡಲು ಪ್ರಯತ್ನಿಸಿದರೆ ಇಲ್ಲವೆ ಬುದ್ಧಿಪೂರ್ವಕವಾಗಿ ಇಂತಹ ಯಾವುದೇ ಕಾರ್ಯಗಳನ್ನು ಮಾಡುವುದಕ್ಕೆ ನೆರವಾದರೆ ಇಲ್ಲವೆ ಪ್ರೋತ್ಸಾಹಿಸಿದರೆ,

(೨) ಈ ಕಲಮಿನನ್ವಯವಾಗಿರುವ ಅಪರಾಧ ಸಂಬಂಧವಾಗಿ ಯಾವುದೇ ವ್ಯಕ್ತಿಯು ಅಪರಾಧಿಯಾದರೆ,

(ಅ) ಅವನು ಚುನಾವಣೆಯ ಅಧಿಕಾರಿಯಾಗಿದ್ದರೆ ಇಲ್ಲವೆ ಮತದಾನ ಕಟ್ಟೆಯ ಮುಖ್ಯ ಅಧಿಕಾರಿಯಾಗಿದ್ದರೆ, ಇಲ್ಲವೆ ಚುನಾವಣೆಯು ಸಂಬಂಧವಾಗಿ ಯಾವುದೇ ಅಧಿಕೃತ ಕರ್ತವ್ಯ ನೆರವೇರಿಸುವುದಕ್ಕಾಗಿ ನೇಮಕವಾಗಿದ್ದ ಕಾರಕೂನ ಇಲ್ಲವೇ ಬೇರೆ ಯಾವುದೇ ಅಧಿಕಾರಿಯಾಗಿದ್ದರೆ, ಅವನ ಅಪರಾಧವು ಸಾಬೀತಾದರೆ, ಎರಡು ವರುಷಗಳ ವರೆಗೆ ವ್ಯಾಪಿಸಬಹುದಾದಷ್ಟು ಕಾರಾವಾಸ ಇಲ್ಲವೆ ದಂಡ ಇಲ್ಲವೆ ಎರಡೂ ದಂಡನೆಗಳಿಂದ ಶಿಕ್ಷಿತನಾಗುವನು;

(ಬ) ಅವನು ಬೇರೆ ಯಾವುದೇ ವ್ಯಕ್ತಿಯಾಗಿದ್ದರೆ, ಅವನ ಅಪರಾಧವು ಸಾಬೀತಾದರೆ, ಆರು ತಿಂಗಳ ವ್ಯಾಪಿಸಬಹುದಾದಷ್ಟು ಕಾರಾವಾಸ ಇಲ್ಲವೆ ದಂಡ ಇಲ್ಲವೆ ಎರಡೂ ದಂಡನೆಗಳಿಂದ ಶಿಕ್ಷಿತನಾಗುವನು.

(೩) ಚುನಾವಣೆಯ ನಡವಳಿಕೆಯಲ್ಲಿ ಅವನು ಭಾಗವಹಿಸಬೇಕಾಗಿದ್ದರೆ ಇಲ್ಲವೆ ಚುನಾವಣೆಯ ಭಾಗವಾಗಿರುವ ಮತಗಳ ಎಣಿಕೆಯನ್ನು ಇಲ್ಲವೆ ಚುನಾವಣೆಯಲ್ಲಿ ಉಪಯೋಗಿಸಲಾಗಿದ್ದ ಮತದಾನ ಪತ್ರಿಕೆಗಳ ಬಗ್ಗೆ ಇಂತಹ ಚುನಾವಣೆಯ ಸಂಬಂಧವಾಗಿ ಬೇರೆ ದಾಖಲೆಪತ್ರಗಳ ಬಗ್ಗೆ ಚುನಾವಣೆಯು ಮುಗಿದ ನಂತರ ಹೊಣೆಗಾರಿಕೆಯನ್ನು ಒಳಗೊಂಡ ಚುನಾವಣೆಯ ನಡೆವಳಿಕೆಯಲ್ಲಿ ಅವನು ಭಾಗವಹಿಸಬೇಕಾಗಿದ್ದರೆ, ಈ ಕಲಮಿನ ಉದ್ದೇಶಗಳಿಗಾಗಿ ಆ ವ್ಯಕ್ತಿಯು ಅಧಿಕೃತ ಕರ್ತವ್ಯಕ್ಕಾಗಿ ಇರುವನೆಂದು ಗಣಿಸಲ್ಪಡಲಾಗುವುದು. ಆದರೆ "ಅಧಿಕೃತ ಕರ್ತವ್ಯ" ಎಂಬ ಪದಪ್ರಯೋಗವು ಈ ಕಾಯಿದೆಯಿಂದ ಇಲ್ಲವೆ ಈ ಕಾಯಿದೆಯನ್ವಯವಾಗಿ ಹೇಳಲಾದ ಕರ್ತವ್ಯಗಳನ್ನು ಬಿಟ್ಟು ಬೇರೆ ಯಾವ ಕರ್ತವ್ಯಗಳನ್ನು ಒಳಗೊಳ್ಳುವುದಿಲ್ಲ.

(೪) ಉಪಕಲಮು (೨) ರ ವಾಕ್ಯಾವಳಿ (ಬ) ದನ್ವಯವಾಗಿದ್ದ ಅಪರಾಧವು ವಾರಂಟು ಪತ್ರವಿದೆ ಬಂಧಿಸಲು ಯೋಗ್ಯವಾದ ಅಪರಾಧವು.

**ವಿವೇಚನೆ**

ಚುನಾವಣೆಯನ್ನು ನಡೆಸುವ ಅಧಿಕಾರಿಗಳ ಹೊಣೆಗಾರಿಕೆಯು ವಿಶೇಷ ವಾಗಿರುತ್ತದೆ. ಅವರ ಕರ್ತವ್ಯ ಬುದ್ಧಿಯ ಮೇಲೆ ಇಡಿ ಚುನಾವಣೆಯ ಫಲಿತಾಂಶವು ಅವಲಂಬಿಸಿರುತ್ತದೆ. ಸಾರ್ವಜನಿಕ ಸೇವಕರಾದ ಅವರು ತಮ್ಮ ಕರ್ತವ್ಯವನ್ನು ಪ್ರಾಮಾಣಿಕವಾಗಿ ಕಾಯದೇಬದ್ಧವಾಗಿ ಮಾಡಬೇಕಾಗುತ್ತದೆ. ಅದಕ್ಕೆ ತಪ್ಪಿದರೆ ಅವರು ಕರ್ತವ್ಯದಲ್ಲಿ ತಪ್ಪಿದಂತಾಗುವುದು. ಮೋಸದಿಂದ ಇಲ್ಲವೆ ಬುದ್ಧಿಪೂರ್ವಕ ವಾಗಿ ಅವರು ಮಾಡಿದ ಅಪಕೃತ್ಯಗಳಿಂದ ಚುನಾವಣೆಯ ಸ್ವರೂಪವೇ ಬದಲಾಗುವ ಸಂಭವವಿರುವುದು. ಆದ್ದರಿಂದ ಅವರಿಗೆ ಶಿಕ್ಷೆಯು ಉಗ್ರವಾಗಿರುವುದು. ಅವರು ಮಾಡಬಹುದಾದ ಅಪರಾಧಗಳ ವಿವರಣೆಯು ಈ ಕಲಮಿನಲ್ಲಿದೆ.

ನಾಮಕರಣಪತ್ರ, ಮತದಾನಪತ್ರ, ಯಾವುದೇ ಯಾದಿ, ದಾಖಲೆ ಮುಂತಾದವುಗಳನ್ನು ರೂಪುಗೆಡಿಸಬಹುದು ಹಾಳುಮಾಡಬಹುದು. ಹೀಗೆ ಮಾಡು ವುದರಿಂದ ಮತಗಳ ಎಣಿಕೆಯಲ್ಲಿ ವ್ಯತ್ಯಯವುಂಟಾಗುವುದು. ಅಧಿಕಾರವಿಲ್ಲದೆ ಮತಪತ್ರಿಕೆಗಳನ್ನು ಯಾರಿಗಾದರೂ ಕೊಟ್ಟರೆ ಅಲ್ಲಿ ಸರಿಯಾದ ಮತದಾನ ನಡೆ ಯದು. ಮತಪೆಟ್ಟಿಗೆಯನ್ನು ಹಾಳುಮಾಡುವುದು ಮತಪತ್ರಿಕೆಗಳನ್ನು ಹಾಳುಮಾಡು ವುದು ಇದರಿಂದ ಚುನಾವಣೆಯ ಫಲಿತಾಂಶದಲ್ಲಿ ವ್ಯತ್ಯಯವುಂಟಾಗುವುದು. ಈ ಅಪರಾಧಗಳ ವಿವರಗಳನ್ನು ನೋಡಿದರೆ ಚುನಾವಣೆಯಲ್ಲಿ ಮತದಾನ ಕಟ್ಟೆ ಯಲ್ಲಿ, ಮತಪೆಟ್ಟಿಗೆ, ಮತಪತ್ರಿಕೆ, ಮುಂತಾದವುಗಳ ಸಂಬಂಧವಾಗಿ ನಡೆವ ಕಾರ್ಯ ಎಂಬುದು ಸ್ಪಷ್ಟವಾಗುವುದು. ಆದ್ದರಿಂದ ಉಪಕಲಮು (೨) (ಅ)ದಲ್ಲಿ ಹೇಳಿದ ವ್ಯಕ್ತಿಗಳಿಗೆ ಉಗ್ರಶಿಕ್ಷೆ ವಿಧಿಸಲಾಗಿದೆ. ಏಕೆಂದರೆ ಅವರು ಅಧಿಕಾರಿಗಳಾ ಗಿದ್ದು ಅವರ ಅಧಿಕಾರದಲ್ಲಿ ಮತಪೆಟ್ಟಿಗೆ ಮತಪತ್ರಿಕೆ, ಮುತಾದುವು ಇದ್ದು ಅವು ಗಳನ್ನು ರೂಪುಗೆಡಿಸಲು ಹಾಳುಮಾಡಲು ಅವರಿಗೆ ಎಷ್ಟು ಅವಕಾಶ ಇರುವುದೋ ಅಷ್ಟು ಬೇರೆಯವರಿಗೆ ಇರುವುದಿಲ್ಲ. ಅವರಲ್ಲಿ ಇಟ್ಟ ಇಶ್ವಾಸದ ದುರುಪಯೋಗ ಮಾಡಿದ ವ್ಯಕ್ತಿಗಳು ಅವರು ಆಗುವುದರಿಂದ ಅವರಿಂದ ಆದ ಅಪವಾಧವು ಉಗ್ರ ಶಿಕ್ಷೆಗೆ ಯೋಗ್ಯವಾಗಿರುವುದು. ಉಳಿದವರಿಗೆ ಕಡಿಮೆ ಶಿಕ್ಷೆ

ಕಲಮು ೨೦ ರಲ್ಲಿ ಹೇಳಿದಂತೆ ಇಲ್ಲಿಯೂ ಅಧಿಕೃತ ಕರ್ತವ್ಯದ ಬಗ್ಗೆ ಹೇಳ ಲಾಗಿದೆ. ಅದು ಈ ಕಾಯಿದೆಗೆ ಸಂಬಂಧಪಟ್ಟ ಕರ್ತವ್ಯವೆಂದು ಸ್ಪಷ್ಟಪಡಿಸ ಲಾಗಿದೆ. ಅಲ್ಲದೆ ಅದೂ ಚುನಾವಣೆಗೆ ಸಂಬಂಧಪಟ್ಟ ಕರ್ತವ್ಯವೆಂಬುದನ್ನು ಗಮನಿಸುವ ಹಾಗೆ ಸೂಚಿಸಲಾಗಿದೆ.

**೨೪. ಕೆಲ ಅಪರಾಧಗಳಿಗಾಗಿ ಖಟ್ಲೆ ಹಾಕುವುದು**

ಡೆಪ್ಯೂಟಿ ಕಮಿಶನರರ ಹುಕುಮಿನಿಂದ ಇಲ್ಲವೆ ಅವರ ಅಧಿಕಾರದನ್ವಯವಾಗಿ ಫಿರ್ಯಾದಿ ದಾಖಲವಾದ ಹೊರತು ಕಲಮು ೧೬ ರನ್ವಯವಾಗಿ ಇಲ್ಲವೆ ಕಲಮು

೧೭ ರನ್ವಯವಾಗಿ ಇಲ್ಲವೆ ಕಲಮು ೧೯ ರ ಉಪಕಲಮು (೨) ರ (ಅ) ವಾಕ್ಯಾವಳಿಯನ್ವಯವಾಗಿ ಶಿಕ್ಷಾರ್ಹವಾದ ಅಪರಾಧಗಳನ್ನು ಯಾವುದೇ ನ್ಯಾಯಾಲಯವು ಲಕ್ಷಿಸಕೂಡದು.

## ವಿವೇಚನೆ

೧೬ ನೆಯ ಕಲಮು ಮತದಾನ ಕಟ್ಟೆಯಲ್ಲಿ ಇಲ್ಲವೆ ಅದರ ಹತ್ತಿರ ಆದ ಅಕ್ರಮ ವರ್ತನೆಗಳ ಬಗ್ಗೆ ಇದೆ; ೧೭ ನೆಯ ಕಲಮು ಮತದಾನ ಕಟ್ಟೆಯಲ್ಲಿ ನಡೆದ ದುರ್ವರ್ತನೆಯ ಬಗ್ಗೆ ಇದೆ. ೧೯ ನೆಯ ಕಲಮಿನ ಉಪಕಲಮು (೨) ರ ವಾಕ್ಯಾವಳಿ (ಅ) ದಲ್ಲಿ ಚುನಾವಣೆಗಳಲ್ಲಿಯ ಅಧಿಕಾರಿಗಳು ಮುಂತಾದವರು ಮತ್ತು ಪೋಲೀಸು ಅಧಿಕಾರಿಗಳು ಚುನಾವಣೆಯಲ್ಲಿ ಮತಹಾಕಲು ಯಾವುದೇ ವ್ಯಕ್ತಿಯ ಮನವೊಲಿಸುವ ಬಗ್ಗೆ ಇದೆ.

ಈ ಕಲಮುಗಳಲ್ಲಿ ಹೇಳಿದ ಅಪರಾಧ ಮಾಡಿದ ವ್ಯಕ್ತಿಯ ಮೇಲೆ ಖಟ್ಲೆ ಹಾಕುವ ಮೊದಲು ಫಿರ್ಯಾದಿ ದಾಖಲ ಮಾಡುವಾಗ ಡೆಪ್ಯೂಟಿ ಕಮಿಶನರು ಆ ಬಗ್ಗೆ ಹುಕುಮು ಹೊರಡಿಸಿರಬೇಕು, ಇಲ್ಲವೆ ಅಧಿಕಾರ ಕೊಡಬೇಕು. ಅಂದರೆ ಡೆಪ್ಯೂಟಿ ಕಮಿಶನರರ ಲಕ್ಷಕ್ಕೆ ಹಾಕದೆ, ಅವರಿಂದ ಹುಕುಮು ಇಲ್ಲವೆ ಅಧಿಕಾರ ಪಡೆಯದೆ ಮೇಲೆ ಹೇಳಿದ ಕಲಮುಗಳಲ್ಲಿ ವಿವರಿಸಿದ ಅಪರಾಧಗಳ ಬಗ್ಗೆ ಖಟ್ಲೆ ನಡೆಸುವ ಫಿರ್ಯಾದಿ ಇದ್ದರೆ ಯಾವ ನ್ಯಾಯಾಲಯವೂ ಅಂತಹ ಖಟ್ಲೆ ಹಿಡಿಯಬಾರದು. ಅಂದರೆ ಡೆಪ್ಯೂಟಿ ಕಮಿಶನರರ ಹುಕುಮು ಇಲ್ಲದ ಫಿರ್ಯಾದಿಯು ಅಕ್ರಮವಾದದ್ದು ಎಂದು ತಿಳಿಯಬೇಕು.

## ೨೪. ಅಧಿಕಾರ ಕಾಲಾವಧಿ

ಈ ಕಾಯಿದೆಯಲ್ಲಿ ಬೇರೆಯಾಗಿ ಅನುಕೂಲ ಮಾಡಿಕೊಟ್ಟಿದನ್ನು ಹೊರತುಪಡಿಸಿ, ಪಂಚಾಯತದ ಸದಸ್ಯರು ನಾಲ್ಕು ವರುಷಗಳ ಕಾಲಾವಧಿಯ ವರೆಗೆ ಅಧಿಕಾರಪದದಲ್ಲಿ ಇರಬೇಕು.

ಆದರೆ, ಸರಕಾರವು ಪ್ರಕಟನೆ-ಪರಿಪತ್ರದಿಂದ ಅದರಲ್ಲಿ ಕಾಣಿಸಿದ ಕಾರಣಗಳಿಗಾಗಿ ಕಾಲಕಾಲಕ್ಕೆ ಮೇಲ್ಕಾಣಿಸಿದ ಕಾಲಾವಧಿಯನ್ನು ಒಟ್ಟಿನಲ್ಲಿ ಐದು ವರುಷ ಮಿಕ್ಕದಷ್ಟು ಕಾಲಾವಧಿಯ ವರೆಗೆ ಹೆಚ್ಚಿಸಬಹುದು.

## ವಿವೇಚನೆ

ಪಂಚಾಯತದ ಸದಸ್ಯರ ಅಧಿಕಾರ ಕಾಲಾವಧಿಯು ಸಾಮಾನ್ಯವಾಗಿ ನಾಲ್ಕು ವರುಷಗಳು ಮಾತ್ರ. ಆದರೆ ಸರಕಾರವು ಯೋಗ್ಯ ಕಾರಣಗಳಿದ್ದಾಗ

ಆ ಕಾರಣಗಳನ್ನು ವಿವರಿಸಿ ಪರಿಪತ್ರ ಪ್ರಕಟಿಸಿ ಕಾಲಾವಧಿಯನ್ನು ಹೆಚ್ಚಿಸಬಹುದು. ಹೀಗೆ ಹೆಚ್ಚಿಸಿದ ಕಾಲಾವಧಿಯು ಸಾಮಾನ್ಯ ಕಾಲಾವಧಿಯು ಕೂಡಿಕೊಂಡು ಒಟ್ಟು ಐದು ವರುಷದಕಿಂತ ಹೆಚ್ಚಿಗೆ ಆಗಬಾರದು. ಅಂದರೆ ಯಾವ ಸದಸ್ಯನು ಒಮ್ಮೆ ಚುನಾಯಿತನಾದ ಮೇಲೆ ಆ ಚುನಾವಣೆಯ ಪರಿಣಾಮವಾಗಿ ೫ ವರುಷದ ಕಿಂತ ಹೆಚ್ಚುಕಾಲ ಅಧಿಕಾರಪದದಲ್ಲಿ ಇರಲಾರನು ಎಂದು ಅರ್ಥ.

ಸರಕಾರವು ಹೆಚ್ಚಿಸುವ ಕಾಲಾವಧಿ ಒಟ್ಟಿನಲ್ಲಿ ಐದು ವರುಷ ಮಿಕ್ಕಬಾರದು ಎಂಬುದನ್ನು ನಾಲ್ಕು ಮತ್ತು ಐದು ಕೂಡಿ ಒಂಬತ್ತು ವರುಷ ಎಂದು ಅರ್ಥಮಾಡ ಬಾರದು. ಹೆಚ್ಚಿಸುವ ಕಾಲಾವಧಿಯು ನಾಲ್ಕುವರುಷದ ಕಾಲಾವಧಿಗೆ ಸಂಬಂಧ ವಿದ್ದು ಹೆಚ್ಚಿಸಿದ್ದ ಹಾಗೂ ಮೂಲದ ಕಾಲಾವಧಿ ಕೂಡಿ ಐದು ವರುಷ.

## ೨೫. ಅಧಿಕಾರ ಕಾಲಾವಧಿಯ ಪ್ರಾರಂಭ

ಸಾಧಾರಣ ಚುನಾವಣೆಯಲ್ಲಿ ಚುನಾಯಿತರಾದ ಇಲ್ಲವೆ ಕಲಮು ೫ ರನ್ವಯ ವಾಗಿ ನೇಮಕವಾದ ಸದಸ್ಯರ ಅಧಿಕಾರ ಕಾಲಾವಧಿಯು ಪಂಚಾಯತದಿಂದ ನಿವೃತ್ತಿಯಾಗುವ ಸದಸ್ಯರ ಅಧಿಕಾರ ಕಾಲಾವಧಿಯು ಮುಗಿದ ನಂತರದ ತಾರೀಖಿನಿಂದ ಇಲ್ಲವೆ ಕಲಮು ೫ ರ ಉಪಕಲಮು (೭) ರನ್ವಯವಾಗಿ ಹೆಸರುಗಳು ಪ್ರಕಟವಾದ ತಾರೀಖಿನಿಂದ ಪ್ರಾರಂಭವಾಗುವುದು.

### ವಿವೇಚನೆ

ಪಂಚಾಯತವು ನಿರಂತರವಾಗಿ ನಡೆಯುವ ಸಂಸ್ಥೆ. ಒಬ್ಬರು ಅಧಿಕಾರದಲ್ಲಿದ್ದಾಗ ಇನ್ನೊಬ್ಬ ಸದಸ್ಯರು ಅಧಿಕಾರಪದದಲ್ಲಿ ಬರಲಿಕ್ಕಾಗುವುದಿಲ್ಲ. ಆದ್ದರಿಂದ ಹೊಸ ಸಾಧಾರಣ ಚುನಾವಣೆ ನಡೆದು ಹೊಸ ಸದಸ್ಯರು ಚುನಾಯಿತರಾದರೂ ಹಳೆಯ ಸದಸ್ಯರ ಅಧಿಕಾರ ಕಾಲಾವಧಿಯು ಪ್ರಾರಂಭವಾಗುವುದಿಲ್ಲ. ನಿವೃತ್ತಿ ಹೊಂದುವ ಸದಸ್ಯರು ಎಂದು ನಿವೃತ್ತಿ ಹೊಂದುವರೋ ನಂತರದ ತಾರೀಖಿನಿಂದ ಹೊಸ ಚುನಾಯಿತರಾದ ಸದಸ್ಯರ ಅಧಿಕಾರ ಕಾಲಾವಧಿ ಪ್ರಾರಂಭವಾಗುತ್ತದೆ. ಹಳೆಯ ಸದಸ್ಯರ ಕಾಲಾವಧಿಯು ೨೦ ನೆಯ ತಾರೀಖಿಗೆ ಮುಗಿಯುತ್ತಿದ್ದರೆ ಹೊಸ ಸದಸ್ಯರ ಕಾಲಾವಧಿಯು ೨೧ಕ್ಕೆ ಪ್ರಾರಂಭವಾಗುವುದು. ಏಕೆಂದರೆ ೨೦ಕ್ಕೆ ಇನ್ನೂ ಹಳೆಯ ಸದಸ್ಯರ ಅಧಿಕಾರ ಕಾಲಾವಧಿ ಇದ್ದು ಒಬ್ಬರು ಇದ್ದಾಗ ಇನ್ನೊಬ್ಬರಿಗೆ ಅಧಿಕಾರವಿಲ್ಲ.

ನೇಮಕವಾದ ಸದಸ್ಯರ ಅಧಿಕಾರ ಕಾಲಾವಧಿಯು ಅವರ ಹೆಸರು ಎಂದು ಪ್ರಕಟವಾಗುವುದೋ ಆ ತಾರೀಖಿನಿಂದ ಪ್ರಾರಂಭವಾಗುವುದು.

## ೨೬. ಸದಸ್ಯರ ರಾಜೀನಾಮೆ

ಪಂಚಾಯತದ ಚೇರಮನ್ನರನ್ನುದ್ದೇಶಿಸಿ ಬರೆಹದಲ್ಲಿ ತನ್ನ ಸಹಿಯೊಂದಿಗೆ ಇದ್ದ ಪತ್ರದ ಮುಖಾಂತರ ಪಂಚಾಯತದ ಸದಸ್ಯನು ರಾಜೀನಾಮೆ ಕೊಡಬಹುದು. ಮತ್ತು ಇಂತಹ ರಾಜೀನಾಮೆಯ ತಾರೀಖಿನಿಂದ ಪೂರ್ತಿ ಹದಿನೈದು ದಿನಗಳ ಅವಧಿ ಮುಗಿದ ನಂತರ, ಆ ಹದಿನೈದು ದಿನಗಳ ಅವಧಿ ಮುಗಿಯುವುದರೊಳಗೆ ಚೇರಮನ್ನರನ್ನುದ್ದೇಶಿಸಿ ಬರೆಹದಲ್ಲಿ ತನ್ನ ಸಹಿಯೊಂದಿಗೆ ಪತ್ರದ ಮುಖಾಂತರ ಅಂತಹ ರಾಜೀನಾಮೆಯನ್ನು ಹಿಂತೆಗೆದುಕೊಂಡ ಹೊರತು, ಅವನ ಸ್ಥಳವು ಖಾಲಿಯಾಗತಕ್ಕದ್ದು.

### ವಿವೇಚನೆ

ಸದಸ್ಯರು ಪಂಚಾಯತದ ಸದಸ್ಯತ್ವಕ್ಕೆ ರಾಜಿನಾಮೆ ಕೊಡಬಹುದು. ಆ ರಾಜಿನಾಮೆ ಪತ್ರವು ಚೇರಮನ್ನರುದ್ದೇಶಿಸಿ ಬರೆಯಲ್ಪಟ್ಟಿರಬೇಕು. ಅದಕ್ಕೆ ಆ ಸದಸ್ಯನ ಸಹಿ ಇರಬೇಕು, ರಾಜಿನಾಮೆ ಕೊಟ್ಟ ತಾರೀಖಿನಿಂದ ಪೂರ್ತಿ ೧೫ ದಿನಗಳ ನಂತರ ರಾಜಿನಾಮೆಯ ಪರಿಣಾಮವಾಗಿ ಆ ಸದಸ್ಯನ ಸ್ಥಳವು ಖಾಲಿಯಾಗತಕ್ಕದ್ದು. ಆದರೆ ಈ ಹದಿನೈದು ದಿನಗಳು ಪೂರ್ತಿಯಾಗುವುದರೊಳಗೆ ಸದಸ್ಯನು ತನ್ನ ರಾಜಿನಾಮೆಯನ್ನು ಹಿಂತೆಗೆದುಕೊಳ್ಳಬೇಕೆನ್ನಿಸಿದರೆ, ಅವನು ಬರೆಹದಲ್ಲಿ ತನ್ನ ಸಹಿಯೊಂದಿಗೆ ಪತ್ರವನ್ನು ಚೇರಮನ್ನರಿಗೆ ಬರೆದು ಹಿಂತೆಗೆದುಕೊಳ್ಳಬಹುದು. ಹೀಗೆ ಆ ಹದಿನೈದು ದಿನಗಳು ಪೂರ್ತಿ ಆಗುವುದರೊಳಗೆ ಹಿಂತೆಗೆದುಕೊಂಡರೆ ಕೊಟ್ಟ ರಾಜೀನಾಮೆಯು ಜೀವರಹಿತವಾಗಿ ಪರಿಣಾಮ ಉಂಟುಮಾಡದು. ಹಾಗೂ ಸ್ಥಳವು ಖಾಲಿಯಾಗುವುದಿಲ್ಲ.

## ೨೭. ಚೇರಮನ್ನ ಮತ್ತು ಉಪಚೇರಮನ್ನರ ಚುನಾವಣೆ

ಪ್ರತಿಯೊಂದು ಪಂಚಾಯತವು, ಸಾಧ್ಯವಾದಷ್ಟು ಬೇಗನೆ, ಇಬ್ಬರು ಸದಸ್ಯರನ್ನು ಅನುಕ್ರಮವಾಗಿ ಪಂಚಾಯತದ ಚೇರಮನ್ನ ಮತ್ತು ಉಪಚೇರಮನ್ನ ಎಂದು ಆರಿಸತಕ್ಕದ್ದು. ಮತ್ತು ಚೇರಮನ್ನ ಇಲ್ಲವೆ ಉಪಚೇರಮನ್ನನ ಅಧಿಕಾರ ಸ್ಥಳವು ಅವನ ಮರಣ, ರಾಜೀನಾಮೆ, ತೆಗೆದಹಾಕಲ್ಪಡುವುದು ಇಲ್ಲವೆ ಬೇರೆ ಕಾರಣಗಳಿಂದ ಖಾಲಿಯಾದಾಗಲೆಲ್ಲ ಮತ್ತೊಬ್ಬ ಸದಸ್ಯನನ್ನು ಸಂದರ್ಭಾನುಸಾರವಾಗಿ ಚೇರಮನ್ನ ಇಲ್ಲವೆ ಉಪಚೇರಮನ್ನನೆಂದು ಆರಿಸತಕ್ಕದ್ದು.

### ವಿವೇಚನೆ

ಪ್ರತಿಯೊಂದು ಪಂಚಾಯತವು ತನ್ನ ಸದಸ್ಯರಲ್ಲಿಯ ಇಬ್ಬರನ್ನು ಅನುಕ್ರಮವಾಗಿ, ಒಬ್ಬರನ್ನು ಚೇರಮನ್ನ ಎಂದೂ ಇನ್ನೊಬ್ಬರನ್ನು ಉಪಚೇರಮನ್ನ ಎಂದೂ ಆರಿಸತಕ್ಕದ್ದು. ಇವರಲ್ಲಿ ಯಾರಾದರೂ ಮರಣಹೊಂದಿದರೆ, ರಾಜೀನಾಮೆ ಕೊಟ್ಟರೆ. ತೆಗೆದು ಹಾಕಲ್ಪಟ್ಟರೆ, ಇಲ್ಲವೆ ಬೇರೆ ಯಾವ ಕಾರಣದಿಂದಲಾದರೂ

ಸ್ಥಳವು ಖಾಲಿಯಾದರೆ, ಖಾಲಿ ಆದಷ್ಟು ಪ್ರಸಂಗಗಳಲ್ಲಿ ಬೇರೊಬ್ಬನನ್ನು ಆರಿಸ ತಕ್ಕದ್ದು. ಅಂದರೆ ಅಧಿಕಾರಪದವು ಖಾಲಿಯಾಗಿ ಉಳಿಯತಕ್ಕದಲ್ಲ.

**೨೮. ಚೇರಮನ್ನ ಮತ್ತು ಉಪಚೇರಮನ್ನರ ಅಧಿಕಾರ ಕಾಲಾವಧಿ**

ಈ ಕಾಯಿದೆಯಲ್ಲಿ ಬೇರೆಯಾಗಿ ಅನುಕೂಲ ಮಾಡಿದ ಹೊರತು ಚೇರಮನ್ನ ಮತ್ತು ಉಪಚೇರಮನ್ನ ಇವರು ಪಂಚಾಯತದ ಅಧಿಕಾರ ಕಾಲಾವಧಿಯ ವರೆಗೆ ಅಧಿಕಾರಪದದಲ್ಲಿ ಇರತಕ್ಕದ್ದು.

**ವಿವೇಚನೆ**

ಚೇರಮನ್ನ ಇಲ್ಲವೆ ಉಪಚೇರಮನ್ನ ಇವರು ಮೂಲಶಃ ಪಂಚಾಯತದ ಸದಸ್ಯರು. ಸದಸ್ಯರ ಅಧಿಕಾರ ಕಾಲಾವಧಿಯನ್ನು ಮೀರಿ ಅಧಿಕಾರದಲ್ಲಿ ಉಳಿಯಲು ಬರುವುದಿಲ್ಲ. ಆದ್ದರಿಂದ ಸಾಮಾನ್ಯವಾಗಿ ಚೇರಮನ್ನ ಮತ್ತು ಉಪಚೇರಮನ್ನ ಇವರ ಅಧಿಕಾರ ಕಾಲಾವಧಿಯು ಪಂಚಾಯತದ ಅಧಿಕಾರ ಕಾಲಾವಧಿ ಮುಗಿದಾಗ ಮುಗಿಯುವದು. ಆದರೆ, ಈ ಕಾಯಿದೆಯಲ್ಲಿ ಬೇರೆ ಯಾವುದೇ ಕಕ್ಷೆಯಿಂದ ಬೇರೆ ಹೇಳಲಾದರೆ, ಅಂದರೆ ಅವಸರದ-ಆಪತ್ ಪ್ರಸಂಗ ಬಂದು ಕಾಯಿದೆಯ ಪ್ರಕಾರ ಹೆಚ್ಚಿನ ಕಾಲಾವಧಿಯ ವರೆಗೆ ಉಳಿಯುವ ಅನುಕೂಲತೆ ಬಂದರೆ ಅಧಿಕಾರ ಕಾಲಾವಧಿಯು ಹೆಚ್ಚುವುದು. ಇಲ್ಲವಾದರೆ ಪಂಚಾಯತದ ಅಧಿಕಾರ ಕಾಲಾವಧಿಯು ಚೇರಮನ್ನ ಹಾಗೂ ಉಪಚೇರಮನ್ನರ ಅಧಿಕಾರ ಕಾಲಾವಧಿ.

**೨೯. ಹೊಸ ಚೇರಮನ್ನನ ಚುನಾವಣೆ ಆಗುವತನಕ ಇದ್ದ ಚೇರ ಮನ್ನನು ನಿತ್ಯ ಕರ್ತವ್ಯಗಳನ್ನು ನಡೆಸತಕ್ಕದ್ದು**

ತನ್ನ ಅಧಿಕಾರ ಕಾಲಾವಧಿಯು ಮುಗಿದ ನಂತರ ಹೊಸಚೇರಮನ್ನನ ಚುನಾವಣೆಯಾಗಿ ಅವನು ಅಧಿಕಾರ ಸ್ವೀಕಾರ ಮಾಡುವ ಸಮಯದ ವರೆಗೆ, ತನ್ನ ಅಧಿಕಾರಪದದ ದೈನಂದಿನ ಕರ್ತವ್ಯಗಳನ್ನು ಚೇರಮನ್ನನು ನಡೆಸುತ್ತ ಹೋಗತಕ್ಕದ್ದು.

**ವಿವೇಚನೆ**

ಪರಂಪರೆಯುಳ್ಳ ಹಾಗೂ ನಿರಂತರವಾಗಿ ನಡೆಯುವ ಸಂಸ್ಥೆಯು ಪಂಚಾಯ ತವು ಆಗಿರುವುದರಿಂದ ಇನ್ನೊಬ್ಬ ಅಧಿಕೃತ ವ್ಯಕ್ತಿಯು ಅಧಿಕಾರ ಸ್ವೀಕಾರ ಮಾಡು ವರೆಗೆ ಇದ್ದ ಅಧಿಕಾರಿಯು ತನ್ನ ದೈನಂದಿನ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು. ತನ್ನ ಅಧಿಕಾರ ಕಾಲಾವಧಿ ಮುಗಿದಿದೆಯೆಂದು ಬಿಡುವಂತಿಲ್ಲ. ಏಕೆಂದರೆ ಹೊಸ ಚೇರಮನ್ನ ಇನ್ನೂ ಚುನಾಯಿತರಾಗಿರುವುದಿಲ್ಲ. ಅಂದರೆ ಹಳೆಯವನಾಗಲಿ ಹೊಸಬನಾಗಲೀ ಯಾರಾವರೂ ಚೇರಮನ್ನರೆಂದು ಪಂಚಾಯತಕ್ಕೆ ಇರಲೇಬೇಕು. ಅಧಿಕಾರ ಕಾಲಾವಧಿ ಮುಗಿದಿದೆಯೆಂಬುಂದು ಬಾಧಕವಲ್ಲ. ಅಂದರೆ ಚೇರಮನ್ನ ನಿಲ್ಲದೆ ಪಂಚಾಯತವಿಲ್ಲವೆಂದ ಹಾಗಾಯಿತು. ಈ ಮಾತು ಉಳಿದ ಸದಸ್ಯರಿಗೆ

ಇಲ್ಲವೆ ಉಪಚೇರಮನ್ನರಿಗೆ ಅನ್ವಯಿಸುವುದಿಲ್ಲವೆಂದ ಹಾಗಾಯಿತು. ಚೇರಮನ್ನನು ಪಂಚಾಯತ ಸಂಸ್ಥೆಯು ನಿತ್ಯಶಾಶ್ವತ ವಾಗಿದೆಯೆಂಬುದರ ಪ್ರತೀಕವಾಗಿದ್ದಂತೆ.

**೩೦. ಪಂಚಾಯತ ಸ್ಥಾಪನೆ ಮುಂತಾದುವು ಆದನಂತರ ಚೇರಮನ್ನನ ಚುನಾವಣೆ**

(೧) ಈ ಕಾಯಿದೆಯನ್ವಯವಾಗಿ ಮೊದಲನೆಯ ಸಲ ಪಂಚಾಯತವು ಸ್ಥಾಪನೆಯಾದನಂತರ, ಇಲ್ಲವೆ, ಕಲಮು ೯೨ ರನ್ವಯ ಅದರ ಪುನಾರಚನೆ ಇಲ್ಲವೆ ಸ್ಥಾಪನೆಯಾದ ನಂತರ ಇಲ್ಲವೆ ಪಂಚಾಯತದ ಸದಸ್ಯರ ಅಧಿಕಾರ ಕಾಲಾವಧಿ ಮುಗಿದು ಪುನಃ ರಚಿತವಾದ ನಂತರ ಕಲಮು ೨೫ ರನ್ವಯವಾಗಿ ಪಂಚಾಯತದ ಸದಸ್ಯರ ಅಧಿಕಾರ ಕಾಲಾವಧಿಯು ಪ್ರಾರಂಭವಾದ ತಾರೀಖಿನಿಂದ ನಾಲ್ಕು ವಾರ ಗಳ ಒಳಗೆ ಸದಸ್ಯರ ಸಭೆಯು ಗೊತ್ತುಮಾಡಲ್ಪಟ್ಟ ಅಧಿಕಾರಿಯಿಂದ ಕರೆಯಲ್ಪಡ ತಕ್ಕದ್ದು. ಆ ಅಧಿಕಾರಿಯು ಸಭೆಯ ಅಧ್ಯಕ್ಷತೆ ವಹಿಸತಕ್ಕದ್ದು. ಆದರೆ ಅವನಿಗೆ ಮತದಾನದ ಅಧಿಕಾರ ಇರತಕ್ಕದ್ದಲ್ಲ. ಮತ್ತು ಆ ಸಭೆಯು ಚೇರಮನ್ನನ ಚುನಾವಣೆಗೆ ತೊಡಗತಕ್ಕದ್ದು. ಮತಗಳು ಸಮ ಸಂಖ್ಯೆಯಲ್ಲಿ ಬಿದ್ದದ್ದಾದರೆ ಸಭೆಯ ಅಧ್ಯಕ್ಷತೆ ವಹಿಸಿದ್ದ ಅಧಿಕಾರಿಯು ನಿರ್ಣಯಿಸಬಹುದಾದ ರೀತಿಯಲ್ಲಿ ಚೀಟಿ ಹಾಕಿ ತೆಗೆದು ಚುನಾವಣೆಯ ಫಲಿತಾಂಶವು ನಿರ್ಣಯಿಸಲ್ಪಡತಕ್ಕದ್ದು.

(೨) ಉಪಕಲಮು (೧) ರನ್ವಯವಾಗಿ ನಡೆದ ಇಲ್ಲವೆ ಕಲಮು ೨೭ ರನ್ವಯವಾಗಿ ನಡೆದ ಚೇರಮನ್ ಇಲ್ಲವೆ ಉಪಚೇರಮನ್ನನ ಚುನಾವಣೆಯು ಕಾಯಿದೆಬದ್ಧತೆಯ ಸಂಬಂಧವಾಗಿ ಯಾವುದೇ ತಂಟೆಯು ಗೊತ್ತು ಮಾಡಿದ ನ್ಯಾಯಾಧಿಕಾರಿಯಿಂದ ನಿರ್ಣಯಿಸಲ್ಪಡತಕ್ಕದ್ದು. ಆ ತಂಟೆಯ ಬಗ್ಗೆ ಗೊತ್ತು ಮಾಡಿದ ನ್ಯಾಯಾಧಿಕಾರಿಯ ನಿರ್ಣಯವು ಕೊನೆಯದಾಗತಕ್ಕದ್ದು. ಮತ್ತು ಇಂತಹ ಯಾವುದೇ ನಿರ್ಣಯದ ವಿಷಯವಾಗಿ ಯಾವುದೇ ನ್ಯಾಯಾಲಯದಲ್ಲಿ ಯಾವುದೇ ದಾವೆ ಇಲ್ಲವೆ ಬೇರೆ ವ್ಯವಹರಣೆ ನಡೆಯಲವಕಾಶವಿಲ್ಲ.

**ವಿವೇಚನೆ**

ಪಂಚಾಯತವು ಹೊಸದಾಗಿ ಸ್ಥಾಪನೆಯಾಗಿದ್ದರೆ, ಅದರ ರಚನೆಯಾದ ನಂತರ ಇಲ್ಲವೆ ಅದು ಪುನಾರಚನೆಯಾಗಿದ್ದರೆ ಆ ನಂತರ ಇಲ್ಲವೆ ಕಲಮು ೯೨ ರನ್ವಯವಾಗಿ ಗ್ರಾಮದ ಪ್ರಾದೇಶಿಕ ಮಿತಿಯಲ್ಲಿ ಸ್ಥಿತ್ಯಂತರವಾಗಿ ಪಂಚಾಯತವು ವಿಸರ್ಜಿತವಾಗಿ ಪುನಃ ರಚಿತವಾದನಂತರ ಚೇರಮನ್ನನ ಚುನಾವಣೆ ನಡೆಯ ತಕ್ಕದ್ದು. ಸದಸ್ಯರ ಅಧಿಕಾರ ಕಾಲಾವಧಿ ಪ್ರಾರಂಭವಾದ ತಾರೀಖಿನಿಂದ ನಾಲ್ಕು ವಾರಗಳ ಒಳಗೆ ಚೇರಮನ್ನರ ಚುನಾವಣೆ ನಡೆಯತಕ್ಕದ್ದು. ಸದಸ್ಯರು ಚುನಾ ಯಿಸುವವರು. ಆದರೂ ಆ ಸಭೆಗೆ ಗೊತ್ತುಮಾಡಿದ ಬೇರೊಬ್ಬ ಅಧಿಕಾರಿಯು ಅಧ್ಯಕ್ಷನು. ಅವನಿಗೆ ಮತಾಧಿಕಾರವಿಲ್ಲ. ಚುನಾವಣೆ ನಡೆದು ಮತಗಳ ಸಂಖ್ಯೆ

ಯಲ್ಲಿ ಸಮವಾದರೆ, ಅಧ್ಯಕ್ಷನಾಗಿದ್ದ ಅಧಿಕಾರಿಯು ನಿರ್ದಿಷ್ಟ ಪಡಿಸುವ ರೀತಿಯಲ್ಲಿ ಚೀಟಿಹಾಕಿ ತೆಗೆದು ಯಾವ ಹೆಸರು ಚೀಟಿಯಲ್ಲಿ ಬರುವುದೋ ಅವನಿಗೆ ಹೆಚ್ಚಿನ ಒಂದು ಮತ ಬಂದಂತೆ ಅವನು ಚುನಾಯಿತನಾದರೆಂದು ಆ ಅಧ್ಯಕ್ಷನು ನಿರ್ಣಯಿಸತಕ್ಕದ್ದು.

ಉಪಕಲಮು ೧ ರಲ್ಲಿ ಚೇರಮನ್ನನ ಚುನಾವಣೆಯ ಬಗ್ಗೆ ಹೇಳಿದೆ. ಅದರಲ್ಲಿ ಉಪಚೇರಮನ್ನನ ಚುನಾವಣೆಯ ಬಗ್ಗೆ ಹೇಳಿಲ್ಲ. ಆದರೆ ಉಪಕಲಮು (೨) ರಲ್ಲಿ ಚುನಾವಣೆಯ ತಂಟೆಯ ಬಗ್ಗೆ ಹೇಳುವಾಗ ಚೇರಮನ್ನ ಹಾಗೂ ಉಪಚೇರಮನ್ನರ ಚುನಾವಣೆಯ ಬಗ್ಗೆ ಎಂದೂ ಅದೂ ಉಪಕಲಮು ೧ ರನ್ವಯವಾಗಿ ಎಂದೂ ಸೂಚಿಸಲಾಗಿದೆ. ಚೇರಮನ್ನ ಶಬ್ದದಲ್ಲಿ ಉಪಚೇರಮನ್ನ ಎಂಬುದು ಚುನಾವಣೆಯ ಸಲುವಾಗಿ ಈ ಕಲಮಿನ ಉದ್ದೇಶಕ್ಕಾಗಿ ಬರುವುದೆಂದು ತಿಳಿಯಬೇಕಾಗುವುದು. ಏಕೆಂದರೆ ತಂಟೆಯು ಕಲಮು ೨೭ ರನ್ವಯವಾಗಿದ್ದರೂ ಅದರ ಬಗ್ಗೆ ಪ್ರತ್ಯೇಕವಾಗಿ ಹೇಳಲಾಗಿದೆ.

ಈ ತಂಟೆಯ ನಿರ್ಣಯವು ನ್ಯಾಯಾಧಿಕಾರಿಯ ಕಡೆಗೆ ಎಂದು ಹೇಳಲಾಗಿದೆ. ಈ ನ್ಯಾಯಾಧಿಕಾರಿ ಯಾರು ಎಂಬುದನ್ನು ಗೊತ್ತುಪಡಿಸಲಾಗುವುದು. ಅಂದರೆ ನಿಯಮಗಳಿಂದ ಗೊತ್ತುಪಡಿಸಲಾಗುವುದು. ಹೀಗೆ ಗೊತ್ತುಪಡಿಸಲಾದ ನ್ಯಾಯಾಧಿಕಾರಿಯು ಕೊಟ್ಟ ನಿರ್ಣಯವು ಕೊನೆಯದು. ಆ ನಿರ್ಣಯದ ವಿಷಯವಾಗಿ ಯಾವುದೇ ನ್ಯಾಯಾಲಯದಲ್ಲಿ ದಾವೆ ಮುಂತಾದ್ದು ತರಲಿಕ್ಕೆ ಬರುವುದಿಲ್ಲ, ಎಂದು ಹೇಳಲಾಗಿದೆ. ಅಂದರೆ ಅಪೀಲು ಮುಂತಾದ್ದು ಯಾವುದೂ ಇಲ್ಲ ಎಂದು ಸೂಚಿತವಾಯಿತು.

## ೩೧. ಚೇರಮನ್ನ ಇಲ್ಲವೆ ಉಪಚೇರಮನ್ನನ ರಾಜೀನಾಮೆ

(೧) ಉಪಚೇರಮನ್ನನು ಚೇರಮನ್ನನಿಗೆ ಉದ್ದೇಶಿಸಿ ಮತ್ತು ಚೇರಮನ್ನನ ಗೈರಹಾಜರಿಯಿದ್ದರೆ, ಅಸಿಸ್ಟಂಟ ಕಮಿಶನರರನ್ನುದ್ದೇಶಿಸಿ ಬರೆಹದಲ್ಲಿ ತನ್ನ ಸಹಿಯೊಂದಿಗೆ ಪತ್ರಕಳಿಸಿ ತನ್ನ ಅಧಿಕಾರಪದಕ್ಕೆ ರಾಜೀನಾಮೆ ಕೊಡಬಹುದು.

(೨) ಚೇರಮನ್ನನು ಅಸಿಸ್ಟಂಟ ಕಮಿಶನರರನ್ನು ಉದ್ದೇಶಿಸಿ ಬರೆಹದಲ್ಲಿ ತನ್ನ ಸಹಿಯೊಂದಿಗೆ ಪತ್ರಕಳಿಸಿ ತನ್ನ ಅಧಿಕಾರಪದಕ್ಕೆ ರಾಜೀನಾಮೆ ಕೊಡಬಹುದು.

(೩) ಉಪಕಲಮು (೧) ಇಲ್ಲವೆ (೨) ರನ್ವಯವಾಗಿ ಕೊಡಮಾಡಿದ ರಾಜೀನಾಮೆಗಳು ಅವು ಸ್ವೀಕೃತವಾದ ತಾರೀಖಿನಿಂದ ಪರಿಣಾಮಕಾರಿಯಾಗುವುವು.

### ವಿವೇಚನೆ

ರಾಜೀನಾಮೆಯು ಬರೆಹದಲ್ಲಿರಬೇಕು. ಸಹಿಮಾಡಲ್ಪಟ್ಟಿರಬೇಕು. ಉಪಚೇರಮನ್ನನು ಚೇರಮನ್ನರ ಕಡೆಗೆ ಕಳಿಸಬೇಕು. ಚೇರಮನ್ನರು ಸಿಕ್ಕದಿದ್ದರೆ

ಅಸಿಸ್ಟಂಟ ಕಮಿಶನರ ಕಡೆಗೆ ಕಳಿಸಬೇಕು. ಚೇರಮನ್ನರು ತಮ್ಮ ರಾಜೀನಾಮೆ ಯನ್ನು ಅಸಿಸ್ಟಂಟ ಕಮಿಶನರ ಕಳಿಸಬೇಕು. ರಾಜೀನಾಮೆಯು ಪರಿಣಾಮಕಾರಿ ಯಾಗುವುದು ಅದು ಸ್ವೀಕರಿಸಲ್ಪಟ್ಟ ತಾರೀಖಿನಿಂದ; ಕೊಟ್ಟ ತಾರೀಖಿನಿಂದಲ್ಲ. ಅಲ್ಲಿಯ ವರೆಗೆ ರಾಜಿನಾಮೆ ಕೊಟ್ಟವರು ಅಧಿಕಾರದಲ್ಲಿ ಉಳಿದಂತೆಯು.

**೩೨. ಅವಿಶ್ವಾಸದ ಠರಾವು**

(೧) ಚೇರಮನ್ನ ಇಲ್ಲವೆ ಉಪಚೇರಮನ್ನನ ವಿರುದ್ಧ ಗೊತ್ತುಪಡಿಸಬಹು ದಾದ ರೀತಿಯಲ್ಲಿ ನೋಟೀಸು ಕೊಟ್ಟ ನಂತರ ಯಾವುದೇ ಸದಸ್ಯನಿಂದ ಅವಿಶ್ವಾಸದ ಠರಾವು ಮಂಡಿಸಲ್ಪಡಬಹುದು. ಮತ್ತು ಆ ನೋಟೀಸು ಪಂಚಾಯತದ ಒಟ್ಟು ಸದಸ್ಯಸಂಖ್ಯೆಯ ಒಂದು ಮೂರಾಂಶದಕಿಂತ ಕಡಿಮೆಯಲ್ಲದಷ್ಟು ಸದಸ್ಯರಿಂದ ಬೆಂಬಲಿಸಲ್ಪಟ್ಟಿರಬೇಕು. ಆ ನೋಟೀಸು ಕೊಟ್ಟ ತಾರೀಖಿನಿಂದ ಮುವ್ವತ್ತು ದಿವಸಗಳ ಒಳಗೆ ಚೇರಮನ್ನನು ಆ ಠರಾವಿನ ವಿಚಾರಕ್ಕಾಗಿ ಸಭೆಯನ್ನು ಕರೆಯ ದಿದ್ದರೆ, ತಾಲೂಕ ಬೋರ್ಡಿನ ಮುಖ್ಯ ಕಾರ್ಯಾಧಿಕಾರಿ (ಚೀಫ ಎಕ್ಜಿಕ್ಯೂಟಿವ್ಹ ಅಫೀಸರ) ಯು ಸ್ವತಃ ಸಭೆಯನ್ನು ಕರೆಯತಕ್ಕದ್ದು.

(೨) ಚೇರಮನ್ನ ಇಲ್ಲವೆ ಉಪಚೇರಮನ್ನನ ವಿರುದ್ಧವಾಗಿರುವ ಠರಾವು ಒಟ್ಟು ಸದಸ್ಯ ಸಂಖ್ಯೆಯ ಎರಡು ಮೂರಾಂಶದಕಿಂತ ಕಡಿಮೆಯಲ್ಲದಷ್ಟು ಬಹು ಮತದಿಂದ ಸ್ವೀಕರಿಸಲ್ಪಟ್ಟರೆ, ಸಂದರ್ಭಾನುಸಾರವಾಗಿ, ಚೇರಮನ್ನ ಇಲ್ಲವೆ ಉಪಚೇರಮನ್ನನು ಡೆಪ್ಯೂಟಿ ಕಮಿಶನರನಿಂದ ಅಧಿಕಾರಪದದಿಂದ ತೆಗೆದು ಹಾಕಲ್ಪಡುವನು.

ಆದರೆ, ಠರಾವು ಸ್ವೀಕೃತವಾದ ದಿನದಿಂದ ಅರವತ್ತು ದಿನಗಳು ಮುಗಿದ ಮೇಲೆ, ಆ ಅವಧಿಯಲ್ಲಿ ತೆಗೆದುಹಾಕಲ್ಪಡುವ ಬಗ್ಗೆ ಯಾವ ಹುಕುಮು ಆಗಿರ ದಿದ್ದರೆ, ಚೇರಮನ್ನ ಇಲ್ಲವೆ ಉಪಚೇರಮನ್ನನು ತನ್ನ ಅಧಿಕಾರಪದದ ಸ್ಥಳವನ್ನು ಖಾಲಿಮಾಡತಕ್ಕದ್ದು.

(೩) ಈ ಕಾಯಿದೆಯಲ್ಲಿ ಇಲ್ಲವೆ ಈ ಕಾಯಿದೆಯನ್ವಯವಾಗಿ ಏನೇ ಹೇಳ ಲಾಗಿದ್ದರೂ ಚೇರಮನ್ನ ಇಲ್ಲವೆ ಉಪಚೇರಮನ್ನನು ಯಾವ ಸಭೆಯಲ್ಲಿ ಅವಿಶ್ವಾ ಸದ ಠರಾವು ಚರ್ಚಿಸಲ್ಪಡುವುದೋ ಆ ಸಭೆಯ ಅಧ್ಯಕ್ಷತೆಯನ್ನು ವಹಿಸಕೂಡದು. ಆದರೆ ಅವನಿಗೆ ಪಂಚಾಯತದ ಕಾರ್ಯಕಲಾಪಗಳಲ್ಲಿ ಮಾತನಾಡುವ ಹಕ್ಕು ಮತ್ತು ಇತರ ರೀತಿಯಲ್ಲಿ ಭಾಗವಹಿಸಿದ ಹಕ್ಕು ಅದೆ.

**ವಿವೇಚನೆ**

ಕಲಮು ೩೧ ರಲ್ಲಿ ಚೇರಮನ್ನ ಇಲ್ಲವೆ ಉಪಚೇರಮನ್ನ ಇವರ ರಾಜೀ ನಾಮೆಯ ಬಗ್ಗೆ ಹೇಳಲಾಯಿತು. ಅಂದರೆ ಅವರು ತಾವಾಗಿಯೆ ಅಧಿಕಾರಪದ ಬಿಟ್ಟು ಹೋಗುವ ವಿಷಯ ಅದು. ಆದರೆ ಪಂಚಾಯತದ ಸದಸ್ಯರಿಗೆ ಅವರು

ಅಧಿಕಾರದಲ್ಲಿರುವುದು ಬೇಕಾಗಿರದ ಹಾಗೆ ಪ್ರಸಂಗಗಳು ಉಂಟಾದರೆ ಅವಿಶ್ವಾಸದ ಠರಾವು ಒಂದು ಮಾರ್ಗ.

ಅವಿಶ್ವಾಸದ ಠರಾವು ಮಂಡಿಸಲು ಒಂದು ಕ್ರಮವಿದೆ. ಯಾವುದೇ ಸದಸ್ಯನು ಆ ಠರಾವು ಮಂಡಿಸಬಹುದು. ಆದರೆ ಅದಕ್ಕೆ ಪೂರ್ವಭಾವಿಯಾಗಿ ನೋಟೀಸು ಕೊಡತಕ್ಕದ್ದು. ಅದನ್ನು ನಿಯಮಗಳು ಗೊತ್ತು ಮಾಡುವ ರೀತಿಯಲ್ಲಿ ಕೊಡತಕ್ಕದ್ದು. ಆ ನೋಟೀಸಿಗೆ ಪಂಚಾಯತದ ಸದಸ್ಯರ ಒಟ್ಟು ಸಂಖ್ಯೆಯಲ್ಲಿ ಒಂದು ಮೂರಾಂಶದಕಿಂತ ಕಡಿಮೆ ಆಗಲಾರದಷ್ಟು ಸದಸ್ಯರ ಬೆಂಬಲ ಇರತಕ್ಕದ್ದು. ಅಂದರೆ ಅವಿಶ್ವಾಸದ ಠರಾವು ಮಂಡಿಸಲಿಕ್ಕೆ ಬರುವುದು. ಈ ಕ್ರಮದಿಂದ ಯಾರ ವಿರುದ್ಧ ಅವಿಶ್ವಾಸದ ಠರಾವು ಮಂಡಿಸಲ್ಪಡುವುದೋ ಅವರಿಗೆ ವಿಷಯವು ತಿಳಿವುದು; ತಮ್ಮ ಬಗ್ಗೆ ಎಷ್ಟು ಸದಸ್ಯರ ಅಭಿಪ್ರಾಯವು ಹಾಗೆ ಆಗಿರುವುದು ಎಂಬುದು ತಿಳಿವುದು. ಒಂದು ಮೂರಾಂಶ ಸದಸ್ಯರಾದರೂ ಅವಿಶ್ವಾದ ಠರಾವಿಗೆ ಬೆಂಬಲಿಗರಿದ್ದಿಲ್ಲವಾದರೆ ಆ ಠರಾವು ಮಂಡಿಸಲು ಯೋಗ್ಯವಾಗುವುದಿಲ್ಲ. ಏಕೆಂದರೆ ಯಾರಾದರೂ ಒಬ್ಬಿಬ್ಬರು ಹೊಂದಿಕೆ ಆಗಲಾರದವರು ಎಲ್ಲಿಯಾದರೂ ಇದ್ದೇ ಇರುವರು. ಅದರಿಂದ ಸಂಸ್ಥೆಯ ಆಡಳಿತಕ್ಕೆ ವ್ಯತ್ಯಯ ಉಂಟಾಗಬಾರದು ಎಂದು ಈ ನಿರ್ಬಂಧವನ್ನು ಹಾಕಲಾಗಿದೆ.

ನೋಟೀಸು ಕೊಟ್ಟ ತಾರೀಖಿನಿಂದ ೩೦ ದಿನಗಳಲ್ಲಿ ಚೇರಮನ್ನನು ಪಂಚಾಯತದ ಸಂಭೆಯನ್ನು ಈ ಠರಾವು ಚರ್ಚಿಸುವುದಕ್ಕೆ ಕರೆಯತಕ್ಕದ್ದು. ಚೇರಮನ್ನನು ಸಭೆ ಕರೆಯದಿದ್ದರೆ, ತಾಲೂಕ ಬೋರ್ಡದ ಮುಖ್ಯ ಕಾರ್ಯಾಧಿಕಾರಿಯು ಆ ಸಭೆಯನ್ನು ಕರೆಯತಕ್ಕದ್ದು. ಚೇರಮನ್ನನು ಕರೆಯಬೇಕಾದ ಸಭೆಯನ್ನು ಕರೆದಿಲ್ಲವೆಂದು ತಾಲೂಕ ಬೋರ್ಡದ ಮುಖ್ಯ ಕಾರ್ಯಾಧಿಕಾರಿಗೆ ತಿಳಿಸಬೇಕಾಗುವುದೆಂಬುದು ಇದರಿಂದ ಸೂಚಿತವಾಯಿತು.

ಸಭೆಯು ಕರೆಯಲ್ಪಟ್ಟ ಮೇಲೆ ಠರಾವು ಚರ್ಚೆಯಾಗಿ ಅದು ಬಹುಮತದಿಂದ ಸ್ವೀಕರಿಸಲ್ಪಡತಕ್ಕದ್ದು. ಈ ಬಹುಮತವು ನಿರ್ದಿಷ್ಟವಾದ ಬಹುಮತವು. ಪಂಚಾಯತದ ಒಟ್ಟು ಸಂಖ್ಯೆಯಲ್ಲಿ ಎರಡುಮೂರಾಂಶಕ್ಕೆ ಕಡಿಮೆಯಾಗದಷ್ಟು ಬಹುಮತ. ಅಂದರೆ ಚೇರಮನ್ನನಾಗಲಿ ಉಪಚೇರಮನ್ನನಾಗಲೀ ಪಂಚಾಯತ ಸದಸ್ಯರಲ್ಲಿಯ ಬಹುಜನರ ವಿಶ್ವಾಸವನ್ನು ಕಳೆದುಕೊಂಡಿದ್ದಾನೆಂದು ಸ್ಪಷ್ಟವಾಗುವುದು. ಹಾಗೆ ಸ್ಪಷ್ಟವಾದ ಹೊರತು ಅದು ಪಂಚಾಯತದ ನಿಜವಾದ ಅಭಿಪ್ರಾಯವಲ್ಲ ಎಂದು ತಿಳಿಯಬೇಕಾಗುವುದು. ಠರಾವು ಮೇಲೆ ಹೇಳಿದ ನಿರ್ದಿಷ್ಟ ಬಹುಮತದಿಂದ ಸ್ವೀಕೃತವಾದರೆ ಅದನ್ನು ಡೆಪ್ಯೂಟಿ ಕಮಿಶನರ ಕಡೆಗೆ ಕಳಿಸಬೇಕಾಗುವದೆಂಬ ಹಾಗೆ ಇಲ್ಲಿ ಸೂಚನೆ ಇದೆ, ಏಕೆಂದರೆ ಡೆಪ್ಯೂಟಿ ಕಮಿಶನರರು ಚೇರಮನ್ನರನ್ನು ಇಲ್ಲವೆ ಉಪಚೇರಮನ್ನರನ್ನು ಅಧಿಕಾರ ಪದದಿಂದ ತೆಗೆದುಹಾಕುವರು.

ಚುನಾವಣೆ ಮಾಡುವವರು ಪಂಚಾಯತದ ಸದಸ್ಯರಾದರೂ ಚೇರಮನ್ನ-ಉಪ ಚೇರಮನ್ನರ ವಿರುದ್ಧ ಅವಿಶ್ವಾಸದ ಠರಾವು ಪಂಚಾಯತವು ಸ್ವೀಕರಿಸಿದ್ದರೂ ಡೆಪ್ಯೂಟಿ ಕಮಿಶನರರು ತೆಗೆದುಹಾಕಬೇಕಾಗುತ್ತದೆ. ಡೆಪ್ಯೂಟಿ ಕಮೀಶನರರಿಂದ ಹಾಗೆ ತೆಗೆದುಹಾಕಲಾಗಿದೆಯೆಂದು ತಿಳಿಸದ ಹೊರತು ಚೇರಮನ್ನ-ಇಲ್ಲವೆ ಉಪ ಚೇರಮನ್ನ ಅಧಿಕಾರದಲ್ಲಿ ಉಳಿವಂತೆ. ಆದರೆ ಡೆಪ್ಯೂಟಿ ಕಮೀಶನರರಿಗೆ ಒಂದು ಅವಕಾಶಕೊಡಲಾಗಿವೆ. ಅವಿಶ್ವಾಸದ ಠರಾವು ಸ್ವೀಕೃತವಾದ ೬೦ ದಿನಗಳಲ್ಲಿ ಡೆ. ಕಮಿಶನರರು ಆಜ್ಞೆಹೊರಡಿಸಬೇಕು. ಆ ಅವಧಿಯಲ್ಲಿ ಡೆ. ಕಮಿಶನರರು ಚೇರ ಮನ್ನ ಇಲ್ಲವೆ ಉಪಚೇರಮನ್ನ ಇವರನ್ನು ತೆಗೆದುಹಾಕಲಾಗಿದೆಯೆಂದು ಆಜ್ಞೆ ಹೊರಡಿಸದಿದ್ದರೆ ಠರಾವಿನ ನಂತರ ೬೦ ದಿನಗಳ ವರೆಗೆ ಚೇರಮನ್ನ ಇಲ್ಲವೆ ಉಪ ಚೇರಮನ್ನರ ಅಧಿಕಾರ ಎಂದ ಹಾಗಾಯಿತು. ಆ ಅರವತ್ತು ದಿನಗಳ ನಂತರ ಮಾತ್ರ ಡೆ. ಕಮಿಶನರರ ಆಜ್ಞೆ ಇಲ್ಲದಿದ್ದರೂ ಅಧಿಕಾರ ಸ್ಥಳವನ್ನು ಚೇರಮನ್ನ ನಾಗಲೀ ಉಪಚೇರಮನ್ನನಾಗಲೀ ಖಾಲೀ ಮಾಡಲಿಕ್ಕೇಬೇಕು.

ಈ ಅವಿಶ್ವಾಸದ ಠರಾವು ಚರ್ಚೆ ನಡೆವ ಸಭೆಗೆ ಚೇರಮನ್ನನಾಗಲೀ ಉಪ ಚೇರಮನ್ನನಾಗಲೀ ಅಧ್ಯಕ್ಷಸ್ಥಾನದಲ್ಲಿ ಇರತಕ್ಕದ್ದಲ್ಲ. ಆದರೆ ಅವರು ಆ ಸಭೆಯಲ್ಲಿ ಮಾತಾಡಲು ಹಾಗೂ ಭಾಗವಹಿಸಲು ಅವರಿಗೆ ಸಂಪೂರ್ಣ ಅವಕಾಶವಿದೆ. ಅವಿಶ್ವಾಸದ ಠರಾವು ಚೇರಮನ್ನ ಇಲ್ಲವ ಉಪಚೇರಮನ್ನ ಅಧಿಕಾರ ಪದಕ್ಕಾಗಿ ಇರುವುದೆ ಹೊರತು ಸದಸ್ಯತ್ವಕ್ಕೆ ಅಲ್ಲ. ಅಧಿಕಾರಪದ ಕಳೆದುಕೊಂಡರೂ ಅವರು ಸದಸ್ಯರಾಗಿ ಉಳಿವರು.

### ೩೩ ಸಭೆಗಳ ಕಾರ್ಯಪದ್ಧತಿ

ಈ ಕಾಯಿದೆಯ ಕಕ್ಷೆಗಳಿಗಂಕಿತವಾಗಿ ಪಂಚಾಯತದ ಸಭೆಗಳ ಕಾರ್ಯ ಪದ್ಧತಿಯು ಆ ಉದ್ದೇಶಗಳಿಗಾಗಿ ಮಾಡಲಾದ ಪೋಟ ನಿಯಮ (Bye Laws) ಗಳ ಅನುಸಾರವಾಗಿ ಇರತಕ್ಕದ್ದು.

### ವಿವೇಚನೆ

ಕಾರ್ಯಪದ್ಧತಿಯು ಒಂದು ಮಹತ್ವದ ವಿಷಯ. ತಂಟೆ ತಕರಾರು ಇಲ್ಲ ದಾಗ ಯಾವ ಪದ್ಧತಿಯನ್ನೂ ಅನುಸರಿಸಿ ಕೆಲಸ ನೆರವೇರಿಸಬಹುದು. ಕೆಲಸ ನೆರವೇರುವುದು ಮುಖ್ಯ. ಆದರೆ ಮಾಡಲಾದ ಕಾರ್ಯವು ಕಾಯಿದೆಬದ್ಧವಾಗಿ ದೆಯೋ ಇಲ್ಲವೊ ಎಂಬ ಪ್ರಶ್ನೆ ಬಂದಾಗ ಅದಕ್ಕೆ ಕೆಲ ಕಟ್ಟು ನಿಟ್ಟುಗಳ ಆಧಾರ ಬೇಕಾಗುತ್ತದೆ. ಆ ಕಟ್ಟು ನಿಟ್ಟುಗಳ ಅಳತೆ ಗೋಲಿನಿಂದ ಕಾರ್ಯಕಲಾಪಗಳ ಕಾಯಿದೆಬದ್ಧತೆಯನ್ನು ಅಳೆಯಲಿಕ್ಕೆ ಬರುವುದು. ಆ ಕಟ್ಟು ನಿಟ್ಟುಗಳನ್ನು ಪೋಟ ನಿಯಮಗಳಲ್ಲಿ ಹೇಳಲಾಗಿರುವುದೆಂದು ಹೇಳಲಾಗಿದೆ. ಅಂದರೆ ನಿಯಮಗಳಂತೆ ಪೋಟ ನಿಯಮಗಳೂ ಈ ಕಾಯಿದೆಗೆ ಅನುಸಾರವಾಗಿ ಸಿದ್ಧವಾಗಬೇಕು. ಹಾಗೂ

ಅವುಗಳಿಗೆ ಕಾಯಿದೆಯಿಂದ ಅಧಿಕಾರ ಬಂದಿದೆ ಎಂದು ಅರ್ಥವಾಗುವುದು. ಸಭೆಯ ಕಾರ್ಯಪದ್ಧತಿಯು ಪೋಟ ನಿಯಮಗಳಲ್ಲಿ ಹೇಳಿದಂತೆ ಇರಬೇಕು.

**೩೪. ಅಧಿಕಾರಪದದಿಂದ ತೆಗೆಯುವುದು ಇಲ್ಲವೆ ಖಾಲಿಮಾಡುವುದು**

(೧) ಯಾರು ದುರ್ವರ್ತನೆಯ ಆಪಾದನೆ ಮಾಡಲ್ಪಟ್ಟಿರುವರೋ ಇಲ್ಲವೆ ತನ್ನ ಕರ್ತವ್ಯದಲ್ಲಿ ಅಲಕ್ಷ್ಯ ಇಲ್ಲವೆ ಮಾಡುವುದರಲ್ಲಿ ಅಸಮರ್ಥತೆ ಉಳ್ಳವರು ಇರುವರೋ ಇಲ್ಲವೆ ತನ್ನ ಕರ್ತವ್ಯ ನಿರ್ವಹಣೆಯಲ್ಲಿ ಪದೇ ಪದೇ ತಪ್ಪುತ್ತಿರುವರೋ ಅಂತಹ ಪಂಚಾಯತದ ಯಾವುದೇ ಸದಸ್ಯ ಇಲ್ಲವೆ ಚೇರಮನ್ನ ಇಲ್ಲವೆ ಉಪಚೇರಮನ್ನ ಇವನನ್ನು ಡೆಪ್ಯೂಟಿ ಕಮಿಶನರು ಸಂಬಂಧಪಟ್ಟ ವ್ಯಕ್ತಿಗೆ ಯೋಗ್ಯ ನೋಟೀಸು ಕೊಟ್ಟು, ತನಗೆ ಯೋಗ್ಯಕಂಡ ವಿಚಾರಣೆ ನಡಸಿ, ಅಧಿಕಾರಪದದಿಂದ ತೆಗೆದುಹಾಕಬಹುದು. ಚೇರಮನ್ನ ಇಲ್ಲವೆ ಉಪಚೇರಮನ್ನ ಅಧಿಕಾರಪದದಿಂದ ತೆಗೆದು ಹಾಕಲ್ಪಟ್ಟ ವ್ಯಕ್ತಿಯು ಅಂತಹ ಪಂಚಾಯತದ ಸದಸ್ಯರ ಅಧಿಕಾರ ಕಾಲಾವಧಿಯ ವರೆಗೆ ಆ ಪದಗಳಿಗೆ ಪುನಃ ಚುನಾಯಿತರಾಗಲು ಅರ್ಹತೆಯುಳ್ಳವ ರಾಗಿರತಕ್ಕದ್ದಲ್ಲ. ದುರ್ವರ್ತನೆಗಾಗಿ ಅಧಿಕಾರಪದದಿಂದ ತೆಗೆದುಹಾಕಲ್ಪಟ್ಟ ಚೇರಮನ್ನ ಇಲ್ಲವೆ ಉಪಚೇರಮನ್ನ ಇವರು ಪಂಚಾಯತದ ಸದಸ್ಯನ ಅಧಿಕಾರ ಪದದಿಂದಲೂ ತೆಗೆದು ಹಾಕಲ್ಪಡತಕ್ಕದ್ದು.

(೨) ಉಪಕಲಮು (೧) ರನ್ವಯವಾಗಿ ಮಾಡಲಾದ ಡೆಪ್ಯೂಟಿ ಕಮಿಶನರ ಆಜ್ಞೆಯ ಮೇಲೆ ಕಮಿಶನರರಿಗೆ ಅಪೀಲು ಮಾಡಿಕೊಳ್ಳಲು ಅವಕಾಶ ಇದೆ.

(೩) ಪ್ರತಿಯೊಬ್ಬ ಚೇರಮನ್ನ ಇಲ್ಲವೆ ಉಪಚೇರಮನ್ನನು ಪಂಚಾಯತದ ಸದಸ್ಯನಾಗಿ ಉಳಿಯದಿದ್ದಾಗ ತನ್ನ ಅಧಿಕಾರಪದವನ್ನು ಖಾಲೀಮಾಡತಕ್ಕದ್ದು.

(೪) ಪಂಚಾಯತದಿಂದ ಗೈರಹಾಜರಿಗಾಗಿ ರಜೆ ದಯಪಾಲಿಸಲ್ಪಟ್ಟ ಹೊರತು, ಪ್ರತಿಯೊಬ್ಬ ಚೇರಮನ್ನ ಇಲ್ಲವೆ ಉಪಚೇರಮನ್ನನು ತನ್ನ ಚೇರಮನ್ನ ಇಲ್ಲವೆ ಉಪಚೇರಮನ್ನನ ಕರ್ತವ್ಯಗಳನ್ನು ನಿರ್ವಹಿಸಲು ಅಸಮರ್ಥನಾಗುವಂತೆ ಗ್ರಾಮದಿಂದ ಮೂರು ತಿಂಗಳಕಿಂತ ಹೆಚ್ಚು ಕಾಲಾವಧಿಯ ವರೆಗೆ ಗೈರಹಾಜರಿ ಯಾಗಿ ಉಳಿದರೆ, ಸಂದರ್ಭಾನುಸಾರವಾಗಿ ಆ ಚೇರಮನ್ನ ಇಲ್ಲವೆ ಉಪಚೇರಮನ್ನ ನಾಗಿ ಉಳಿಯತಕ್ಕದ್ದಲ್ಲ.

(೫) ಉಪಕಲಮು (೪) ರನ್ವಯವಾಗಿ ರಜೆಯನ್ನು ಆರು ತಿಂಗಳಕಿಂತ ಹೆಚ್ಚು ಕಾಲಾವಧಿಯ ವರೆಗೆ ದಯಪಾಲಿಸತಕ್ಕದ್ದಲ್ಲ. ಮತ್ತು ಇಂತಹ ರಜೆಯು ಚೇರಮನ್ನ ಇಲ್ಲವೆ ಉಪಚೇರಮನ್ನನಿಗೆ ದಯಪಾಲಿಸಲ್ಪಟ್ಟಾಗ, ಚೇರಮನ್ನನ ಗೈರ ಹಾಜರಿಯಲ್ಲಿ ಅಧಿಕಾರ ನಿರ್ವಹಿಸುತ್ತಿರುವ ಇಲ್ಲವೆ ದಯಪಾಲಿಸಲಾದ ರಜೆಯ ಮೂಲಕ ಗೈರ ಹಾಜರಿಯಾಗಿದ್ದ ಉಪಚೇರಮನ್ನನ ಕರ್ತವ್ಯಗಳನ್ನು ಮಾಡಲು ಮತ್ತು ಅಧಿಕಾರ ನಡೆಸಲು ತನ್ನ ಸದಸ್ಯರಲ್ಲಿ ಒಬ್ಬನನ್ನು ಪಂಚಾ ಯತವು ಚುನಾಯಿಸತಕ್ಕದ್ದು.

**ವಿವೇಚನೆ**

ಪಂಚಾಯತದಲ್ಲಿಯ ಅಧಿಕಾರಪದದಲ್ಲಿ ಇರುವವರು ಯೋಗ್ಯರಾಗಿ ಇರತಕ್ಕದ್ದು. ಅವರು ಅಯೋಗ್ಯರಾದರೆ, ಪಂಚಾಯತದ ಸದಸ್ಯರು ಅವರ ವಿರುದ್ಧ ಅವಿಶ್ವಾಸದ ಠರಾವು ತಂದು ತೆಗೆದುಹಾಕಬಹುದು. ಆದರೆ ಹಾಗೆ ಅವರು ಮಾಡದೆ ಹೋದರೆ ಪಂಚಾಯತದ ಹಿತ ನೋಡಲು ಡೆಪ್ಯೂಟಿ ಕಮಿಶನರು ಮುಂದೆ ಬರಬೇಕಾಗುವುದು. ಡೆಪ್ಯೂಟಿ ಕಮಿಶನರ ಅಧಿಕಾರವು ವ್ಯಾಪಕವಾಗಿರುವುದು. ಇದು ಚೇರಮನ್ನ-ಉಪಚೇರಮನ್ನರಲ್ಲದೆ, ಪಂಚಾಯತದ ಸದಸ್ಯರಿಗೂ ಅನ್ವಯಿಸುತ್ತದೆ.

ಸದಸ್ಯನಿರಲಿ, ಚೇರಮನ್ನನಿರಲಿ, ಉಪಚೇರಮನ್ನನಿರಲಿ, ಯಾರಾದರೂ ದುರ್ವರ್ತನೆ ಮಾಡಿದರೆ, ಕರ್ತವ್ಯದಲ್ಲಿ ಅಲಕ್ಷ್ಯ ಮಾಡಿದರೆ, ಕರ್ತವ್ಯಮಾಡಲು ಅಸಮರ್ಥರಾದರೆ, ಪದೇಪದೇ ತಪ್ಪಿದರೆ, ಅವರು ಆ ಅಧಿಕಾರಪದದಲ್ಲಿ ಇರಲು ಅಯೋಗ್ಯರಾಗುವರು. ಅಂತಹ ವ್ಯಕ್ತಿಗೆ ಕಮಿಶನರು ನೋಟೀಸು ಕೊಡತಕ್ಕದ್ದು. ತಮಗೆ ಯೋಗ್ಯ ಕಂಡ ವಿಚಾರಣೆ ನಡೆಸತಕ್ಕದ್ದು. ಆ ನಂತರ ಮುಂದಿನ ನಿರ್ಣಯ ತೆಗೆದುಕೊಳ್ಳಬೇಕಾಗಿ ಬಂದರೆ, ಆ ವ್ಯಕ್ತಿಯನ್ನು ಅಧಿಕಾರ ಪದದಿಂದ ತೆಗೆದುಹಾಕತಕ್ಕದ್ದು, ಹೀಗೆ ತೆಗೆದುಹಾಕಲ್ಪಟ್ಟ ಚೇರಮನ್ನ ಇಲ್ಲವೆ ಉಪಚೇರಮನ್ನನಿಗೆ ಆ ಪಂಚಾಯತದ ಸದಸ್ಯರ ಅಧಿಕಾರ ಕಾಲಾವಧಿಯ ವರೆಗೆ ಪುನಃ ಚೇರಮನ್ನ ಇಲ್ಲವೆ ಉಪಚೇರಮನ್ನ ಎಂದು ಚುನಾವಣೆಗೆ ನಿಲ್ಲಲು ಬರುವುದಿಲ್ಲ. ಅಯೋಗ್ಯರಾದವರನ್ನು ಬೇರೆ ಕಾರಣಗಳ ಮೂಲಕ ಮತ್ತೆ ಅಧಿಕಾರ ಪದಕ್ಕೆ ಆರಿಸಬಾರದೆಂಬುದೇ ಇದರಲ್ಲಿಯ ಮಾತು.

ದುರ್ವರ್ತನೆಯ ಸಲುವಾಗಿ ಅಧಿಕಾರಪದ ಕಳೆದುಕೊಂಡ ಚೇರಮನ್ನ ಇಲ್ಲವೆ ಉಪಚೇರಮನ್ನನು ಸದಸ್ಯತ್ವವನ್ನು ಕಳೆದುಕೊಳ್ಳುವನು. ದುರ್ವರ್ತನೆಯು ಅನರ್ಹತೆಯನ್ನು ಉಂಟುಮಾಡುವುದು.

ಡೆಪ್ಯೂಟಿ ಕಮಿಶನರರು ಉಪಕಲಮು ೧ ರನ್ವಯವಾಗಿ ಮಾಡಿದ ಆಜ್ಞೆಯ ಮೇಲೆ ಕಮಿಶನರ ಕಡೆಗೆ ಅಪೀಲು ಇದೆ. ಅಂದರೆ ಸಂಬಂಧಪಟ್ಟ ವ್ಯಕ್ತಿಗೆ ತನ್ನ ವಾದ ಸಮರ್ಥನೆಗೆ ಮತ್ತೊಂದು ಅವಕಾಶವಿದೆ. ಅಪೀಲುಗಳು ದುರ್ವರ್ತನೆ, ಯೋಗ್ಯ ನೋಟೀಸು, ಯೋಗ್ಯ ಕಂಡಂತೆ ವಿಚಾರಣೆ ಈ ಮೂರು ವಿಷಯಗಳ ಬಗ್ಗೆ ಆಸ್ಪದ ದೊರೆವುದು. ವ್ಯಕ್ತಿಯ ನಿರ್ಣಯಕ್ಕೆ ಬಿಟ್ಟಿರುವುದರಿಂದ ಅಪೀಲಿನ ಬಗ್ಗೆ ಅನುಕೂಲತೆ ಮಾಡಿರುವುದು ಸೂಕ್ತವಾಗಿದೆ.

ಚೇರಮನ್ನನಾಗಲೀ ಉಪಚೇರಮನ್ನನಾಗಲೀ ಮೂಲತಃ ಸದಸ್ಯ. ಆ ಸದಸ್ವತ್ವವೇ ಹೋದರೆ, ಅವನು ಚೇರಮನ್ನ ಇಲ್ಲವೆ ಉಪಚೇರಮನ್ನ ಎಂದು ಉಳಿಯಲಿಕ್ಕೆ ಆಸ್ಪದವೇ ಉಳಿವುದಿಲ್ಲ.

ಪಂಚಾಯತದ ಕಾರ್ಯವು ನಿತ್ಯವೂ ನಡೆಯಬೇಕಾದುದು. ಚೇರಮನ್ನನು ಇಲ್ಲವೆ ಉಪಚೇರಮನ್ನನು ಕೆಲವೊಂದು ಕರ್ತವ್ಯಗಳನ್ನು ನಿರ್ವಹಿಸಬೇಕಾಗುತ್ತದೆ. ಆದ್ದರಿಂದ ಅವನು ಗೈರಹಾಜರಿಯಾಗಿ ಬಹುಕಾಲ ಉಳಿದರೆ ಪಂಚಾಯತದ ಕೆಲಸಕ್ಕೆ ವ್ಯತ್ಯಯಬರುವುದು. ಹೀಗೆ ಕೆಲಸಕ್ಕೆ ವ್ಯತ್ಯಯ ಬರುವ ಹಾಗೆ ಮೂರು ತಿಂಗಳಕಿಂತಲೂ ಹೆಚ್ಚು ಕಾಲಾವಧಿಯ ವರೆಗೆ ಪಂಚಾಯತದಿಂದ ರಜೆ ಪಡೆಯದೆ ಗ್ರಾಮದಿಂದ ಗೈರಹಾಜರಿಯಾದರೆ, ಅವನು ಚೇರಮನ್ನ ಇಲ್ಲವೆ ಉಪಚೇರಮನ್ನ ಎಂದು ಉಳಿಯಲಾರನು. ರಜೆ ಪಡೆದು ಹೋದರೂ ರಜೆಯು ಆರು ತಿಂಗಳಕಿಂತ ಕೊಡಲ್ಪಡತಕ್ಕದ್ದಲ್ಲ ಎಂದು ವಿಧಿಸಲಾಗಿದೆ. ಒಂದು ವೇಳೆ ರಜೆಪಡೆದು ಹೋದರೆ, ಚೇರಮನ್ನ ಇಲ್ಲವೆ ಉಪಚೇರಮನ್ನನ ಸ್ಥಳದಲ್ಲಿ ಮತ್ತೊಬ್ಬ ಸದಸ್ಯನನ್ನು ಪಂಚಾಯತವು ಆರಿಸಬೇಕು. ಚೇರಮನ್ನನು ರಜೆಯ ಮೇಲೆ ಹೋದರೆ ಇದ್ದ ಉಪಚೇರಮನ್ನನು ಚೇರಮನ್ನನ ಕೆಲಸ ನೋಡಿಕೊಳ್ಳುವನು. ಆಗ ಉಪಚೇರಮನ್ನನ ಕೆಲಸ ನೋಡಿಕೊಳ್ಳಲು ಒಬ್ಬನನ್ನು ಆರಿಸಬೇಕು. ಉಪಚೇರಮನ್ನನೇ ರಜೆಯ ಮೇಲೆ ಹೋದರೆ, ಅವನು ಮಾಡುತ್ತಿದ್ದ ಕೆಲಸಗಳಿಗಾಗಿ ಒಬ್ಬನನ್ನು ಆರಿಸಬೇಕು. ಅಂದರೆ ಹಾಗೆ ಆರಿಸಲ್ಪಡುವವನು ಯಾವಾಗಲೂ ಉಪಚೇರಮನ್ನನೆಂದೇ ಅರ್ಥವಾಗುವುದು. ಈ ಆಯ್ಕೆಯು ರಜೆಯ ಕಾಲಾವಧಿಯ ವರೆಗೆ ಎಂದು ಬೇರೆ ಹೇಳಬೇಕಾಗಿಲ್ಲ.

## ೩೫. ತೆರವಾದ ಸ್ಥಳಗಳನ್ನು ತುಂಬುವದು

(೧) ಅಸಾಮರ್ಥ್ಯ, ಮರಣ, ರಾಜೀನಾಮೆ, ಅನರ್ಹತೆ, ರಜೆಯಿಲ್ಲದ ಗೈರ ಹಾಜರಿ ಇಲ್ಲವೆ ತೆಗೆದು ಹಾಕುವಿಕೆ ಈ ಕಾರಣದಿಂದ ಚೇರಮನ್ನ ಉಪಚೇರಮನ್ನ ಇಲ್ಲವೆ ಸದಸ್ಯರ ತೆರವಾದ ಸ್ಥಳದ ಬಗ್ಗೆ ಗೊತ್ತು ಮಾಡಿದ ರೀತಿಯಲ್ಲಿ ಡೆಪ್ಯೂಟಿ ಕಮಿಶನರರಿಗೆ ಯೋಗ್ಯ ನೋಟೀಸು ಕೊಡಲ್ಪಟ್ಟ ಮೇಲೆ, ಆ ಸ್ಥಳಗಳು ಚೇರಮನ್ನ, ಉಪಚೇರಮನ್ನ ಇಲ್ಲವೆ ಸದಸ್ಯನ ಚುನಾವಣೆಯಿಂದ ತುಂಬಲ್ಪಡತಕ್ಕದ್ದು—ಮತ್ತು ಆ ತೆರವಾದ ಸ್ಥಳದಲ್ಲಿ ಇದ್ದ ವ್ಯಕ್ತಿಯು ಸ್ಥಳ ತೆರವು ಮಾಡದೇ ಇದ್ದರೆ, ಎಷ್ಟು ಕಾಲಾವಧಿಯ ವರೆಗೆ ಅಧಿಕಾರ ಪದದಲ್ಲಿ ಇರುತ್ತಿದ್ದನೋ ಅಷ್ಟು ಕಾಲಾವಧಿಯ ವರೆಗೆ ಮಾತ್ರ ಹೊಸದಾಗಿ ಆ ಸ್ಥಳಕ್ಕೆ ಈ ಮೂಲಕ ಚುನಾಯಿತನಾದವನು ಚೇರಮನ್ನ, ಉಪಚೇರಮನ್ನ ಇಲ್ಲವೆ ಸದಸ್ಯನೆಂದು ಅಧಿಕಾರಪದದಲ್ಲಿರತಕ್ಕದ್ದು.

ಆದರೆ, ಡೆಪ್ಯೂಟಿ ಕಮಿಶನರರಿಗೆ ಸ್ಥಳ ತೆರವಾದ ಬಗ್ಗೆ ನೋಟೀಸು ಕೊಟ್ಟ ತಾರೀಖಿನಿಂದ ನಾಲ್ಕು ವಾರಗಳ ಒಳಗೆ ಮೇಲೆ ಹೇಳಿದಂತೆ ಯಾವುದೇ ಸದಸ್ಯನ ಚುನಾವಣೆಯಾಗದಿದ್ದರೆ, ಚುನಾಯಿತನಾಗಲಿಕ್ಕೆ ಅರ್ಹತೆಯುಳ್ಳಂತ ವ್ಯಕ್ತಿಯನ್ನು

ಡೆಪ್ಯೂಟಿ ಕಮಿಶನರರು ನೇಮಕ ಮಾಡತಕ್ಕದ್ದು. ಹೀಗೆ ನೇಮಕವಾದ ವ್ಯಕ್ತಿಯು ಈ ಉಪಕಲಮಿನ ಉದ್ದೇಶಗಳಿಗಾಗಿ ಯೋಗ್ಯ ರೀತಿಯಲ್ಲಿ ಚುನಾಯಿತನಾದಂತೆ ಎಂದು ಗಣಿಸಲ್ಪಡತಕ್ಕದ್ದು.

ಆದರೆ, ಕಲಮು ೫ ರಲ್ಲಿ ಏನೇ ಹೇಳಲಾಗಿದ್ದರೂ ಕಲಮು ೨೪ ರನ್ವಯವಾಗಿ ಪಂಚಾಯತದ ಸದಸ್ಯರ ಅಧಿಕಾರ ಕಾಲಾವಧಿಯು ಸ್ಥಳ ತೆರವಾದ ತಾರೀಖಿನಿಂದ ನಾಲ್ಕು ತಿಂಗಳ ಒಳಗೆಯೆ ಮುಗಿಯುತ್ತಿದ್ದರೆ, ತೆರವಾದ ಆ ಸ್ಥಳವನ್ನು ತುಂಬತಕ್ಕದ್ದಲ್ಲ.

(೨) ಉಪಕಲಮು (೧) ರನ್ವಯವಾಗಿ ಚೇರಮನ್ನನು ಚುನಾವಣೆಯ ಸಲುವಾಗಿ ಸಭೆಯನ್ನು ಕಲಮು ೩೦ ರ ಉಪಕಲಮು (೨) ರಲ್ಲಿ ನಿರ್ದಿಷ್ಟಪಡಿಸಿದ ರೀತಿಯಲ್ಲಿ ಕರೆಯತಕ್ಕದ್ದು.

## ವಿವೇಚನೆ

ಪಂಚಾಯತ ಸಂಸ್ಥೆಯು ನಿತ್ಯ-ಶಾಶ್ವತ ಹಾಗೂ ನಿರಾತಂಕವಾಗಿ ನಡೆವ ಸಂಸ್ಥೆಯಾದರೂ ಅದರಲ್ಲಿನ ಸದಸ್ಯರು ಶಾಶ್ವತ ಅಲ್ಲ. ಅಂದರೆ ಸದಸ್ಯರ ಸ್ಥಳಗಳು ತೆರವಾಗಬಹುದು. ತೆರವಾದ ಸ್ಥಳವು ಚೇರಮನ್ನ ಇಲ್ಲವೆ ಉಪಚೇರಮನ್ನ ಇಲ್ಲವೆ ಸದಸ್ಯ ಇವನದು ಆಗಿರಬಹುದು. ತೆರವಾದ ಕಾರಣವು ಕಲಮಿನಲ್ಲಿ ಹೇಳಿದಂತೆ, ಅಸಾಮರ್ಥ್ಯ, ಮರಣ, ರಾಜೀನಾಮೆ, ಅನರ್ಹತೆ, ಗೈರಹಾಜರಿ ಇಲ್ಲವೆ ತೆಗೆದುಹಾಕುವಿಕೆ ಇವರಲ್ಲಿ ಯಾವುದಾದರೂ ಇರಬಹುದು. ಯಾವುದೇ ಕಾರಣದಿಂದ ಸ್ಥಳವು ತೆರವಾದರೆ ಅದು ತುಂಬಲ್ಪಡಬೇಕು. ಸ್ಥಳವನ್ನು ಚುನಾವಣೆಯಿಂದ ತುಂಬತಕ್ಕದ್ದು. ತುಂಬಿದ ಸ್ಥಳದಲ್ಲಿ ಬಂದವನು ಯಾರ ಸ್ಥಳದಲ್ಲಿ ಬಂದಿರುವನೋ ಅವನು ಸ್ಥಳ ತೆರವಾಗದೆ ಇದ್ದರೆ, ಎಷ್ಟು ಕಾಲಾವಧಿ ಆ ಸ್ಥಳದಲ್ಲಿ ಉಳಿಯುತ್ತಿದ್ದನೋ ಅಷ್ಟು ಕಾಲಾವಧಿಯ ವರೆಗೆ ಮಾತ್ರ ಎಂಬುದು ಸ್ಪಷ್ಟವಾಗಿದೆ. ಏಕೆಂದರೆ ಈ ಚುನಾವಣೆಯು ಆಪತ್ ಪ್ರಸಂಗ ನಿವಾರಣೆಗಾಗಿ. ಇದು ಸಾಧಾರಣ ಚುನಾವಣೆಯಲ್ಲ. ಆದ್ದರಿಂದ ಪಂಚಾಯತದ ಕಾಲಾವಧಿಯಷ್ಟು ಇರಲಿಕ್ಕೆ ಬರುವುದಿಲ್ಲ. ಚುನಾವಣೆ ನಡೆಸುವ ಮೊದಲು ಸ್ಥಳ ತೆರವಾದ ಬಗ್ಗೆ ಡೆಪ್ಯೂಟಿ ಕಮೀಶನರಿಗೆ ನೋಟೀಸನ್ನು ನಿಯಮಗಳು ಗೊತ್ತುಮಾಡಿದ ರೀತಿಯಲ್ಲಿ ಕೊಟ್ಟಿರಬೇಕು. ನೋಟೀಸು ಕೊಟ್ಟ ನಾಲ್ಕು ವಾರಗಳ ವರೆಗೆ ಚುನಾವಣೆ ನಡೆಯಲಿಲ್ಲವಾದರೆ ಡೆ. ಕಮಿಶನರು ಒಬ್ಬನನ್ನು ನೇಮಕಮಾಡುವರು. ನೇಮಕ ಮಾಡಿದ ವ್ಯಕ್ತಿಯು ಚುನಾಯಿತನಾಗಲಿಕ್ಕೆ ಅರ್ಹನಾಗಿರತಕ್ಕದ್ದು. ಹೀಗೆ ನೇಮಕವಾದ ವ್ಯಕ್ತಿಯು ಚುನಾಯಿತನಾದಂತೆಯೇ.!

ಸ್ಥಳವು ತೆರವಾದ ನಂತರ ನಾಲ್ಕು ತಿಂಗಳವರೆಗೆ ಪಂಚಾಯತದ ಸದಸ್ಯರ ಸಾಮಾನ್ಯ ಅಧಿಕಾರ ಕಾಲಾವಧಿಯು ಕಲಮು ೨೪ ರ ಪ್ರಕಾರ ಮುಗಿಯುತ್ತಿದ್ದರೆ ಸ್ಥಳವನ್ನು ತುಂಬತಕ್ಕದ್ದಲ್ಲ. ಹಾಗೆ ಬಿಡುವುದರಿಂದ ಕಲಮು ೫ ಕ್ಕೆ ಬಾಧೆ ಬಂದಂತಲ್ಲ.

## ೩೬. ಪಂಚಾಯತದ ಸಭೆಗಳು

(೧) ತನ್ನ ವ್ಯವಹಾರವನ್ನು ಸಾಗಿಸುವುದಕ್ಕಾಗಿ ಪಂಚಾಯತವು ತಿಂಗಳಿಗೆ ಒಮ್ಮೆಯಾದರೂ ಸಭೆ ಸೇರತಕ್ಕದ್ದು. ಸಭೆಯು ಪಂಚಾಯತದ ಕಚೇರಿಯಲ್ಲಿ ಚೇರಮನ್ನನು ಗೊತ್ತುಮಾಡಬಹುದಾದಂತಹ ವೇಳೆಗೆ ಸೇರತಕ್ಕದ್ದು.

(೨) ತನಗೆ ಯೋಗ್ಯವೆಂದು ಕಂಡಾಗ ಚೇರಮನ್ನನು ವಿಶೇಷ ಸಭೆಯನ್ನು ಕರೆಯಬಹುದು ಮತ್ತು ಒಟ್ಟು ಸದಸ್ಯರ ಸಂಖ್ಯೆಯಲ್ಲಿ ಅರ್ಧದಕಿಂತ ಕಡಿಮೆಯಾಗಿರದಷ್ಟು ಸದಸ್ಯರು ಬರೆಹದ ಮೂಲಕ ವಿನಂತಿಸಿದಾಗ ವಿಶೇಷ ಸಭೆಯನ್ನು ಕರೆಯತಕ್ಕದ್ದು.

(೩) ಸಭೆಯ ಸ್ಥಳ, ತಾರೀಖು, ವೇಳೆ, ಮತ್ತು ಸಭೆಯಲ್ಲಿ ನಡೆಯುವ ವ್ಯವಹಾರ ಇವುಗಳನ್ನು ನಿರ್ದಿಷ್ಟಪಡಿಸಿ ಸಾದಾ ಸಭೆಯ ಬಗ್ಗೆ ಪೂರ್ತಿ ಏಳು ದಿನಗಳ ನೋಟೀಸು ಮತ್ತು ವಿಶೇಷ ಸಭೆಗಾಗಿ ಪೂರ್ತಿ ಎರಡು ದಿನಗಳ ನೋಟೀಸು ಸದಸ್ಯರಿಗೆ ಹಾಗೂ ಗ್ರಾಮ ಸೇವಕರಿಗೆ ಕೊಡಲ್ಪಡತಕ್ಕದ್ದು ಮತ್ತು ಪಂಚಾಯತದ ಕಚೇರಿಯಲ್ಲಿ ಹಚ್ಚತಕ್ಕದ್ದು.

(೪) ಗ್ರಾಮ ಸೇವಕರೂ ಮತ್ತು ಗ್ರಾಮದಲ್ಲಿ ಇಲ್ಲವೆ ಅದರ ಯಾವುದೇ ಭಾಗದಲ್ಲಿ ಅಧಿಕಾರವಿರುವ ಬೇರೆ ಸರಕಾರೀ ಅಧಿಕಾರಿಗಳೂ ಪಂಚಾಯತದ ಪ್ರತಿಯೊಂದು ಸಭೆಗೆ ಹಾಜರಿರಲು ಮತ್ತು ಕಾರ್ಯಕಲಾಪಗಳಲ್ಲಿ ಭಾಗವಹಿಸಲು ಬಾಧ್ಯಸ್ಥರಾಗಿರತಕ್ಕದ್ದು; ಆದರೆ ಅಲ್ಲಿ ಮತದಾನ ಮಾಡಲು ಹಕ್ಕು ಇರತಕ್ಕದ್ದಲ್ಲ.

## ವಿವೇಚನೆ

ತಿಂಗಳಿಗೆ ಒಮ್ಮೆಯಾದರೂ ಪಂಚಾಯತವು ಸಭೆ ಸೇರತಕ್ಕದ್ದು. ಪಂಚಾಯತದ ಕಚೇರಿಯಲ್ಲಿ ಹಾಗೂ ಚೇರಮನ್ನರು ನಿರ್ದಿಷ್ಟಪಡಿಸಿದ ವೇಳೆಗೆ ಸೇರತಕ್ಕದ್ದು. ಇದು ಸಾದಾ ಸಭೆಯು. ಅರ್ಧದಕಿಂತಲೂ ಕಡಿಮೆಯಲ್ಲದಷ್ಟು ಸದಸ್ಯರು ವಿನಂತಿಸಿದರೆ ಚೇರಮನ್ನನು ವಿಶೇಷ ಸಭೆಯನ್ನು ಕರೆಯಲಿಕ್ಕೆಬೇಕು. ತನಗೆ ಯೋಗ್ಯಕಂಡರೆ, ವಿಶೇಷ ಸಭೆಯನ್ನು ಚೇರಮನ್ನನೇ ಕರೆಯಬಹುದು. ಅಂದರೆ ಸಾದಾ ಸಭೆಯಿರಲಿ, ವಿಶೇಷ ಸಭೆಯಿರಲಿ ಸಭೆ ಕರೆಯುವುದು ಚೇರಮನ್ನನ ಕೆಲಸ-ಕರ್ತವ್ಯ. ಸಾದಾ ಸಭೆಯಾಗಿದ್ದರೆ ಅದಕ್ಕೆ ಏಳು ದಿವಸದ ನೋಟೀಸು.

ವಿಶೇಷ ಸಭೆಯಾಗಿದ್ದರೆ ಎರಡು ದಿವಸದ ನೋಟೀಸು. ಪೂರ್ತಿಯಾಗಿ ಏಳು ದಿವಸ-ಎರಡು ದಿವಸ ನೋಟೀಸಿಗೂ ಸಭೆಗೂ ಅವಧಿ ಇರಬೇಕು. ಆ ನೋಟೀಸನ್ನು ಸದಸ್ಯರಿಗೆ ಗ್ರಾಮ ಸೇವಕರಿಗೆ ಕಳಿಸಬೇಕಲ್ಲದೆ, ಪಂಚಾಯತದ ಕಚೇರಿಯಲ್ಲಿಯೂ ಹಚ್ಚಬೇಕು. ನೋಟೀಸಿನಲ್ಲಿ ಸಭೆಯ ಸ್ಥಳ, ವೇಳೆ, ತಾರೀಖು, ವ್ಯವಹಾರದ ವಿಶೇಷ ಎಲ್ಲವೂ ನಿರ್ದಿಷ್ಟಪಡಿಸಬೇಕು, ಇವೆಲ್ಲವೂ ಆವಶ್ಯಕವಾಗಿ ನಡೆಯು ಬೇಕಾದ ಮಾತುಗಳಾಗಿರುವುದರಿಂದ ಇದರಲ್ಲಿ ಯಾವುದಾದರೂ ಕಡಿಮೆಯಾದರೆ ಅದು ಸಭೆಯ ಕಾಯಿದೆಬದ್ಧತೆಗೆ ವ್ಯತ್ಯಯ ತಂದೀತು. ಪಂಚಾಯತ ಸಭೆಗಳಿಗೆ ಹಾಜರಿದ್ದು ಭಾಗವಹಿಸಲು ಗ್ರಾಮಸೇವಕರಿಗೆ ಹಾಗೂ ಆ ಗ್ರಾಮದಲ್ಲಿ ಕೆಲಸ ಮಾಡುವ ಸರಕಾರೀ ಅಧಿಕಾರಿಗಳಿಗೆ ಅಧಿಕಾರವೇ ಇದೆ. ಆದರೆ ಅವರು ಮತದಾನ ಮಾಡತಕ್ಕದ್ದಲ್ಲ. ಆ ಗ್ರಾಮದ ಸೇವೆಗಾಗಿ ಅವರು ಸೂಚನೆ ಚರ್ಚೆ ಮುಂತಾದ್ದು ಮಾಡಬಹುದು ಎಂದು ಅರ್ಥ:

## ೩೭. ಕಾರ್ಯಾವಶ್ಯಕ ಸಂಖ್ಯೆ ಮತ್ತು ಕಾರ್ಯವಿಧಾನ

(೧) ಪಂಚಾಯತದ ಸಭೆಯ ಕಾರ್ಯಾವಶ್ಯಕ ಸಂಖ್ಯೆಯು ಒಟ್ಟು ಸದಸ್ಯರ ಸಂಖ್ಯೆಯ ಅರ್ಧದಷ್ಟು ಇರತಕ್ಕದ್ದು. ಸಭೆಯಲ್ಲಿ ಕಾರ್ಯಾವಶ್ಯಕ ಸಂಖ್ಯೆಯು ಪೂರ್ತಿಯಾಗಿರದಿದ್ದರೆ, ಅಧ್ಯಕ್ಷಸ್ಥಾನದಲ್ಲಿದ್ದ ಅಧಿಕಾರಿಯು ಸಭೆಯನ್ನು ಮರುದಿನಕ್ಕೆ ಇಲ್ಲವೆ ಮುಂದಿನ ಯಾವುದೇ ದಿವಸಕ್ಕೆ ಅವನು ಗೊತ್ತುಮಾಡಿದ ವೇಳೆಗೆ ಸಭೆಯು ಮುಂದುವರೆಯತಕ್ಕದ್ದು. ಹೀಗೆ ಗೊತ್ತುಮಾಡಲಾದ ಸಭೆಯ ನೋಟೀಸು ಪಂಚಾಯತದ ಕಚೇರಿಯಲ್ಲಿ ಹಚ್ಚಲ್ಪಡತಕ್ಕದ್ದು. ಹೀಗೆ ಕಾರ್ಯಾವಶ್ಯಕ ಸಂಖ್ಯೆ ಇಲ್ಲವೆಂದು ಮುಂದುವರಿಸಲಾದ ಸಭೆಯಲ್ಲಿ ವಿಚಾರಿಸಬೇಕಾಗಿದ್ದ ವ್ಯವಹಾರವು ಮುಂದುವರಿಸಲ್ಪಟ್ಟು ಗೊತ್ತುಮಾಡಲ್ಪಟ್ಟ ಇಲ್ಲವೆ ತದನಂತರದಲ್ಲಿ ಮುಂದೆ ಹಾಕಲ್ಪಟ್ಟ ಮತ್ತು ಕಾರ್ಯಾವಶ್ಯಕ ಸಂಖ್ಯೆಯಿರುವ ಸಭೆಯಲ್ಲಿ ಮಂಡಿಸಲ್ಪಟ್ಟು ನಿಕಾಲೆಮಾಡತಕ್ಕದ್ದು.

(೨) ಪ್ರತಿಯೊಂದು ಪಂಚಾಯತದ ಸಭೆಗೆ ಚೇರಮನ್ನನು ಇಲ್ಲವೆ ಅವನ ಗೈರಹಾಜರಿಯಲ್ಲಿ ಉಪಚೇರಮನ್ನನು ಅಧ್ಯಕ್ಷಸ್ಥಾನ ವಹಿಸತಕ್ಕದ್ದು. ಮತ್ತು ಇಬ್ಬರೂ ಗೈರಹಾಜರಿಯಾಗಿದ್ದರೆ, ಹಾಜರಿದ್ದ ಸದಸ್ಯರು ತಮ್ಮಲ್ಲಿಯ ಒಬ್ಬನನ್ನು ಅಂದಿನ ಪ್ರಸಂಗಕ್ಕೆ ಅಧ್ಯಕ್ಷನಾಗಲು ಆರಿಸತಕ್ಕದ್ದು.

(೩) ವಿಶಿಷ್ಟವಾಗಿ ಕಾಯಿದೆಯಲ್ಲಿ ಹೇಳಿದ ಹೊರತು ಎಲ್ಲ ಪ್ರಶ್ನೆಗಳೂ ಹಾಜರಿದ್ದು ಮತದಾನ ಮಾಡುವಂತಹ ಸದಸ್ಯರ ಬಹುಮತದಿಂದ ನಿರ್ಣಯಿಸಲ್ಪಡತಕ್ಕದ್ದು. ಚೇರಮನ್ನ ಇಲ್ಲವೆ ಉಪಚೇರಮನ್ನ ಇಲ್ಲವೆ ಸಂದರ್ಭಾನುಸಾರವಾಗಿ

ಅಧ್ಯಕ್ಷಸ್ಥಾನದಲ್ಲಿದ್ದ ವ್ಯಕ್ತಿಯು ಮತದಾನಮಾಡಲು ಒಪ್ಪದಿದ್ದ ಹೊರತು ಅನುಕೂಲ ಪ್ರತಿಕೂಲ ಮತಗಳ ಸಂಖ್ಯೆಯನ್ನು ಆ ಪ್ರಶ್ನೆಯ ಬಗ್ಗೆ ಸಾರಿಹೇಳುವ ಮೊದಲು ತನ್ನ ಮತವನ್ನು ಕೊಡತಕ್ಕದ್ದು. ಮತ್ತು ಮತಗಳು ಸಮಸಂಖ್ಯೆಯಲ್ಲಿ ಆದರೆ ಅವನು ತನ್ನ ಸ್ಥಾನಬಲದ ಮೂಲಕವಾಗಿರುವ ಹೆಚ್ಚಿನ(Casting Vote) ಮತವನ್ನು ಕೊಡತಕ್ಕದ್ದು.

(೪) ಸಾರ್ವಜನಿಕರಿಗೆ ಸಾಮಾನ್ಯವಾಗಿ ಉಪಯುಕ್ತವಾಗಿರುವದಲ್ಲದೆ ಅವನಿಗೆ ಯಾವುದೇ ಪ್ರತ್ಯಕ್ಷ ಇಲ್ಲವೆ ಅಪ್ರತ್ಯಕ್ಷವಾಗಿ ಆರ್ಥಿಕ ರೀತಿಯಲ್ಲಿ ಹಿತಾಸಕ್ತಿ ಇದ್ದರೆ, ಅಂತಹ ಯಾವುದೇ ಪ್ರಶ್ನೆಯು ವಿಚಾರಣೆಗಾಗಿ ಪಂಚಾಯತದ ಸಭೆ ಯೆದುರು ಬಂದಾಗ ಅಂತಹ ಯಾವುದೇ ಸದಸ್ಯನು ಆ ಪ್ರಶ್ನೆಯ ಬಗ್ಗೆ ಮತದಾನ ಮಾಡತಕ್ಕದ್ದಲ್ಲ; ಇಲ್ಲವೆ ಚರ್ಚೆಯಲ್ಲಿ ಭಾಗ ವಹಿಸತಕ್ಕದ್ದಲ್ಲ.

(೫) ಸಭೆಯ ಅಧ್ಯಕ್ಷ ಸ್ಥಾನದಲ್ಲಿದ್ದ ಅಧಿಕಾರಿಗೆ ಇಂತಹ ಆರ್ಥಿಕ ಹಿತಾಸಕ್ತಿ ಚರ್ಚೆಗೆ ಬಂದ ಯಾವುದೇ ವಿಷಯದಲ್ಲಿ ಇದೆಯೆಂದು ಸಭೆಯಲ್ಲಿ ಹಾಜರಿದ್ದ ಯಾವುದೇ ಸದಸ್ಯನಿಂದ ನಂಬಲ್ಪಟ್ಟಿದ್ದರೆ, ಮತ್ತು ಆ ಬಗ್ಗೆ ಒಂದು ಠರಾವು ಸ್ವೀಕೃತವಾದರೆ, ಅಂತಹ ವಿಷಯದ ಚರ್ಚೆ ನಡೆದಾಗ ಸಭೆಗೆ ಆ ಅಧಿಕಾರಿಯು ಅಧ್ಯಕ್ಷಸ್ಥಾನ ವಹಿಸತಕ್ಕದ್ದಲ್ಲ, ಇಲ್ಲವೆ ಮತದಾನ ಮಾಡತಕ್ಕದ್ದಲ್ಲ, ಇಲ್ಲವೆ ಅದರಲ್ಲಿ ಭಾಗ ವಹಿಸತಕ್ಕದ್ದಲ್ಲ. ಇಂತಹ ಚರ್ಚೆ ನಡೆಪಷ್ಟು ಕಾಲ ಸಭೆಯ ಅಧ್ಯಕ್ಷ ಸ್ಥಾನಕ್ಕೆ ಪಂಚಾಯತದ ಯಾವುದೇ ಸದಸ್ಯನು ಆರಿಸಲ್ಪಡಬಹುದು.

## ವಿವೇಚನೆ

ಇದು ಬಹುಮಹತ್ವದ ಕಲಮು. ಪಂಚಾಯತದ ಸಭೆಯ ಕಾರ್ಯ ಕಲಾಪ ಗಳ ಬಗ್ಗೆ ಇಲ್ಲಿ ಹೇಳಿದೆ. ವಿಧಾನಾತ್ಮಕವಾಗಿರುವುದು ಈ ಕಲಮು. ಸಭೆಯು ಕಾರ್ಯ ಪ್ರಾರಂಭವಾಗಬೇಕಾದರೆ ನಿರ್ದಿಷ್ಟ ಸಂಖ್ಯೆಯಲ್ಲಿ ಸದಸ್ಯರು ಹಾಜರ ಇರಬೇಕು. ಅದೇ ಕೋರಂ, ಇಲ್ಲವೆ ಕಾರ್ಯಾವಶ್ಯಕ ಸಂಖ್ಯೆ. ಪಂಚಾಯತದ ಒಟ್ಟು ಸಂಖ್ಯೆಯ ಅರ್ಧವಷ್ಟು ಸದಸ್ಯರು ಹಾಜರ ಇದ್ದಾಗ ಕೋರಂ ಭರತಿ ಎಂದು ಹೇಳಿದೆ. ಕಲಮು ೫ ರ ಪ್ರಕಾರ ಪಂಚಾಯತದ ಸದಸ್ಯ ಸಂಖ್ಯೆಯು ಕಡಿಮೆ ಎಂದರೆ ೧೧, ಹೆಚ್ಚೆಂದರೆ ೧೯ ಎಂದು ಹೇಳಿ ಇದರ ಮಧ್ಯದಲ್ಲಿ ಎಷ್ಟು ಸದಸ್ಯ ಸಂಖ್ಯೆ ಇರಬೇಕೆಂಬುದನ್ನು ಡೆಪ್ಯೂಟಿ ಕಮಿಶನರರು ನಿರ್ದಿಷ್ಟಪಡಿಸುವರು. ಆದರೆ ಆ ಕಲಮಿನಲ್ಲಿ ಸಂಖ್ಯೆಯು ಯಾವಾಗಲೂ ಸಮಸಂಖ್ಯೆ ಎಂಬುದೆಂದು ಸೂಚಿಸಿಲ್ಲ. ಒಟ್ಟು ಸದಸ್ಯ ಸಂಖ್ಯೆಯ ಅರ್ಧದಷ್ಟು ಸದಸ್ಯರು ಕೋರಂ ಎಂದು ಹೇಳಿದಾಗ ತೊಡಕುಂಟಾಗುವುದು. ೧೧ ಸದಸ್ಯರಿದ್ದರೆ, ೧೩, ೧೫, ೧೭, ೧೯

ಸದಸ್ಯರು ಇದ್ದರೆ ಕೋರಂ ಎಷ್ಟು ? ಅಧಿಕಾರಿಯಾದ ಚೇರಮನ್ನನನ್ನು ಬಿಟ್ಟು ಎಣಿಸಬೇಕೆಂದು ಈ ಕಲಮಿನಲ್ಲಿ ಸೂಚಿಸಿಲ್ಲ. ಅರ್ಧದಕಿಂತಲೂ ಹೆಚ್ಚು ಎಂದೂ ಕಲಮು ಹೇಳುವುದಿಲ್ಲ. ಆದ್ದರಿಂದ ಈ ಪ್ರಶ್ನೆಯು ತೊಡಕು ತರುವುದು. ಅರ್ಧದಕಿಂತಲೂ ಹೆಚ್ಚು ಇದ್ದಾಗ ಪ್ರಶ್ನೆ ಬಗೆಹರಿಯುವುದು. ೧೧ ಸದಸ್ಯರು ಇರುವ ಪಂಚಾಯತದಲ್ಲಿ ೫ ಸದಸ್ಯರು ಹಾಜರಿದ್ದರೆ, ಅದು ಕೋರಂ ಆಗದು. ೫॥ ಆಗುವುದು ಅಸಂಬದ್ಧ. ಅಂದಮೇಲೆ ೬ ಜನ ಸದಸ್ಯರೇ ಕೋರಂ ಎಂದು ಆಗುವುದು ಅದರಿಂದ ಕಾಯಿದೆಯ ಅರ್ಥಕ್ಕೆ ವ್ಯತ್ಯಯ ಬರುವುದು. ಕಾಯಿದೆಯನ್ನು ಅರ್ಥಮಾಡುವಾಗ ಸರಿಯಾದ ಅರ್ಥ ಬರುವಂತೆ ಅರ್ಥಮಾಡಬೇಕು. ಅರ್ಧದಷ್ಟು ಎಂದರೆ ಸಮಸಂಖ್ಯೆ ಇದ್ದರೆ ಎಂದೂ ವಿಷಮಸಂಖ್ಯೆಯಿದ್ದರೆ ಪೂರ್ತಿ ವ್ಯಕ್ತಿಗಳು ಆಗುವಷ್ಟು ಅರ್ಧದಕಿಂತಲೂ ಹೆಚ್ಚಿನ ಸಂಖ್ಯೆಯೆಂದೂ ಅರ್ಥಮಾಡಬೇಕು.

ಸಭೆಗೆ ಕೋರಂ ಭರತಿಯಾದರೆ ಕೆಲಸ ಪ್ರಾರಂಭ. ಕೋರಂ ಭರತಿಯಾಗದಿದ್ದರೆ, ಸಭೆಯು ಮುಂದುವರಿಸಲ್ಪಡಬೇಕು. ಮುಂದುವರಿಸಲ್ಪಟ್ಟ ಸಭೆಯು ಮರುದಿನ ಇಲ್ಲವೆ ಬೇರಾವ ಮುಂದಿನ ದಿನ ಸೇರತಕ್ಕದ್ದು. ಮುಂದುವರಿಸಲ್ಪಟ್ಟ ಸಭೆಯ ಅಧ್ಯಕ್ಷನಾಗಿದ್ದವನು ದಿನ ಹಾಗೂ ವೇಳೆ ನಿರ್ದಿಷ್ಟಪಡಿಸತಕ್ಕದ್ದು. ಸಭೆಯು ಯಾವ ದಿನಕ್ಕೆ ಮುಂದುವರಿಸಲ್ಪಟ್ಟಿತೆಂದು ತಿಳಿಸುವ ನೋಟೀಸನ್ನು ಪಂಚಾಯತದ ಕಚೇರಿಯಲ್ಲಿ ಹಚ್ಚತಕ್ಕದ್ದು. ಅಂದರೆ ಮತ್ತೆ ಪ್ರತ್ಯೇಕವಾಗಿ ಸದಸ್ಯರಿಗೆ ತಿಳಿಸತಕ್ಕದ್ದಿಲ್ಲವೆಂದ ಹಾಗಾಯಿತು. ಈ ಮಾತು ಹಾಜರಿದ್ದ ಸದಸ್ಯರಿಗೂ ಗೈರ ಹಾಜರಿಯಲ್ಲಿದ್ದ ಸದಸ್ಯರಿಗೂ ಅನ್ವಯಿಸುವುದು. ಕೋರಂ ಇಲ್ಲದ್ದಕ್ಕೆ ಮುಂದುವರಿಸಲಾದ ಸಭೆಯಲ್ಲಿಯ ವಿಷಯಪಟ್ಟಿಯೆ ಮುಂದುವರಿಸಿದ ಹಾಗೂ ಕೋರಂ ಇದ್ದ ಸಭೆಯಲ್ಲಿ ಚರ್ಚಿಸಲ್ಪಡಬೇಕು. ಅಂದರೆ ಕೋರಂ ಇಲ್ಲದೆ ಯಾವ ಸಭೆಯೂ ನಡೆಯತಕ್ಕದ್ದಲ್ಲ ಎಂದು ಸ್ಪಷ್ಟ ಹೇಳಿದ ಹಾಗಾಯಿತಲ್ಲದೆ ಕೋರಂ ಇಲ್ಲದೆ ಹೋದರೆ ಮೇಲೆ ಹೇಳಿದ ಕ್ರಮವನ್ನು ಕೋರಂ ಭರತಿಯಾಗುವ ಸಭೆಯತನಕ ಅನುಸರಿಸಬೇಕೆಂದು ಸ್ಪಷ್ಟಪಡಿಸಿದಂತೆ. ಇದು ಬಹು ಮಹತ್ವದ್ದು.

ಚೇರಮನ್ನ ಇದ್ದರೆ ಅವನೇ ಅಧ್ಯಕ್ಷಸ್ಥಾನ ವಹಿಸಬೇಕು. ಅವನು ಗೈರ ಹಾಜರಿಯಿದ್ದರೆ ಉಪಚೇರಮನ್ನ. ಅವನೂ ಇಲ್ಲದಿದ್ದರೆ ಅಂದರೆ ಇಬ್ಬರೂ ಗೈರ ಹಾಜರಿಯಿದ್ದರೆ ಸಭೆಗೆ ಬಂದ ಯಾವನೊಬ್ಬ ಸದಸ್ಯನನ್ನು ಆ ಸಭೆಗಾಗಿ ಅಧ್ಯಕ್ಷನೆಂದು ಆರಿಸತಕ್ಕದ್ದು. ಸಾಮಾನ್ಯವಾಗಿ ಎಲ್ಲ ಪ್ರಶ್ನೆಗಳೂ ಸಾಮಾನ್ಯ ಬಹುಮತದಿಂದ ನಿರ್ಣಯಿಸಲ್ಪಡಬೇಕು. ಕಲಮು ೩೨ ರಲ್ಲಿಯಂತೆ ಪ್ರಶ್ನೆ ಇದ್ದರೆ, ಆಗ ೨/೩ ದಷ್ಟು ಬಹುಮತ ಅಗತ್ಯವಾಗುವವುದು. ಅಧ್ಯಕ್ಷನಾಗಿದ್ದವನು ಬೇಕಾದರೆ

ಮತಹಾಕಬಹುದು, ಬಿಡಬಹುದು. ಹಾಕಬೇಕೆನ್ನಿಸಿದರೆ ಅವನಿಗೆ ಒಂದು ಮತ. ಈ ಅವನ ಸಾಮಾನ್ಯ ಮತಹಾಕಿದನಂತರವೂ ಮತಗಳು ಸಮಸಂಖ್ಯೆಯಲ್ಲಿ ಅನುಕೂಲ ಪ್ರತಿಕೂಲವಾಗಿದ್ದರೆ, ಅಧ್ಯಕ್ಷನಾಗಿದ್ದವನಿಗೆ ಇನ್ನೊಂದು ಹೆಚ್ಚಿನ ಮತ ಇರುವುದು. ಅದನ್ನು ಹಾಕಿ ಪ್ರಶ್ನೆಯ ನಿರ್ಣಯವನ್ನು ಸಾರಿ ಹೇಳತಕ್ಕದ್ದು.

ಇಲ್ಲಿಯ ಉಪಕಲಮು (೪) ಸದಸ್ಯನ ದೃಷ್ಟಿಯಿಂದ ಬಹುಮಹತ್ವದ್ದು. ಸಭೆಯಮುಂದೆ ಒಂದು ಪ್ರಶ್ನೆ ಇದ್ದು ಅದು ಸಾರ್ವಜನಿಕ ಹಿತಮಾಡುವುದಲ್ಲದೆ ಅದರಲ್ಲಿ ಯಾವುದೇ ಸದಸ್ಯನ ಅಪ್ರತ್ಯಕ್ಷ ಇಲ್ಲವೆ ಪ್ರತ್ಯಕ್ಷ ಆರ್ಥಿಕ ಹಿತಾಸಕ್ತಿ ಇದ್ದರೆ ಆ ಪ್ರಶ್ನೆ ಚರ್ಚಿಸಲ್ಪಡುವಾಗ ಆ ಸದಸ್ಯನು ಭಾಗವಹಿಸತಕ್ಕದ್ದಲ್ಲ. ಮತ ಹಾಕುವ ಪ್ರಸಂಗ ಬಂದಾಗ ಮತಹಾಕತಕ್ಕದ್ದಲ್ಲ. ಇದರ ವಿರುದ್ಧವಾಗಿ ವರ್ತಿಸಿದರೆ, ಕಲಮು ೧೧ ರ ಪ್ರಕಾರ ಅವನು ಅನರ್ಹತೆಯನ್ನು ಪಡೆವನು

ಆರ್ಥಿಕ ಹಿತಾಸಕ್ತಿ ಇದ್ದ ಸದಸ್ಯನು ಚರ್ಚೆಯಲ್ಲಿ ಭಾಗವಹಿಸಬಾರದು. ಮತ್ತು ಮತ ಹಾಕಬಾರದು ಎಂಬುದು ಸಾಮಾನ್ಯ ಸದಸ್ಯನಿಗೆ ಹತ್ತುವುದು. ಇಷ್ಟೇ ಅಲ್ಲ ಸಭೆಯ ಅಧ್ಯಕ್ಷಸ್ಥಾನದಲ್ಲಿದ್ದವನಿಗೂ ಇದು ಅನ್ವಯಿಸುವುದು. ಅಂತಹ ವ್ಯಕ್ತಿಯು ಅಧ್ಯಕ್ಷಸ್ಥಾನದಲ್ಲಿರುವುದು ಹೆಚ್ಚಿನ ಹಾನಿಯುಂಟುಮಾಡುವುದು. ಏಕೆಂದರೆ ಅಧ್ಯಕ್ಷನಿಗೆ ಹೆಚ್ಚಿನ ಮತವೊಂದು ಇರುವುದು. ಅಲ್ಲದೆ ಸಭೆಯ ನಿಯಂತ್ರಣ ಅಧಿಕಾರ ಅವನ ಕಡೆಗೆ ಇರುವುದು. ಆದ್ದರಂದ ಅಧ್ಯಕ್ಷಸ್ಥಾನದಲ್ಲಿದ್ದವನಿಗೆ ಹಾಗೆ ಆರ್ಥಿಕ ಹಿತಾಸಕ್ತಿ ಇದೆಯೆಂದು ಯಾವುದೇ ಸದಸ್ಯನು ನಂಬುವಂತಾದಳೆ ಅವನು ಮೊದಲು ಆ ಬಗ್ಗೆ ಠರಾವು ಮಂಡಿಸಿ ಅದು ಸ್ವೀಕೃತವಾದಮೇಲೆ ಅಧ್ಯಕ್ಷಸ್ಥಾನಕ್ಕೆ ಬೇರೊಬ್ಬ ಸದಸ್ಯನನ್ನು ಆರಿಸತಕ್ಕದ್ದು. ಮೊದಲು ಅಧ್ಯಕ್ಷಸ್ಥಾನದಲ್ಲಿದ್ದವನು ಆ ಪ್ರಶ್ನೆಯ ಚರ್ಚೆ ಮುಗಿಯುವ ತನಕ ಅಧಕ್ಷನಾಗಿರತಕ್ಕದ್ದಲ್ಲ.

### ೩೮. ಠರಾವುಗಳ ತಿದ್ದುಪಡಿ ಇಲ್ಲವೆ ರದ್ದತಿ

ಕಲಮು ೩೬ ರ ಉಪಕಲಮು (೩) ರಲ್ಲಿ ಹೇಳಲಾದ ಎಲ್ಲ ಮಾತುಗಳಿಗೆ ಅನುಸಾರವಾಗಿ ಇರುವಂತಹ ನೋಟೀಸನ್ನು ಕೊಟ್ಟು ಆ ಸಾದಾ ಸಭೆಯಲ್ಲಿ ಇಲ್ಲವೆ ವಿಶೇಷ ಸಭೆಯಲ್ಲಿ ತಿದ್ದುಪಡಿ ಇಲ್ಲವೆ ರದ್ದತಿ ಮಾಡಬೇಕೆಂದು ಮಾಡಿದ ಠರಾವಿನ ಪೂರ್ತಿಪಾಠವನ್ನು ಮತ್ತು ಯಾವ ರೀತಿಯಲ್ಲಿ ತಿದ್ದುಪಡಿ ಇಲ್ಲವೆ ರದ್ದತಿ ಮಾಡಬೇಕೆಂಬುದನ್ನು ಸೂಚಿಸುವ ಠರಾವಿನ ಪೂರ್ತಿ ಪಾಠವನ್ನು ಆ ನೋಟೀಸಿನಲ್ಲಿ ಕಾಣಿಸಿ ಆ ಸಾದಾ ಸಭೆಯಲ್ಲಿ ಇಲ್ಲವೆ ವಿಶೇಷ ಸಭೆಯಲ್ಲಿ ಒಟ್ಟು ಸದಸ್ಯರ ಸಂಖ್ಯೆಯ ಅರ್ಧದಕಿಂತ

ಕಡಿಮೆಯಾಗದಷ್ಟು ಸದಸ್ಯರಿಂದ ಗೊತ್ತುವಳಿಯು ಸ್ವೀಕೃತವಾದ ಹೊರತು ಪಂಚಾಯತದ ಯಾವುದೇ ಠರಾವು ಅದು ಸ್ವೀಕೃತವಾದ ಆರು ತಿಂಗಳ ಒಳಗೆ ತಿದ್ದುಪಡಿ ಇಲ್ಲವೆ ರದ್ದತಿ ಮಾಡಲ್ಪಡತಕ್ಕದ್ದಲ್ಲ.

## ವಿವೇಚನೆ

ಪಂಚಾಯತವು ಪಾಸು ಮಾಡಿದ ಠರಾವುಗಳನ್ನು ಪವಿತ್ರವೆಂದು ಭಾವಿಸತಕ್ಕದ್ದು. ಇಂದು ಪಾಸು ಮಾಡಿ ನಾಳೆ ತಿದ್ದುಪಡಿ ಮಾಡುವ ಇಲ್ಲವೆ ರದ್ದತಿ ಮಾಡುವ ಹವ್ಯಾಸ ಇಟ್ಟುಕೊಳ್ಳಲಾಗದು. ಒಮ್ಮೆ ಸ್ವೀಕೃತವಾದ ಠರಾವು ಆರು ತಿಂಗಳ ವರೆಗೆ ತಿದ್ದುಪಡಿ ಇಲ್ಲವೆ ರದ್ದತಿ ಮಾಡತಕ್ಕದ್ದಲ್ಲ. ಒಂದು ವೇಳೆ ಆರು ತಿಂಗಳ ಒಳಗೆ ಹಾಗೆ ತಿದ್ದುಪಡಿ ಇಲ್ಲವೆ ರದ್ದತಿ ಮಾಡಬೇಕಾದ ಪ್ರಸಂಗ ಬಂದರೆ ಅದಕ್ಕೆ ಒಂದು ಕ್ರಮ ಹೇಳಲಾಗಿದೆ. ಮೂಲ ಗೊತ್ತುವಳಿ-ಹಾಗೂ ತಿದ್ದುಪಡಿ-ಇಲ್ಲವೆ ರದ್ದತಿ ಮಾಡುವ ಠರಾವು ಇವುಗಳ ಪೂರ್ತಿಪಾಠವನ್ನು ನೋಟೀಸಿನಲ್ಲಿ ಕೊಡಬೇಕು. ಮತ್ತು ೩೬ ನೆಯ ಕಲಮಿನಲ್ಲಿ ಹೇಳಿದಂತೆ ಕಾಲಾವಧಿಯ ನೋಟೀಸು ಹಾಗೂ ಗ್ರಾಮಸೇವಕರಿಗೆ, ಸದಸ್ಯರಿಗೆ ನೋಟೀಸು ಕೊಟ್ಟ ನಂತರ ಆ ಠರಾವು ಸಭೆಯು ಮುಂದೆ ಬಂದು ಒಟ್ಟು ಸದಸ್ಯ ಸಂಖ್ಯೆಯ ಅರ್ಧದಕಿಂತ ಕಡಿಮೆಯಾಗದಷ್ಟು ಜನರ ಬಹುಮತದಿಂದ ಸ್ವೀಕೃತವಾಗಬೇಕು. ಅಂದಾಗ ಆರು ತಿಂಗಳಕಿಂತ ಮೊದಲು ತಿದ್ದುಪಡಿ ಮಾಡಲು ಇಲ್ಲವೆ ರದ್ದತಿ ಮಾಡಲು ಬರುವುದು.

## ೩೯. ಕಾರ್ಯಕಲಾಪಗಳ ದಾಖಲೆ

ಸಭೆಗೆ ಹಾಜರಿದ್ದ ಸದಸ್ಯರ ಹೆಸರು ಹಾಗೂ ಸರಕಾರೀ ಅಧಿಕಾರಿಗಳು ಯಾರಾದರೂ ಹಾಜರಿದ್ದರೆ ಅವರ ಹೆಸರುಗಳು ಮತ್ತು ಪಂಚಾಯತದ ಪ್ರತಿಯೊಂದು ಸಭೆಯ ಕಾರ್ಯಕಲಾಪಗಳ ದಾಖಲೆ ಇಡಲ್ಪಡತಕ್ಕದ್ದು. ಮತ್ತು ಸಭೆಗೆ ಹಾಜರಿದ್ದ ಯಾವುದೇ ಸದಸ್ಯನು ಹಾಗೆ ಬಯಸಿದರೆ, ಯಾವುದೇ ಠರಾವಿನ ಬಗ್ಗೆ ಅನುಕೂಲ ಪ್ರತಿಕೂಲ ಮತ ಕೊಟ್ಟ ಸದಸ್ಯರ ಹೆಸರುಗಳನ್ನು ಆ ಉದ್ದೇಶಕ್ಕಾಗಿ ಇಟ್ಟ ಪುಸ್ತಕದಲ್ಲಿ ದಾಖಲೆ ಮಾಡತಕ್ಕದ್ದು. ಮತ್ತು ಅದು ಚೇರಮನ್ನ ಇಲ್ಲವೆ ಉಪಚೇರಮನ್ನ ಇಲ್ಲವೆ ಆ ಸಭೆಗೆ ಅಧ್ಯಕ್ಷನಾಗಿದ್ದ ವ್ಯಕ್ತಿಯಿಂದ ಶಕ್ಯವಾದಷ್ಟು ಬೇಗ ಸಹಿ ಮಾಡಲ್ಪಟ್ಟಿದ್ದು ಪಂಚಾಯತದ ಯಾವುದೇ ಸದಸ್ಯನಿಗೆ ಇಲ್ಲವೆ ಪಂಚಾಯತದ ಚುನಾವಣೆಗಳಲ್ಲಿ ಮತಹಾಕಲು ಅಧಿಕಾರವಿದ್ದ ಯಾವುದೇ ವ್ಯಕ್ತಿಗೆ ಪರಿಶೀಲನೆಗಾಗಿ ಯೋಗ್ಯ ಸಮಯದಲ್ಲಿ ಮುಕ್ತವಾಗಿರತಕ್ಕದ್ದು.

**ವಿವೇಚನೆ**

ಸಭೆಯ ಕಾರ್ಯಕಲಾಪಗಳ ದಾಖಲೆ ಇಡತಕ್ಕದ್ದು. ಸಾಮಾನ್ಯವಾಗಿ ಸಭೆಗೆ ಬಂದ ಸದಸ್ಯರ ಹೆಸರು, ಸರಕಾರಿ ಅಧಿಕಾರಿಗಳು ಸಭೆಗೆ ಬಂದಿದ್ದರೆ ಅವರ ಹೆಸರು ಬರೆದಿಡಬೇಕು. ಸಭೆಯಲ್ಲಿ ನಡೆದ ವ್ಯವಹಾರದ ಬಗ್ಗೆ ದಾಖಲೆ ಇಡಬೇಕು. ಇವಕ್ಕಾಗಿ ಗೊತ್ತುಮಾಡಲ್ಪಟ್ಟ ಪುಸ್ತಕದಲ್ಲಿ ಬರೆದಿಡಬೇಕು. ಇದು ಸಾಮಾನ್ಯವಾದ ಸಂಗತಿ. ಒಂದು ವೇಳೆ ಯಾವುದೇ ಸದಸ್ಯನು ಬಯಸಿದರೆ ಸಭೆಯಲ್ಲಿ ಯಾವುದೇ ಠರಾವಿಗೆ ಯಾವ ಸದಸ್ಯನು ಅನುಕೂಲ ಇಲ್ಲವೆ ಪ್ರತಿಕೂಲ ಮತ ಕೊಟ್ಟನು ಎಂಬುದನ್ನು ಅವರ ಹೆಸರು ಸಹಿತವಾಗಿ ಬರೆಯತಕ್ಕದ್ದು. ಈ ಮಾದರಿಯ ದಾಖಲೆಯು ಯಾವುದೇ ಸದಸ್ಯನು ಬಯಸಿದರೆ ಮಾತ್ರ ಎಂಬುದು ಲಕ್ಷ್ಯದಲ್ಲಿಡಬೇಕು. ಆ ಕಾರ್ಯಕಲಾಪಗಳ ದಾಖಲೆಯ ಪುಸ್ತಕವು ಅಂದು ಸಭೆಗೆ ಅಧ್ಯಕ್ಷನಾಗಿದ್ದ ಚೇರಮನ್ನ ಇಲ್ಲವೆ ಉಪಚೇರಮನ್ನ ಇಲ್ಲವೆ ಬೇರೆ ವ್ಯಕ್ತಿಯ ಸಹಿ ಮಾಡಲ್ಪಡಬೇಕು. ಆ ಕಾರ್ಯಕಲಾಪಗಳ ದಾಖಲೆ ಪರಿಶೀಲಿಸಲು ಯಾವುದೇ ಸದಸ್ಯನಿಗೆ ಇಲ್ಲವೆ ಪಂಚಾಯತದ ಚುನಾವಣೆಯಲ್ಲಿ ಮತದಾನ ಮಾಡುವ ಅಧಿಕಾರವಿದ್ದ ವ್ಯಕ್ತಿಗೆ-ಅಂದರೆ ಮತದಾರನಿಗೆ-ಅಧಿಕಾರ ಇರತಕ್ಕದ್ದು. ಮತ್ತು ಪರಿಶೀಲನೆ ಯೋಗ್ಯ ಸಮಯದಲ್ಲಿ ಅಂದರೆ ಕಚೇರಿಯ ವೇಳೆಯಲ್ಲಿ ಎಂದು ಅರ್ಥಮಾಡಬೇಕು.

## ೪೦. ಠರಾವುಗಳು ಮತ್ತು ಮಾಹಿತಿ ಪ್ರಶ್ನೆಗಳು

(೧) ಪಂಚಾಯತದ ಕೆಲಸದ ನಿರ್ವಹಣೆಯಲ್ಲಿಯ ಯಾವುದೇ ಅಲಕ್ಷ್ಯದ ಬಗ್ಗೆ, ಪಂಚಾಯತದ ಆಸ್ತಿಯ ಯಾವುದೇ 'ನಾಶದ ಬಗ್ಗೆ ಇಲ್ಲವೆ ಯಾವುದೇ ಸ್ಥಾನಿಕ ಪ್ರದೇಶದ ಆವಶ್ಯಕತೆಗಳ ಬಗ್ಗೆ ಚೇರಮನ್ನನ ಲಕ್ಷವನ್ನು ಯಾವುದೇ ಸದಸ್ಯನು ಸೆಳೆಯಬಹುದು. ಮತ್ತು ಇಷ್ಟವಾಗಿ ತೋರುವಂತಹ ಯಾವುದೇ ಸುಧಾರಣೆಗಳನ್ನು ಸೂಚಿಸಬಹುದು.

(೨) ಗೊತ್ತುಮಾಡಬಹುದಾದ ನಿಯಮಗಳಿಗಂಕಿತವಾಗಿ, ಪಂಚಾಯತದ ಆಡಳಿತದ ವಿಷಯಗಳ ಸಂಬಂಧವಾಗಿ ಇದ್ದ ಠರಾವುಗಳನ್ನು ಮಂಡಿಸಲು ಮತ್ತು ಮಾಹಿತಿ ಪ್ರಶ್ನೆಗಳನ್ನು ಚೇರಮನ್ನನಿಗೆ ಕೇಳಲು ಪ್ರತಿಯೊಬ್ಬ ಸದಸ್ಯನಿಗೆ ಅಧಿಕಾರ ಇರತಕ್ಕದ್ದು.

**ವಿವೇಚನೆ**

ಪಂಚಾಯತವೆಂದರೆ ಅದೊಂದು ಸಣ್ಣ ಆಕಾರದ ಶಾಸನಸಭೆಯಿದ್ದಂತೆ. ಚೇರಮನ್ನನು ಆಡಳಿತದ ಪ್ರತೀಕವಿದ್ದಂತೆ. ಪಂಚಾಯತದ ಕಾರ್ಯದಲ್ಲಿ ಏನಾ

ದರೂ ಅಲಕ್ಷ್ಯವಾಗಿದ್ದರೆ, ಆಸ್ತಿ ಹಾಳಾಗುತ್ತಿದ್ದರೆ, ಯಾವುದೇ ವಿಭಾಗದಲ್ಲಿ ಅವಶ್ಯ ಸುಧಾರಣೆಯಾಗಬೇಕಾಗಿದ್ದರೆ, ಯಾವುದೇ ಸದಸ್ಯನು ಚೇರಮನ್ನರ ಲಕ್ಷ್ಯ ವನ್ನು ಸೆಳೆಯಬಹುದು. ಅಂದರೆ ಚೇರಮನ್ನರಿಗೆ ಲಕ್ಷ್ಯಕ್ಕೆ ಬಾರದೆ ಹೋದ ಸಂಗತಿಗಳನ್ನು ಲಕ್ಷ್ಯಕ್ಕೆ ತರುವುದು ಸದಸ್ಯರ ಕರ್ತವ್ಯವಾಗಿದೆ; ಅವರಿಗೆ ಆ ಬಗ್ಗೆ ಅಧಿಕಾರ ಕೊಡಲಾಗಿದೆ.

ಅವರಂತೆ ಆಡಳಿತದ ವಿಷಯಗಳಿಗೆ ಸಂಬಂಧಪಟ್ಟು ಸದಸ್ಯರು ಠರಾವು ಮಂಡಿಸಬಹುದು. ಹಾಗೂ ಮಾಹಿತಿ ಪ್ರಶ್ನೆ ಕೇಳಬಹುದು. ಇದರಿಂದ ಪಂಚಾಯತದ ಲಕ್ಷ್ಯವು ಆ ವಿಷಯಗಳತ್ತ ಹೊರಳುವುದು. ಹಾಗೂ ಅದರಿಂದ ಆಗಬೇಕಾದ ಕಾರ್ಯವು ಆಗುವುದು. ಸದಸ್ಯರ ಅಧಿಕಾರವೆಂದು ಇಲ್ಲಿ ಹೇಳಿರು ವುದರಿಂದ ಅವರು ಠರಾವು ಮಂಡಿಸಿದರೆ ಇಲ್ಲವೆ ಪ್ರಶ್ನೆ ಕೇಳಿದರೆ ತಪ್ಪು ತಿಳಿಯಲು ಕಾರಣವಿಲ್ಲ.

## ೪೧. ಪಂಚಾಯತದ ಕಾರ್ಯಗಳು ಮುಂತಾದವು ಕಾಯಿದೆಬದ್ಧ ವಲ್ಲವೆಂದು ಹೇಳಲಾಗದು

ಪಂಚಾಯತದ ರಚನೆಯಲ್ಲಿಯ ಯಾವುದೇ ದೋಷದ ಕಾರಣದಿಂದ, ಇಲ್ಲವೆ ಇಂತಹ ಪಂಚಾಯತದ ಚೇರಮನ್ನ, ಉಪಚೇರಮನ್, ಅಧ್ಯಕ್ಷ ಸ್ಥಾನದಲ್ಲಿರುವ ಸದಸ್ಯ, ಇಲ್ಲವೆ ಕಾರ್ಯದರ್ಶಿ ಇಲ್ಲವೆ ಸದಸ್ಯ ಇವರ ನೇಮಕದಲ್ಲಿ ಯಾವುದೇ ದೋಷದ ಕಾರಣದಿಂದ, ಇಲ್ಲವೆ ಅವರು ಇಲ್ಲವೆ ಅವರಲ್ಲಿ ಯಾರೊಬ್ಬರು ಅಂತಹ ಅಧಿಕಾರ ಪದಕ್ಕಾಗಿ ಅನರ್ಹತೆ ಪಡೆದಿದ್ದಾರೆಂಬ ನಿಮಿತ್ತದಿಂದ ಇಲ್ಲವೆ, ಪಂಚಾಯತದ ಸಭೆಯನ್ನು ಕರೆಯುವುದರ ಉದ್ದೇಶದಿಂದ ಯೋಗ್ಯ ವಾದ ರೀತಿಯಲ್ಲಿ ವಿಧಾನಾತ್ಮಕ ನೋಟೀಸು ಕೊಟ್ಟಿಲ್ಲವೆಂಬ ಕಾರಣದಿಂದ, ಇಲ್ಲವೆ ಚೇರಮನ್ನ ಉಪಚೇರಮನ್ನ ಇಲ್ಲವೆ ಕಾರ್ಯದರ್ಶಿ ಇಲ್ಲವೆ ಇಂತಹ ಪಂಚಾಯತದ ಸದಸ್ಯ ಇವರ ಸ್ಥಳವು ಖಾಲಿಯಾದ ಕಾಲಾವಧಿಯಲ್ಲಿ ಯಾವುದೇ ಕಾರ್ಯವು ಮಾಡಲ್ಪಟ್ಟಿದೆಯೆಂಬ ಕಾರಣದಿಂದ ಇಲ್ಲವೆ ಬೇರೆ ಯಾವುದೇ ವಿಧಾನರಾಹಿತ್ಯದಿಂದ, ಪಂಚಾಯತದ ಯಾವುದೇ ಕಾರ್ಯವು ಇಲ್ಲವೆ ಸದಸ್ಯನೆಂದು ಇಲ್ಲವೆ ಚೇರಮನ್ನನೆಂದು, ಇಲ್ಲವೆ ಉಪಚೇರಮನ್ನನೆಂದು, ಇಲ್ಲವೆ ಅಧ್ಯಕ್ಷಸ್ಥಾನದಲ್ಲಿದ್ದವನೆಂದು ಇಲ್ಲವೆ ಸೆಕ್ರೆಟರಿಯೆಂದು ಯಾವುದೇ ವ್ಯಕ್ತಿಯು ಮಾಡಿದ ಕಾರ್ಯವು ಕಾಯಿದೆಬದ್ಧವಲ್ಲವೆಂದು ಗಣಿಸಲ್ಪಡತಕ್ಕದ್ದಲ್ಲ.

### ವಿವೇಚನೆ

ಪಂಚಾಯತದ ಕಾರ್ಯಕಲಾಪಗಳು ಹೀಗೆ ನಡೆಯಬೇಕೆಂದು ವಿಧಾನ-ಪದ್ಧತಿಗಳನ್ನು ಹೇಳಿದಮೇಲೆ ಕೊನೆಯದಾಗಿ ಈ ಕಲಮು ಬಂದಿದೆ. ಪಂಚಾಯತವು

ಗ್ರಾಮದಲ್ಲಿಯ ಸಂಸ್ಥೆ. ಅದರಲ್ಲಿ ಕೆಲಸಮಾಡುವವರು ಸಾಮಾನ್ಯವಾಗಿ ಹೆಚ್ಚು ಕಲಿತವರಲ್ಲ. ಕಾಯಿದೆಯ ದೃಷ್ಟಿಯಿಂದ ಕೆಲಸಮಾಡುವ ಪ್ರಯತ್ನದಲ್ಲಿ ಒಮ್ಮೊಮ್ಮೆ ಅವರಿಂದ ತೀರ ಗೆರೆಕೊರೆದು ಕೆಲಸಮಾಡುವುದು ಆಗಲಿಕ್ಕಿಲ್ಲ. ಅಂತಹ ಪ್ರಸಂಗದಲ್ಲಿ ಸದುದ್ದೇಶದಿಂದ ಕಾರ್ಯಮಾಡಿದಾಗ ಯಾವುದೇ ರೀತಿಯ ವಿಧಾನರಾಹಿತ್ಯವಾದರೆ ಅದರಿಂದ ಆದ ಕಾರ್ಯಗಳು ಕಾಯಿದೆಬದ್ಧವಲ್ಲವೆಂದು ಆಗಲಾರದು ಎಂದು ಈ ಕಲಮಿನಲ್ಲಿ ಹೇಳಿದೆ. ಅಂತಹ ಪ್ರಸಂಗಗಳು ಯಾವು ಮತ್ತು ದೋಷಗಳು ಇದ್ದರೆ ಎಲ್ಲಿ ಇರಬಹುದು ಎಂಬುದನ್ನು ಸೂಚಿಸಲಾಗಿವೆ. ಪಂಚಾಯತದ ರಚನೆಯಲ್ಲಿ ಅಧಿಕಾರಿಗಳ ನೇಮಕದಲ್ಲಿ, ಕೆಲಸಮಾಡಿದಾಗ ಯಾವುದೇ ಅಧಿಕಾರಿ ಇಲ್ಲವೆ ಸದಸ್ಯನು ಅನರ್ಹತೆಯನ್ನು ಪಡೆದಿದ್ದರೆ, ಸಭೆಯ ನೋಟೀಸು ಸರಿಯಾಗಿಲ್ಲ. ಯಾವುದೇ ಸ್ಥಳದ ಖಾಲೀ ಆದಾಗ ಕಾರ್ಯಮಾಡಲ್ಪಟ್ಟಿದ್ದರೆ, ಇವು ಯಾವು ಯಾರದೇ ದುಷ್ಟ ಹೇತುವಿನಿಂದ ಆಗಿರಲಾರವು ಅಲ್ಲದೆ ಪಂಚಾಯತದ ಕೆಲಸವು ನಡೆಯಲೇಬೇಕೆಂದು ಮಾಡಿ ಕಾರ್ಯಮಾಡಿದಾಗ ಅವು ನಂತರದಲ್ಲಿ ಕಾಯಿದೇ ಬದ್ಧವಲ್ಲ ಎಂದು ಹೇಳಲಿಕ್ಕೆ ಆಗದು ಎಂದು ಈ ಕಲಮು ಹೇಳಿದಾಗ ಒಂದು ಮಾತು ಸ್ಪಷ್ಟವಾಗುವುದು. ಆದಕಾರ್ಯವು ಕಾಯಿದೇಬದ್ಧವಾಗಿಯೇ ಇರುವುದು. ಕಾಯಿದೇಬದ್ಧತೆಯ ಪ್ರಶ್ನೆಯು ಕಾರ್ಯ ನಡೆದಾಗ ಇಲ್ಲವೆ ಅದಕ್ಕೂ ಮೊದಲಿನ ಅವಸ್ಥೆಯಲ್ಲಿ ಹುಟ್ಟುವುದು. ಒಮ್ಮೆ ಕಾರ್ಯವು ಪಂಚಾಯತದಿಂದ ಆಯಿತೆಂದರೆ ಅದು ಯಾವುದೇ ವಿಧಾನರಾಹಿತ್ಯದ ಮೂಲಕವಾಗಿದ್ದರೂ ಅದು ಕಾಯಿದೇಬದ್ಧ ವಲ್ಲವೆಂದು ಹೇಳಲಿಕ್ಕೆ ಆಗದು.

## ಪ್ರಕರಣ ೩ : ಪಂಚಾಯತಗಳ ಕಾರ್ಯಗಳು

### ೪೨. ಪಂಚಾಯತಗಳು ಮಾಡಲೇಬೇಕಾದ ಕರ್ತವ್ಯಗಳು

ಪಂಚಾಯತದ ನಿಧಿಯು ಅನುಕೂಲ ಮಾಡಿಕೊಡುವ ವ್ಯಾಪ್ತಿಯಲ್ಲಿ ಮತ್ತು ಸರಕಾರದ ಸಾಮಾನ್ಯ ನಿಯಂತ್ರಣಸಂಕಿತವಾಗಿ ಮತ್ತು ತಾಲೂಕ ಬೋರ್ಡದ ಮೇಲ್ವಿಚಾರಣೆಸಂಕಿತವಾಗಿ, ಈ ಕೆಳಗೆ ಕಾಣಿಸಿದ ವಿಷಯಗಳ ಸಂಬಂಧವಾಗಿ ಗ್ರಾಮದಲ್ಲಿ ಯೋಗ್ಯ ಸೌಕರ್ಯಗಳನ್ನು ಒದಗಿಸುವುದು ಪಂಚಾಯತದ ಕರ್ತವ್ಯ ವಾಗಿದೆ, ಅವು ಯಾವುವೆಂದರೆ:—

(ಅ) ಗ್ರಾಮದ ರಸ್ತೆಗಳು, ಗಟಾರುಗಳು, ಒಡ್ಡುಗಳು ಮತ್ತು ಸೇತುವೆ ಗಳು ಇವುಗಳನ್ನು ಕಟ್ಟಿಸುವುದು, ದುರಸ್ತಿ ಮಾಡಿಸುವುದು ಮತ್ತು ಸುಸ್ಥಿತಿಯಲ್ಲಿ ಇಡುವುದು.

ಆದರೆ, ಆ ರಸ್ತೆಗಳು, ಗಟಾರಗಳು, ಒಡ್ಡುಗಳು, ಮತ್ತು ಸೇತುವೆಗಳು ಬೇರೆ ಯಾವುದೇ ಸಾರ್ವಜನಿಕ ಅಧಿಕಾರದ ಅಂತರ್ಗತವಾಗಿದ್ದರೆ, ಪಂಚಾಯತವು ಇಂತಹ ಕಾರ್ಯಗಳನ್ನು ಅಧಿಕಾರವುಳ್ಳವರ ಸಮ್ಮತಿಯಿಲ್ಲದೆ ಕೈಕೊಳ್ಳತಕ್ಕದ್ದಲ್ಲ.

(ಬ) ಸಾರ್ವಜನಿಕ ಭಾವಿಗಳು ಕೊಳಗಳು ಮತ್ತು ಕೆರೆಗಳು, ಇವುಗಳನು ಕಟ್ಟಿಸುವುದು, ದುರಸ್ತಿ ಮಾಡಿಸುವುದು ಮತ್ತು ಸುಸ್ಥಿತಿಯಲ್ಲಿರಿಸುವುದು ಮತ್ತು ಗೃಹೋಪಯೋಗಕ್ಕಾಗಿ ಮತ್ತು ದನಗಳಿಗಾಗಿ ನೀರನ್ನು ಪೂರೈಸುವುದು.

(ಕ) ಸಾರ್ವಜನಿಕ ರಸ್ತೆಗಳು, ಗಟಾರಗಳು, ವಡ್ಡುಗಳು, ಕೆರೆಗಳು ಮತ್ತು ಬಾವಿಗಳು (ನೀರಾವರಿಗಾಗಿ ಉಪಯೋಗಿಸಲಾದ ಕೆರೆ ಹಾಗೂ ಬಾವಿಗಳನ್ನು ಬಿಟ್ಟು) ಮತ್ತು ಇತರ ಸಾರ್ವಜನಿಕ ಸ್ಥಳಗಳನ್ನು ಮತ್ತು ಕಟ್ಟೋಣಗಳನ್ನು ಸ್ವಚ್ಛವಾಗಿಡುವುದು.

(ಡ) ಗ್ರಾಮದಲ್ಲಿ ದೀಪದ ವ್ಯವಸ್ಥೆ ಮಾಡುವುದು.

(ಇ) ಸುಡಲಿಕ್ಕೆ ಮತ್ತು ಹುಗಿಯಲಿಕ್ಕೆ ಸ್ಮಶಾನಭೂಮಿಯನ್ನು ಸುಸ್ಥಿತಿ ಯಲ್ಲಿಡುವುದು ಮತ್ತು ಕ್ರಮಗೊಳಿಸುವುದು.

(ಫ) ಸಾರ್ವಜನಿಕ ರಸ್ತೆಗಳ ಇಲ್ಲವೆ ಸ್ಥಳಗಳ ಮೇಲೆ ಇರುವ ಮತ್ತು ಖಾಸಗೀ ಆಸ್ತಿಗಳಾಗಿರದೆ ಇರುವ ಮತ್ತು ಸಾರ್ವಜನಿಕರ ಉಪಭೋಗಕ್ಕಾಗಿ ಮುಕ್ತವಾಗಿರುವ ಜಾಗಾದಲ್ಲಿ ಅವು ಪಂಚಾಯತದ ಅಧಿಕಾರದಲ್ಲಿರಲಿ ಇಲ್ಲವೆ ಸರಕಾರದ ಅಧಿಕಾರದಲ್ಲಿರಲಿ, ಅಲ್ಲಿಯ ಆತಂಕಗಳನ್ನು ಮತ್ತು ಅತಿಕ್ರಮಗಳನ್ನು ತೆಗೆಯಿಸುವುದು.

(ಗ) ಸ್ವಚ್ಛತೆ, ಭಂಗೀ ವ್ಯವಸ್ಥೆ ಮಾಡುವುದು ಮತ್ತು ಕಂಟಕ ನಿರ್ಬಂಧ ಹಾಗೂ ನಿವಾರಣೆ ಮಾಡುವುದು.

(ಹ) ಕಟ್ಟಡಗಳು, ಆಟಗಳು, ಅಂಗಡಿಗಳು, ಉಪಹಾರ ಮತ್ತು ಇತರ ಮನರಂಜನೆ ಮನೆಗಳನ್ನು ಕ್ರಮಗೊಳಿಸುವುದು.

(ಈ) ದನಗಳ ಕೊಂಡವಾಡೆಗಳನ್ನು ಸ್ಥಾಪಿಸುವುದು ಮತ್ತು ಸುಸ್ಥಿತಿಯಲ್ಲಿ ಇಡುವುದು.

(ಜ) ಗೊಬ್ಬರ ಸಂಗ್ರಹಕ್ಕಾಗಿ ಸ್ಥಳವನ್ನು ನಿರ್ದೇಶಿಸುವುದು.

(ಕಾ) ಗಿಡಗಳನ್ನು ಹೆಚ್ಚುವುದು ಹಾಗೂ ಸಂರಕ್ಷಿಸುವುದು.

(ಲ) ಮಾಂಸ, ಮೀನ, ಮತ್ತು ಇತರ ನಾಶವಾಗುವ ಆಹಾರದ ವಸ್ತು ಗಳ ಮಾರಾಟವನ್ನು ಮತ್ತು ಕಾದಿಡುವುದನ್ನು ಕ್ರಮಗೊಳಿಸುವುದು.

(ಮ) ಪಂಚಾಯತದ ಅಧಿಕಾರದ ಅಂತರ್ಗತವಾದ ಇಲ್ಲವೆ ನಿಯಂತ್ರಣ ದಲ್ಲಿದ್ದ ಸಾರ್ವಜನಿಕ ಕಟ್ಟಡಗಳು, ಹುಲಬನ್ನಿ ಭೂಮಿಗಳು, ಅರಣ್ಯ ಭೂಮಿಗಳು ಇವುಗಳನ್ನು ಸುಸ್ಥಿತಿಯಲ್ಲಿಡುವುದು.

(ನ) ರೋಗಾದಿಗಳನ್ನು ನಿರ್ಬಂಧಿಸಲು ಹಾಗೂ ಅವುಗಳಿಗಾಗಿ ಪರಿಹಾರ ಉಪಾಯಗಳನ್ನು ಕೈಕೊಳ್ಳುವುದು.

(ಓ) ಗ್ರಾಮದ ವಿಸ್ತರಣದ ಯೋಜನೆಯನ್ನು ಮಾಡುವುದು.

(ಪ) ಗೊಬ್ಬರ ಮತ್ತು ಕಸ ಇವುಗಳನ್ನು ಕೂಡಿಸುವುದು, ತೆಗೆಯುವುದು ಹಾಗೂ ವಿಲೇವಾಟ ಮಾಡುವುದು ಇವುಗಳನ್ನು ಕ್ರಮಗೊಳಿಸುವುದು.

(ಕೂ) ಬೇವಾರಸಾ ಹೆಣಗಳು, ಸತ್ತ ಪ್ರಾಣಿಗಳು, ಮತ್ತು ಬೇವಾರಸಾ ದನಗಳು ಇವುಗಳ ವಿಲೇವಾಟ.

(ರ) ಸಾರ್ವಜನಿಕ ಪಾಯಖಾನೆಗಳನ್ನು ಕಟ್ಟಿಸುವುದು ಮತ್ತು ಸುಸ್ಥಿತಿ ಯಲ್ಲಿಡುವುದು.

(ಸ) ಕಾಲಕಾಲಕ್ಕೆ ಸರಕಾರದವರಿಂದ ಪಂಚಾಯತಕ್ಕೆ ಒಪ್ಪಿಸಬಹುದಾದ ಇತರ ಬೇರೆ ಕಾರ್ಯಗಳು.

## ವಿವೇಚನೆ

ಕಾರ್ಯಗಳ ಪಟ್ಟಿಯನ್ನು ಕೊಡಲಾಗಿದೆ. ಈ ಕಲಮಿನಲ್ಲಿ ಮುಖ್ಯ ವಾಗಿ ಗಮನಿಸಬೇಕಾದ ಸಂಗತಿಗಳು ಕೆಲವು ಇವೆ. ಇಲ್ಲಿ ಕೊಡಲಾದ ಪಟ್ಟಿಯಲ್ಲಿಯ ಕಾರ್ಯಗಳನ್ನು ಪಂಚಾಯತವು ಮಾಡಲೇಬೇಕು. ಮಾಡ ದಿದ್ದರೆ-ಅದು ಪಂಚಾಯತದ ಕರ್ತವ್ಯದಲ್ಲಿ ಚ್ಯುತಿಯಾದಂತೆ. ಆದರೆ ಎರಡು ಮಿತಿಗಳು ಇವೆ. ಮೊದಲನೆಯದು ಇಲ್ಲಿ ಕೊಡಲಾದ ಕೆಲಸಗಳನ್ನು ಮಾಡಲಿಕ್ಕೆ ಪಂಚಾಯತದ ಹತ್ತಿರ ಹಣ ಇರಬೇಕು. ಎಷ್ಟು ಹಣ ಇದೆಯೊ ಅದರ ವ್ಯಾಪ್ತಿ ಯಲ್ಲಿ ಕೆಲಸವಾಗಬೇಕು. ಎರಡನೆಯದು ಆ ಕೆಲಸಗಳು ಸರಕಾರದ ಸಾಮಾನ್ಯ ನಿಯಂತ್ರಣದಲ್ಲಿ ಹಾಗೂ ತಾಲೂಕ ಬೋರ್ಡದ ಮೇಲ್ವಿಚಾರಣೆಯಲ್ಲಿ ನಡೆಯ ಬೇಕು. ಅಂದರೆ ಈ ಕೆಲಸಗಳಿಗಾಗಿ ಪಂಚಾಯತವು ಪೂರ್ತಿಯಾಗಿ ಸ್ವತಂತ್ರ ವಾಗಿಲ್ಲ ಎಂದು ತಿಳಿಯಬೇಕು. ಈ ಎರಡು ಮಿತಿಗಳನ್ನು ಲಕ್ಷಿಸಿ ಅದು ಮಾಡಲೇ ಬೇಕಾದ ಕಾರ್ಯಗಳ ಪಟ್ಟಿಯನ್ನು ಈ ಕಲಮಿನಲ್ಲಿ ಕೊಡಲಾಗಿದೆ. ಮಾಡಲೇ ಬೇಕಾದ ಅಂದರೆ ಬಿಡಲಿಕ್ಕೆ ಬಾರದ ಎಂದು ಅರ್ಥ. ಪಂಚಾಯತದ ಅಸ್ತಿತ್ವವೇ ಈ ಕಾರ್ಯಗಳಿಗಾಗಿ ಎಂದು ಅರ್ಥ. ಇವನ್ನು ಮೇಲಿನ ಮಿತಿಯಲ್ಲಿಯೂ ಮಾಡದಿದ್ದರೆ ಪಂಚಾಯತಿ ಇದ್ದದ್ದು ವ್ಯರ್ಥ ಎಂಬುವಷ್ಟು ಈ ಕೆಲಸಗಳಿಗೆ

ಮಹತ್ವವಿದೆ. ಆದಕ್ಕೆ ಇವು ಮಾಡಲೇಬೇಕಾದ ಕರ್ತವ್ಯಗಳು. ಕಾರ್ಯಗಳ ಪಟ್ಟಿಯನ್ನು ನೋಡಿದರೆ ಗ್ರಾಮದಲ್ಲಿಯ ಜನರ ಪ್ರಾಥಮಿಕ ಅವಶ್ಯಕತೆಗಳ ಪೂರ್ತಿಕೆಗಾಗಿ ಎಂಬುದು ಸ್ಪಷ್ಟವಾಗುವುದು.

## ೪೩. ಪಂಚಾಯತಗಳು ಮಾಡಬಹುದಾದ ಕರ್ತವ್ಯಗಳು

(೧) ಪಂಚಾಯತ ನಿಧಿಯು ಅನುಕೂಲ ಮಾಡಿಕೊಡುವ ವ್ಯಾಪ್ತಿಯಲ್ಲಿ ಮತ್ತು ಸರಕಾರದ ಸಾಮಾನ್ಯ ನಿಯಂತ್ರಣದಂಕಿತವಾಗಿ ಮತ್ತು ತಾಲೂಕ ಬೋರ್ಡದ ಮೇಲ್ವಿಚಾರಣೆಯಂಕಿತವಾಗಿ, ಈ ಕೆಳಗೆ ಕಾಣಿಸಿದ ವಿಷಯಗಳ ಸಂಬಂಧವಾಗಿ ಗ್ರಾಮದಲ್ಲಿ ಯೋಗ್ಯ ಸೌಕರ್ಯಗಳನ್ನು ಒದಗಿಸಲು ಪಂಚಾಯತವು ಸಮರ್ಥವಾಗಿದೆ; ಅವು ಯಾವುವೆಂದರೆ:—

(ಅ) ಕಸಾಯಿಖಾನೆಗಳನ್ನು ಕಟ್ಟಿಸುವುದು ಮತ್ತು ಸುಸ್ಥಿತಿಯಲ್ಲಿಡುವುದು.

(ಬ) ಅನಾಥ ಹಾಗೂ ಕಾಯಿಲೆಯಿಂದ ಬಳಲುವವರಿಗೆ ಪರಿಹಾರ ಉಪಾಯ ಮಾಡುವುದು.

(ಕ) ದನಗಳ ಸುಧಾರಣೆ, ಅವುಗಳ ತಳಿ ಸುಧಾರಣೆ ಮತ್ತು ಪ್ರಾಣಿಗಳ ಸಾಮಾನ್ಯ ಕಾಳಜಿ ಮಾಡುವುದು.

(ಡ) ಧಾನ್ಯದ ಖಣಜಗಳನ್ನು ಸ್ಥಾಪಿಸುವುದು.

(ಇ) ಗ್ರಾಮ ಗ್ರಂಥಾಲಯ ಹಾಗೂ ವಾಚನಾಲಯ ಸ್ಥಾಪಿಸುವುದು.

(ಫ) ಗ್ರಾಮದ ಮಕ್ಕಳಿಗಾಗಿ ಆಟದ ಬಯಲನ್ನು ಮತ್ತು ಸಾರ್ವಜನಿಕ ಉದ್ಯಾನಗಳನ್ನು ಯೋಜಿಸುವುದು ಹಾಗೂ ಸುಸ್ಥಿತಿಯಲ್ಲಿಡುವುದು.

(ಗ) ಗುಡಿ ಕೈಗಾರಿಕೆಗಳನ್ನು ಪುರಸ್ಕರಿಸುವುದು ಸುಧಾರಿಸುವುದು ಹಾಗೂ ಉತ್ತೇಜಿಸುವುದು.

(ಹ) ಇಲಿಗಳನ್ನು ಮತ್ತು ಬಿಡಾಡಿ ಮತ್ತು ಮಾಲಕರಿಲ್ಲದ ನಾಯಿಗಳನ್ನು ನಾಶಮಾಡುವುದು.

(ಈ) ಧರ್ಮಶಾಲೆಗಳು, ಛತ್ರಗಳು ಮತ್ತು ಅಂತಹ ಬೇರೆ ಸಂಸ್ಥೆಗಳನ್ನು ಕಟ್ಟಿಸುವುದು ಹಾಗೂ ಸುಸ್ಥಿತಿಯಲ್ಲಿಡುವುದು.

(ಜ) ಬೇರೆ ಯಾವುದೇ ಅಧಿಕಾರದವರು ಸಂಚಾಲನ ಮಾಡದೇ ಇರುವಂತಹ ಒಗೆವ ಹಾಗೂ ಸ್ನಾನದ ಘಾಟುಗಳನ್ನು ಸಂಚಾಲನ ಮಾಡುವುದು ಮತ್ತು ನಿಯಂತ್ರಿಸುವುದು.

(ಕಾ) ಯಾವುದೇ ನೈಸರ್ಗಿಕ ಆಪತ್ತು ಒದಗಿದರೆ, ರಹಿವಾಸಿಗಳಿಗೆ ಸಹಾಯ ಮಾಡುವುದು.

(ಲ) ಮಾರ್ಕೆಟುಗಳನ್ನು ಸ್ಥಾಪಿಸುವುದು ಹಾಗೂ ಸುಸ್ಥಿತಿಯಲ್ಲಿಡುವುದು.

(ಮ) ಗ್ರಾಮವನ್ನು ಹಾಗೂ ಅಲ್ಲಿಯ ಬೆಳೆಗಳನ್ನು ಕಾಯುವುದು. ಹಾಗೂ ಗಸ್ತಿಮಾಡುವುದು.

(ನ) ಪಂಚಾಯತದ ಭಂಗೀ ವ್ಯವಸ್ಥೆಗಾಗಿ ಇರುವ ಸಿಬ್ಬಂದಿಗಳಿಗಾಗಿ ಮನೆಗಳನ್ನು ಕಟ್ಟಿಸುವುದು. ಹಾಗೂ ಸುಸ್ಥಿತಿಯಲ್ಲಿಡುವುದು.

(ಓ) ದವಾಖಾನೆ, ಹೆರಿಗೆ ಮತ್ತು ಮಕ್ಕಳ ಕಲ್ಯಾಣಕೇಂದ್ರಗಳನ್ನು ಸ್ಥಾಪಿಸುವುದು ಹಾಗೂ ಸುಸ್ಥಿತಿಯಲ್ಲಿಡುವುದು.

(ಪ) ದನಗಳ ಚಿಕಿತ್ಸೆಯ ವ್ಯವಸ್ಥೆ ಮಾಡುವುದು.

(ಕೂ) ಸಣ್ಣ ಪ್ರಮಾಣದ ಲೋಕೋಪಯೋಗಿ ಸಂಸ್ಥೆಗಳನ್ನು ಸಂಚಾಲನಮಾಡಿಸುವುದು.

(ರ) ಸಹಕಾರದ ಉತ್ತೇಜನ ಹಾಗೂ ಅಭಿವೃದ್ಧಿ ಮಾಡುವುದು.

(ಸ) ಗ್ರಾಮದ ಅವಶ್ಯಕ ಅಂಕೆ ಸಂಖ್ಯೆಗಳನ್ನು ಸುಸ್ಥಿತಿಯಲ್ಲಿಡುವುದು.

(ತ) ತೊಗಲು ಮತ್ತು ಚರ್ಮಗಳನ್ನು ಕ್ರಮಗೊಳಿಸುವುದು, ಕರಿ ಕಟ್ಟಿವುದು, ಹದಗೊಳಿಸುವುದು ಮತ್ತು ಬಣ್ಣ ಹಾಕುವುದು.

(ಉ) ಬೆಂಕಿ ಆರಿಸುವುದರಲ್ಲಿ ನೆರವಾಗುವುದು.

(ವ) ಪರಿಶಿಷ್ಟ ವರ್ಗದವರ ಕಲ್ಯಾಣ ಮಾಡುವುದು.

(ಕ್ಷ) ಕ್ಲೇಶಕಾರಕ ಹಾಗೂ ಅಪಾಯಕಾರಕ ವ್ಯಾಪಾರಗಳನ್ನು ಕ್ರಮಗೊಳಿಸುವುದು, ನಿರ್ಬಂಧಿಸುವುದು ಮತ್ತು ನಿವಾರಿಸುವುದು.

(ವಾ) ಕೃಷಿಗೆ ವಿಶೇಷ ಲಕ್ಷ್ಯಗೊಟ್ಟು ಆರ್ಥಿಕ ಸ್ಥಿತಿಯನ್ನು ಪುರಸ್ಕರಿಸುವುದು ಹಾಗೂ ಅಭಿವೃದ್ಧಿಗೊಳಿಸುವುದು.

ಆದರೆ, ವಾಕ್ಯಾವಳಿ (ಮ) ದನ್ವಯವಾಗಿ ಹೇಳಿದ ಕಾಯುವುದರ ಹಾಗೂ ಗಸ್ತಿ ಮಾಡುವುದರ ವೆಚ್ಚವು ಗೊತ್ತುಮಾಡಲ್ಪಡಬಹುದಾದಂತಹ ರೀತಿಯಲ್ಲಿ ಮತ್ತು ಗೊತ್ತು ಮಾಡಲ್ಪಡಬಹುದಾದಂತಹ ವ್ಯಕ್ತಿಗಳಿಂದ ಪಂಚಾಯತದಿಂದ ಹಾಕಲ್ಪಟ್ಟು ವಸೂಲಮಾಡಲ್ಪಡತಕ್ಕದ್ದು.

(೨) ಗ್ರಾಮದ ರಹಿವಾಸಿಗಳ ಆರೋಗ್ಯ, ಸುಭದ್ರತೆ, ಶಿಕ್ಷಣ, ಸ್ವಾಸ್ಥ್ಯ, ಅನುಕೂಲತೆ, ಇಲ್ಲವೆ ಸಾಮಾಜಿಕ ಇಲ್ಲವೆ ಆರ್ಥಿಕ ಸುಸ್ಥಿತಿಯನ್ನು ಪುರಸ್ಕರಿಸುವ ಸಂಭವವುಳ್ಳ ಬೇರೆ ಯಾವುದೇ ಕೆಲಸ ಇಲ್ಲವೆ ಉಪಾಯಗಳನ್ನು ಗ್ರಾಮದಲ್ಲಿ ನಡೆಸಲು ಕೂಡ ಪಂಚಾಯತವು ವ್ಯವಸ್ಥೆ ಮಾಡಬಹುದು.

(೩) ಗ್ರಾಮದ ಒಳಗೆ ಇಲ್ಲವೆ ಹೊರಗೆ ಆದರೂ ಜಿಲ್ಲೆಯ ಒಳಗೆ ನಡೆವ ಯಾವುದೇ ಪ್ರದರ್ಶನ, ಪರಿಷತ್ತು ಇಲ್ಲವೆ ಸನ್ಮೇಲನ ಇವುಗಳ ವ್ಯವಸ್ಥೆಗಾಗಿ ಇಲ್ಲವೆ ಅವುಗಳ ವೆಚ್ಚದ ಸಂಬಂಧದಲ್ಲಿ ವಂತಿಗೆಯನ್ನು ಪಂಚಾಯತವು ತನ್ನ ಸಭೆಯಲ್ಲಿ ತನ್ನ ಒಟ್ಟು ಸದಸ್ಯ ಸಂಖ್ಯೆಯ ಎರಡು ಮೂರಾಂಶದಷ್ಟು ಸದಸ್ಯರ ಬೆಂಬಲದಿಂದ ಠರಾವು ಸ್ವಿಕೃತವಾಗಿಕೊಡಬಹುದು.

ಆದರೆ, ಡೆಪ್ಯೂಟಿ ಕಮಿಶನರರ ಪೂರ್ವ ಸಮ್ಮತಿ ಇದ್ದ ಹೊರತು, ಪಂಚಾಯತವು ಇಂತಹ ಯಾವುದೇ ಪ್ರದರ್ಶನ, ಪರಿಷತ್ತು ಇಲ್ಲವೆ ಸನ್ಮೇಲನಕ್ಕಾಗಿ ಇಪ್ಪತ್ತೈದು ರೂಪಾಯಿಗಳಿಗಿಂತ ಹೆಚ್ಚು ವೆಚ್ಚವನ್ನು ಮಾಡತಕ್ಕದ್ದಲ್ಲ.

**ವಿವೇಚನೆ**

ಈ ಕಲಮಿನಲ್ಲಿ ವಿವರಿಸಲಾದ ಕಾರ್ಯಗಳ ಪಟ್ಟಿಯು ಪಂಚಾಯತವು ಮಾಡಬೇಕೆಂದು ಮನಸ್ಸು ಮಾಡಿದರೆ ಅದು ಸಮರ್ಥವಾಗಿರುವಂತಹ ಹಾಗೂ ಮಾಡಬಹುದಾದಂತಹ ಕಾರ್ಯಗಳು. ಕಲಮು ೪೨ರಲ್ಲಿಯಂತೆ ಮಾಡಲೇಬೇಕಾದ ಕಾರ್ಯಗಳಲ್ಲ. ಮಾಡದೆ ಬಿಟ್ಟರೆ ನಡೆಯುವದು. ಆದರೆ ಗ್ರಾಮವನ್ನು ಸುಧಾರಿಸಿ, ಅಭಿವೃದ್ಧಿ ಮಾಡಬೇಕೆಂದು ಮನಸ್ಸುಂಟಾದರೆ ಮಾಡಬಹುದಾದ ಕಾರ್ಯಗಳು ಇವು. ಇಲ್ಲಯಾದರೂ ಎರಡು ಮಿತಿಗಳನ್ನು ಹಾಕಲಾಗಿದೆ. ಒಂದು ಪಂಚಾಯತದ ಹತ್ತಿರ ಇದ್ದ ಧನದ ಅನುಕೂಲತೆಯ ವ್ಯಾಪ್ತಿಯ ಮಿತಿ; ಇನ್ನೊಂದು ಸರಕಾರದ ನಿಯಂತ್ರಣ ಹಾಗೂ ತಾಲೂಕ ಬೋರ್ಡದ ಮೇಲ್ವಿಚಾರಣೆ. ಈ ಎರಡು ಮಿತಿಗಳಂಕಿತವಾಗಿ ಪಂಚಾಯತವು ಕಾರ್ಯ ಮಾಡಬೇಕು. ಈ ಕಾರ್ಯಗಳ ಪಟ್ಟಿಯಿಂದ ಗ್ರಾಮವು ಎಷ್ಟು ವ್ಯಾಪಕವಾಗಿ ಕಾರ್ಯ ಮಾಡಬಹುದು. ಈ ಕಾರ್ಯಗಳು ಮಾಡಲ್ಪಟ್ಟರೆ, ಗ್ರಾಮವು ಎಂತಹ ಸೌಕರ್ಯಗಳುಳ್ಳ ಪ್ರದೇಶವಾಗುವುದು ಕಲ್ಪನೆ ಬರುವಂತಿದೆ. ಗ್ರಾಮದ ಸರ್ವಾಂಗೀಣ ಅಭಿವೃದ್ಧಿಗೆ ಅನುಕೂಲ ಮಾಡಿ ಕೊಡುವ ಕಾರ್ಯಗಳು ಇವು. ಪ್ರದರ್ಶನ, ಪರಿಷತ್ತು, ಸಮ್ಮೇಲನಗಳಲ್ಲಿ ಭಾಗವಹಿಸಬಹುದು, ಆದರೆ ಆ ಸಂಬಂಧವಾಗಿ ೨೫ ರೂಪಾಯಿಕಿಂತ ಹೆಚ್ಚು ವೆಚ್ಚವನ್ನು ಪಂಚಾಯತವು ಡೆಪ್ಯೂಟಿ ಕಮಿಶನರರ ಪರವಾನಿಗಿ ಇಲ್ಲದೆ ಮಾಡಕೂಡದು. ಅಂದರೆ ಹೆಚ್ಚು ವೆಚ್ಚ ಮಾಡುವ ಪ್ರಸಂಗ ಬಂದರೆ ಅವನ ಪರವಾನಗಿ ಪಡೆದು ಮಾಡಲಿಕ್ಕೆ ಬರುವುದು ಎಂದು ಅರ್ಥ.

## ೪೪. ಸಂಸ್ಥೆಗಳನ್ನು ಸುಸ್ಥಿತಿಯಲ್ಲಿಡಲು ಮತ್ತು ಇತರ ಕೆಲಸಗಳ ನಿರ್ವಹಣೆಯ ಕೆಲಸವನ್ನು ಹಸ್ತಾಂತರಿಸಲು ತಾಲೂಕ ಬೋರ್ಡಿಗೆ ಅಧಿಕಾರ.

ಕಲಮು ೪೨ ಮತ್ತು ೪೩ ರಲ್ಲಿ ಹೇಳಲಾಗದೆ ಇದ್ದಂತಹ ಯಾವುದೇ ಸಂಸ್ಥೆಯ ಸಂಚಾಲನವನ್ನು ಇಲ್ಲವೆ ಕೆಲಸದ ನಿರ್ವಹಣೆಯನ್ನು ಪಂಚಾಯತದ ಸಮ್ಮತಿಯಿಂದ ಇನ್ನೊಂದು ಪಂಚಾಯತಕ್ಕೆ ಕಾಲಕಾಲಕ್ಕೆ ತಾಲೂಕ ಬೋರ್ಡು ಹಸ್ತಾಂತರಿಸಬಹುದು ಮತ್ತು ಆ ನಂತರ ಇಂತಹ ಪಂಚಾಯತವು ಆ ಸಂಸ್ಥೆಗಳ ಸಂಚಾಲನವನ್ನು ಮಾಡಲು ಇಲ್ಲವೆ ಆ ಕೆಲಸದ ನಿರ್ವಹಣೆ ಮಾಡಲು ಕಾಯಿದೆ ಬದ್ಧವಾಗುವುದು.

ಆದರೆ ಇಂತಹ ಪ್ರತಿಯೊಂದು ಪ್ರಸಂಗದಲ್ಲಿ ಹೀಗೆ ಮಾಡಬೇಕಾದ ಸಂಚಾಲನಕ್ಕಾಗಿ ಇಲ್ಲವೆ ನಿರ್ವಹಣೆಗಾಗಿ ಅವಶ್ಯವಾದ ನಿಧಿಯನ್ನು ಪಂಚಾಯತಕ್ಕೆ ತಾಲೂಕ ಬೋರ್ಡು ಅನುಕೂಲಿಸಿ ಕೊಡತಕ್ಕದ್ದಲ್ಲ

**ವಿವೇಚನೆ**

ಒಂದು ಪಂಚಾಯತವು ಮಾಡಲೇಬೇಕಾದ ಹಾಗು ಮಾಡಬಹುದಾದ ಕಾರ್ಯಗಳನ್ನು ಕಲಮು ೪೨-ಹಾಗೂ ೪೩ ರಲ್ಲಿ ಹೇಳಿಯಾಯಿತು. ಈ ಪಟ್ಟಿಯ ಹೊರಗೆ ಇರುವ ಕಾರ್ಯಗಳು ಇದ್ದಾಗ, ಅವು ಒಂದು ಪಂಚಾಯತವು ಒಪ್ಪಿದರೆ, ಆ ಕಾರ್ಯಗಳನ್ನು ಮಾಡಲು ಇನ್ನೊಂದು ಪಂಚಾಯತಕ್ಕೆ ತಾಲೂಕ ಬೋರ್ಡು ಒಪ್ಪಿಸಬಹುದು. ಮತ್ತು ಹಾಗೆ ಒಪ್ಪಿಸಲ್ಪಟ್ಟ ಕಾರ್ಯಗಳಿಗಾಗಿ ಅವಶ್ಯವಾದ ನಿಧಿಯನ್ನು ತಾಲೂಕ ಬೋರ್ಡು ವ್ಯವಸ್ಥೆಮಾಡಬೇಕು. ಕಲಮು ೪೨-ಹಾಗೂ ೪೩ರಲ್ಲಿ ನಡೆಯಬೇಕಾದ ಕಾರ್ಯಗಳು ತಾಲೂಕ ಬೋರ್ಡದ ಮೇಲ್ವಿಚಾರಣೆಯಲ್ಲಿ ನಡೆಯಬೇಕೆಂದು ಹೇಳಿದೆ. ಅದೇ ಅಧಿಕಾರವು ಮುಂದೆ ಈ ಕಲಮಿನನ್ವಯವಾಗಿ ಬಂದು, ಬೇರೆಯಾವ ಕೆಲಸವಿದ್ದರೂ ಅದರ ಮೇಲ್ವಿಚಾರಣೆ, ಹಸ್ತಾಂತರಕಾರ್ಯ ಇದೂ ತಾಲೂಕ ಬೋರ್ಡದ ಅಧಿಕಾರದಲ್ಲಿಯವು ಎಂಬುದನ್ನು ಇಲ್ಲಿ ಸೂಚಿಸಿದಂತೆ ಆದರೆ ಈ ಕಲಮಿನನ್ವಯವಾಗಿ ಹಸ್ತಾಂತರಿಸಬೇಕಾದಾಗ ಯಾವ ಪಂಚಾಯತ ಕ್ಷೇತ್ರದಲ್ಲಿಯ ಕಾರ್ಯವು ಹಸ್ತಾಂತರಿಸಲ್ಪಡಬಹುದೋ ಆ ಕ್ಷೇತ್ರದಲ್ಲಿಯ ಪಂಚಾಯತದ ಪೂರ್ವಸಮ್ಮತಿ ಅವಶ್ಯವೆಂದು ಹೇಳಿ ಪಂಚಾಯತದ ಅಧಿಕಾರವನ್ನು ಮನ್ನಿಸಲಾಗಿದೆ.

## ೪೫. ಇತರ ಕರ್ತವ್ಯಗಳು

(೧) ಪಂಚಾಯತವು

(i) ಈ ಸಂಬಂಧದಲ್ಲಿ ತಾಲೂಕ ಬೋರ್ಡ ಮಾಡಿದ ಕ್ರಮನಿಯಮಗಳಂಕಿಂತವಾಗಿ—

(ಅ) ಗ್ರಾಮದ ಪ್ರದೇಶದಲ್ಲಿ ನಡೆವ ಕೆಲಸಗಳ ಮೇಲೆ ತಾಲೂಕ ಬೋರ್ಡು ಸೇವಿಸಿಕೊಂಡ ಕೆಲಸದವರ ಮೇಲೆ ಮೇಲ್ವಿಚಾರಣೆ ಮಾಡತಕ್ಕದ್ದು.

(ಬ) ತಾಲೂಕ ಬೋರ್ಡದಿಂದ ಒಪ್ಪಿಸಲ್ಪಟ್ಟಂತಹ ಕೆಲಸಗಳನ್ನು ನಿರ್ವಹಿಸತಕ್ಕದ್ದು.

(ii) ತಾಲೂಕ ಬೋರ್ಡದೊಡನೆ ವಿಚಾರವಿನಿಮಯ ಮಾಡಿ, ಪ್ರಕಟನೆ-ಪರಿಪತ್ರ ಹೊರಡಿಸಿ, ಸರಕಾರದಿಂದ ಒಪ್ಪಿಸಲ್ಪಟ್ಟ ನೀರಾವರಿ ನೀರಿನ ವಿತರಣೆಯ ಕಾರ್ಯವನ್ನು ಒಳಗೊಂಡು ಬೇರೆ ಯಾವುದೇ ಆಡಳಿತಾತ್ಮಕ ಕರ್ತವ್ಯಗಳನ್ನು ಸಂಬಂಧಪಟ್ಟ ಪಂಚಾಯತದ ಸಮ್ಮತಿಯಿಂದ ಸರಕಾರವು ನಿರ್ದೇಶಿಸಲಾದಂತಹ ಗಳನ್ನು ಮಾಡತಕ್ಕದ್ದಲ್ಲ.

(೨) ಉಪಕಲಮು (೧) ರ ವಾಕ್ಯಾವಳಿ (ii) ರಲ್ಲಿ ಹೇಳಲಾದ ಕರ್ತವ್ಯಗಳನ್ನು ನಡೆಸಲು ಆವಶ್ಯಕವಾದಷ್ಟು ನಿಧಿಯನ್ನು ತಾಲೂಕ ಬೋರ್ಡದಿಂದ ಪಂಚಾಯತಕ್ಕೆ ಒಪ್ಪಿಸಲ್ಪಟ್ಟ ಹೊರತು, ಪಂಚಾಯತವು ಕಾರ್ಯ ಮಾಡಲು ಬದ್ಧವಾಗಿರತಕ್ಕದ್ದು.

## ವಿವೇಚನೆ

ಪಂಚಾಯತವು ರಾಜ್ಯದಲ್ಲಿಯ ಆಡಳಿತ ವ್ಯವಸ್ಥೆಯಲ್ಲಿಯ ಪ್ರಾಥಮಿಕ ಘಟಕ. ಆದ್ದರಿಂದ ತಾಲೂಕ ಬೋರ್ಡ, ಸರಕಾರ ಇವು ಕೆಲವೊಂದು ಕೆಲಸಗಳನ್ನು ಪಂಚಾಯತದ ಮುಖಾಂತರ ಮಾಡಿಸಲು ಸಾಧ್ಯವಿದೆ. ಆದರೆ ಈ ಕೆಲಸ ಮಾಡುವುದಕ್ಕೆ ಆ ಪಂಚಾಯತದ ಪೂರ್ವ ಸಮ್ಮತಿ ಬೇಕು. ಅಂದರೆ ಯಾವ ಪಂಚಾಯತಕ್ಕೆ ಆ ಕೆಲಸ ಮಾಡಲು ಸಾಧ್ಯವಿಲ್ಲವೊ ಅಂತಹದನ್ನು ಅದರ ಮೇಲೆ ಹೇರುವುದರಿಂದ ಕೆಲಸ ಆಗದು; ಇಷ್ಟೇ ಅಲ್ಲ ಅದು ಕೆಡುವುದು. ಆದ್ದರಿಂದ ಆಡಳಿತಕ್ಕೆ ಸಂಬಂಧವಾದ, ನೀರಾವರಿ ನೀರಿನ ವಿತರಣೆಯನ್ನೊಳಗೊಂಡು, ಕರ್ತವ್ಯ ಮಾಡಬೇಕಾದ ಪಂಚಾಯತದ ಸಮ್ಮತಿಯಿಂ ಅದಕ್ಕೆ ಹತ್ತುವ ವೆಚ್ಚವನ್ನು ಕೊಟ್ಟು ತಾಲೂಕ ಬೋರ್ಡದ ಮುಖಾಂತರ ಸರಕಾರವು ಒಪ್ಪಿಸಿ ಕೊಡಬೇಕು.

ಪಂಚಾಯತದ ಕ್ಷೇತ್ರದಲ್ಲಿ ಪಂಚಾಯತವು ಮಾಡಲೇಬೇಕಾದ ಹಾಗೂ ಮಾಡಬಹುದಾದ ಕರ್ತವ್ಯಗಳಲ್ಲದೆ, ತಾಲೂಕಬೋರ್ಡ ಹೇಳಿದ, ಸರಕಾರವು ತಾಲೂಕಬೋರ್ಡದ ಮುಖಾಂತರ ಹೇಳಿದ ಕೆಲಸಗಳನ್ನು ಪಂಚಾಯತವು ಮಾಡಬೇಕಾಗುತ್ತದೆ. ಇದಕ್ಕಾಗಿ ನಿಯಮ-ಕ್ರಮಗಳನ್ನು ತಾಲೂಕಬೋರ್ಡು ಮಾಡುವುದು.

## ೪೬. ಕಾರ್ಯಗಳನ್ನು ಒಪ್ಪಿಸಿಕೊಡುವುದು

(೧) ಆ ಕಾಲಕ್ಕೆ ಜಾರಿಯಲ್ಲಿರುವ ಯಾವುದೇ ಕಾಯಿದೆಯಂಕಿತವಾಗಿ ಸರಕಾರವು ಪ್ರಕಟನೆ-ಪರಿಪತ್ರ ಹೊರಡಿಸಿ, ಮತ್ತು ಅದರಲ್ಲಿ ನಿರ್ದಿಷ್ಟಪಡಿಸಲಾದ ಕರಾರುಗಳಂಕಿತವಾಗಿ,

(ಅ) ಗ್ರಾಮಕ್ಕೆ ಹೊಂದಿಕೊಂಡು ಇರುವ ಅರಣ್ಯದ ಸಂಚಾಲನ ಹಾಗೂ ಪರಿಪಾಲನದ ಕಾರ್ಯವನ್ನು ಯಾವುದೇ ಪಂಚಾಯತಕ್ಕೆ ಹಸ್ತಾಂತರಿಸಬಹುದು.

(ಬ) ಗ್ರಾಮದ ಪ್ರದೇಶದಲ್ಲಿದ್ದ ಸರಕಾರದ ಒಡೆತನದಲ್ಲಿದ್ದ ಬೀಳುಭೂಮಿ ಹುಲ್ಲುಬನ್ನಿ ಇಲ್ಲವೆ ಖಾಲೀಜಾಗಾ ಇವುಗಳ ಸಂಚಾಲನವನ್ನು ಪಂಚಾಯತಕ್ಕೆ ಒಪ್ಪಿಸಬಹುದು.

(ಕ) ಸರಕಾರದ ಪರವಾಗಿ ಭೂಕಂದಾಯ ವಸೂಲಿಮಾಡುವುದನ್ನು ಮತ್ತು ಅದಕ್ಕೆ ಸಂಬಂಧವಾದ ದಾಖಲೆಗಳನ್ನು ಸುಸ್ಥಿತಿಯಲ್ಲಿಡುವುದನ್ನು ಪಂಚಾಯತಕ್ಕೆ ಒಪ್ಪಿಸಬಹುದು.

(ಡ) ಪಂಚಾಯತಕ್ಕೆ,

(i) ಸಾರ್ವಜನಿಕ ಭೂಮಿಗಳನ್ನು

(ii) ಸರಕಾರವು ಯಾವುದರ ಸಂಚಾಲನವನ್ನು ವಹಿಸಿಕೊಂಡಿರುವುದೋ ಅಂತಹ ಭೂಮಿಗಳನ್ನು

(iii) ಯಾವ ಭೂಮಿಗಳ ಮಾಲಕರಿಗೆ ಸಾಗುವಳಿಮಾಡಲು ಅಸಾಮರ್ಥ್ಯ ವುಂಟಾಗಿದೆಯೋ ಅಂತಹ ಭೂಮಿಗಳ ಸಂಚಾಲನವನ್ನು ಆ ಕಾಲಕ್ಕೆ ಜಾರಿಯಲ್ಲಿರುವ ಕಾಯಿದೆಯ ಮೂಲಕ ಸರಕಾರವು ಸಂಚಾಲನವನ್ನು ವಹಿಸಿಕೊಳ್ಳಬಹುದಾಗಿದೆಯೋ ಅಂತಹ ಭೂಮಿಗಳನ್ನು

ಸಂಚಾಲಕ್ಕಾಗಿ ಹಾಗೂ ಸಾಗುವಳಿಗಾಗಿ ಒಪ್ಪಿಸಬಹುದು.

ಆದರೆ, ವಾಕ್ಯಾವಳಿ (ಅ) ದನ್ವಯವಾಗ ಅರಣ್ಯದ ಸಂಚಾಲನ ಹಾಗೂ ಪರಿಪಾಲನವು ಹಸ್ತಾಂತರಿಸಿ ಕೊಡಲ್ಪಟ್ಟಾಗ, ಇಂತಹ ಸಂಚಾಲನ ಹಾಗೂ ಪರಿಪಾಲನಕ್ಕಾಗಿ ಆವಶ್ಯಕವಾಗುವ ಯಾವುದೇ ಹಣವನ್ನು ಇಲ್ಲವೆ ಇಂತಹ ಅರಣ್ಯದಿಂದ ಬರುವ ಉತ್ಪನ್ನದ ಯೋಗ್ಯಭಾಗವನ್ನು ಪಂಚಾಯತಕ್ಕೆ ಕೊಡಬೇಕೆಂದು ಸರಕಾರವು ನಿರ್ದೇಶಿಸತಕ್ಕದ್ದು,

(೨) ಗೊತ್ತುಮಾಡಲ್ಪಟ್ಟ ಕರಾರುಗಳಿಗಂಕಿತವಾಗಿ, ಈ ಕಲಮಿನನ್ವಯವಾಗಿ ಒಪ್ಪಿಸಲಾದ ಇಲ್ಲವೆ ಹಸ್ತಾಂತರಿಸಲಾದ ಕಾರ್ಯಗಳನ್ನು ನಿರ್ವಹಿಸುವುದಕ್ಕೆ ಅಗತ್ಯವಾದ ಹಾಗೂ ಆನುಷಂಗಿಕವಾದ ಎಲ್ಲ ಕೆಲಸಗಳನ್ನು ಮಾಡಲು ಪಂಚಾಯತಕ್ಕೆ ಅಧಿಕಾರ ಇರತಕ್ಕದ್ದು.

## ವಿವೇಚನೆ

ಪ್ರಜಾಸತ್ತೆಯಲ್ಲಿ ಆಡಳಿತ ವಿಕೇಂದ್ರೀಕರಣವು ಮೂಲತತ್ವ. ಪಂಚಾಯತವು ರಾಜ್ಯದಲ್ಲಿಯ ಆಡಳಿತದ ಪ್ರಾಥಮಿಕ ಹಾಗೂ ಮೂಲ ಘಟಕ. ಅದಕ್ಕೆ ಸರಕಾರವು ಅನೇಕ ಕೆಲಸಗಳನ್ನು ಹಸ್ತಾಂತರಿಸಿ ಇಲ್ಲವೆ ಒಪ್ಪಿಸಿಕೊಡಬಹುದು. ಅವುಗಳ ಬಗ್ಗೆ ಈ ಕಲಮಿನಲ್ಲಿ ಹೇಳಲಾಗಿದೆ. ಗ್ರಾಮದ ಪ್ರದೇಶಕ್ಕೆ ಹೊಂದಿ ಇರುವ ಅರಣ್ಯ, ಸರಕಾರೀ ಬೀಳುಭೂಮಿ, ಭೂಕಂದಾಯ ವಸೂಲಿ, ಮುಂತಾದುವು ನಿಜವಾಗಿ ಸರಕಾರದ ಬೇರೆ ಇಲಾಖೆಗಳ ಕೆಲಸವಾಗಿದೆಯಾದರೂ ಅವುಗಳ ಆಡಳಿತ ಕಾರ್ಯವನ್ನು ಪಂಚಾಯತಕ್ಕೆ ಕೊಟ್ಟರೆ, ಪಂಚಾಯತದ ಪ್ರತಿಷ್ಠೆಯು ಹೆಚ್ಚುವದಲ್ಲದೆ ಸರಕಾರದ ಕೆಲಸವೂ ಸುಲಭವಾಗುವುದು. ಆದರೆ ಇವು ಪಂಚಾಯತಕ್ಕೆ ಹೆಚ್ಚಿನ ಕಾರ್ಯಗಳಾಗುವುದರಿಂದ ಇದಕ್ಕೆ ತಗಲುವ ವೆಚ್ಚವನ್ನು ಕೊಡಲಾಗುವುದಲ್ಲದೆ, ತಕ್ಕ ಹೆಚ್ಚಿನ ಅಧಿಕಾರವನ್ನು ಕೊಡಲಾಗುವುದು. ಹೆಚ್ಚಿನ ಕೆಲಸದ ವಿವರಣೆ, ಹಾಗೂ ವೆಚ್ಚದ ವ್ಯವಸ್ಥೆ ಅಲ್ಲದೆ ಹೆಚ್ಚಿನ ಅಧಿಕಾರಗಳನ್ನು ಈ ಕಲಮಿನ ಮೂಲಕ ಹೇಳಲಾಗಿದೆ

## ೪೭. ಪಂಚಾಯತಗಳ ಕಾರ್ಯಗಳಿಗೆ ಹೆಚ್ಚಿನ ಕಾರ್ಯಗಳನ್ನು ಜೋಡಿಸಲು ಸರಕಾರಕ್ಕೆ ಅಧಿಕಾರ

ತಾಲೂಕ ಬೋರ್ಡದೊಂದಿಗೆ ವಿಚಾರವಿನಿಮಯ ಮಾಡಿ, ಸರಕಾರದಿಂದ ಹಾಕಲ್ಪಡಬಹುದಾದ ಕರಾರುಗಳಿಗಂಕಿವಾಗಿ, ಕಲಮು ೪೨ ರಿಂದ ೪೫ ರ ವರೆಗೆ ವಿವರಿಸಲಾದ ಕಾರ್ಯಗಳಲ್ಲದೆ ಬೇರೆ ಯಾವುದೇ ಕಾರ್ಯಗಳನ್ನು ನಿರ್ವಹಿಸಲು ಇಲ್ಲವೆ ಯಾವುದೇ ಕರ್ತವ್ಯಗಳನ್ನು ಮಾಡಲು ಸರಕಾರವು ಸಾಮಾನ್ಯ ಇಲ್ಲವೆ ವಿಶಿಷ್ಟ ಆಜ್ಞೆಯಿಂದ ಯಾವುದೇ ಪಂಚಾಯತಕ್ಕೆ ಅಧಿಕಾರ ಕೊಡಬಹುದು.

## ವಿವೇಚನೆ

ಕಲಮು ೪೨ ರಿಂದ ೪೫ ರ ವರೆಗೆ ಪಂಚಾಯತದ ಕರ್ತವ್ಯಗಳ ವಿವರಣೆ ಯಾಯಿತು. ೪೬ ರಲ್ಲಿ ಸರಕಾರವು ಒಪ್ಪಿಸಬಹುದಾದ ಕರ್ತವ್ಯಗಳ ವಿವರಣೆ ಬಂದಿತು. ಇದರಲ್ಲಿ ಸರಕಾರಕ್ಕೆ ಈ ಹೆಚ್ಚಿನ ಕರ್ತವ್ಯಗಳನ್ನು ಪಂಚಾಯತಕ್ಕೆ ಒಪ್ಪಿಸಕೊಡಲು ಅಧಿಕಾರವನ್ನು ಕೊಡಲಾಗಿದೆ. ಒಪ್ಪಿಸಿಕೊಡುವುದು ಕಲಮು ೪೬ ರನ್ವಯವಾಗಿದ್ದರೂ ಪಂಚಾಯತದ ಕರ್ತವ್ಯಗಳನ್ನು ಹೆಚ್ಚಿಸುವ ಅಧಿಕಾರ ಈ ಕಲಮಿನಿಂದ ಬರುವುದು. ಒಂದು ವಿಧಾನದ ವಿಷಯವಾದರೆ ಮತ್ತೊಂದು ಅಧಿಕಾರದ ವಿಷಯವಾಗಿರುವುದು.

## ೪೮. ಒಂದು ಸ್ಥಾನಿಕ ಸಂಸ್ಥೆಯು ಕಿಂತ ಹೆಚ್ಚು ಸಂಸ್ಥೆಗಳು ಕೂಡಿ ಜಕಾತಿ ಹಾಕುವುದು

ಸರಕಾರದ ಅನುಮತಿಯಂಕಿತವಾಗಿ, ಕಾಲ ಕಾಲಕ್ಕೆ ಒಂದು ಪಟ್ಟಣ ಪಂಚಾಯತವು, ಬೇರೆ ಯಾವುದೇ ಪಟ್ಟಣ ಪಂಚಾಯತದೊಂದಿಗೆ, ಇಲ್ಲವೆ ಯಾವುದೇ ಮುನಸಿಪಲ್ ಕಾವುನ್ಸಿಲ್‌ದೊಂದಿಗೆ, ಸೈನ್ಯಕೇಂದ್ರಾಧಿಕಾರದೊಂದಿಗೆ, ಇಲ್ಲವೆ ಯಾವುದೇ ಪಟ್ಟಣ ಪ್ರದೇಶಕ್ಕಾಗಿ ನೇಮಕವಾದ ಸಮಿತಿಯೊಂದಿಗೆ, ಇಲ್ಲವೆ ಇಂತಹ ಸಂಸ್ಥೆಗಳ ಸಮೂಹದೊಂದಿಗೆ, ಜಕಾತಿ ಹಾಕುವ ಬಗ್ಗೆ ಕರಾರು ಮಾಡಿ ಕೊಳ್ಳಬಹುದು; ಅದರಿಂದ ಹೀಗೆ ಕರಾರು ಮಾಡಿಕೊಂಡ ಸಂಸ್ಥೆಗಳು ಕ್ರಮವಾಗಿ ತಾವು ಹಾಕಬಹುದಾದ ಜಕಾತಿಯನ್ನು ಪ್ರತ್ಯೇಕವಾಗಿ ಹಾಕದೆ, ಮೇಲ್ಕಾಣಿಸಿದ ಸಂಸ್ಥೆಗಳ ನಿಯಂತ್ರಣದಂಕಿತವಾಗಿರುವ ಪ್ರದೇಶದ ಪರಿಮಿತಿಯಲ್ಲಿ ಒಟ್ಟಾಗಿ ಹಾಕಬಹುದು.

ಆದರೆ, ಹೀಗೆ ಒಪ್ಪಂದ ಮಾಡಿಕೊಳ್ಳಲು ಬಂದಿರುವ ಸಂಸ್ಥೆಗಳಲ್ಲಿ ಒಂದು ಸಂಸ್ಥೆಯು ಸೈನ್ಯಕೇಂದ್ರ ಅಧಿಕಾರವಾಗಿದ್ದರೆ, ಒಪ್ಪಂದದ ಬಗ್ಗೆ ರಾಜ್ಯ ಸರಕಾರದ ನಿರ್ಣಯವು ಕೇಂದ್ರ ಸರಕಾರದ ಸಮ್ಮತಿಯಂಕಿತವಾಗಿರತಕ್ಕದ್ದು.

### ವಿವೇಚನೆ

ಜಕಾತಿ ಹಾಕುವುದು ಪಟ್ಟಣ ಪಂಚಾಯತದ ಅಧಿಕಾರ. ಇದು ಗ್ರಾಮದ ಪಂಚಾಯತಕ್ಕೆ ಸಂಬಂಧವಿಲ್ಲ ಎಂಬುದು ಈ ಕಲಮಿನಲ್ಲಿಯ ಮಾತಿನಿಂದ ಸ್ಪಷ್ಟವಾಗುವುದು. ಅಲ್ಲದೆ ವ್ಯಾಖ್ಯೆಯ ಕಲಮಿನಲ್ಲಿ 'ಜಕಾತಿ'ಯ ವ್ಯಾಖ್ಯೆ ಮಾಡುವಾಗ ಕೂಡ ಹೇಳಲಾಗಿದೆ. ಒಂದೊಂದು ಪಟ್ಟಣ ಪಂಚಾಯತವೂ ಜಕಾತಿ ಹಾಕುತ್ತದೆ. ಆದರೆ, ಹೀಗೆ ಪ್ರತ್ಯೇಕವಾಗಿ ಜಕಾತಿ ಹಾಕದ ಬದಲು ಎರಡು ಮೂರು ಸಂಸ್ಥೆಗಳು ಕೂಡಿ ಒಪ್ಪಂದ ಮಾಡಿಕೊಂಡು ತಮ್ಮ ಕೂಡಿದ ಪ್ರದೇಶ ಮಿತಿಗೆ ಒಟ್ಟಾಗಿ ಜಕಾತಿ ಹಾಕಬಹುದಾಗಿದೆ. ಇದರಿಂದ ಕೆಲಸದಲ್ಲಿ ಉಳಿತಾಯವಾಗುವ ಸಂಭವವಿದೆ. ಹೀಗೆ ಪಟ್ಟಣ ಪಂಚಾಯತವು ಇತರ ಸ್ಥಾನಿಕ ಅಧಿಕಾರಗಳೊಂದಿಗೆ ಒಪ್ಪಂದ ಮಾಡಿಕೊಳ್ಳಬೇಕಾದರೆ ಸರಕಾರದ ಅನುಮತಿ ಬೇಕು. ಸ್ಥಾನಿಕ ಅಧಿಕಾರಗಳಲ್ಲಿ ಯಾವುದಾದರೂ ಸೈನ್ಯಕೇಂದ್ರ ಅಧಿಕಾರವಾಗಿದ್ದರೆ, ರಾಜ್ಯಸರಕಾರವು ಒಪ್ಪಂದಕ್ಕೆ ಅನುಮತಿ ಕೊಡುವ ಮೊದಲು ಕೇಂದ್ರ ಸರಕಾರದ ಅನುಮತಿ ಪಡೆಯ ಬೇಕು. ಏಕೆಂದರೆ ಸೈನ್ಯದ ಆಡಳಿತ ವ್ಯವಹಾರ ಕೇಂದ್ರ ಸರಕಾರದ ಅಧಿಕಾರದಲ್ಲಿದೆ.

## ೪೯. ಕೆಲ ಭೂಮಿಗಳನ್ನು ಸರಕಾರವು ಪಂಚಾಯತದ ಅಧಿಕಾರಕ್ಕೆ ವಹಿಸಿಕೊಡಬಹುದು

(೧) ಗ್ರಾಮದಲ್ಲಿ ಸರಕಾರದ ಅಧಿಕಾರದ ಅಂತರ್ಗತವಾಗಿರುವ ಬಯಲು ಜಾಗಾ, ಖಾಲೀ ಭೂಮಿಗಳು, ಇಲ್ಲವೆ ಸಾರ್ವಜನಿಕ ರಸ್ತೆ ಮತ್ತು ಮಾರ್ಗಗಳು, ಬಾವಿಗಳು, ನದಿಯ ಪಾತ್ರಗಳು, ಕೆರೆಗಳು, ಗಿಡಗಳು ಇಲ್ಲವೆ ಬೇರೆ ಯಾವುದೇ ಆಸ್ತಿಯನ್ನು ಈ ಪ್ರಕರಣದ ಉದ್ದೇಶಕ್ಕಾಗಿ ಸರಕಾರವು ಪ್ರಕಟನೆ ಪರಿಪತ್ರ ಹೊರಡಿಸಿ, ಮತ್ತು ತನಗೆ ಯೋಗ್ಯ ಕಂಡಂತಹ ಕರಾರುಗಳನ್ನು ಮತ್ತು ನಿರ್ಬಂಧ ಗಳನ್ನು ಹಾಕಿ, ಪಂಚಾಯತದ ಅಧಿಕಾರಕ್ಕೆ ವಹಿಸಿಕೊಡಬಹುದು.

(೨) ಉಪಕಲಮು (೧) ರನ್ವಯವಾಗಿ ವಹಿಸಿಕೊಡಲಾಗಿದ್ದ ಯಾವುದೇ ಆಸ್ತಿಯನ್ನು ಸರಕಾರವು ಪ್ರಕಟನೆ ಪರಿಪತ್ರ ಹೊರಡಿಸಿ, ಸರಕಾರವು ನಿರ್ದಿಷ್ಟಪಡಿಸ ಬಹುದಾದಂತಹ ಕರಾರುಗಳ ಮೇಲೆ, ಪುನಃ ತನ್ನ ಸ್ವಾಧೀನಮಾಡಿಕೊಳ್ಳಲು ಸಮರ್ಥವಿದೆ.

### ವಿವೇಚನೆ

ಗ್ರಾಮದ ಪ್ರಾದೇಶಿಕ ಮಿತಿಯಲ್ಲಿ ಸರಕಾರದ ಒಡೆತನವುಳ್ಳ ಆಸ್ತಿ ಇರುವ ಸಂಭವವಿದೆ. ಅದನ್ನು ಸರಕಾರವು ಕೆಲವು ಕರಾರು-ನಿರ್ಬಂಧಗಳನ್ನು ಹಾಕಿ ಪಂಚಾಯತದ ಅಧಿಕಾರಕ್ಕೆ ಕೊಡಬಹುದು. ಹೀಗೆ ಕೊಡುವಾಗ ಸರಕಾರವು ಪ್ರಕಟನೆ ಪರಿಪತ್ರ ಹೊರಡಿಸಿ ಕೊಡಬೇಕು. ಹೀಗೆ ಕೊಟ್ಟವುಗಳ ಪೈಕಿ ಯಾವು ದನ್ನಾದರೂ ಸರಕಾರವು ತಾನು ನಿರ್ಧರಿಸಬಹುದಾದ ಕರಾರುಗಳ ಮೇಲೆ ಪುನಃ ತನ್ನ ಅಧಿಕಾರಕ್ಕೆ ಪಡೆಯಬಹುದು. ಅಂದರೆ ಸರಕಾರದ ಆಸ್ತಿಯನ್ನು ಸರಕಾರವು ಪಂಚಾಯತದ ಅಧಿಕಾರಕ್ಕೆ ಕೊಡಬಹುದು. ಸರಕಾರವು ತಾನೇ ಕರಾರು-ನಿರ್ಬಂಧಗಳನ್ನು ಹಾಕುವುದು. ಅಧಿಕಾರ ಕೊಟ್ಟ ಬಗ್ಗೆ ಪ್ರಕಟನೆ ಹೊರಡಿ ಸುವುದು. ಸರಕಾರಕ್ಕೆ ಮತ್ತೆ ಯಾವುದೇ ಆಸ್ತಿ ಮರಳಿ ತನ್ನ ಸ್ವಾಧೀನಕ್ಕೆ ತೆಗೆದು ಕೊಳ್ಳಬೇಕೆಂದು ಮನಸ್ಸಾದರೆ, ತಾನೇ ಕರಾರು ನಿರ್ಣಯಿಸುವುದು. ಪ್ರಕಟನೆ ಹೊರಡಿಸುವುದು ಹಾಗೂ ಆ ಆಸ್ತಿಯನ್ನು ತನ್ನ ಅಧಿಕಾರಕ್ಕೆ ತೆಗೆದುಕೊಳ್ಳುವುದು. ಸರಕಾರದ ನಿರ್ಣಯವೇ ಮುಖ್ಯ. ಅದರ ಮೇಲೆ ಪಂಚಾಯತವು ಅವಲಂಬಿಸಿದೆ ಎಂಬುದು ಸ್ಪಷ್ಟವಾಗುವುದು.

## ೫೦. ಆಸ್ತಿಯನ್ನು ಪಡೆದುಕೊಳ್ಳಲಿಕ್ಕೆ ಹಾಗೂ ಸ್ವಾಧೀನದಲ್ಲಿಟ್ಟು ಕೊಳ್ಳಲಿಕ್ಕೆ ಪಂಚಾಯತದ ಅಧಿಕಾರವು ನಿಯಮಗಳಿಗೆ ಅಂಕಿತವಾಗಿರತಕ್ಕದ್ದು

ಪಂಚಾಯತದ ಅಧಿಕಾರವಿರುವ ಪ್ರದೇಶದ ಮಿತಿಯ ಒಳಗೆ ಇಲ್ಲವೆ ಹೊರಗೆ ಇರುವ ಸ್ಥಾವರ ಮತ್ತು ಜಂಗಮ ಆಸ್ತಿಗಳನ್ನು ಪಡೆದುಕೊಳ್ಳಲು

ಹಾಗೂ ಸ್ವಾಧೀನದಲ್ಲಿಟ್ಟುಕೊಳ್ಳಲು, ಪಂಚಾಯತದ ಅಧಿಕಾರದ ಅಂತರ್ಗವಾಗಿದ್ದ ಇಲ್ಲವೆ ಪಂಚಾಯತವು ಪಡೆದ ಯಾವುದೇ ಸ್ಥಾವರ ಇಲ್ಲವೆ ಜಂಗಮ ಆಸ್ತಿಯನ್ನು ಬಾಡಿಗೆ ಕೊಡಲು, ಮಾರಾಟ ಮಾಡಲು, ಇಲ್ಲವೆ ಬೇರೆ ರೀತಿಯಿಂದ ಹಸ್ತಾಂತರಿಸಲು ಮತ್ತು ಒಪ್ಪಂದ ಮಾಡಿಕೊಳ್ಳಲು ಮತ್ತು ಈ ಕಾಯಿದೆಯ ಉದ್ದೇಶಗಳಾಗಿ ಆವಶ್ಯಕವಾದ ಎಲ್ಲವನ್ನು ಮಾಡಲು ಪಂಚಾಯತದ ಅಧಿಕಾರವು ಈ ಸಂಬಂಧದಲ್ಲಿ ಸರಕಾರವು ಮಾಡಿದ ನಿಯಮಗಳಿಗಂಕಿತವಾಗಿರತಕ್ಕದ್ದು.

ಆದರೆ, ಐದು ವರುಷಕ್ಕಿಂತ ಹೆಚ್ಚಿನ ಕಾಲಾವಧಿಯ ವರೆಗೆ ಕೊಡಲಾದ ಸ್ಥಾವರ ಆಸ್ತಿಯ ಬಾಡಿಗೆಯ ವ್ಯವಹಾರವು ಮತ್ತು ಇಂತಹ ಆಸ್ತಿಯ ಮಾರಾಟ ಇಲ್ಲವೆ ಬೇರೆ ರೀತಿಯ ಹಸ್ತಾಂತರವು ಕಮಿಶನರರ ಇಲ್ಲವೆ ಗೊತ್ತುಮಾಡಬಹುದಾದ ಬೇರೆ ಯಾವುದೇ ಅಧಿಕಾರಿಯ ಪೂರ್ವ ಸಮ್ಮತಿ ಇದ್ದ ಹೊರತು ಇಂತಹ ಬಾಡಿಗೆ ವ್ಯವಹಾರ, ಮಾರಾಟ, ಇಲ್ಲವೆ ಬೇರೆ ಹಸ್ತಾಂತರವು ಕಾಯಿದೆ ಬದ್ಧವಾಗದು.

ಆದರೆ, ಕಲಮು ೭೯ ರಲ್ಲಿ ಅನುಕೂಲಿಸಲಾದುದನ್ನು ಬಿಟ್ಟು, ಮತ್ತು ಸರಕಾರದ ಪೂರ್ವ ಸಮ್ಮತಿಯಿಲ್ಲದೆ, ಇಲ್ಲಿ ಹೇಳಲಾದ ಯಾವುದೇ ಮಾತು ಪಂಚಾಯತಕ್ಕೆ ಸಾಲ ಎತ್ತುವ ಅಧಿಕಾರವನ್ನು ಕೊಟ್ಟಿರುವುದಿಲ್ಲ.

**ವಿವೇಚನೆ'**

ಪಂಚಾಯತವು ತನ್ನ ಅಧಿಕಾರದ ಕ್ಷೇತ್ರದ ಪ್ರದೇಶದ ಒಳಗೆ ಮತ್ತು ಹೊರಗೆ ಆಸ್ತಿಯನ್ನು ಪಡೆಯಬಹುದು. ಮತ್ತು ಪಡೆದ ಆಸ್ತಿಯನ್ನು ಸ್ವಾಧೀನದಲ್ಲಿಟ್ಟುಕೊಳ್ಳಬಹುದು. ತನ್ನ ಅಧಿಕಾರದ ಅಂತರ್ಗತವಾಗಿ ಬಂದ ಇಲ್ಲವೆ ತಾವೇ ಪಡೆದ ಆಸ್ತಿಯನ್ನು ಬಾಡಿಗೆ ಕೊಡಬಹುದು. ಮಾರಾಟ ಮಾಡಬಹುದು. ಇಲ್ಲವೆ ಬೇರೆ ರೀತಿಯಲ್ಲಿ ಹಸ್ತಾಂತರಿಸಬಹುದು-ಅಂದರೆ ದಾನ ಮುಂತಾಗಿ ಮಾಡಬಹುದು. ಈ ಕಾಯಿದೆಯ ಉದ್ದೇಶಗಳಿಗೆ ಬೇರೆ ಕರಾರು ಮಾಡಿಕೊಳ್ಳಬಹುದು. ಇಲ್ಲವೆ ಎಲ್ಲ ಕೆಲಸವನ್ನೂ ಮಾಡಬಹುದು. ಆದರೆ ಈ ಮೇಲ್ಕಾಣಿಸಿದ ಎಲ್ಲ ಕೆಲಸಗಳೂ ಸರಕಾರವು ಈ ಸಂಬಂಧವಾಗಿ ಮಾಡಿದ ನಿಯಮಗಳಿಗೆ ಅಂಕಿತವಾಗಿರತಕ್ಕದ್ದು. ಐದು ವರುಷದಕಿಂತ ಯಾವುದೇ ಹೆಚ್ಚಿನ ಕಾಲಾವಧಿಯ ವರೆಗೆ ಆಸ್ತಿಯನ್ನು ಬಾಡಿಗೆ ಕೊಡುವುದಿದ್ದರೆ, ಇಲ್ಲವೆ ಮಾರಾಟ ಮಾಡುವುದಿದ್ದರೆ, ಇಲ್ಲವೆ ದಾನ ಮುಂತಾದ್ದು ಮಾಡುವದಿದ್ದರೆ, ಕಮಿಶನರನ ಇಲ್ಲವೆ ಬೇರೆ ಗೊತ್ತು ಮಾಡಿದ ಅಧಿಕಾರಿಯ ಪೂರ್ವ ಸಮ್ಮತಿ ಅವಶ್ಯ. ಅದು ಇಲ್ಲದೆ ಮಾಡಿದ ವ್ಯವಹಾರವು ಕಾಯಿದೆಬದ್ಧವಲ್ಲ. ಹೀಗೆ ವ್ಯವಹಾರ ಮಾಡಲು ಅಧಿಕಾರ ಕೊಟ್ಟರೂ

ಪಂಚಾಯತಕ್ಕೆ ಸಾಲ ಎತ್ತುವ ಅಧಿಕಾರವಿಲ್ಲ. ಸಾಲದ ಸಂಬಂಧವಾಗಿ ಕಲಮು ೭೯ ಬಂಧಿಸುವುದಿಲ್ಲ ಮತ್ತು ಸಾಲ ಎತ್ತಬೇಕಾದರೆ ಸರಕಾರದ ಪೂರ್ವ ಸಮ್ಮತಿ ಬೇಕು.

## ೫೧. ಪಂಚಾಯತದ ಸಾಮಾನ್ಯ ಅಧಿಕಾರಗಳು

(೧) ಪಂಚಾಯತಕ್ಕೆ ಒಪ್ಪಿಸಿಕೊಟ್ಟ ಇಲ್ಲವೆ ವಹಿಸಿಕೊಟ್ಟ ಕಾರ್ಯಗಳನ್ನು ನಡೆಸುವುದರ ಸಲುವಾಗಿ ಅಗತ್ಯವಾಗಿದ್ದ ಮತ್ತು ಅನುಷಂಗಿಕವಾದ ಎಲ್ಲ ಕೆಲಸಗಳನ್ನು ಮಾಡಲು ಪಂಚಾಯತಕ್ಕೆ ಅಧಿಕಾರ ಇರತಕ್ಕದ್ದು, ಮತ್ತು ವಿಶೇಷವಾಗಿ ಮತ್ತು ಈ ಮೊದಲು ಹೇಳಲಾದ ಅಧಿಕಾರಕ್ಕೆ ವ್ಯತ್ಯಯ ಬರದಂತೆ, ಕಲಮುಗಳು ೫೨, ೫೩, ೫೫, ೫೬, ೫೭ ಮತ್ತು ೫೮ ಇವುಗಳಲ್ಲಿ ನಿರ್ದಿಷ್ಟಪಡಿಸಿದ ಅಧಿಕಾರಗಳನ್ನು ನಿರ್ವಹಿಸಕ್ಕದ್ದು. ಮತ್ತು ಈ ಕಾರ್ಯಗಳಲ್ಲಿ ಯಾವುದನ್ನಾದರೂ ನೆರವೇರಿಸಲು ಒಂದು ಇಲ್ಲವೆ ಹೆಚ್ಚು ಸಮಿತಿಗಳನ್ನು ಪಂಚಾಯತವು ನೇಮಕಮಾಡಬಹುದು.

(೨) ಚುನಾವಣೆ ಮಾಡಿ ಪ್ರತಿಯೊಂದು ಪಂಚಾಯತವು ಈ ಕೆಳಗಿನ ಸಮಿತಿಗಳನ್ನು ರಚಿಸತಕ್ಕದ್ದು.

(i) ಒಕ್ಕಲುತನ ಸಮಿತಿ.

(ii) ಆರೋಗ್ಯ ಸಮಿತಿ.

(iii) ಗ್ರಾಮೋದ್ಯೋಗ ಸಮಿತಿ.

ಮತ್ತು ಕಾಲಕಾಲಕ್ಕೆ ಪಂಚಾಯತವು ಕೊಡಬಹುದಾದ ಆದೇಶಗಳಂಕಿತವಾಗಿ, ಪಂಚಾಯತದ ಅಧಿಕಾರಕ್ಷೇತ್ರದ ಪ್ರದೇಶದಲ್ಲಿಯ, ಒಕ್ಕಲುತನ, ಸಾರ್ವಜನಿಕ ಆರೋಗ್ಯ ಹಾಗೂ ಸ್ವಚ್ಛತೆ, ಮತ್ತು ಗ್ರಾಮೋದ್ಯೋಗಗಳ ಪುರಸ್ಕಾರ ಇವುಗಳ ಸಂಬಂಧವಾಗಿ ಪಂಚಾಯತವು ಮಾಡುತ್ತಿದ್ದ ಕಾರ್ಯಗಳನ್ನು ಅನುಕ್ರಮವಾಗಿ ಈ ಒಂದೊಂದು ಸಮಿತಿಯು ಮಾಡತಕ್ಕದ್ದು.

(೩) (ಅ) ಒಂದೊಂದು ಸಮಿತಿಯಲ್ಲಿಯ ಸದಸ್ಯರ ಒಟ್ಟು ಸಂಖ್ಯೆಯು ನಿಯಮಗಳು ಗೊತ್ತುಮಾಡಿದಷ್ಟು ಇರತಕ್ಕದ್ದು.

(ಬ) ನಿಯಮಗಳಿಂದ ಗೊತ್ತುಮಾಡಲ್ಪಟ್ಟ ರೀತಿಯಲ್ಲಿ, ಕೃಷಿಕರ ಸಂಘ, ಮಹಿಳಾಮಂಡಳ, ಯುವಕಮಂಡಳ ಇಲ್ಲವೆ ಸರಕಾರವು ಮಾನ್ಯತೆಕೊಟ್ಟ ಇತರ ಇಂತಹ ಸಂಸ್ಥೆಗಳು ಇದರಲ್ಲಿಯ ಸದಸ್ಯರನ್ನು ಮೇಲ್ಕಾಣಿಸಿದ ಒಂದೊಂದು ಸಮಿತಿಯು ಸಹಕರಿಸಿಕೊಳ್ಳಲು ಸಮರ್ಥವಿದೆ. ಮತ್ತು ಹೀಗೆ ಸಹಕರಿಸಿಕೊಂಡ ಸದಸ್ಯರ ಹಕ್ಕು ಹೊಣೆಗಾರಿಕೆಗಳು ನಿಯಮಗಳಿಂದ ಗೊತ್ತುಪಡಿಸಲಾದಂತೆ ಇರತಕ್ಕದ್ದು.

**ವಿವೇಚನೆ**

ಪಂಚಾಯತಕ್ಕೆ ತನ್ನವೇ ಆದ ಕಾರ್ಯಗಳು ಇವೆ. ಒಪ್ಪಿಸಲ್ಪಟ್ಟ ಕಾರ್ಯಗಳು ಇವೆ. ನಿರ್ವಹಿಸಲು ಕೊಟ್ಟ ಕಾರ್ಯಗಳು ಇವೆ. ಈ ಎಲ್ಲ ಕಾರ್ಯಗಳನ್ನು ನೆರವೇರಿಸಲು ಅಗತ್ಯವಾದ ಇಲ್ಲವೆ ಆನುಷಂಗಿಕವಾದ ಎಲ್ಲ ಅಧಿಕಾರಿಗಳು ಪಂಚಾಯತಕ್ಕೆ ಈ ಕಲಮಿನಿಂದ ಸಾಮಾನ್ಯವಾಗಿ ಕೊಡಲ್ಪಟ್ಟಿವೆ. ಈ ಸಾಮಾನ್ಯ ಅಧಿಕಾರವು ಇರುವುದರ ಜತೆಗೆ ಮತ್ತು ಅದಕ್ಕೆ ವ್ಯತ್ಯಯ ಬಾರ ದಂತೆ, ಕಲಮು ೫೨, ೫೩, ೫೫, ೫೬, ೫೭ ಹಾಗೂ ೫೮ ಇವುಗಳಲ್ಲಿಯ ಅಧಿಕಾರ ಗಳನ್ನು ನಿರ್ದಿಷ್ಟವಾಗಿ ಪಂಚಾಯತಕ್ಕೆ ಕೊಡಲಾಗಿದೆ ಈ ಕಲಮುಗಳ ಅಧಿಕಾರ ಗಳು ಯಾವು ಎಂಬುದು ಈ ಮುಂದೆ ತಿಳಿವುದು.

ಪಂಚಾಯತದ ಕಾರ್ಯಗಳಲ್ಲಿ ಕೆಲವನ್ನು ಸಮಿತಿಗಳ ಮೂಲಕ ಮಾಡಿಸ ಬೇಕೆಂದು ಈ ಕಲಮು ಹೇಳುತ್ತದೆ. ಒಕ್ಕಲುತನ ಸಮಿತಿ, ಆರೋಗ್ಯ ಸಮಿತಿ, ಗ್ರಾಮೋದ್ಯೋಗ ಸಮಿತಿ. ಈ ಸಮಿತಿಗಳ ಗ್ರಾಮಜೀವನದ ಮುಖ್ಯಕಾರ್ಯಗಳು ಜನರಿಗೆ ಸಂಬಂಧಪಟ್ಟ ಕಾರ್ಯಗಳು ಕಲ್ಯಾಣಕಾರಕ ಕಾರ್ಯಗಳು. ಆಡಳಿತಾತ್ಮಕ ಅಷ್ಟುಅಲ್ಲ. ಈ ಸಮಿತಿಗಳು ಚುನಾಯಿತವಾದ ಸಮಿತಿಗಳು. ಇದರಲ್ಲಿ ಎಷ್ಟು ಜನರು ಇರಬೇಕೆಂಬ ಬಗ್ಗೆ ನಿಯಮಗಳು ಹೇಳುವುವು. ಗ್ರಾಮಪ್ರದೇಶದಲ್ಲಿ ಬೇರೆ ಕಲ್ಯಾಣಕಾರಕ ಸಂಸ್ಥೆಗಳಾದ ಕೃಷಿಕರಸಂಘ, ಮಹಿಳಾಮಂಡಳ, ಯುವಕಸಂಘ ಮುಂತಾದವುಗಳ ಸದಸ್ಯರನ್ನು ಈ ಸಮಿತಿಗಳು ಸಹಕರಿಸಿಕೊಳ್ಳಬೇಕು. ಪಂಚಾ ಯತದಲ್ಲಿಯ ಸದಸ್ಯರ ಅಧಿಕಾರಹಕ್ಕು ಹೊಣೆಗಾರಿಕೆಗಳು ಪಂಚಾಯತದ ಅಧೀನ ವಾಗಿರುವುವು. ಸಹಕರಿಸಲ್ಪಟ್ಟ ಸದಸ್ಯರ ಹಕ್ಕು ಹೊಣೆಗಾರಿಕೆಗಳನ್ನು ನಿಯಮ ಗಳು ನಿರ್ದಿಷ್ಟಪಡಿಸುವುವು.

ಪಂಚಾಯತಕ್ಕೆ ತನ್ನ ಕ್ಷೇತ್ರದಲ್ಲಿದ್ದ ಎಲ್ಲ ಅಧಿಕಾರಗಳೂ ಈ ರೀತಿಯಾಗಿ ರಚಿತವಾದ ಸಮಿತಿಗಳಿಗೆ ಇರುವುವು. ಸಮಿತಿ ಕೆಲಸಮಾಡಿದರೂ ಅಧಿಕಾರವು ಪಂಚಾಯತದ ಅಧಿಕಾರವೇ ಅವರಿಗೆ ಇರುವುದು. ಹೀಗೆ ಸಮಿತಿ ಮಾಡುವುದರಿಂದ ಕಾರ್ಯವು ಆಸ್ಥೆಯಿಂದ ತ್ವರಿತವಾಗಿ ಆಗುವುದು.

**೫೨. ರಸ್ತೆ–ಸೇತುವೆ ಮುಂತಾದವುಗಳಿಗೆ ಸಂಬಂಧಪಟ್ಟ ಪಂಚಾ ಯತಗಳ ಅಧಿಕಾರ**

ಖಾಸಗಿ ಆಸ್ತಿಯಾಗಿರದೆ ಇದ್ದ ಮತ್ತು ಸರಕಾರ, ಮುನಸಿಪಲ್ ಕೌನ್ಸಿಲ್ ತಾಲೂಕ ಬೋರ್ಡ ಇವರ ಸಂಚಾಲನ ಇಲ್ಲವೆ ನಿಯಂತ್ರಣಕ್ಕೆಒಳಗಾಗದೆ ಇದ್ದ ಎಲ್ಲ ಗ್ರಾಮ ರಸ್ತೆಗಳು, ಆ ರಸ್ತೆಯಲ್ಲಿಯ ಸೇತುವೆಗಳು. ಬಂಡಿದಾರಿಗಳು ಗಟಾರುಗಳು,

ಕೆರೆಗಳು, ಬಾವಿಗಳು, ಮತ್ತು ಗ್ರಾಮದಲ್ಲಿಯ ಇತರ ಸಾರ್ವಜನಿಕ ಸ್ಥಳಗಳು ಇವುಗಳ ಮೇಲೆ ಪಂಚಾಯತದ ನಿಯಂತ್ರಣವು ಇರತಕ್ಕದ್ದು. ಮತ್ತು ಅವುಗಳನ್ನು ಸುಸ್ಥಿಯಲ್ಲಿಡಲಿಕ್ಕೆ ಹಾಗೂ ದುರಸ್ತಿ ಮಾಡಲಿಕ್ಕೆ ಅಗತ್ಯವಾದ ಎಲ್ಲ ಕೆಲಸಗಳನ್ನು ಪಂಚಾಯತವು ಮಾಡಬಹುದು. ಮತ್ತು.

(ಅ) ಹೊಸ ರಸ್ತೆಗಳ ಯೋಜನೆಯನ್ನು ಮಾಡಬಹುದು. ಮತ್ತು ರಚಿಸಬಹುದು.

(ಬ) ಹೊಸ ಸೇತುವೆಗಳನ್ನು ಕಟ್ಟಿಸಬಹುದು;

(ಕ) ಯಾವುದೇ ರಸ್ತೆ ಇಲ್ಲವೆ ಸೇತುವೆಯನ್ನು ಅಗಲ ಮಾಡಬಹುದು, ಪ್ರಾರಂಭಿಸಬಹುದು, ವಿಸ್ತರಿಸಬಹುದು ಇಲ್ಲವೆ ಬೇರೆ ರೀತಿಯಿಂದ ಸುಧಾರಿಸಬಹುದು.

(ಡ) ಡೆಪ್ಯೂಟಿ ಕಮಿಶನರರ ಪೂರ್ವ ಸಮ್ಮತಿಯಿಂದ ಯಾವುದೇ ರಸ್ತೆ, ಇಲ್ಲವೆ ಸೇತುವೆಯನ್ನು ದಾರಿ ಬದಲಿಸಬಹುದು, ಉಪಯೋಗ ನಿಲ್ಲಿಸಬಹುದು ಇಲ್ಲವೆ ಬಂದ ಮಾಡಬಹುದು; ಮತ್ತು

(ಇ) ಜಲಮಾರ್ಗಗಳನ್ನು ಆಳವಾಗಿಸಬಹುದು ಇಲ್ಲವೆ ಬೇರೆ ರೀತಿಯಲ್ಲಿ ಸುಧಾರಿಸಬಹುದು.

## ವಿವೇಚನೆ

ಪಂಚಾಯತದ ಅಧಿಕಾರ ಕ್ಷೇತ್ರದಲ್ಲಿಯ ರಸ್ತೆಗಳು, ಸೇತುವೆಗಳು ಸಾರ್ವಜನಿಕ ಉಪಯೋಗಕ್ಕಾಗಿ ಇರುವುದರಿಂದ ಅವುಗಳ ಮೇಲೆ ನಿಯಂತ್ರಣದ ಅಧಿಕಾರ ಪಂಚಾಯತದ್ದು. ಯಾವುದು ಖಾಸಗೀ ಆಸ್ತಿ ಅಲ್ಲ ಮತ್ತು ಯಾವುದು ತಾಲೂಕ ಬೋರ್ಡದ ಇಲ್ಲವೆ ಮುನಸಿಪಾಲಿಟಿ ಇಲ್ಲವೆ ಸರಕಾರದ ಅಧಿಕಾರಕ್ಕೆ ಒಳಪಟ್ಟಿಲ್ಲ ಅಂತಹ ರಸ್ತೆ, ಸೇತುವೆ, ಬಂಡಿದಾರಿ, ಕೆರೆ, ಬಾವಿ, ಗಟಾರು ಇವೆಲ್ಲ ಪಂಚಾಯತದ ಅಧಿಕಾರದಲ್ಲಿಯವು. ತನ್ನ ಅಧಿಕಾರದಲ್ಲಿದ್ದವುಗಳನ್ನು ಸುಸ್ಥಿತಿಯಲ್ಲಿಡುವುದು ಮತ್ತು ದುರಸ್ತಿ ಮಾಡುವುದು ಪಂಚಾಯತದ ಕೆಲಸ. ಅಂದರೆ ಏನೇನು ಮಾಡಬಹುದು ಎಂಬುದರ ವಿವರಗಳನ್ನು ಈ ಕಲಮಿನಲ್ಲಿ ಕೊಡಲಾಗಿದೆ. ದಾರಿ ಬಂದ ಮಾಡುವುದು, ಉಪಯೋಗ ನಿಲ್ಲಿಸುವುದು ಇಲ್ಲವೆ ದಾರಿ ಬದಲು ಮಾಡುವುದು ಇದ್ದಾಗ ಮಾತ್ರ ಡೆಪ್ಯೂಟಿ ಕಮಿಶನರನ ಪೂರ್ವ ಸಮ್ಮತಿ ಅವಶ್ಯ. ಉಳಿದ ಕೆಲಸವನ್ನು ಪಂಚಾಯತವು ತನ್ನ ಅಧಿಕಾರದಲ್ಲಿ ಮಾಡಬಹುದು.

## ೫೩. ಕಟ್ಟಡಗಳ ರಚನೆಯಲ್ಲಿ ನಿಯಂತ್ರಣ

(೧) ಗೊತ್ತು ಮಾಡಬಹುದಾದ ನಿಯಮಗಳಿಗಂಕಿತವಾಗಿ ಯಾವುದೇ ವ್ಯಕ್ತಿಯು ಪಂಚಾಯತದ ಲಿಖಿತ ಪರವಾನಗಿ ಇಲ್ಲದೆ ಯಾವುದೇ ಕಟ್ಟಡವನ್ನು ಕಟ್ಟಲಾಗದು, ಇಲ್ಲವೆ ಇದ್ದ ಯಾವುದೇ ಕಟ್ಟಡದಲ್ಲಿ ಹೆಚ್ಚು ಕಡಿಮೆ ಮಾಡಲಾಗದು, ಜೋಡಣೆ ಮಾಡಲಾಗದು ಇಲ್ಲವೆ ಯಾವುದೇ ಕಟ್ಟಡ ವನ್ನು ಪುನಃ ರಚಿಸಲಾಗದು. ಪರವಾನಗಿಯ ಸಲುವಾಗಿ ಮಾಡಲಾದ ಅರ್ಜಿಯು ಸ್ವೀಕೃತವಾದ ಎರಡು ತಿಂಗಳ ಒಳಗೆ ಇಂತಹ ಪರವಾನಗಿ ನಿರಾಕರಿಸಲಾಗಿದೆಯೆಂದು ತಿಳಿಸಲ್ಪಡದಿದ್ದರೆ, ಪರವಾನಗಿಯು ಕೊಡಲ್ಪಟ್ಟಿದೆ ಯೆಂದು ಗೃಹೀತವಾಗಿಟ್ಟುಕೊಳ್ಳತಕ್ಕದ್ದು.

(೨) ಮೇಲೆ ಹೇಳಿದಂತಹ ಪರವಾನಗಿ ಇಲ್ಲವೆ ಉಪಕಲಮು (೧) ರನ್ವ ಯವಾಗಿ ಗೊತ್ತುಮಾಡಲಾದ ನಿಯಮಗಳ ವಿರುದ್ಧ ಯಾವುದೇ ರೀತಿಯಲ್ಲಿ, ಇಲ್ಲವೆ ದಯಪಾಲಿಸಲಾದ ಪರವಾನಗಿಯಲ್ಲಿ ಹಾಕಿದ ಯಾವುದೇ ಕರಾರುಗಳ ವಿರುದ್ಧ ಯಾವುದೇ ರೀತಿಯಲ್ಲಿ ಯಾವುದೇ ಕಟ್ಟಡವು ರಚಿತವಾಗಿದ್ದರೆ, ಹೆಚ್ಚು ಕಡಿಮೆ ಮಾಡಲ್ಪಟ್ಟಿದ್ದರೆ, ಜೋಡಣೆ ಮಾಡಲ್ಪಟ್ಟಿದ್ದರೆ, ಇಲ್ಲವೆ ಪುನಃ ರಚಿತವಾಗಿ ದ್ದರೆ, ಅಂತಹ ವ್ಯಕ್ತಿಯ ವಿರುದ್ಧ ಕಲಮು ೨೩೫ ರನ್ವಯವಾಗಿ ಯಾವುದೇ ಕ್ರಮ ತೆಗೆದುಕೊಳ್ಳಲ್ಪಟ್ಟಿರಲಿ ಬಿಡಲಿ, ಪಂಚಾಯತವು.

(ಅ) ಆ ಕಟ್ಟುವುದು, ಹೆಚ್ಚು ಕಡಿಮೆ ಮಾಡುವುದು ಇಲ್ಲವೆ ಜೋಡಣೆ ಮಾಡುವುದು ನಿಲ್ಲಿಸಲ್ಪಡಬೇಕೆಂದು ನಿರ್ದೇಶಿಸಬಹುದು; ಇಲ್ಲವೆ.

(ಬ) ಲಿಖಿತ ನೋಟೀಸಿನ ಮೂಲಕ ಅದರಲ್ಲಿ ನಿರ್ದಿಷ್ಟಪಡಿಸಿದ ಯೋಗ್ಯ ಕಾಲಾವಧಿಯಲ್ಲಿ ಇಂತಹ ಕಟ್ಟುವುದು, ಹೆಚ್ಚುಕಡಿಮೆ ಮಾಡುವುದು ಇಲ್ಲವೆ ಜೋಡಣೆ ಮಾಡುವುದು ಸಾರ್ವಜನಿಕ ಆರೋಗ್ಯದ ಪುರಸ್ಕಾರಕ್ಕಾಗಿ ಇಲ್ಲವೆ ವಿತ್ತ ಜೀವಿತಗಳಿಗೆ ಆಗುವ ಅಪಾಯವನ್ನು ತಡೆಯುವದಕ್ಕಾಗಿ ಅವಶ್ಯಕವೆನಿಸಬಹು ದಾದಂತೆ ಹೆಚ್ಚುಕಡಿಮೆ ಮಾಡಲ್ಪಡಬೇಕು ಇಲ್ಲವೆ ಕೆಡವಿಸಲ್ಪಡಬೇಕೆಂದು ಆದೇಶಿಸಬಹುದು.

(೩) ಉಪಕಲಮು (೨) ರ ವಾಕ್ಯಾವಳಿ (ಬ) ದನ್ವಯವಾಗಿ ಕೊಟ್ಟ ಯಾವುದೇ ನೋಟೀಸಿನ ಕರಾರುಗಳನ್ನು ಆ ನೋಟೀನಲ್ಲಿ ನಿರ್ದಿಷ್ಟಪಡಿಸಲಾದ ಕಾಲಾವಧಿಯೊಳಗೆ, ನಡೆಸದೆ ಇದ್ದ ಸಂದರ್ಭದಲ್ಲಿ ಆ ನೋಟೀಸಿನ ಮೂಲಕ ಮಾಡಬೇಕಾಗಿದ್ದುದನ್ನು ಪೂರ್ತಿ ಮಾಡುವುದಕ್ಕಾಗಿ ಅವಶ್ಯಕವೆನ್ನಿಸಬಹುದಾದಂತಹ ಕ್ರಮವನ್ನು ಪಂಚಾಯತವು ಕೈಕೊಳ್ಳುವುದು ಕಾಯಿದೆಬದ್ಧವಾಗಿರುವುದು. ಮತ್ತು

ಈ ಸಂಬಂಧದಲ್ಲಿ ಪಂಚಾಯತವು ಮಾಡಬೇಕಾಗಿ ಬಂದ ಎಲ್ಲ ವೆಚ್ಚವು ಯಾವವ್ಯಕ್ತಿ ಇಲ್ಲವೆ ವ್ಯಕ್ತಿಗಳ ಮೇಲೆ ನೋಟೀಸು ಜಾರಿ ಮಾಡಲ್ಪಟ್ಟಿರುವದೋ ಅವರಿಂದ ಕೊಡಲ್ಪಡಬೇಕು. ಮತ್ತು ವೆಚ್ಚವು ಕಲಮು ೭೩ ರನ್ವಯವಾಗಿ ಹಾಕಲಾದ ಕರವೆಂಬ ಹಾಗೆ ವಸೂಲ ಮಾಡಲು ಯೋಗ್ಯವಾಗಿರುವುದು.

(೪) ಉಪಕಲಮು (೧),(೨), ಇಲ್ಲವೆ (೩) ರನ್ವಯವಾಗಿ ಪಂಚಾಯತವು ಕೊಟ್ಟ ಯಾವುದೇ ಆಜ್ಞೆ, ಇಲ್ಲವೆ ನಿರ್ದೇಶನ ಇಲ್ಲವೆ ನೋಟೀಸು ಇದರ ಮೇಲೆ ಅಸಿಸ್ಟಂಟ ಕಮಿಶನರಿಗೆ ಅಪೀಲು ಮಾಡಲು ಅವಕಾಶವಿದೆ. ಮತ್ತು ಆ ಅಪೀಲಿನ ಮೇಲೆ ಅಸಿಸ್ಟಂಟ ಕಮಿಶನರು ಕೊಟ್ಟ ನಿರ್ಣಯವು ಕೊನೆಯದು ಆಗಿರತಕ್ಕದ್ದು.

## ವಿವೇಚನೆ

ಗ್ರಾಮ ಪಂಚಾಯತವು ಗ್ರಾಮಕ್ಕೆ–ಅಂದರೆ ಹಳ್ಳಿಗಳಿಗೆ ಅನ್ವಯಿಸಿದ ಸಂಸ್ಥೆಯಾದರೂ ಆಧುನಿಕ ಜೀವನದ-ನಾಗರಿಕ ಜೀವನದ ಪ್ರಕಾರ ಬೆಳೆವ ಸಂಸ್ಥೆಯಾಗಿದೆ. ಹಿಂದೆ ಹಳ್ಳಿಗಳಲ್ಲಿ ಯಾರು ಬೇಕಾದವರು ತಮಗೆ ಬೇಕಾದ ಹಾಗೆ ಮನೆಗಳನ್ನು ಕಟ್ಟುವುದು, ಹೆಚ್ಚು ಕಡಿಮೆ ಮಾಡುವುದು, ಜೋಡಿಸು ವುದು ಮುಂತಾದ್ದು ಮಾಡುತ್ತಿದ್ದರು; ಅದರಿಂದ ಹಳ್ಳಿಗಳಲ್ಲಿ ರಸ್ತೆಗಳು ಸರಲವಾಗಿ ಪದ್ಧತಿ ಪೂರ್ವಕವಾಗಿ ಇರುತ್ತಿದ್ದಿಲ್ಲ. ಇದರಿಂದ ಗಟಾರು ವ್ಯವಸ್ಥೆ ಮಾಡಲು ಬರುತ್ತಿದ್ದಿಲ್ಲ; ವಾಹನಗಳ ಓಡಾಟಕ್ಕೆ ಅಡ್ಡಿಯಾಗುತ್ತಿತ್ತು. ಅಂದ ಚೆಂದದ ಮಾತಂತೂ ದೂರೇ ಉಳಿಯಿತು. ಆದರೆ, ಹಿಂದೆ ನಡೆದದ್ದು ನಡೆಯಿತು. ಇನ್ನು ಮುಂದೆ ಪಂಚಾಯತಗಳ ಸ್ಥಾಪನೆಯಾದ ಮೇಲೆ ಗ್ರಾಮಗಳ ಸುಧಾರಣೆ ಆಗು ವುದು ಖಂಡಿತ. ಆದ್ದರಿಂದ ನಾಗರಿಕ ಪದ್ಧತಿಯಂತೆ ಊರು ಬೆಳೆಯಬೇಕೆಂದು ಈ ಕಲಮು ಮಾಡಲಾಗಿದೆ. ಪಂಚಾಯತದ ಪ್ರದೇಶದಲ್ಲಿ ಇನ್ನು ಮುಂದೆ ಯಾರೂ ಕಟ್ಟಡಗಳನ್ನು ಕಟ್ಟಿಸುವಾಗ ಪಂಚಾಯತದ ಪರವಾನಗಿ ಇಲ್ಲದೆ ಕಟ್ಟಿಸು ವಂತೆ ಇಲ್ಲ. ಇದ್ದ ಕಟ್ಟಡಗಳಲ್ಲಿ ಹೆಚ್ಚು ಕಡಿಮೆ ಮಾಡುವುದಿದ್ದರೆ, ಅದಕ್ಕೆ ಹೊಸದಾಗಿ ಜೋಡಿಸುವುದಿದ್ದರೆ, ಕಟ್ಟಡಗಳನ್ನು ಬಿಚ್ಚಿಸಿ ಪುನಃ ಹಾಕಿಸುವುದಿದ್ದರೆ ಪಂಚಾಯತದ ಲಿಖಿತ ಪರವಾನಗಿ ಅವಶ್ಯ.

ಪರವಾನಗಿಗಾಗಿ ಅರ್ಜಿ ಮಾಡಿಕೊಳ್ಳಬೇಕು. ಅರ್ಜಿಯು ನಾಮಂಜೂ ರಾಗಿದೆ ಎಂದು ೨ ತಿಂಗಳ ಒಳಗೆ ತಿಳಿಸದಿದ್ದರೆ, ಅರ್ಜಿಯು ಮಂಜೂರಾಗಿದೆ ಯೆಂದು ತಿಳಿಯತಕ್ಕದ್ದು.

ಪಂಚಾಯತವು ಪರವಾನಗಿ ಕೊಡುವಾಗ ಕೆಲ ಕರಾರುಗಳನ್ನು ಹಾಕ ಬಹುದು. ಹಾಕಿದ ಕರಾರುಗಳನ್ನು ಕಟ್ಟಡ ಕಟ್ಟಿಸುವವರು ಪಾಲಿಸಲೇಬೇಕು.

ಪಾಲಿಸದೆ ಇದ್ದರೆ, ಪಾಲಿಸಿದ್ದರೆ ಯಾವ ರೀತಿಯಲ್ಲಿ ಕಟ್ಟಡದ ರಚನೆ ಆಗುತ್ತಿತ್ತೋ ಹಾಗೆ ಮಾಡಿಸಲು ಪಂಚಾಯತಕ್ಕೆ ಅಧಿಕಾರವಿದೆ. ಹಾಗೆ ಪಂಚಾಯತವು ಮಾಡುವ ಪ್ರಸಂಗ ಬಂದರೆ ಅದಕ್ಕೆ ತಗಲಿದ ವೆಚ್ಚವನ್ನು ಸಂಬಂಧಪಟ್ಟ ವ್ಯಕ್ತಿಯಿಂದ ವಸೂಲು ಮಾಡಿಕೊಳ್ಳಲು–೭೩ ನೆಯ ಕಲಮಿನ ಪ್ರಕಾರವಾಗಿದ್ದ ಕರ ವಸೂಲಿಯತೆ ಮಾಡಿಕೊಳ್ಳಲು-ಪಂಚಾಯತಕ್ಕೆ ಅಧಿಕಾರವಿದೆ.

ಕಟ್ಟಿದ ಕಟ್ಟಡವು ಅತಿಕ್ರಮಣವಾಗಿದ್ದರೆ ಅದನ್ನು ತೆಗೆಸಬಹುದು, ಕಟ್ಟಿಸುವುದನ್ನು ನಿಲ್ಲಿಸಬಹುದು, ಹೆಚ್ಚು ಕಡಿಮೆ ಮಾಡಬಹುದು. ಅಂದರೆ ಈ ಕಲಮಿನ ಮೂಲಕ ಕಟ್ಟಡ ರಚನೆಯ ವಿಷಯದಲ್ಲಿ ಪಂಚಾಯತಕ್ಕೆ ತನ್ನ ಕ್ಷೇತ್ರದಲ್ಲಿ ಸಂಪೂರ್ಣ ಅಧಿಕಾರವಿದೆ. ಆದರೆ ಈ ಸಂಬಂಧವಾಗಿ ಪಂಚಾಯತವು ಮಾಡಿದ ಅಜ್ಞೆ ಕೊಟ್ಟ ನೋಟೀಸು ಇಲ್ಲವೆ ನಿರ್ದೇಶನದ ವಿರುದ್ಧ ಅಸಿಸ್ಟಂಟ ಕಮಿಶನರ ಕಡೆಗೆ ಅಪೀಲು ಮಾಡಿಕೊಳ್ಳುವ ಅವಕಾಶ ಇದೆ. ಆ ಅಪೀಲಿನ ನಿರ್ಣಯವೇ ಕೊನೆಯದು.

## ೫೪. ಕೆಲವೊಂದು ಪ್ರದೇಶದಲ್ಲಿ ಪರವಾನಗಿ ಇಲ್ಲದೆ ಕಟ್ಟಡಗಳ ರಚನೆಯನ್ನು ಮಾಡುವುದನ್ನು ನಿರ್ಬಂಧಿಸಲು ಮತ್ತು ಕ್ರಮಗೊಳಿಸಲು ಸರಕಾರಕ್ಕೆ ಅಧಿಕಾರ

(೧) ಕಲಮು ೫೩ ರಲ್ಲಿ ಏನೇ ಹೇಳಲಾಗಿದ್ದರೂ ಸಾಮಾನ್ಯ ಸಾರ್ವಜನಿಕರ ಹಿತಕ್ಕಾಗಿ ಸರಕಾರವು ಸಂಬಂಧಪಟ್ಟ ಪಂಚಾಯತದೊಂದಿಗೆ ವಿಚಾರವಿನಿಮಯ ಮಾಡಿದನಂತರ ಪ್ರಕಟನೆ ಪರಿಪತ್ರ ಹೊರಡಿಸಿ, ಪಂಚಾಯತದ ಅಧಿಕಾರಕ್ಷೇತ್ರದ ಒಳಗೆ ಇರುವ ನಿರ್ದಿಷ್ಟಪಡಿಸಿದ ಪ್ರದೇಶದಲ್ಲಿ ಸರಕಾರದ ಪರವಾನಗಿ ಇದ್ದ ಹೊರತು ಇಲ್ಲವೆ ಈ ಸಂಬಂಧದಲ್ಲಿ ಸರಕಾರವು ಅಧಿಕರಿಸಿದ ಯಾವುವೇ ಅಧಿಕಾರಿ ( ಈ ಕಲಮಿನಲ್ಲಿ ಇವನಿಗೆ ಇನ್ನುಮುಂದೆ ಅಧಿಕರಿಸಿದ ಅಧಿಕಾರಿ ಎಂದು ಸಂಬೋಧಿಸಲಾಗಿದೆ. ) ಯ ಪರವಾನಗಿ ಇದ್ದ ಹೊರತು ಯಾವುದೇ ಕಟ್ಟಡವನ್ನು ಕಟ್ಟಿಸಲಿಕ್ಕೆ ನಿರ್ಬಂಧಿಸಬಹುದು.

ಆದರೆ, ಇಂತಹ ಪ್ರಕಟನೆ ಪರಿಪತ್ರ ಹೊರಡುವ ತಾರೀಖಿನಕಿಂತ ಮುಂಚಿತವಾಗಿ ಸರಕಾರದಿಂದ ಇಲ್ಲವೆ ಪಂಚಾಯತದಿಂದ ಯಾವ ಭೂಮಿಯನ್ನು ಕಟ್ಟಡಕ್ಕಾಗಿ ಪ್ರತ್ಯೇಕವಾಗಿರಿಸಿದ ಜಾಗಾ ಎಂದು ನಿರ್ದಿಷ್ಟಪಡಿಸಲಾಗಿರುವುದೋ ಆ ಭೂಮಿಯ ಸಂಬಂಧವಾಗಿ ಇಂತಹ ನಿರ್ಬಂಧವನ್ನು ಹಾಕಲಾಗದು.

(೨) ಉಪಕಲಮು (೩) ರ ಕಕ್ಷೆಗಳಂಕಿತವಾಗಿ ಉಪಕಲಮು (೧)ರನ್ವಯವಾಗಿ ದಯಪಾಲಿಸಲಾದ ಯಾವುದೇ ಪರವಾನಗಿಯು ಸರಕಾರದಿಂದ ಇಲ್ಲವೆ

ಅಧಿಕರಿಸಿದ ಅಧಿಕಾರಿಯಿಂದ ಒಂದೊಂದು ಪ್ರಕರಣದಲ್ಲಿ ಇಲ್ಲವೆ ಸಾಮಾನ್ಯವಾಗಿ ಗೊತ್ತುಮಾಡಿದ ಕರಾರುಗಳಿಗಂಕಿತವಾಗಿ ಇರಬಹುದು.

(೩) ಗೊತ್ತುಮಾಡಬಹುದಾದ ರೀತಿಯಲ್ಲಿ ಅಂತಹ ವಿಧಾನವನ್ನು ಅನುಸರಿಸಿ ಸರಕಾರವು ಉಪಕಲಮು (೧) ರನ್ವಯವಾಗಿ ಪ್ರಕಟನೆ ಪರಿಪತ್ರ ಹೊರಡಿಸಲಾದ ಪ್ರದೇಶದ ಸಂಬಧವಾಗಿ ಒಂದು ಅಭಿವೃದ್ಧಿಯೋಜನೆಯನ್ನು ಪ್ರಕಟಿಸಬಹುದು. ಮತ್ತು ಇಂತಹ ಅಭಿವೃದ್ಧಿಯೋಜನೆಯಲ್ಲಿ ನಿರ್ದಿಷ್ಟಪಡಿಸಿದ ಕರಾರುಗಳು ಮತ್ತು ನಿರ್ದೇಶನಗಳ-ಅನುಸಾರವಾಗಿದ್ದ ಹೊರತು ಇಂತಹ ಪ್ರದೇಶದಲ್ಲಿ ಯಾವುದೇ ಕಟ್ಟಡವನ್ನು ರಚಿಸಲಾಗದು ಇಲ್ಲವೆ ಕಟ್ಟಲಾಗದು.

(೪) ಉಪಕಲಮು (೧) ರ ಕಕ್ಷೆಗಳ ವಿರುದ್ಧವಾಗಿ ಇಲ್ಲವೆ ಉಪಕಲಮು (೨) ರನ್ವಯವಾಗಿ ಹಾಕಲಾದ ಕರಾರುಗಳ ವಿರುದ್ಧವಾಗಿ ಇಲ್ಲವೆ ಉಪಕಲಮು (೩) ರ ಕಕ್ಷೆಗಳ ವಿರುದ್ಧವಾಗಿ ಯಾರಾದರೂ ಯಾವುದೇ ಕಟ್ಟಡವನ್ನು ರಚಿಸಿದರೆ, ಅವನ ಅಪರಾಧವು ಸಾಬೀತಾದರೆ, ಐನೂರು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಅವನು ಶಿಕ್ಷಿತನಾಗುವನು.

(೫) ಉಪಕಲಮು (೧) ರ ಕಕ್ಷೆಗಳ ವಿರುದ್ಧವಾಗಿ ಇಲ್ಲವೆ ಉಪಕಲಮು (೨) ರನ್ವಯವಾಗಿ ಹಾಕಲಾದ ಕರಾರುಗಳನ್ನು ಉಲ್ಲಂಘಿಸಿ, ಇಲ್ಲವೆ ಉಪಕಲಮು (೨) ರ ಕಕ್ಷೆಗಳ ವಿರುದ್ಧವಾಗಿ ಕಟ್ಟಿಸಲ್ಪಟ್ಟಿದ್ದ ಯಾವುದೇ ಕಟ್ಟಡವನ್ನು ಸಂದರ್ಭಾನುಸಾರವಾಗಿ ಸರಕಾರವು ಇಲ್ಲವೆ ಅಧಿಕರಿಸಿದ ಅಧಿಕಾರಿಯು ಕಿತ್ತಿಸಿ ಹಾಕಬಹುದು.

**ವಿವೇಚನೆ**

ಗ್ರಾಮಗಳನ್ನು ಹೊಸ ಜೀವನದ ಪದ್ಧತಿಯಲ್ಲಿ ಬೆಳೆಯಿಸಬೇಕೆಂದು ಯೋಜನೆ. ಅದಕ್ಕಾಗಿ ಸರಕಾರವು ಕೆಲವೊಂದು ಪ್ರದೇಶವನ್ನು ತನ್ನ ಅಂಕಿತದಲ್ಲಿಟ್ಟುಕೊಂಡು ಅಲ್ಲಿ ಬೆಳವಣಿಗೆ ಮಾಡಬೇಕೆಂಬುದಕ್ಕೆ ಈ ಕಲಮು ಅಧಿಕಾರ ಕೊಡುತ್ತದೆ. ಆ ಪ್ರದೇಶವು ಪಂಚಾಯತದ ಅಧಿಕಾರಕ್ಷೇತ್ರದಲ್ಲಿರಬೇಕು. ಆ ಪಂಚಾಯತದೊಡನೆ ಸರಕಾರವು ವಿಚಾರ ವಿನಿಮಯ ಮಾಡಿರಬೇಕು. ಅದು ಸಾರ್ವಜನಿಕರ ಸಾಮಾನ್ಯ ಹಿತಮಾಡುವಂತಿರಬೇಕು. ಅಂದಾಗ ಪ್ರದೇಶವನ್ನು ನಿರ್ದಿಷ್ಟಪಡಿಸಿ ಸರಕಾರವು ಪ್ರಕಟನೆ ಹೊರಡಿಸುವುದು. ಹೀಗೆ ಪ್ರಕಟನೆಯಿಂದ ನಿರ್ದಿಷ್ಟ ಪಡಿಸಿದ ಪ್ರದೇಶದಲ್ಲಿ ಸರಕಾರದ ಇಲ್ಲವೆ ಅದರಿಂದ ಅಧಿಕರಿಸಲ್ಪಟ್ಟ ಅಧಿಕಾರಿಯ ಪರವಾನಿಗೆ ಇಲ್ಲದೆ ಯಾರೂ ಕಟ್ಟಡ ಕಟ್ಟಿಸಬಾರದು ಎಂದು ನಿರ್ಬಂಧ ಹಾಕಬಹುದು. ಈ ನಿರ್ಬಂಧದ ಆಜ್ಞೆಯು ಆ ಆಜ್ಞೆಯ ತಾರೀಖಿನ ಕಿಂತ ಮೊದಲೇ ಕಟ್ಟಡ ಜಾಗಾ ಎಂದು ಪ್ರತ್ಯೇಕಿಸಲಾಗಿದ್ದ ಜಾಗಾಕೆ ಅನ್ವಯಿಸುವುದಿಲ್ಲ.

ಸರಕಾರವು ಪ್ರದೇಶವನ್ನು ಯೋಜನೆಗಾಗಿ ಪ್ರತ್ಯೇಕಿಸಿದ ನಂತರ ಅಲ್ಲಿಯ ಕಟ್ಟಡಗಳಿಗಾಗಿ ಕೆಲವು ನಿಯಮ, ನಿರ್ಬಂಧ, ಕರಾರು ಹಾಕಬಹುದು. ಅದರ ವಿರುದ್ಧ ಯಾರೂ ವರ್ತಿಸಿ ಕಟ್ಟಡ ಕಟ್ಟಿಸಲಾಗದು. ಕಟ್ಟಿಸಿದರೆ ಅದು ಅಪರಾಧ. ಅದಕ್ಕೆ ೫೦೦/= ರೂಪಾಯಿಗಳ ವರೆಗೆ ದಂಡ. ಅಲ್ಲದೆ ಅಂತಹ ಕಟ್ಟಡವನ್ನು ಕಿತ್ತಿ ಹಾಕಿಸುವ ಅಧಿಕಾರ ಸರಕಾರದ್ದು. ಇಲ್ಲವೆ ಇದಕ್ಕಾಗಿ ಅಧಿಕರಿಸಿದ ಅಧಿಕಾರಿಯದು. ಇದರಿಂದ ಗ್ರಾಮಗಳು ಸುವ್ಯಸ್ಥಿತವಾಗಿ ಯೋಜನಾ ಬದ್ಧವಾಗಿ ಬೆಳೆಯಲು ಅನುಕೂಲವಾಗುವುದು.

## ೫೫. ಕಾರಖಾನೆಗಳನ್ನು ಕಟ್ಟಲು ಮತ್ತು ಯಂತ್ರಗಳನ್ನು ಕೂಡಿಸಲು ಪರವಾನಗಿ

ಪಂಚಾಯತದ ಪರವಾನಗಿ ಇಲ್ಲದೆ ಮತ್ತು ಇಂತಹ ಪರವಾನಗಿಯಲ್ಲಿ ನಿರ್ದಿಷ್ಟಪಡಿಸಿದ ಕರಾರುಗಳ ಅನುಸಾರವಾಗಿದ್ದ ಹೊರತು ಯಾವುದೇ ವ್ಯಕ್ತಿಯು,

(ಅ) ಯಾವುದರಲ್ಲಿ ಉಗಿಶಕ್ತಿ, ಜಲಶಕ್ತಿ ಇಲ್ಲವೆ ಇತರ ಯಾಂತ್ರಿಕಶಕ್ತಿ ಇಲ್ಲವೆ ವಿದ್ಯುತ್‌ಶಕ್ತಿ ಉಪಯೋಗಮಾಡಬೇಕೆಂದು ಯೋಜಿಸಲಾಗಿದೆಯೋ ಅಂತಹ ಯಾವುದೇ ಕಾರಖಾನೆ, ವರ್ಕಶಾಪ್ ಇಲ್ಲವೆ ಕಾರ್ಯಾಲಯವನ್ನು ಕಟ್ಟತಕ್ಕದ್ದಲ್ಲ ಇಲ್ಲವೆ ಸ್ಥಾಪಿಸತಕ್ಕದ್ದಲ್ಲ.

(ಬ) ನಿಯಮಗಳಿಂದ ವಿನಾಯತಿ ಪಡೆದಂತಹವು ಆಗಿರದೆ ಇದ್ದ ಯಂತ್ರ ಸಾಧನೆ ಇಲ್ಲವೆ ಸರಕು ಸಿದ್ಧಪಡಿಸುವ ಸಾಧನೆಗಳನ್ನು ಮೇಲೆ ಹೇಳಿದ ಯಾವುದೇ ತರಹದ ಶಕ್ತಿ ಸಂಚಾಲಿತವಾದ ಯಾವುದೇ ಯಂತ್ರಸಾಧನೆಯನ್ನು ಇಲ್ಲವೆ ಸರಕು ಸಿದ್ಧಮಾಡುವ ಸಾಧನೆಯನ್ನು ಯಾವುದೇ ಆವಾರದಲ್ಲಿ ಕೂಡ್ರಿಸತಕ್ಕದ್ದಲ್ಲ.

### ವಿವೇಚನೆ

ಕಾರಖಾನೆ ಇಲ್ಲವೆ ವರ್ಕಶಾಪು ಇವು ಸಾಮಾನ್ಯ ಜನರ ಜೀವಿತಕ್ಕೆ ಉಪಯೋಗವಾಗಬಹುದಾದ ಉದ್ಯಮಗಳಾದರೂ ನಿತ್ಯ ಜೀವನಕ್ಕೆ ಅಪಾಯ ಕಾರಿಯಾಗಬಹುದಾದಂತಹವು ಇರುತ್ತವೆ. ಆದ್ದರಿಂದ ಅವು ಎಲ್ಲಿ ಯಾವ ಸ್ಥಳ ದಲ್ಲಿ ಯಾರಿಗೂ ಅಪಾಯ ಸಂಭವಿಸದ ಹಾಗೆ ದೂರವಾಗಿ ಇರಬೇಕೆಂದು ಅವುಗಳ ರಚನೆ-ಸ್ಥಾಪನೆಯಲ್ಲಿ ನಿಯಂತ್ರಣ ಬೇಕಾಗುತ್ತದೆ. ಆದ್ದರಿಂದ ಪರವಾನಗಿ ಇಲ್ಲದೆ ಕಾರಖಾನೆ ಮುಂತಾದ್ದನ್ನು ಕಟ್ಟತಕ್ಕದ್ದಲ್ಲ, ಸ್ಥಾಪಿಸ ತಕ್ಕದ್ದಲ್ಲ. ಪರವಾನಗಿಯಲ್ಲಿ ಕರಾರು ಹಾಕಲಾಗುವುದು. ಆ ಕರಾರು ವಿರುದ್ಧವಾಗಿಯೂ ಕಟ್ಟಿಸತಕ್ಕದ್ದಲ್ಲ. ಈ ಕಾರಖಾನೆಗಳು ಉಗಿಶಕ್ತಿ, ಜಲಶಕ್ತಿ, ಯಂತ್ರಶಕ್ತಿ-ಇಲ್ಲವೆ ವಿದ್ಯುತ್‌ಶಕ್ತಿ ಸಂಚಾಲಿತವಾಗಿರುವಂತಹವು

ಇರಬೇಕು. ಮತ್ತು ಅಲ್ಲಿಯ ಯಂತ್ರಸಾಧನೆ ಮುಂತಾದವುಗಳಿಗೆ ವಿನಾಯತಿಯು ದೊರಕಿರಬಾರದು. ಅಂದಾಗ ಮಾತ್ರ ಪರವಾನಗಿ ಆಗತ್ಯ. ಇಲ್ಲದಿದ್ದರೆ ಪರ ವಾನಗಿ ಕಾರಣವಿಲ್ಲ ಎಂದು ತಿಳಿಯಬೇಕು.

## ೫೬. ಲಾಯಸೆನ್ಸ ಇಲ್ಲದೆ ಭಯಾನಕ ಹಾಗೂ ಕ್ಲೇಶಕಾರಕ ವ್ಯಾಪಾರ ನಡೆಸಲು ನಿರ್ಬಂಧ

ಪಂಚಾಯತದಿಂದ ಲಾಯಸೆನ್ಸ್ ಪಡೆದ ಹೊರತು ಇಲ್ಲವೆ ಹೊಸದಾಗಿಸಿ ಕೊಂಡ ಹೊರತು, ಮತ್ತು ಅಂತಹ ಲಾಯಸೆನ್ಸದಲ್ಲಿ ಹಾಕಲಾದ ಕರಾರುಗಳ ಅಂಕಿತವಾಗಿ ಪಂಚಾಯತದ ಅಧಿಕಾರ ಕ್ಷೇತ್ರದ ಒಳಗೆ ಇರುವ ಯಾವುದೇ ಸ್ಥಳವು ಸರಕಾರದಿಂದ ಪ್ರಕಟನೆ ಪರಿಪತ್ರದ ಮೂಲಕ ಕ್ಲೇಶಕಾರಕ ಹಾಗೂ ಭಯಾನಕವೆಂದು ಸಾರಲಾಗಿದ್ದ ಯಾವುದೇ ವ್ಯಾಪಾರ ಇಲ್ಲವೆ ವ್ಯವಹಾರಗಳ ಉದ್ದೇಶಕ್ಕಾಗಿ ಉಪಯೋಗಿಸಲ್ಪಡತಕ್ಕದ್ದಲ್ಲ.

### ವಿವೇಚನೆ

ಸರಕಾರವು ಪ್ರಕಟನೆಯ ಮೂಲಕ ಯಾವೊಂದು ವ್ಯಾಪಾರ ಇಲ್ಲವೆ ವ್ಯವ ಹಾರವು ಕ್ಲೇಶಕಾರಕ ಇಲ್ಲವೆ ಭಯಾನಕವಾಗಿವೆ ಎಂದು ಸಾರಿರಬೇಕು. ಅಂತಹ ವ್ಯಾಪಾರ ವ್ಯವಹಾರವನ್ನು ಯಾರಾದರೂ ಪಂಚಾಯತದ ಅಧಿಕಾರ ಕ್ಷೇತ್ರದಲ್ಲಿ ಮಾಡಬೇಕಾಗಿದ್ದರೆ ಅವರು ಲಾಯಸೆನ್ಸ ಪಡೆಯಬೇಕು. ಲಾಯಸೆನ್ಸದಲ್ಲಿ ಕಾಣಿಸಿದ ಕರಾರು ಪಾಲಿಸಬೇಕು. ಈ ರೀತಿಯಾಗಿದ್ದ ಲಾಯಸೆನ್ಸ ಹಳೆಯದಿರ ಬಹುದು ಇಲ್ಲವೆ ಹೊಸದಾಗಿಸಿದ್ದು ಇರಬಹುದು. ಹಾಗೆ ಇಲ್ಲದೆ ಯಾರೂ ಯಾವ ಸ್ಥಳವನ್ನು ಪಂಚಾಯತ ಪ್ರದೇಶದಲ್ಲಿ ಇಂತಹ ಕ್ಲೇಶಕಾರಕ ಇಲ್ಲವೆ ಭಯಾನಕ ವ್ಯಾಪಾರ-ವ್ಯವಹಾರ ಮಾಡಲು ಉಪಯೋಗಿಸಬಾರದು. ಇದು ನಿರ್ಬಂಧ ಏಕೆಂದರೆ ಅವು ಭಯಾನಕ ಹಾಗೂ ಕ್ಲೇಶಕಾರಕ ಇರುವುದರಿಂದ ಪರವಾನಗಿ ಲಾಯಸೆನ್ಸ ಆಗತ್ಯ. ಇದರಿಂದ ಅವುಗಳ ಮೇಲೆ ನಿಯಂತ್ರಣ ಇಡಲು ಬರುವುದು.

## ೫೭. ಹೈನ ವ್ಯವಸ್ಥೆಯು, ಉಪಹಾರ ಮಂದಿರ ಮುಂತಾದವುಗಳ ನಿಯಂತ್ರಣ

ಪಂಚಾಯತದಿಂದ ಲಾಯಸೆನ್ಸ ಪಡೆದ ಹೊರತು, ಇಲ್ಲವೆ ಹೊಸದಾಗಿಸಿ ಕೊಂಡ ಹೊರತು ಮತ್ತು ಅಂತಹ ಲಾಯಸೆನ್ಸದಲ್ಲಿ ಹಾಕಲಾದ ಕರಾರುಗಳ ಅಂಕಿತವಾಗಿ, ಪಂಚಾಯತದ ಅಧಿಕಾರ ಕ್ಷೇತ್ರದ ಒಳಗೆ ಯಾವುದೇ ಸ್ಥಳವು

ಹೈನದ ,ವ್ಯವಸ್ಥೆಯ ಕಾರ್ಯಾಲಯ (ಡೇರಿ), ಉಪಹಾರ ಮಂದಿರ, ಊಟದ ಮನೆ, ತಿನ್ನುವ ಮನೆ, ಕಾಫೀ ಅಂಗಡಿ, ಮಿಠಾಯಿ ಅಂಗಡಿ, ಬೇಕರಿ, ಊಟ-ವಸತಿ ಮನೆ (ಸಾರ್ವಜನಿಕರ ಇಲ್ಲವೆ ಮನ್ನಣೆ ಪಡೆದವರ ನಿಯಂತ್ರಣದಲ್ಲಿದ್ದ ವಿದ್ಯಾರ್ಥಿ ವಸತಿಗೃಹವನ್ನು ಬಿಟ್ಟು) ಇಲ್ಲವೆ ಧರ್ಮಶಾಲೆ ಇಲ್ಲವೆ ಬರ್ಫ ತಯಾರಿಕೆಯ ಸ್ಥಳ, ಇಲ್ಲವೆ ಸೋಡಾ ಮುಂತಾದ್ದು ತಯಾರಿಸುವ ಸ್ಥಳ ಎಂದು ಉಪಯೋಗಿಸಲ್ಪಡತಕ್ಕದ್ದಲ್ಲ.

**ವಿವೇಚನೆ**

ಸಾರ್ವಜನಿಕ ಉಪಹಾರ ಇಲ್ಲವೆ ಊಟದ ಮನೆಗಳಂತಹ ಸ್ಥಳಗಳು ನಿಯಂತ್ರಣಕ್ಕೆ ಒಳಪಟ್ಟಿದ್ದರೆ ಮಾತ್ರ ಅಲ್ಲಿ ಸಾರ್ವಜನಿಕರ ಆರೋಗ್ಯದ ಹಿತ ನೋಡಲು ಬರುವುದು. ಆದ್ದರಿಂದ ಅವುಗಳಿಗೆ ಲಾಯಸೆನ್ಸು ಬೇಕು. ಲಾಯಸೆನ್ಸದಿಂದ ನಿಯಂತ್ರಣ ಮಾಡಲು ಸಾಧ್ಯವಾಗುವುದು. ಕರಾರುಗಳನ್ನು ಹಾಕಲು ಬರುವುದು. ಸಾರ್ವಜನಿಕರ ಹಿತಸಂಬಧ ಬರುವಂತಹ ವ್ಯವಹಾರಕ್ಕೆ ಲಾಯಸೆನ್ಸು ಬೇಕೇಬೇಕು. ಯಾವುದಕ್ಕೆ ಲಾಯಸೆನ್ಸು ಬೇಕು ಎಂಬುದನ್ನು ಇದರಲ್ಲಿ ಹೇಳಲಾಗಿದೆ.

## ೫೮. ಕಲಮು ೫೫, ೫೬ ಮತ್ತು ೫೭ ರನ್ವಯವಾಗಿರುವ ಲಾಯಸೆನ್ಸ ಮತ್ತು ಪರವಾನಗಿಗಳ ಸಂಬಂಧವಾದ ಶರತುಗಳು

(೧) ಗೊತ್ತುಮಾಡಬಹುದಾದಂತಹ ಫೀಯನ್ನುಮುಂಗಡವಾಗಿ ಕೊಟ್ಟಾಗ ಮಾತ್ರವೇ ಕಲಮು ೫೫ ರನ್ವಯವಾಗಿ ಪರವಾನಗಿಯು ದಯಪಾಲಿಸಲ್ಪಡುವುದು. ಮತ್ತು ಕಲಮು ೫೬ ಮತ್ತು ೫೭ ರನ್ವಯವಾಗಿ ಲಾಯಸೆನ್ಸು ದಯಪಾಲಿಸಲ್ಪಡುವುದು ಇಲ್ಲವೆ ಹೊಸದಾಗಿಸಲ್ಪಡುವುದು.

(೨) ಪಂಚಾಯತವು ಕಾರಣಗಳನ್ನು ದಾಖಲೆ ಮಾಡಿ ಕಲಮು ೫೫ರನ್ವಯವಾಗಿ ಪರವಾನಗಿ ದಯಪಾಲಿಸುವುದನ್ನು ನಿರಾಕರಿಸಬಹುದು ಇಲ್ಲವೆ ಕಲಮು ೫೬ ಇಲ್ಲದೆ ೫೭ ರನ್ವಯವಾಗಿ ದಯಪಾಲಿಸಲಾದ ಇಲ್ಲವೆ ಹೊಸದಾಗಿಸಲಾದ ಲಾಯಸೆನ್ಸನ್ನು ಆದರಲ್ಲಿ ಹೇಳಲಾದ ಕರಾರುಗಳಿಗೆ ವ್ಯತ್ಯಯ ಬಂದಿದೆಯೆಂಬುದಕ್ಕಾಗಿ ಸಸ್ಪೆಂಡ ಇಲ್ಲವೆ ರದ್ದತಿ ಮಾಡಬಹುದು.

(೩) ಕಲಮು ೫೫ ರನ್ವಯವಾಗಿ ಪರವಾನಗಿ ದಯಪಾಲಿಸುವುದನ್ನು ನಿರಾಕರಿಸುವುದರಿಂದ ಇಲ್ಲವೆ, ಲಾಯಸೆನ್ಸನ್ನು ದಯಪಾಲಿಸಲು ಇಲ್ಲವೆ ಹೊಸದಾಗಿಸಲು ನಿರಾಕರಿಸುವುದರಿಂದ ಇಲ್ಲವೆ ಉಪಕಲಮು (೨) ರನ್ವಯವಾಗಿ ಲಾಯಸೆನ್ಸನ್ನು ಸಸ್ಪೆಂಡ ಇಲ್ಲವೆ ರದ್ದತಿ ಮಾಡಿರುವುದರಿಂದ ಯಾವುದೇ ವ್ಯಕ್ತಿ · ಬಾಧಿತ

ನಾಗಿದ್ದರೆ, ಆ ಆಜ್ಞೆಯು ತಿಳಿಸಲ್ಪಟ್ಟ ತಾರೀಖಿನಿಂದ ಮುವ್ವತ್ತು ದಿವಸಗಳ ಒಳಗೆ ಅಸಿಸ್ಟಂಟ ಕಮಿಶನರನಿಗೆ ಅಪೀಲು ಮಾಡಿಕೊಳ್ಳಬಹುದು ಮತ್ತು ಇಂತಹ ಅಪೀಲಿನ ಮೇಲೆ ಕೊಟ್ಟ ಅಸಿಸ್ಟಂಟ ಕಮಿಶನರನ ನಿರ್ಣಯವು ಕೊನೆಯದಾಗತಕ್ಕದ್ದು.

**ವಿವೇಚನೆ**

ಪರವಾನಗಿ ಸಂಬಂಧವಾಗಿರುವ ಕಲಮು ೫೫. ಲಾಯಸೆನ್ಸ ಸಂಬಂಧವಾಗಿರುವ ಕಲಮು ೫೬ ಮತ್ತು ೫೭. ಲಾಯಸೆನ್ಸಗಳಲ್ಲಿ ಕರಾರು ಹಾಕಿರುವರು. ಲಾಯಸೆನ್ಸ ಹೊಸದಾಗಿ ಕೊಡಬಹುದು ಇಲ್ಲವೆ ಇದ್ದದ್ದನ್ನು ಹೊಸದಾಗಿಸಬಹುದು. ಪರವಾನಗಿ ಕೊಡುವ ಮುಂಚೆ ಲಾಯಸೆನ್ಸ ಕೊಡುವ ಮುಂಚೆ ಇಲ್ಲವೆ ಹೊಸದಾಗಿಸುವ ಮುಂಚೆ ಮುಂಗಡವಾಗಿ ಫೀ ಕೊಡಬೇಕು. ಫೀ ಎಷ್ಟು ಎಂಬುದನ್ನು ನಿಯಮಗಳು ಗೊತ್ತು ಮಾಡುವುವು.

ಪರವಾನಗಿ ಕೊಡಲು ನಿರಾಕರಿಸುವ ಪ್ರಸಂಗ ಬಂದರೆ, ಲಾಯಸೆನ್ಸ ಕೊಡುವುದನ್ನು ಇಲ್ಲವೆ ಹೊಸದಾಗಿಸುವುದನ್ನು ನಿರಾಕರಿಸುವ ಪ್ರಸಂಗ ಬಂದರೆ, ಇಲ್ಲವೆ ಸಸ್ಪೆಂಡ ಇಲ್ಲವೆ ರದ್ಧತಿ ಮಾಡುವ ಪ್ರಸಂಗ ಬಂದರೆ ಪಂಚಾಯತವು ಆ ಪ್ರಸಂಗದ ಕಾರಣಗಳನ್ನು ಬರೆದು ದಾಖಲೆಯಾಗಿಡಬೇಕು. ಅಂದರೆ ಕಾರಣವಿಲ್ಲದೆ ಅವುಗಳ ದಾಖಲೆ ಇಲ್ಲದೆ ನಿರಾಕರಿಸಲು ಬರುವುದಿಲ್ಲ ಎಂದು ಅರ್ಥ.

ಈ ಸಂಬಂಧವಾಗಿ ಪಂಚಾಯತವು ಮಾಡಿದ ಆಜ್ಞೆಯ ವಿರುದ್ಧ ಅಪೀಲ ಮಾಡಿಕೊಳ್ಳಲು ಅವಕಾಶವಿದೆ. ಆಜ್ಞೆಯು ತಿಳಿಸಲ್ಪಟ್ಟ ತಾರೀಖಿನಿಂದ ೩೦ ದಿವಸಗಳ ಒಳಗೆ ಅಪೀಲನ್ನು ಅಸಿಸ್ಟಂಟ ಕಮೀಶನರ ಕಡೆಗೆ ಮಾಡಿಕೊಳ್ಳಬೇಕು. ಆ ಅಪೀಲ ನಿರ್ಣಯದ ಮೇಲೆ ಬೇರೆ ಅಪೀಲು ಇಲ್ಲ. ಅಂದರೆ ಅಸಿಸ್ಟಂಟ ಕಮೀಶನರನು ಆ ಅಪೀಲಿನ ಮೇಲೆ ಕೊಟ್ಟ ನಿರ್ಣಯವೇ ಕೊನೆಯದು.

## ೫೯. ಸಂಸ್ಥೆಗಳನ್ನು ಇಲ್ಲವೆ ಕೆಲಸಗಳನ್ನು ಪಂಚಾಯತಕ್ಕೆ ಹಸ್ತಾಂತರಿಸುವುದು

ಸರಕಾರದಿಂದ ಗೊತ್ತುಮಾಡಬಹುದಾದಂತಹ ನಿಯಮಗಳ ಅಂಕಿತವಾಗಿ ಡೆಪ್ಯೂಟಿ ಕಮಿಶನರನು, ಇಲ್ಲವೆ ಯಾವುದೇ ಖಾಸಗೀ ವ್ಯಕ್ತಿಯು, ಇಲ್ಲವೆ ವ್ಯಕ್ತಿಗಳ ಸಮೂಹವು ಪಂಚಾಯತದ ಸಮ್ಮತಿಯಿಂದ ಮತ್ತು ಒಪ್ಪಿತವಾದಂತಹ ಕರಾರುಗಳಿಗಂಕಿತವಾಗಿ ಯಾವುದೇ ಸಂಸ್ಥೆಯ ಸಂಚಾಲನವನ್ನು ಇಲ್ಲವೆ ಯಾವುದೇ ಕೆಲಸದ ನಿರ್ವಹಣೆ ಇಲ್ಲವೆ ಪರಿಪಾಲನೆಯನ್ನು ಇಲ್ಲವೆ ಪಂಚಾಯತಕ್ಕೆ ಯಾವ ಪ್ರದೇಶದ ಮೇಲೆ ನಿಯಂತ್ರಣ ಇರುವುದೋ ಆ ಪ್ರದೇಶದಲ್ಲಿಯ ಯಾವುದೇ ಕರ್ತವ್ಯ ನೆರವೇರಿಸುವುವನ್ನು ಪಂಚಾಯತಕ್ಕೆ ಒಪ್ಪಿಸಬಹುದು.

**ವಿವೇಚನೆ**

ಯಾವುದೇ ಸಂಸ್ಥೆಯ ಸಂಚಾಲನವನ್ನು ಪಂಚಾಯತಕ್ಕೆ ಒಪ್ಪಿಸಬಹುದು. ಇಲ್ಲವೆ ಯಾವುದೇ ಕೆಲಸದ ನಿರ್ವಹಣೆಯನ್ನು ಪಂಚಾಯತಕ್ಕೆ ಒಪ್ಪಿಸಬಹುದು. ಹೀಗೆ ಒಪ್ಪಿಸುವ ಕೆಲಸವನ್ನು ಡೆಪ್ಯೂಟಿ ಕಮಿಶನರು ಮಾಡಬಹುದು. ಇಲ್ಲವೆ ಯಾವುದೇ ಖಾಸಗೀ ವ್ಯಕ್ತಿ ಇಲ್ಲವೆ ವ್ಯಕ್ತಿಗಳ ಗುಂಪು ಮಾಡಬಹುದು. ಆದರೆ ಒಪ್ಪಿಸುವುದಕ್ಕಿಂತ ಮೊದಲು ಪಂಚಾಯತದ ಸಮ್ಮತಿ ಪಡೆಯಬೇಕು. ಅಂದರೆ ಪಂಚಾಯತವು ಒಪ್ಪಿದರೆ, ಪಂಚಾಯತಕ್ಕೆ ಸಂಸ್ಥೆಯ ಸಂಚಾಲನ, ಕೆಲಸದ ನಿರ್ವಹಣೆ, ಪರಿಪಾಲನೆ, ಮುಂತಾದ ಬೇರೆ ಕೆಲಸಗಳನ್ನು ಒಪ್ಪಿಸಬಹುದು. ಈ ಬಗ್ಗೆ ಸರಕಾರವು ನಿಯಮಗಳನ್ನು ಮಾಡಿರುವುದು. ಅದರ ಪ್ರಕಾರ ನಡೆಯಬೇಕು.

## ೬೦. ಸಾರ್ವಜನಿಕ ರಸ್ತೆಗಳ ಮೇಲೆ ಮತ್ತು ಬಯಲು ಜಾಗೆಯ ಮೇಲೆ ಅತಿಕ್ರಮಣ ಮತ್ತು ಆತಂಕ

(೧) ಗ್ರಾಮದ ಪ್ರಾದೇಶಿಕ ಪರಿಮಿತಿಯಲ್ಲಿ ಯಾರಾದರೂ-

(ಅ) ಯಾವುದೇ ಗೋಡೆ, ಯಾವುದೇ ಬೇಲಿ, ಹಳಿ, ಕಂಬ, ಮಳಿಗೆ, ಕಟ್ಟೆ, ಬಂಕ, ಪಾಯಾ, ಪಾವುಟಿಗೆ ಇಲ್ಲವೆ ಯಾವುದೇ ಮುಂದೆ ಹಾದಂತಹ ಕಟ್ಟಡ, ಇಲ್ಲವೆ ವಸ್ತು, ಇಲ್ಲವೆ ಇತರ ಅತಿಕ್ರಮಣ, ಇಲ್ಲವೆ ಆತಂಕ ಕಟ್ಟಿಸಿದರೆ, ಇಲ್ಲವೆ ಇಡಿಸಿದರೆ, ಇಲ್ಲವೆ ಕಟ್ಟಿದರೆ, ಇಲ್ಲವೆ ಇಟ್ಟರೆ; ಇಲ್ಲವೆ

(ಬ) ಯಾವುದೇ ಸಾರ್ವಜನಿಕ ರಸ್ತೆಯಲ್ಲಿ ಇಲ್ಲವೆ ಸ್ಥಳದಲ್ಲಿ ಇಲ್ಲವೆ ಇಂತಹ ಸಾರ್ವಜನಿಕ ರಸ್ತೆ ಇಲ್ಲವೆ ಸ್ಥಳದಲ್ಲಿಯ ಯಾವುದೇ ಗಟಾರದ ಮೇಲೆ ಕಾಲುವೆಯ ಮೇಲೆ, ಹರಿಯ ಮೇಲೆ, ಕಾವಲಿಯ ಮೇಲೆ ಯಾವುದೇ ಪೆಟ್ಟಿಗೆ ಗಂಟು, ಡಬ್ಬಿ, ಇಲ್ಲವೆ ಸರಕು ಇಲ್ಲವೆ ಬೇರೆ ಯಾವುದೇ ವಸ್ತು ಇಟ್ಟರೆ, ಇಲ್ಲವೆ ಇಡಲಿಕ್ಕೆ ಕಾರಣವಾದರೆ,

ಅವನ ಅಪರಾಧವು ಸಾಬೀತಾದರೆ, ಇಪ್ಪತ್ತೈದು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಮತ್ತು ಇಂತಹ ಅಪರಾಧಕ್ಕಾಗಿ ಆ ಅಪರಾಧದ ಶಿಕ್ಷೆಯ ತಾರೀಖಿನಿಂದ ಆ ಅತಿಕ್ರಮಣ, ಅಡ್ಡಿ, ಆತಂಕಗಳು ಉಳಿಯುವ ತನಕ ದಿನಕ್ಕೆ ಒಂದು ರೂಪಾಯಿಯಂತೆ ದಂಡವು ವ್ಯಾಪಿಸಿದಷ್ಟು ದಂಡದಿಂದ ಶಿಕ್ಷಿತನಾಗುವನು.

(೨) ಇಂತಹ ಅತಿಕ್ರಮಣವನ್ನು ಇಲ್ಲವೆ ಆತಂಕವನ್ನು ತೆಗೆಯಿಸಲು ಪಂಚಾಯತಕ್ಕೆ ಅಧಿಕಾರವಿದೆ. ಮತ್ತು ಖಾಸಗೀ ಆಸ್ತಿಯಲ್ಲದ ಬಯಲು

ಜಾಗಾದಲ್ಲಿ, ಅದು ಪಂಚಾಯತದ ಅಧಿಕಾರಕ್ಕೆ ಒಳಗಾಗಿರಲಿ ಬಿಡಲಿ, ಆದರೆ, ಒಂದು ವೇಳೆ ಅದು ಸರಕಾರದ ಅಧಿಕಾರದ ಅಂತರ್ಗತವಾಗಿದ್ದರೆ, ಈ ಸಂಬಂಧ ದಲ್ಲಿ ಡೆಪ್ಯೂಟಿ ಕಮಿಶನರನ ಇಲ್ಲವೆ ಅವನಿಂದ ಅಧಿಕರಿಸಲ್ಪಟ್ಟ ಬೇರೆ ಯಾವುದೇ ಅಧಿಕಾರಿಯ ಪರವಾನಗಿಯನ್ನು ಮೊದಲು ಪಡೆದುಕೊಂಡು, ಆ ಜಾಗೆಯಲ್ಲಿಯ ಯಾವುದೇ ಅನಧಿಕೃತ ಆತಂಕ ಇಲ್ಲವೆ ಅಂತಹ ಅತಿಕ್ರಮಣವನ್ನು ತೆಗೆಯಿಸಲು ಪಂಚಾಯತಕ್ಕೆ ಅಧಿಕಾರವಿದೆ.

(೩) ಈ ಸಂಬಂಧದಲ್ಲಿ ಯಾರು ಯೋಗ್ಯ ಅಧಿಕಾರ ಪಡೆದಿರುವುದಿಲ್ಲವೊ ಅಂತಹ ಯಾರಾದರೂ ಖಾಸಗಿ ಆಸ್ತಿಯಲ್ಲದ ಬಯಲುಜಾಗಾದಿಂದ ಮಣ್ಣು, ಉಸುಕು ಇಲ್ಲವೆ ಇತರ ವಸ್ತು ತೆಗೆದುಕೊಂಡರೆ, ಇಲ್ಲವೆ ಅಲ್ಲಿ ಅತಿಕ್ರಮಣ ಮಾಡಿದರೆ, ಅವನ ಅಪರಾಧವು ಸಾಬೀತಾದರೆ ಐವತ್ತು ರೂಪಾಯಿಗಳ ವರೆಗೆ ವ್ಯಾಪಿಸ ಬಹುದಾದಷ್ಟು ದಂಡದಿಂದ ಶಿಕ್ಷಿತನಾಗುವನು. ಮತ್ತು,

(i) ಅದು ಅತಿಕ್ರಮಣವಾಗಿದ್ದ ಅಪರಾಧವಾದ ಸಂದರ್ಭದಲ್ಲಿ ಮೊದ ಲನೆಯ ಶಿಕ್ಷೆಯ ದಿನದನಂತರ ಆ ಅತಿಕ್ರಮಣವು ಎಷ್ಟು ದಿನ ಮುಂದುವರೆಯು ವುದೋ ಅಷ್ಟು ದಿನಗಳ ವರೆಗೆ ಪ್ರತಿದಿನಕ್ಕೆ ಎರಡು ರೂಪಾಯಿಯಂತೆ ದಂಡವು ಹೆಚ್ಚಾಗಬಹುದು.

(ii) ಅದು ಅಲ್ಲಿಯ ಮಣ್ಣು, ಉಸುಕು, ಇಲ್ಲವೆ ಇತರ ವಸ್ತು ತೆಗೆದು ಕೊಂಡ ಅಪರಾಧವಾಗಿದ್ದ ಸಂದರ್ಭದಲ್ಲಿ ಆ ಮಣ್ಣು, ಉಸುಕು ಇಲ್ಲವೆ ಇತರ ವಸ್ತುವಿನ ಬೆಲೆಯೂಕೂಡ ದಂಡದ ಹಾಗೆ ವಸೂಲು ಮಾಡಲ್ಪಡಲಾಗುವುದು.

(೪) ಉತ್ಸವ ಮತ್ತು ಸಮಾರಂಭಗಳ ಪ್ರಸಂಗಗಳಲ್ಲಿ ಯಾವುದೇ ಸಾರ್ವ ಜನಿಕ ರಸ್ತೆಯಮೇಲೆ ತಾತ್ಪೂರ್ತಿಕವಾಗಿ ಸ್ವಾಧೀನದಲ್ಲಿಟ್ಟುಕೊಳ್ಳುವುದನ್ನು ಇಲ್ಲವೆ ಸಂದಿಗಳಲ್ಲಿ ಮತ್ತು ಅಲ್ಲಿಯ ಜಾಗಾದಲ್ಲಿ ನಾಲ್ಕು ದಿನಗಳಕಿಂತ ಹೆಚ್ಚು ಆಗದಷ್ಟು ಅವಧಿಯ ವರೆಗೆ ಉರುವಲಕಟ್ಟಿಗೆ ಒಟ್ಟಿಕೊಳ್ಳುವದನ್ನೂ ಮತ್ತು ಯಾವುದೇ ವ್ಯಕ್ತಿ ಇಲ್ಲವೆ ಸಾರ್ವಜನಿಕರಿಗೆ ಅನಾನುಕೂಲವಾಗದಂತಹ ರೀತಿಯಲ್ಲಿ ಮಾಡುವಹಾಗೆ ಪಂಚಾಯತವು ಪರವಾನಗಿ ಕೊಡುವುದನ್ನು ಈ ಕಲಮಿನಲ್ಲಿ ಹೇಳಿದ ಯಾವ ಮಾತೂ ನಿರ್ಬಂಧಿಸುವುದಿಲ್ಲ.

**ವಿವೇಚನೆ**

ಸಾರ್ವಜನಿಕ ರಸ್ತೆ ಇಲ್ಲವೆ ಸಾರ್ವಜನಿಕ ಜಾಗಾ ಇವು ಯಾವಾಗಲೂ ಸಾರ್ವಜನಿಕರಿಗಾಗಿ ಮುಕ್ತವಿರತಕ್ಕದ್ದು. ಅಲ್ಲಿ ಸಾರ್ವಜನಿಕರಿಗೆ ಅಡ್ಡಿ-ಆತಂಕವಾಗುವ ಹಾಗೆ ಯಾವ ಕಟ್ಟಡ ರಚನೆ, ಇರತಕ್ಕದ್ದಲ್ಲ. ಆದ್ದರಿಂದ

ಆ ಬಗ್ಗೆ ಪಂಚಾಯತಕ್ಕೆ ಅಧಿಕಾರವನ್ನು ಈ ಕಲಮಿನ ಮೂಲಕ ಕೊಡಲಾಗಿದೆಯಲ್ಲದೆ, ಹಾಗೆ ಅಡ್ಡಿ ಆತಂಕಗಳನ್ನು ಒಡ್ಡುವುದು ಅತಿಕ್ರಮಣ ಮಾಡಿದಂತೆ ಅಪರಾಧವಾಗುವುದು. ಇಲ್ಲಿ ಲಕ್ಷಿಸಬೇಕಾದ ಮಾತುಗಳು ಇಷ್ಟು. ಸಾರ್ವಜನಿಕ ರಸ್ತೆ ಇಲ್ಲವೆ ಸ್ಥಳ ಆಗಿರಬೇಕು. ಅದರ ಮೇಲೆ ಯಾರಾದರೂ ಅತಿಕ್ರಮಣ ಆಗುವ ಹಾಗೆ ಯಾವುದೇ ರಚನೆ ಮಾಡಿರಬೇಕು. ಆ ರಚನೆಯು ತಾತ್ಪೂರ್ತಿಕವಾಗಿ ಉತ್ಸವ ಸಮಾರಂಭಗಳಿಗಾಗಿ ಪಂಚಾಯತಿಯಿಂದ ಪರವಾನಗಿ ಪಡೆದುದಾಗಿರಬಾರದು. ಆ ರಚನೆಯಿಂದ ಸಾರ್ವಜನಿಕ ಆಸ್ತಿಯ ಉಪಭೋಗಕ್ಕೆ ಅಡ್ಡಿಯಾಗಿರಬೇಕು. ಆಗ ಅದು ಅಪರಾಧವಾಗುವುದು. ಮತ್ತು ಅದಕ್ಕೆ ದಂಡದ ಶಿಕ್ಷೆ ಹೇಳಿದೆ. ಅತಿಕ್ರಮಣದ ಅಪರಾಧವಾಗಿದ್ದರೆ, ಅದು ತೆಗೆಸಲ್ಪಡುವ ತನಕ ಅಪರಾಧವು ಮುಂದುವರೆವುದು. ಆದ್ದರಿಂದ ಮೂಲ ಅಪರಾಧಕ್ಕೆ ಕೊಡಬೇಕಾದ ದಂಡದ ಜತೆಗೆ ಮುಂದುವರೆದ ಅಪರಾಧಕ್ಕಾಗಿ ದಿನವೂ ದಂಡ ಕೊಡಬೇಕಾಗುವುದು.

ಗ್ರಾಮಾಂತರಗಳಲ್ಲಿ ಜನರು ತಮಗೆ ಬೇಕಾದ ಹಾಗೆ ಕಂಡಲ್ಲಿ ಮಣ್ಣು, ಕಲ್ಲು, ಉಸುಕು ಮುಂತಾದ್ದನ್ನು ತೆಗೆದುಕೊಂಡು ಹೋಗುವ ಚಟವುಳ್ಳವರು ಇರುತ್ತಾರೆ. ಅದರಿಂದ ಸಾರ್ವಜನಿಕ ಆಸ್ತಿಗೆ ಹಾನಿ ಆಗುತ್ತದೆ. ಹೀಗೆ ಸಾರ್ವಜನಿಕ ಆಸ್ತಿಯನ್ನು ತೆಗೆದುಕೊಂಡು ಹೋಗುವುದು ಅಪರಾಧವಾಗುತ್ತದೆ. ಅದಕ್ಕೆ ಕೊಡಬೇಕಾದ ದಂಡದ ಜತೆಗೆ ತೆಗೆದುಕೊಂಡು ಹೋದ ಮಾಲಿನ ಬೆಲೆಯನ್ನೂ ದಂಡವೆಂದು ಕೊಡಬೇಕಾಗುತ್ತದೆಂಬುದನ್ನು ಇಲ್ಲಿ ಹೇಳಲಾಗಿದೆ.

## ೬೧. ರಸ್ತೆಗಳನ್ನು ಹೆಸರಿಸುವುದಕ್ಕೆ ಹಾಗೂ ಕಟ್ಟಡಗಳಿಗೆ ಅಂಕಿ ಹಾಕುವುದಕ್ಕೆ ಅಧಿಕಾರ

ಪಂಚಾಯತವು ಯಾವುದೇ ರಸ್ತೆಗೆ ಹೆಸರನ್ನು ಇಡಿಸಬಹುದು ಮತ್ತು ಯಾವುದೇ ಕಟ್ಟಡಕ್ಕೆ ಅಂಕಿ ಹಾಕಿಸಬಹುದು ಮತ್ತು ಕಾಲ ಕಾಲಕ್ಕೆ ಇಂತಹ ಹೆಸರನ್ನು ಮತ್ತು ಅಂಕಿಯನ್ನು ಬದಲಾಯಿಸಬಹುದು.

### ವಿವೇಚನೆ

ಗ್ರಾಮಗಳಲ್ಲಿ ಸಾಮಾನ್ಯವಾಗಿ ರಸ್ತೆಗಳಿಗೆ ಹೆಸರು ಇರುವುದಿಲ್ಲ. ಅದಕ್ಕೆ ಹೆಸರು ಇಡಬೇಕೆಂದು ಆದರೆ ಆ ಅಧಿಕಾರವು ಪಂಚಾಯತಕ್ಕೆ ಇದೆ. ಅದರಂತೆ ಮನೆಗಳಿಗೆ ನಂಬರು ಇರುವುದಿಲ್ಲ. ಹಾಗೆ ನಂಬರು ಹಾಕಿಸುವ ಅಧಿಕಾರವೂ ಪಂಚಾಯತಕ್ಕೆ ಇದೆ. ಈ ರೀತಿ ಹಾಕಿಸಿದ ನಂಬರು ಇಲ್ಲವೆ ಇಟ್ಟ ಹೆಸರು ಕಾಲ ಕಾಲಕ್ಕೆ ಬದಲಾಯಿಸಬಹುದಾದ ಅಧಿಕಾರವೂ ಅದಕ್ಕೆ ಇದೆ.

## ೬೨. ಹಾಳಾದ ಇಲ್ಲವೆ ಶಿಥಿಲವಾದ ಕಟ್ಟಡ, ಗಿಡ ಮುಂತಾದವುಗಳನ್ನು ತೆಗೆದುಹಾಕುವುದು

(೧) ಯಾವುದೇ ಕಟ್ಟಡವು ಇಲ್ಲವೆ ಅದರ ಯಾವುದೇ ಭಾಗವು ಇಲ್ಲವೆ ಯಾವುದೇ ಗಿಡವು ಇಲ್ಲವೆ ಗಿಡದ ಟೊಂಗೆಯು ಹಾಳಾದ ಸ್ಥಿತಿಯಲ್ಲಿದೆ ಇಲ್ಲವೆ ಬೀಳುವ ಸಂಭವವಿದೆ ಇಲ್ಲವೆ ಇಂತಹ ಕಟ್ಟಡ ಇಲ್ಲವೆ ಅದರ ಭಾಗ ಇಲ್ಲವೆ ಗಿಡ ಇಲ್ಲವೆ ಟೊಂಗೆಯು ಹತ್ತಿರ ವಾಸವಾಗಿರುವ, ಆಶ್ರಯಿಸಿರುವ, ಇಲ್ಲವೆ ಹಾದು ಹೋಗುವ ಯಾವುದೇ ವ್ಯಕ್ತಿಗೆ ಅಪಾಯಕಾರಕವಾಗಿರುವ ಹಾಗೆ ಯಾವುದೇ ಸ್ಥಿತಿಯಲ್ಲಿದೆ ಎಂದು ಯಾವುದೇ ಕಾಲಕ್ಕೆ ಪಂಚಾಯತಕ್ಕೆ ಅನ್ನಿಸಿದರೆ, ಪಂಚಾಯತವು ಲಿಖಿತ ನೋಟೀಸು ಕೊಟ್ಟು ಇಂತಹ ಕಟ್ಟಡದ ಇಲ್ಲವೆ ಗಿಡದ ಮಾಲಕ ಇಲ್ಲವೆ ಸಂದರ್ಭಾನುಸಾರವಾಗಿ ಸ್ವಾಧೀನದಲ್ಲಿದ್ದವನಿಂದ ಇಂತಹ ಕಟ್ಟಡವನ್ನು ಅದರ ಭಾಗವನ್ನು ಗಿಡವನ್ನು ಇಲ್ಲವೆ ಸಂದರ್ಭಾನುಸಾರ

(i) ಕೆಡವಿಸಬಹುದು, ಕತ್ತರಿಸಬಹುದು ಇಲ್ಲವೆ ಕಡಿದು ಹಾಕಬಹುದು ಇಲ್ಲವೆ,

(ii) ಭದ್ರಮಾಡಿಸಬಹುದು, ಇಲ್ಲವೆ,

(iii) ತೆಗೆಯಿಸಬಹುದು, ಇಲ್ಲವೆ,

(iv) ದುರಸ್ತಿಮಾಡಿಸಬಹುದು,

ಮತ್ತು ಅದರಿಂದ ಉಂಟಾಗುವ ಅಪಾಯಗಳ ಕಾರಣಗಳನ್ನು ತಡೆಯಬಹುದು.

(೨) ಹಾಳಾಗಿದ್ದ ಇಲ್ಲವೆ ಬೀಳುವ ಸಂಭವವಿದ್ದ ಕಟ್ಟಡ ಇಲ್ಲವೆ ಗಿಡದಿಂದ ಗಂಡಾಂತರವು ಅತ್ಯಾಸನ್ನವಾಗಿದೆಯೆಂದು ಪಂಚಾಯತಕ್ಕೆ ಅನ್ನಿಸಿದ್ದರೆ ಅದು ನೋಟೀಸಿನ ಕಾಲಾವಧಿಯು ಮುಗಿಯುವ ಮುಂಚಿತವಾಗಿಯೇ ಇಂತಹ ಕಟ್ಟಡ ಇಲ್ಲವೆ ಗಿಡವನ್ನು ಸಂದರ್ಭಾನುಸಾರವಾಗಿ ಬೇಲಿಕಟ್ಟಿಸಿ, ಕೆಡವಿಸಿ, ಕತ್ತರಿಸಿ, ಇಲ್ಲವೆ ಕಡಿದುಹಾಕಿ, ಭದ್ರವಾಗಿಸಿ ಇಲ್ಲವೆ ದುರಸ್ತಿಮಾಡಿಸಿ, ಇಲ್ಲವೆ ಗಂಡಾಂತರ ವನ್ನು ತಡೆಗಟ್ಟಲು ಆವಶ್ಯಕವಾದಂತಹ ಕ್ರಮವನ್ನು ಕೈಕೊಳ್ಳಬಹುದು.

(೩) ಈ ಸಂಬಂಧದಲ್ಲಿ ಪಂಚಾಯತವು ಮಾಡಬೇಕಾಗಿ ಬಂದ ವೆಚ್ಚವು ಆ ಕಟ್ಟಡದ ಇಲ್ಲವೆ ಗಿಡದ ಮಾಲಕ ಇಲ್ಲವೆ ಸಂದರ್ಭಾನುಸಾರವಾಗಿ, ಸ್ವಾಧೀನ ದಲ್ಲಿಟ್ಟುಕೊಂಡವನಿಂದ ಕೊಡಲ್ಪಡತಕ್ಕದ್ದು.

(೪) ಸಂದರ್ಭಾನುಸಾರವಾಗಿ ಮಾಲಕನಿಗೆ ಇಲ್ಲವೆ ಸ್ವಾಧೀನದಲ್ಲಿಟ್ಟು ಕೊಂಡವನಿಗೆ ತನ್ನ ಯಾವುದೇ ತಕರಾರುಗಳನ್ನು ಹೇಳಲು, ಪುರಾವೆ ಯಾವುದಾ ದರೂ ಇದ್ದರೆ, ಮಂಡಿಸಲು ಯೋಗ್ಯ ಅವಕಾಶ ಕೊಟ್ಟು ನಂತರ ಮತ್ತು ಮಾಡಿದ

ತಕರಾರು ಹುರುಳಿಲ್ಲದ್ದು ಕಾಯಿದೆ ಬದ್ಧವಾಗಿಲ್ಲ ಇಲ್ಲವೆ ಸಮರ್ಪಕವಾಗಿಲ್ಲವೆಂದು ಮನವರಿಕೆ ಮಾಡಿಕೊಂಡ ನಂತರ ಪಂಚಾಯತದ ಉಪಕಲಮು (೧)ರನ್ವಯವಾಗಿ ನೋಟೀಸು ಕೊಡತಕ್ಕದ್ದು.

## ವಿವೇಚನೆ

ಸಾರ್ವಜನಿಕರಿಗೆ ಅಪಾಯ · ಉಂಟಾಗಬಾರದಂತೆ ನೋಡಿಕೊಳ್ಳುವುದು ಪಂಚಾಯತದ ಕರ್ತವ್ಯವಾಗಿದೆ. ಈ ಕರ್ತವ್ಯದ ಕಾರಣದಿಂದ ಈ ಕಲಮಿನ ಮೂಲಕ ಅಧಿಕಾರ ಕೊಡಲಾಗಿದೆ. ಯಾವುದೇ ಕಟ್ಟಡ ಇಲ್ಲವೆ ಗಿಡವು ಹಾಳಾಗಿದೆ ಗೀಳಾಗಿದೆ, ಹಾಗೂ ಅದರಿಂದ ಸಾಮಾನ್ಯರಿಗೆ ಮುಖ್ಯತಃ ಆ ಕಟ್ಟಡ ಇಲ್ಲವೆ ಗಿಡದ ಆಸುಪಾಸು ಇರುವವರಿಗೆ ಇಲ್ಲವೆ ಹಾದಾಡುವವರಿಗೆ ಅಪಾಯವಾಗುವದೆಂದು ಪಂಚಾಯತಕ್ಕೆ ಕಂಡು ಬಂದರೆ ಆ ಕಟ್ಟಡದ ಇಲ್ಲವೆ ಗಿಡದ ಮಾಲಕರಿಗೆ, ಇಲ್ಲವೆ ಅದು ಯಾರ ಸ್ವಾಧೀನದಲ್ಲಿದೆಯೋ ಅವರಿಗೆ ತಿಳಿಸಬೇಕು. ಅವರಿಂದ ತಕರಾರು ಪುರಾವೆ ಏನಾದರೂ ಬಂದರೆ ಕೇಳಿಕೊಂಡು ಅವು ಸಮಾಧಾನಕರವಿಲ್ಲ, ಇಲ್ಲವೆ ಕಾಯಿದೆಬದ್ಧವಾಗಿಲ್ಲ ಎಂದು ಕಂಡುಬಂದ ಮೇಲೆ ಆ ಕಟ್ಟಡ ಇಲ್ಲವೆ ಗಿಡವನ್ನು ತೆಗೆದು ಹಾಕಿಸಲು, ಭದ್ರಪಡಿಸಲು, ದುರಸ್ತಿ ಮಾಡಿಸಲು ನೋಟೀಸು ಕೊಡಬೇಕು. ನೋಟೀಸಿನ ಮೂಲಕ ಸಂಬಂಧಪಟ್ಟವರು ತೆಗೆಯಿಸದಿದ್ದರೆ, ಪಂಚಾಯತವೇ ತೆಗೆಯಿಸಬೇಕು ಮತ್ತು ಸಂಬಂಧಪಟ್ಟವರಿಂದ ಖರ್ಚು ವಸೂಲಮಾಡಿಕೊಳ್ಳ ಬೇಕು. ನೋಟೀಸು ಕೊಟ್ಟಿದ್ದು ಆ ಅವಧಿಯ ಒಳಗೆಯೆ· ಅಪಾಯ ಸಂಭವಿಸುವ ಸಂದರ್ಭ ಒದಗಿ ಬಂದರೂ ಪಂಚಾಯತವು ಆ ಕಟ್ಟಡ ಇಲ್ಲವೆ ಗಿಡವನ್ನು ತನ್ನ ಅಧಿಕಾರದಿಂದ ತೆಗೆಯಿಸಬಹುದು; ಭದ್ರವಾಗಿಸಬಹುದು.

## ೭೩. ಸ್ವಚ್ಛತೆ, ಗಟಾರ ವ್ಯವಸ್ಥೆ, ಭಂಗೀವ್ಯವಸ್ಥೆಗಳ ಬಗ್ಗೆ ಅಧಿಕಾರ

(೧) ಪಂಚಾಯತದ ಅಧಿಕಾರ ಕ್ಷೇತ್ರದಲ್ಲಿಯ ಯಾವುದೇ ಪ್ರದೇಶ ದಲ್ಲಿಯ ಸ್ವಚ್ಛತೆಯ ಪರಿಸ್ಥಿತಿಯನ್ನು ಸುಧಾರಿಸಬೇಕೆಂದು ಪಂಚಾಯತಕ್ಕೆ ಅನ್ನಿಸಿದರೆ, ಪಂಚಾಯತವು ಲಿಖಿತ ನೋಟೀಸಿನ ಮೂಲಕ ನಿರ್ದಿಷ್ಟ ಪಡಿಸಿದ ಯೋಗ್ಯ ಕಾಲಾವಧಿಯಲ್ಲಿ ಈ ಕೆಳಗಿನಂತೆ

(i) ಯಾವುದೇ ಗುಡಿಸಲಿನ ಮಾಲಕನಿಗೆ ಇಲ್ಲವೆ ಸ್ವಾಧೀನದಲ್ಲಿಟ್ಟು ಕೊಂಡವನಿಗೆ ಇಲ್ಲವೆ ಯಾವುದೇ ಪಾಯಖಾನೆಯ ಮಾಲಕನಿಗೆ ಇಂತಹ ಗುಡಿಸಲು ಇಲ್ಲವೆ ಪಾಯಖಾನೆಯನ್ನು ಇಡಿಯದಾಗಿ ಇಲ್ಲವೆ ಭಾಗವನ್ನು ತೆಗೆಯೆಂದು ಹೇಳಬಹುದು.

(ii) ಯಾವುದೇ ಕಟ್ಟಡದ ಮಾಲಕನಿಗೆ ಇಲ್ಲವೆ ಸ್ವಾಧೀನದಲ್ಲಿಟ್ಟು ಕೊಂಡವನಿಗೆ ಆ ಕಟ್ಟಡಕ್ಕಾಗಿ ಖಾಸಗಿ ಗಟಾರುಗಳನ್ನು ಕಟ್ಟಿಸೆಂದು ಇಲ್ಲವೆ ಇದ್ದ ಗಟಾರುಗಳನ್ನು ಹೆಚ್ಚು ಕಡಿಮೆ ಮಾಡೆಂದು ಇಲ್ಲವೆ ತೆಗೆದು ಹಾಕೆಂದು ಹೇಳಬಹುದು.

(iii) ಯಾವ ಭೂಮಿ ಇಲ್ಲವೆ ಕಟ್ಟಡವು ಸ್ವಚ್ಛ ಮಾಡಲು ತಕ್ಕದ್ದಾಗಿ ದೆಯೊ ಅಂತಹ ಭೂಮಿ ಇಲ್ಲವೆ ಕಟ್ಟಡದ ಮಾಲಕನಿಗೆ ಇಲ್ಲವೆ ಸ್ವಾಧೀನದಲ್ಲಿಟ್ಟು ಕೊಂಡವನಿಗೆ, ಪಂಚಾಯತಕ್ಕೆ ಸಮಾಧಾನಕಾರಕವಾಗುವಂತೆ ಸ್ವಚ್ಛ ಮಾಡಿ ಸೆಂದು ಹೇಳಬಹುದು.

(iv) ಯಾವ ಭೂಮಿಯಲ್ಲಿ ಇಲ್ಲವೆ ಕಟ್ಟಡದಲ್ಲಿ ಬಾವಿ, ಕೊಳ, ಕೊರ ಕಲು, ತೆಗ್ಗು, ಹೊಂಡ, ಕೆರೆ ಇಲ್ಲವೆ ಯಾವುದೇ ಗಟಾರದಿಂದ ಬರುವುದನ್ನು ಹೊಲಸು, ಕೊಳಚೆ ಸಂಗ್ರಹಿಸಲು ಉಪಯೋಗವಾಗುವ ಇಲ್ಲವೆ ಸಂಗ್ರಹಿಸಿದ ಯಾವುದೇ ಸ್ಥಳವು ಯಾವುದು ನೆರೆಹೊರೆಯವರ ಆರೋಗ್ಯಕ್ಕೆ ಅಪಾಯವಾಗು ವಂತಹದು ಇದೆಯೋ ಇಲ್ಲವೆ ಕ್ಲೇಶಕಾರಕವಾಗುವಂತಹದು ಇದೆಯೋ ಇಲ್ಲವೆ ಕಂಟಕದ ಇತರ ರೀತಿಯ ಆಗರವಾಗಿದೆಯೋ ಅಂತಹ ಯಾವುದೇ ಭೂಮಿಯ ಇಲ್ಲವೆ ಕಟ್ಟಡದ ಮಾಲಕನಿಗೆ ಇಲ್ಲವೆ ಸ್ವಾಧೀನದಲ್ಲಿಟ್ಟುಕೊಂಡವನಿಗೆ, ಅದನ್ನು ತುಂಬಿಸಲು, ಸ್ವಚ್ಛ ಮಾಡಿಸಲು, ಇಲ್ಲವೆ ಆಳವಾಗಿಸಲು ಇಲ್ಲವೆ ಆ ನೀರನ್ನು ಅಲ್ಲಿಂದ ತೆಗೆಯಿಸಲು, ಇಲ್ಲವೆ ಗಟಾರದಿಂದ ಹರಿಯಿಸಲು ಇಲ್ಲವೆ ಪಂಚಾಯತವು ಆವಶ್ಯಕವೆಂದು ಗಣಿಸುವ ಬೇರೆ ಯಾವುದೇ ತರಹದ ಕ್ರಮವನ್ನು ತೆಗೆದುಕೊಳ್ಳಲು ಹಚ್ಚಬಹುದು.

(v) ಯಾವ ಭೂಮಿಯ ಮೇಲೆ ಹುಲ್ಲು-ಪಲ್ಲವಾದಿಗಳು ಅತಿಯಾಗಿ ಬೆಳೆದು ನೆಲದಡಿಯಲ್ಲಿ ಬೆಳೆದು ಕಂಟಿ ಇಲ್ಲವೆ ಅಡವಿ ಬೆಳೆದು ಯಾವುದು ಯಾವುದೇ ರೀತಿ ಯಿಂದ ಆರೋಗ್ಯಕ್ಕೆ ಅಪಾಯಕಾರಕವಾಗಿರುವುದೋ ,ಇಲ್ಲವೆ ಸಾರ್ವಜನಿಕರಿಗೆ ಗಂಡಾಂತರಕಾರಿಯಾಗಿರುವುದೋ ಇಲ್ಲವೆ ನೆರೆ ಹೊರೆಯವರಿಗೆ ಕ್ಲೇಶಕಾರಕ ವಾಗಿರುವುದೋ ಇಲ್ಲವೆ ಗಾಳಿಯಾಡಲು ಅಡ್ಡಿಯಾಗಿದೆಯೋ ಅಂತಹ ಭೂಮಿಯ ಮಾಲಕನಿಗೆ ಇಲ್ಲವೆ ಸ್ವಾಧೀನದಲ್ಲಿಟ್ಟುಕೊಂಡವನಿಗೆ ಆ ಹುಲ್ಲು ಪಲ್ಲವ ಗಳನ್ನು, ಕಂಟಿ ಅಡವಿಗಳನ್ನು ತೆಗೆದು ಸ್ವಚ್ಛ ಮಾಡಿಸಲು ಹಚ್ಚಬಹುದು.

(೨) ಉಪಕಲಮು (೧)ರನ್ವಯವಾಗಿ ಕೊಡಲಾದ ನೋಟೀಸಿನಲ್ಲಿ ನಿರ್ದಿಷ್ಟ ಪಡಿಸಿದ ಕಾಲಾವಧಿಯಲ್ಲಿ ಆ ನೋಟೀಸು ಮಾಡಲು ಹಚ್ಚಿದ ಯಾವುದೇ ಕೆಲಸವು ಮಾಡಲ್ಪಡದಿದ್ದರೆ, ಪಂಚಾಯತವು ¦ತಃ ತಾನೇ ಆ

ಕೆಲಸವನ್ನು ಮಾಡಿಸಬಹುದು. ಮತ್ತು ಅದಕ್ಕೆ ತಗಲಿದ ವೆಚ್ಚ ಇಲ್ಲವೆ, ಅದರ ಭಾಗವನ್ನು ಉಪಕಲಮು (೧) ರಲ್ಲಿ ಹೇಳಲಾದ ಮಾಲಕನಿಂದ ಇಲ್ಲವೆ ಸ್ವಾಧೀನದಲ್ಲಿಟ್ಟುಕೊಂಡವನಿಂದ ಅದು ಕಲಮು ೭೩ ರನ್ವಯವಾಗಿದ್ದ ಕರವೆಂಬ ಹಾಗೆ ವಸೂಲ ಮಾಡಬಹುದು.

**ವಿವೇಚನೆ**

ಗ್ರಾಮವನ್ನು ಸ್ವಚ್ಛವಾಗಿಡುವುದು ಪಂಚಾಯತದ ಕರ್ತವ್ಯ ಹೊಲಸು ತೆಗೆಯಿಸುವುದು ಒಂದು ಭಾಗವಾದರೆ ಹೊಲಸು ಆಗದಂತೆ ನೋಡಿಕೊಳ್ಳುವುದು ಇನ್ನೊಂದು ಭಾಗ. ಯಾವುದೇ ಗುಡಿಸಲಿನಿಂದ. ಪಾಯಖಾನೆಯಿಂದ ಕಟ್ಟಡದ ಗಟಾರುಗಳಿಂದ, ಭಾವಿ, ಕೊಳ, ಹೊಂಡ, ಕೆರೆ ಮುಂತಾದವುಗಳಲ್ಲಿ ಹೊಲಸು ಆಗಿ, ನಿಂತು, ಮಲಿತು, ಗ್ರಾಮದ ಜನರ ಆರೋಗ್ಯಕ್ಕೆ ವ್ಯತ್ಯಯವುಂಟಾಗುವ ಹಾಗೆ ಇದ್ದರೆ ಪಂಚಾಯತವು ಅದನ್ನು ಲಕ್ಷಿಸಿ ಆ ಸ್ಥಳವು ಸ್ವಚ್ಛವಾಗಿ ಆಗುವಂತೆ ಮತ್ತು ಸ್ವಚ್ಛವಾಗಿ ಉಳಿಯುವಂತೆ ಮಾಡಲು ಅದರ ಮಾಲಕನಿಗೆ ಇಲ್ಲವೆ ಸ್ವಾಧೀನದಲ್ಲಿಟ್ಟುಕೊಂಡವನಿಗೆ ಹಚ್ಚಬಹುದು. ಒಮ್ಮೊಮ್ಮೆ ಮಾಲಕ ಎಲ್ಲಿಯೋ ಇರುತ್ತಾನೆ. ಆ ಸ್ಥಳದಲ್ಲಿ ಇದ್ದವ ಇಲ್ಲವೆ ಯಾರ ಸ್ವಾಧೀನದಲ್ಲಿ ಆ ಸ್ಥಳವು ಇರುವುದೋ ಅವನಿಂದ ಕೆಲಸ ನಿರ್ವಹಿಸಲು ಪಂಚಾಯತಕ್ಕೆ ಅಧಿಕಾರವಿದೆ. ಹೀಗೆ ಮಾಡುವಾಗ ಪಂಚಾಯತವು ಸಂಬಂಧಪಟ್ಟವನಿಗೆ ಲಿಖಿತ ನೋಟೀಸು ಕೊಡತಕ್ಕದ್ದು. ಆ ನೋಟೀಸಿನಲ್ಲಿ ಕಾಣಿಸಿದ ಕಾಲಾವಧಿಯಲ್ಲಿ ಆ ಮಾಲಕನು ಇಲ್ಲವೆ ಸಂಬಂಧಪಟ್ಟ ವ್ಯಕ್ತಿಯು ಕೆಲಸವನ್ನು ನಿರ್ವಹಿಸದಿದ್ದರೆ, ಪಂಚಾಯತವೇ ಸ್ವತಃ ಕೆಲಸ ಮಾಡಿಸಿ,ಅದರ ವೆಚ್ಚವನ್ನು ಆ ಸಂಬಂಧಪಟ್ಟ ವ್ಯಕ್ತಿಯಿಂದ ವಸೂಲ ಮಾಡಿಕೊಳ್ಳುವ ಅಧಿಕಾರವನ್ನು ಪಂಚಾಯತವು ಈ ಕಲಮಿನ ಮೂಲಕ ಪಡೆದಿರುತ್ತದೆ. ಈ ವೆಚ್ಚವು ೭೩ ನೆಯ ಕಲಮಿನಲ್ಲಿಯಂತೆ ಕರವೆಂಬ ಹಾಗೆ ವಸೂಲ ಮಾಡುವ ಅಧಿಕಾರ ಪಂಚಾಯತಕ್ಕೆ ಇದೆ

## ೭೪. ಯಾತ್ರಾಸ್ಥಳಗಳಮೇಲೆ ನಿಯಂತ್ರಣವಿದ್ದ ಜನರ ಕಡೆಯಿಂದ ವಂತಿಗೆ

(೧) ಗ್ರಾಮದ ಪ್ರಾದೇಶಿಕ ಮಿತಿಯಲ್ಲಿ ಇಲ್ಲವೆ ನೆರೆಹೊರೆಯಲ್ಲಿ, ಮಸೀದೆ, ಗುಡಿ, ಮಠ ಇಲ್ಲವೆ ಧಾರ್ಮಿಕ ಪೂಜಾಸ್ಥಳ, ಇಲ್ಲವೆ ಧಾರ್ಮಿಕ ಪ್ರವಚನ ಸ್ಥಳ ಇಲ್ಲವೆ ಜಾತ್ರೆಗಳ ಇಲ್ಲವೆ ಉತ್ಸವಗಳ ಇಲ್ಲವೆ ಇಂತಹ ಉದ್ದೇಶಗಳಿಗಾಗಿ ಉಪಯೋಗವಾಗುವ ಯಾವುದೇ ಸ್ಥಳವು, ಇದ್ದು ಮತ್ತು ವರುಷದ ತುಂಬ ಇಲ್ಲವೆ ಕೆಲವೊಂದು ವಿಶಿಷ್ಟ ಪ್ರಸಂಗಗಳಲ್ಲಿ ಬಹಳ ಜನರನ್ನು ಆಕರ್ಷಿಸುತ್ತಿದ್ದರೆ,

ಸಾರ್ವಜನಿಕ ಆರೋಗ್ಯ, ಭದ್ರತೆ ಇಲ್ಲವೆ ಅನುಕೂಲತೆಗಾಗಿ ಯಾವುದೇ ಆವಶ್ಯಕ ವ್ಯವಸ್ಥೆಯನ್ನು ತಾತ್ಪೂರ್ತಿಕವಾಗಿರಲಿ ಇಲ್ಲವೆ ಶಾಶ್ವತವಾಗಿರಲಿ ಪಂಚಾಯತವು ಮಾಡತಕ್ಕದ್ದು, ಆದರೆ, ಅಂತಹ ಸ್ಥಳದ ಧರ್ಮದರ್ಶಿ ಇಲ್ಲವೆ ಅದರ ಮೇಲೆ ನಿಯಂತ್ರಣವಿದ್ದ ಬೇರೆ ವ್ಯಕ್ತಿಯೊಡನೆ ವಿಚಾರ ವಿನಿಮಯ ಮಾಡಿ ಪಂಚಾಯತದವರಿಗೆ ನಿತ್ಯ ಇಲ್ಲವೆ ನೈಮಿತ್ತಿಕವಾದ ವಂತಿಗೆಯನು ಕಮಿಶನರನು ನಿರ್ದಿಷ್ಟಪಡಿಸುವಷ್ಟು ಆ ಧರ್ಮದರ್ಶಿಯಿಂದ ಇಲ್ಲವೆ ನಿಯಂತ್ರಣವಿದ್ದ ಬೇರೆ ವ್ಯಕ್ತಿಯಿಂದ ಕೊಡಿಸಬಹುದು.

(೨) ಉಪಕಲಮು (೧) ರನ್ವಯವಾಗಿ ನಿರ್ದೇಶಿಸಲಾದ ಯಾವುದೇ ವಂತಿಗೆಯು ಭೂಕಂದಾಯದ ಬಾಕಿ ಎಂಬಂತೆ ವಸೂಲ ಮಾಡಲ್ಪಡಲಾಗುವುದು.

## ವಿವೇಚನೆ

ಪಂಚಾಯತವು ತನ್ನ ಗ್ರಾಮದ ಪ್ರದೇಶದಲ್ಲಿಯ ಜನರಿಗಾಗಿ ಇರುವ ಸಂಸ್ಥೆ. ಆದರೆ ಆ ಪ್ರದೇಶದಲ್ಲಿ ಇಲ್ಲವೆ ಅದರ ನೆರೆಹೊರೆಯಲ್ಲಿ ಬೇರೆ ಪ್ರದೇಶದ ಜನರು ಯಾವುದೊಂದು ಗುಡಿ, ಮಠ, ಮಸೀದೆ, ಜಾತ್ರೆ, ಉತ್ಸವದ ನಿಮಿತ್ತವಾಗಿ ಬಹು ಸಂಖ್ಯೆಯಲ್ಲಿ ಎರುಷದುದ್ದಕ್ಕೂ ಇಲ್ಲವೆ ಕೆಲವೊಂದು ಕ್ಲಿಪ್ತಕಾಲದಲ್ಲಿ ಬಂದರೆ, ಆದರಿಂದ ಪಂಚಾಯತವು ತನ್ನ ಪ್ರದೇಶದ ಜನರ ಹಿತದ ಸಲುವಾಗಿ ಪ್ರತ್ಯೇಕ ವ್ಯವಸ್ಥೆಯನ್ನು ತಾತ್ಪೂರ್ತಿಕ ಇಲ್ಲವೆ ಶಾಶ್ವತವಾಗಿ ಆ ಹೊರಗಿನ ಜನರ ಸಲುವಾಗಿ ಮಾಡಬೇಕಾಗುತ್ತದೆ, ಹಾಗೆ ಮಾಡುವುದು ಪಂಚಾಯತದ ಕರ್ತವ್ಯವಾಗಿದೆ. ಅಂದರೆ ಪಂಚಾಯತವು ಮಾಡಲೇಬೇಕು.

ಆದರೆ ಈ ವ್ಯವಸ್ಥೆಗೆ ಹೆಚ್ಚಿನ ವೆಚ್ಚಬರುವುದು. ಪಂಚಾಯತ ನಿಧಿಗೆ ಆಯಾ ಮಠ-ಮಸೀದೆ-ಗುಡಿ ಇಲ್ಲವೆ ಜಾತ್ರೆಯಸ್ಥಳದ ಧರ್ಮದರ್ಶಿಯಿಂದ ಇಲ್ಲವೆ ಸಂಬಂಧಪಟ್ಟ ವ್ಯಕ್ತಿಯಿಂದ ಕಮಿಶನರು ನಿರ್ದಿಷ್ಟಪಡಿಸಿ ವಂತಿಗೆಯೆಂದು ಕೂಡಿಸಬಹುದು. ಕಮಿಶನರು ಒಮ್ಮೆ ಆ ಸಂಬಂಧಪಟ್ಟ ವ್ಯಕ್ತಿಯೊಡನೆ ವಿಚಾರ ವಿನಿಮಯಮಾಡಿ ವಂತಿಗೆಯನ್ನು ನಿರ್ದಿಷ್ಟಪಡಿಸಿದರೆ, ಅದನ್ನು ಭೂಕಂದಾಯ ಬಾಕಿ ಎಂಬಂತೆ ವಸೂಲ ಮಾಡಲಾಗುವುದು. ಅಂದರೆ ಆದರಿಂದ ಪಾರಾಗಲು ಸಾಧ್ಯವಿಲ್ಲ. ಆಸ್ತಿ ಮಾರಿಸಿ ಹಣ ಪಡೆದುಕೊಳ್ಳುವ ಅಧಿಕಾರವುಂಟಾಗುವುದು.

## ೬೫. ಯೋಗ್ಯ ನೀರಿನ ಪೂರೈಕೆಮಾಡುವ ಅಧಿಕಾರ

(೧) ತನ್ನ ನಿಯಂತ್ರಣದಲ್ಲಿದ್ದ ಪ್ರದೇಶಕ್ಕೆ ಇಲ್ಲವೆ ಅದರ ಯಾವುದೇ ಭಾಗಕ್ಕೆ ಸಾರ್ವಜನಿಕ ಇಲ್ಲದೆ ಖಾಸಗಿ ಉದ್ದೇಶಗಳಿಗಾಗಿ ಶುದ್ಧ ಹಾಗೂ ಸಾಕಷ್ಟು ನೀರಿನ ಪೂರೈಕೆಯ ಸೌಕರ್ಯವನ್ನು ಒದಗಿಸುವುದಕ್ಕಾಗಿ, ಪಂಚಾಯತವು

(ಅ) ಕೆರೆಗಳನ್ನು ಇಲ್ಲವೆ ಭಾವಿಗಳನ್ನು ಕಟ್ಟಿಸಬಹುದು, ದುರಸ್ತಿಮಾಡಿಸ ಬಹುದು, ಮತ್ತು ಸುಸ್ಥಿತಿಯಲ್ಲಿಡಬಹುದು ಮತ್ತು ಹಳ್ಳ ಇಲ್ಲವೆ ಜಲಪ್ರವಾಹ ಗಳನ್ನು ಸ್ವಚ್ಛಮಾಡಿಸಬಹುದು.

(ಬ) ಯಾವುದೇ ಕೆರೆ, ಭಾವಿ, ಹಳ್ಳ, ಇಲ್ಲವೆ ಜಲಪ್ರವಾಹವನ್ನು ಇಲ್ಲವೆ ತನ್ನ ನಿಯಂತ್ರಣದಲ್ಲಿದ್ದ ಪ್ರದೇಶದ ಒಳಗೆ ಇಲ್ಲವೆ ಹೊರಗೆ ನೀರನ್ನು ತೆಗೆದು ಕೊಳ್ಳುವ ಇಲ್ಲವೆ ಸಾಗಿಸುವ ಹಕ್ಕನ್ನು ಮಾರಲಿಕ್ಕೆ ತೆಗೆದುಕೊಳ್ಳಬಹುದು, ಇಲ್ಲವೆ ಡಾನದ ಮೂಲಕ ಪಡೆಯಬಹುದು.

(ಕ) ಅದರ ಮಾಲಕನ ಸಮ್ಮತಿಯಿಂದ, ಯಾವುದೇ ಕೆರೆ, ಭಾವಿ, ಹಳ್ಳ ಇಲ್ಲವೆ ಜಲಪ್ರವಾಹವನ್ನು ಉಪಯೋಗಿಸಬಹುದು, ಸ್ವಚ್ಛಮಾಡಿಸಬಹುದು, ಇಲ್ಲವೆ ದುರಸ್ತಿಮಾಡಿಸಬಹುದು, ಇಲ್ಲವೆ ಅವುಗಳಿಂದ ನೀರನ್ನು ಪಡೆಯಲು ಸೌಕರ್ಯ ವನ್ನು ಒದಗಿಸಬಹುದು.

(ಡ) ನೀರಿನ ಪೂರೈಕೆಯ ಸಲುವಾಗಿ ಯಾವುದೇ ವ್ಯಕ್ತಿಯೊಡನೆ ಕರಾರು ಮಾಡಿಕೊಳ್ಳಬಹುದು.

(ಇ) ಈ ಕಲಮಿನ ಉದ್ದೇಶಗಳನ್ನು ಕಾರ್ಯಕಾರಿ ಮಾಡುವುದಕ್ಕೆ ಅವಶ್ಯಕವಾದ ಬೇರೆ ಯಾವುದೇ ಕಾರ್ಯವನ್ನು ಮಾಡಬಹುದು.

(೨) ಉಪಕಲಮು (೧) ರ ವಾಕ್ಯಾವಳಿ (ಅ) ಇಲ್ಲವೆ (ಬ) ಇಲ್ಲವೆ (ಕ) ದನ್ವಯವಾಗಿ ಯಾವುದರ ಸಂಬಂಧವಾಗಿ ಕ್ರಮ ಕೈಕೊಳ್ಳಲಾಗಿದೆಯೋ ಉಪ ಕಲಮು (೧) ರ ವಾಕ್ಯಾವಳಿ (ಕ) ದಲ್ಲಿ ಹೇಳಲಾದ ಮಾಲಕನು ಪಂಚಾಯತದ ಸಮ್ಮತಿಯಿಂದ ಕಾದಿರಿಸಿಕೊಂಡ ಯಾವುದೇ ಹಕ್ಕುಗಳಂಕಿತವಾಗಿ, ಯಾವುದೇ ಕೆರೆ, ಭಾವಿ, ಹಳ್ಳ, ಇಲ್ಲವೆ ಜಲಪ್ರವಾಹವನ್ನು ನೀರಿನ ಪೂರೈಕೆಗಾಗಿ ಪಂಚಾ ಯತವು ತನಗೆ ಯೋಗ್ಯ ಕಂಡಂತಹ ಸ್ಥಳಗಳಲ್ಲಿ ಆಜ್ಞೆಯನ್ನು ಪ್ರಕಟನೆ ಮಾಡಿ, ಸಾರ್ವಜನಿಕರಿಗಾಗಿ ಕುಡಿಯುವುದಕ್ಕೆ ಇಲ್ಲವೆ ಅಡಿಗೆ ಮಾಡುವುದಕ್ಕಾಗಿ ಪ್ರತ್ಯೇಕ ವಾಗಿಡಬಹುದು.

(೩) ಪಂಚಾಯತವು ತನಗೆ ಯೋಗ್ಯ ಕಂಡಂತಹ ಸ್ಥಳಗಳಲ್ಲಿ ಆಜ್ಞೆಯನ್ನು ಪ್ರಕಟನೆಮಾಡಿ,

(ಅ) ಉಪಕಲಮು (೨) ರನ್ವಯುವಾಗಿ ಕುಡಿಯ-ವುದಕ್ಕೆ ಇಲ್ಲವೆ ಅಡಿಗೆ ಮಾಡುವುದಕ್ಕೆ ಪ್ರತ್ಯೇಕವಾಗಿರಿಸಿದ್ದ ಯಾವುದೇ ಕೆರೆಯಲ್ಲಿ, ಭಾವಿಯಲ್ಲಿ, ಹಳ್ಳದಲ್ಲಿ ಇಲ್ಲವೆ ಜಲಪ್ರವಾಹದಲ್ಲಿ ಸ್ನಾನಮಾಡುವುದು ಅರಿವೆ ಒಗೆವುದು ಮತ್ತು ಪ್ರಾಣಿ ಗಳನ್ನು ತೊಳೆವುದು, ಇಲ್ಲವೆ ನೀರು ಕೆಡುವ ಸಂಭವವುಂಟಾಗುವ ಹಾಗೆ ಬೇರೆ ಯಾವುದೇ ಕಾರ್ಯವನ್ನು ನಿರ್ಬಂಧಿಸಬಹುದು; ಮತ್ತು

(ಬ) ರೋಗಾದಿಗಳ ಕಾಲಾವಧಿಯಲ್ಲಿ ಕುಡಿಯುವುದಕ್ಕೆ ಇಲ್ಲವೆ ಅಡಿಗೆ ಮಾಡುವುದಕ್ಕಾಗಿ ಇರುವ ಇಲ್ಲವೆ ಅರಿವೆ ಒಗೆಯುವದಕ್ಕೆ ಇರುವ ನೀರಿನ ಪೂರೈಕೆಯ ಯಾವುದೇ ಆಗರದ ಉಪಯೋಗವನ್ನು ನಿರ್ಬಂಧಿಸಬಹುದು.

**ವಿವೇಚನೆ**

ಕುಡಿಯುವ ನೀರಿನ ಪೂರೈಕೆ ಮಾಡುವುದು ಪಂಚಾಯತದ ಕರ್ತವ್ಯಗಳಲ್ಲಿ ಒಂದು. ಕುಡಿಯುವ ನೀರು ಇಲ್ಲವೆ ಅಡಿಗೆಯ ನೀರು ಶುದ್ಧವಾಗಿಯೂ ಸ್ವಚ್ಛವಾಗಿಯೂ ಇರಬೇಕು. ಅದಕ್ಕಾಗಿ ಅಂತಹ ನೀರಿನ ಪೂರೈಕೆಯ ಆಗರಗಳು ಪಂಚಾಯತದ ನಿಯಂತ್ರಣದಲ್ಲಿ ಇರಬೇಕಾಗುವುದು. ಪಂಚಾಯತವು ನಿಯಂತ್ರಣಕ್ಕಾಗಿ ಖರೀದಿ ಮಾಡಬಹುದು, ದಾನಪಡೆಯಬಹುದು ಇಲ್ಲವೆ ಬೇರೆ ಕರಾರು ಮಾಡಿಕೊಳ್ಳಬಹುದು. ಅಂತೂ ಪಂಚಾಯತವು ಸ್ವಾಧೀನ ಪಡೆದು ನೀರಿನ ಪೂರೈಕೆಯನ್ನು ಮಾಡಬಹುದು. ನೀರಿನ ಪೂರೈಕೆಯ ಆಗರವನ್ನು ಸ್ವಚ್ಛಮಾಡುವುದು ಒಂದು ಭಾಗ; ಸ್ವಚ್ಛ ಹಾಗೂ ಶುದ್ಧವಾಗಿ ಉಳಿಯುವಂತೆ ಮಾಡುವುದು ಇನ್ನೊಂದು ಭಾಗ. ಆದ್ದರಿಂದ ಕೆಲವು ನಿರ್ಬಂಧಗಳನ್ನು ಹಾಕುವ ಅಧಿಕಾರ ಪಂಚಾಯತಕ್ಕೆ ಇದೆ. ಈ ನಿರ್ಬಂಧಗಳನ್ನು ಪಂಚಾಯತವು ತನ್ನ ಆಜ್ಞೆಯ ಸ್ವರೂಪದಲ್ಲಿ ಹೊರಡಿಸಿ ತನಗೆ ಯೋಗ್ಯಕಂಡ ಸ್ಥಳಗಳಲ್ಲಿ ಪ್ರಕಟಿಸಬೇಕು. ಅಂದರೆ ಜನತೆಗೆ ತಿಳಿವಳಿಕೆ ಕೊಡಬೇಕು. ಜನರು ತಾವೇ ತಿಳಿಯಬೇಕಾದ ಸಂಗತಿಗಳಿದ್ದರೂ ತಿಳಿಸಬೇಕಾದುದು ಪಂಚಾಯತದ ಕರ್ತವ್ಯ.

## ೬೬. ನೀರಿನ ಪೂರೈಕೆಗಾಗಿ ಶರತುಗಳನ್ನು ಗೊತ್ತುಪಡಿಸುವ ಬಗ್ಗೆ ನಿಯಮಗಳನ್ನು ಮಾಡುವುದಕ್ಕೆ ಸರಕಾರದ ಅಧಿಕಾರ

ಈ ಸಂಬಂಧದಲ್ಲಿ ಸರಕಾರವು ಮಾಡಬಹುದಾದಂತಹ ನಿಯಮಗಳಿಗಂಕಿತವಾಗಿ ನೀರಿನ ಪೂರೈಕೆಯ ಉಗಮಗಳನ್ನು ಮತ್ತು ಸಾಧನಗಳನ್ನು ಮತ್ತು ಪಂಚಾಯತದ ಪ್ರಾದೇಶಿಕ ಮಿತಿಯ ಒಳಗೆ ಇಲ್ಲವೆ ಹೊರಗೆ ನೀರಿನ ವಿತರಣೆಯ ಉಪಕರಣಗಳನ್ನು ಭದ್ರವಾಗಿಡುವುದಕ್ಕೆ ಮತ್ತು ಅವುಗಳಿಗೆ ಆಗುವ ಅಪಾಯವನ್ನು ತಡೆಯುವುದಕ್ಕೆ ಮತ್ತು ನೀರಿನ ಪೂರೈಕೆ ಮತ್ತು ಉಪಯೋಗಕ್ಕೆ ಸಂಬಂಧವಾದ ಎಲ್ಲ ವಿಷಯಗಳನ್ನು ಕ್ರಮಪಡಿಸುವಬಗ್ಗೆ ಮತ್ತು ನೀರು ಬಿಡುವುದು ಇಲ್ಲವೆ ಬಂದು ಮಾಡುವುದು, ನೀರು ಹಾಳಾಗುವುದನ್ನು ತಡೆಯುವುದು, ಪಂಚಾಯತದ ನೀರಿನ ಆಗರವನ್ನು ಕಟ್ಟಿಸುವುದು. ಸುಸ್ಥಿತಿಯಲ್ಲಿ ಇಡುವುದು, ಮತ್ತು ನಿಯಂತ್ರಿಸುವುದು ಮತ್ತು ಅದರ ಸಂಬಂಧವಾದ ಪಾಯಿಪುಗಳು ಮತ್ತು ಜೋಡಣೆಗಳು ಅವು ಪಂಚಾಯತದ ಆಸ್ತಿಯಾಗಿರಲಿ ಬಿಡಲಿ ಪಂಚಾಯತವು ಅವುಗಳ ಸಂಬಂಧವಾಗಿ ಪೋಟ ನಿಯಮಗಳನ್ನು ಮಾಡಬಹುದು.

**ವಿವೇಚನೆ**

ನೀರಿನ ಪೂರೈಕೆಯು ಒಂದು ವ್ಯವಸ್ಥೆಯು. ಅದಕ್ಕೆ ಅನೇಕ ಅಂಗಗಳು. ವ್ಯವಸ್ಥೆಯ ಎಲ್ಲ ಅಂಗಗಳೂ ಪಂಚಾಯತದ ಪ್ರದೇಶದಲ್ಲಿಯೆ ಇರಲಿಕ್ಕಿಲ್ಲ. ಆದರೂ ಅವುಗಳ ಮೇಲೆ ಪಂಚಾಯತದ ನಿಯಂತ್ರಣ ಇರಬೇಕಾಗುವುದು. ಆದ್ದರಿಂದ ಪಂಚಾಯತವು ನೀರಿನ ಪೂರೈಕೆಯ ಸಂಬಂಧವಾದ ಎಲ್ಲ ವಿಷಯಗಳಿಗೆ ಸಂಬಂಧ ಪಟ್ಟ ಪೋಟ ನಿಯಮಗಳನ್ನು ಮಾಡಲು ಈ ಕಲಮಿನಲ್ಲಿ ಅಧಿಕಾರ ಕೊಟ್ಟಿದೆ. ಆದರೆ ಈ ಅಧಿಕಾರದಿಂದ ಮಾಡಲಾದ ಪೋಟ ನಿಯಮಗಳು ಈ ಸಂಬಂಧದಲ್ಲಿ ಸರಕಾರವು ಮಾಡಬಹುದಾದ ನಿಯಮಗಳ ಅಂಕಿತವಾಗಿರತಕ್ಕದ್ದು.

**೬೭. ಪ್ರವೇಶದ ಅಧಿಕಾರ**

ಈ ಕಾಯಿದೆಯ ಯಾವುದೇ ಉದ್ದೇಶಗಳಿಗಾಗಿ ಯಾವುದೇ ಕೆಲಸವನ್ನು ಮಾಡಲು ಇಲ್ಲವೆ ಯಾವುದೇ ರೀತಿಯ ಪರಿಶೀಲನೆ ನಡೆಸಲು, ಸಹಾಯಕರ ಇಲ್ಲವೆ ಕೆಲಸಗಾರರ ಸಹಿತ ಇಲ್ಲವೆ ಅವರಿಲ್ಲದೆ ಹಾಗೆಯೆ ಪಂಚಾಯತದ ಯಾವುದೇ ಸದಸ್ಯನು, ಅಧಿಕಾರಿಯು ಇಲ್ಲವೆ ಸೇವಕನು ಯಾವುದೇ ಕಟ್ಟಡದಲ್ಲಿ ಇಲ್ಲವೆ ಹೊಲ ದಲ್ಲಿ ಪ್ರವೇಶಿಸಬಹುದು.

ಆದರೆ,

(ಅ) ಸೂರ್ಯಾಸ್ತ ಹಾಗೂ ಸೂರ್ಯೋದಯದ ನಡುವೆ ಇಂತಹ ಪ್ರವೇಶ ಮಾಡತಕ್ಕದ್ದಲ್ಲ.

(ಬ) ಸ್ವಾಧೀನದಲ್ಲಿಟ್ಟುಕೊಂಡವನ ಸಮ್ಮತಿ ಇದ್ದ ಹೊರತು, ಯಾವುದೇ ವಾಸವಾಗಿರುವ ಮನೆಯು, ಚೇರಮನ್ನನ ಸಹಿಯಿಂದ ಇಲ್ಲವೆ ಈ ಸಂಬಂಧದಲ್ಲಿ ಯೋಗ್ಯವಾಗಿ ಅಧಿಕರಿಸಲ್ಪಟ್ಟ ವ್ಯಕ್ತಿಯ ಸಹಿಯಿಂದ ಯೋಗ್ಯ ರೀತಿಯಲ್ಲಿ ಪೂರ್ವಭಾವಿಯಾಗಿ ಹೀಗೆ ಪ್ರವೇಶ ಮಾಡುವುದಿದೆಯೆಂಬ ಉದ್ದೇಶವನ್ನು ತಿಳಿಸಿ ನೋಟೀಸು ಕೊಡದೆ, ಪ್ರವೇಶಿಸಲ್ಪಡತಕ್ಕದ್ದಲ್ಲ.

ಮತ್ತು

(ಕ) ಯಾವ ಆವಾರದಲ್ಲಿ ಪ್ರವೇಶಿಸಲಾಗುವುದೋ ಅಲ್ಲಿ ಪ್ರವೇಶಿಸುವಾಗ ಅಲ್ಲಿ ವಾಸವಾಗಿರುವವರ ಸಾಮಾಜಿಕ ಹಾಗೂ ಧಾರ್ಮಿಕ ಸಂಪ್ರದಾಯಗಳಿಗೆ ತಕ್ಕ ಗೌರವ ಕೊಡತಕ್ಕದ್ದು.

**ವಿವೇಚನೆ**

ಕಟ್ಟಡದಲ್ಲಿಯ ಸ್ವಚ್ಛತೆ-ಗಟಾರು ವ್ಯವಸ್ಥೆ ಭೂಮಿಯಲ್ಲಿಯ ತೆಗ್ಗು-ಗುಂಡಿ ಗಳ ಬಗ್ಗೆ ಪಂಚಾಯತಕ್ಕೆ ನಿಯಂತ್ರಣವಿದ್ದುದು ತಿಳಿದು ಬಂದಿದೆ. ಆದರೆ ಅದನ್ನು

ನೋಡಲು ಇಲ್ಲವೆ ಸ್ವಚ್ಛಮಾಡಿಸಲು ಅದರಲ್ಲಿ ಪ್ರವೇಶಮಾಡಬೇಕಾಗುತ್ತದೆ. ಆ ಪ್ರವೇಶದ ಅಧಿಕಾರವನ್ನು ಈ ಕಲಮು ಕೊಡುತ್ತದೆ. ಪಂಚಾಯತದ ಅಧಿಕಾರಿಗಳು ಪ್ರವೇಶಮಾಡಬಹುದು. ಆದರೆ ಇದಕ್ಕೆ ಮಿತಿಹಾಕಲಾಗಿದೆ. ಸೂರ್ಯಾಸ್ತವಾದ ನಂತರ–ತಿರುಗಿ ಮರುದಿನ ಸೂರ್ಯೋದಯವಾಗುವತನಕ ಪ್ರವೇಶದ ಅಧಿಕಾರ ವಿಲ್ಲ. ವಾಸವಾಗಿರುವ ಮನೆಯಲ್ಲಿ ಪ್ರವೇಶಮಾಡಬೇಕಾಗಿದ್ದರೆ ಮೊದಲು ನೋಟೀಸು ಕೊಡಬೇಕು. ಈ ನೋಟೀಸಿಗೆ ಚೇರಮನ್ ಇಲ್ಲವೆ ಅವನಿಂದ ಅಧಿ ಕರಿಸಲ್ಪಟ್ಟವನ ಸಹಿ ಇರಬೇಕು. ಯಾರಾದರೂ ಮನೆಯಲ್ಲಿ ಇಲ್ಲವೆ ಸ್ಥಳದಲ್ಲಿ ಪ್ರವೇಶಮಾಡುವಾಗ ಅಲ್ಲಿಯ ಸಾಮಾಜಿಕ ಮತ್ತು ಧಾರ್ಮಿಕ ಸಂಪ್ರದಾಯಗಳ ಬಗ್ಗೆ ಗೌರವದಿಂದ ನಡೆದುಕೊಳ್ಳತಕ್ಕದ್ದು. ಪ್ರವೇಶದ ಅಧಿಕಾರವಿದ್ದರೂ ಉಳಿದ ರೀತಿಯಲ್ಲಿ ಇನ್ನೊಬ್ಬರ ಅಧಿಕಾರದ ಉಲ್ಲಂಘನೆ ಮಾಡುವ ಅಧಿಕಾರ ಇಲ್ಲ ಎಂಬು ದನ್ನು ತಿಳಿಯಬೇಕು.

## ೭೮. ಪಟ್ಟಣ ಪಂಚಾಯತಗಳಿಗೆ ಹೆಚ್ಚಿನ ಅಧಿಕಾರ

ಈ ಪ್ರಕರಣದಲ್ಲಿ ಈ ಹಿಂದೆ ಹೇಳಿದ ಕಲಮುಗಳಲ್ಲಿಯ ಅಧಿಕಾರವನ್ನು ನಿರ್ವಹಿಸುವುದರ ಜತೆಗೆ, ಪ್ರತಿಯೊಂದು ಪಟ್ಟಣ ಪಂಚಾಯತವು ತನ್ನ ಅಧಿಕಾರ ಕ್ಷೇತ್ರ ಪ್ರದೇಶದಲ್ಲಿ ಕಲಮು ೧೪೭ ರಿಂದ ೧೫೫ (ಎರಡೂ ಸೇರಿ) ಗಳನ್ವಯವಾಗಿ ದಯಪಾಲಿಸಲಾದ ತಾಲೂಕ ಬೋರ್ಡ ಮತ್ತು ಮುಖ್ಯ ಕಾರ್ಯಾಧಿಕಾರಿ ಇವರ ಅಧಿಕಾರಗಳನ್ನು ನಿರ್ವಹಿಸತಕ್ಕದ್ದು, ಮತ್ತು ಆ ಕಲಮುಗಳಲ್ಲಿಯ ಮಾತುಗಳು ಪಟ್ಟಣ ಪಂಚಾಯತದ ಅಧಿಕಾರಕ್ಷೇತ್ರದಲ್ಲಿರುವ ಪ್ರದೇಶಕ್ಕೆ ಅವಶ್ಯಕವಾದ ಬದಲಾವಣೆಗಳೊಂದಿಗೆ ಅನ್ವಯಿಸತಕ್ಕದ್ದು. ಈ ಕಾಯಿದೆಯಲ್ಲಿ ಬೇರೆ ಏನೇ ಹೇಳಲಾಗಿದ್ದರೂ ತಾಲೂಕ ಬೋರ್ಡ ಮತ್ತು ಮುಖ್ಯ ಕಾರ್ಯಾಧಿಕಾರಿಯು ಮೇಲೆ ಹೇಳಿದ ಕಲಮುಗಳಲ್ಲಿಯ ಅಧಿಕಾರಗಳನ್ನು ಪಟ್ಟಣ ಪಂಚಾಯತದ ಪ್ರದೇಶದಲ್ಲಿ ನಡೆಸಲು ಸಮರ್ಥರಾಗಿರತಕ್ಕದ್ದಲ್ಲ.

### ವಿವೇಚನೆ

ಇದು ವರೆಗೆ ಪಂಚಾಯತದ ಅಧಿಕಾರಗಳನ್ನು ಹೇಳುವಾಗ ಗ್ರಾಮಪಂಚಾ ಯತವನ್ನು ಲಕ್ಷ್ಯದಲ್ಲಿಟ್ಟುಕೊಂಡು ಹೇಳಲಾಗಿತ್ತು. ಈ ಕಾಯಿದೆಯಲ್ಲಿ ಪಟ್ಟಣ ಪಂಚಾಯತವನ್ನೂ ರಚನೆ ಮಾಡಲಾಗಿದೆ. ಅದಕ್ಕೆ ಪ್ರತ್ಯೇಕ ವಾಗಿ ಕಲಮುಗಳನ್ನು ಹೇಳದೆ ಈ ಕಲಮಿನ ಮುಖಾಂತರ ಅದರ ಅಧಿಕಾರ ವ್ಯಾಪ್ತಿಯನ್ನು ವಿವರಿಸಲಾಗಿದೆ. ಈ ಪ್ರಕರಣದಲ್ಲಿ ಈ ಹಿಂದೆ ಹೇಳ ಲಾದ ಗ್ರಾಮಪಂಚಾಯತದ ಬಗ್ಗೆ ಇರುವ ಎಲ್ಲ ಅಧಿಕಾರಿಗಳೂ ಪಟ್ಟಣ

ಪಂಚಾಯತಕ್ಕೆ ಅನ್ವಯಿಸುವುವು. ಆದರೆ ಪಟ್ಟಣ ಪಂಚಾಯತವು ವ್ಯಾಪ್ತಿಯಲ್ಲಿ ಗಾತ್ರದಲ್ಲಿ ದೊಡ್ಡ ಪ್ರದೇಶವಾಗಿರುವುದರಿಂದ ಅದಕ್ಕೆ ಹೆಚ್ಚು ಅಧಿಕಾರಿಗಳ ಆವಶ್ಯಕತೆ ಇದೆ. ಹೆಚ್ಚಿನ ಅಧಿಕಾರಿಗಳನ್ನು ಕಲಮುಗಳು ೧೪೬ ರಿಂದ ೧೫೫-ಎರಡೂ ಸೇರಿ-ಹೇಳುತ್ತವೆ. ಈ ಕಲಮುಗಳು ತಾಲೂಕ ಬೋರ್ಡ ಮತ್ತು ಅದರ ಮುಖ್ಯ ಕಾರ್ಯಾಧಿಕಾರಿಗೆ ಸಂಬಂಧಪಟ್ಟಂತಹವು. ಆ ಎಲ್ಲ ಅಧಿಕಾರಿಗಳು ಈ ಕಲಮಿನ ಮೂಲಕ ಪಟ್ಟಣ ಪಂಚಾಯತಕ್ಕೆ ಬರುವುವು. ಹೀಗೆ ಏಕ ಕಾಲಕ್ಕೆ ಎರಡು ಸಂಸ್ಥೆಗಳಿಗೆ ಒಂದೇ ಬಗೆಯ ಅಧಿಕಾರ ಕೊಟ್ಟಂತಾಗುವುದೆಂಬ ಕಾರಣದಿಂದ ಯಾವ ತಾಲೂಕ ಬೋರ್ಡದ ಕ್ಷೇತ್ರದಲ್ಲಿ ಪಟ್ಟಣ ಪಂಚಾಯತವು ಬರುವುದೋ ಆ ತಾಲೂಕ ಬೋರ್ಡ ಮತ್ತು ಮುಖ್ಯ ಕಾರ್ಯಾಧಿಕಾರಿಯು ೧೪೬ ರಿಂದ ೧೫೫ರ ವರೆಗಿನ ಕಲಮುಗಳಲ್ಲಿ ಹೇಳಿದ ಅಧಿಕಾರಿಗಳನ್ನು ಆ ಪಟ್ಟಣ ಪಂಚಾಯತದ ಸಂಬಂಧವಾಗಿ ನಿರ್ವಹಿಸಲು ಸಮರ್ಥರಾಗಿಲ್ಲ ಎಂದು ಹೇಳಿದ್ದರಿಂದ ಪಟ್ಟಣ ಪಂಚಾಯತದ ಅಧಿಕಾರವು ಸ್ವತಂತ್ರವಾಗಿದೆ, ಎಂಬುದನ್ನು ಸೂಚಿಸಲಾಗಿದೆ. ಪಟ್ಟಣ ಪಂಚಾಯತದ ಪ್ರದೇಶವನ್ನು ಹೊರ್ತುಪಡಿಸಿ ಉಳಿದ ತಾಲೂಕ ಬೋರ್ಡದ ಪ್ರದೇಶಕ್ಕೆ ಆ ಕಲಮುಗಳಲ್ಲಿಯ ಅಧಿಕಾರವನ್ನು ತಾಲೂಕ ಬೋರ್ಡ ಮತ್ತು ಅದರ ಮುಖ್ಯ ಕಾರ್ಯಾಧಿಕಾರಿ ನಡೆಸಲು ಸಮರ್ಥರಾಗಿರುತ್ತಾರೆ. ಅಧಿಕಾರ ಹೇಳಿದ ಕಲಮುಗಳು ತಾಲೂಕ ಬೋರ್ಡದ ಹಾಗೂ ಮುಖ್ಯ ಅಧಿಕಾರಿಯ ಸಂಬಂಧವಾಗಿ ಇವೆ. ಆದರೆ ಅವುಗಳನ್ನು ಪಟ್ಟಣ ಪಂಚಾಯತಕ್ಕೆ ಅನ್ವಯಿಸುವಾಗ ಪಟ್ಟಣ ಪಂಚಾಯತಕ್ಕೆ ಹೊಂದಿಕೊಳ್ಳುವ ಹಾಗೆ ಆವಶ್ಯಕ ಬದಲಾವಣೆ ಸಹಿತ ಅರ್ಥಮಾಡಿಕೊಳ್ಳಬೇಕು.

## ಪ್ರಕರಣ ೪ : ಆಸ್ತಿ ಮತ್ತು ಆರ್ಥಿಕ ವ್ಯವಸ್ಥೆ

## ೬೯. ಪಂಚಾಯತದ ಆಸ್ತಿ

(೧) ಪಂಚಾಯತದೊಂದಿಗೆ ಹೊಂದಿಕೆ ಮಾಡಿಕೊಂಡು ಕಾಲಕಾಲಕ್ಕೆ ತಾಲೂಕ ಬೋರ್ಡದ ಅಂತರ್ಗತವಾಗಿದ್ದ ಆಸ್ತಿಯನ್ನು ಪಂಚಾಯತದ ಅಂತರ್ಗತ ಮಾಡುವುದಕ್ಕೆ ನಿರ್ದೇಶಿಸಲು ತಾಲೂಕಬೋರ್ಡ ಸಮರ್ಥವಾಗಿರತಕ್ಕದ್ದು. ಮತ್ತು ಇಂತಹ ನಿರ್ದೇಶನವು ಹೊರಡಿಸಲ್ಪಟ್ಟ ನಂತರ ಆ ಆಸ್ತಿಯು ೧೮೮೨ ರ ಆಸ್ತಿ ಹಸ್ತಾಂತರ ಕಾಯಿದೆ (ಟ್ರಾನ್ಸಫರ ಆಫ್ ಪ್ರಾಪರ್ಟಿ ಆ್ಯಕ್ಟ ೧೮೮೨) ಇಲ್ಲವೆ ೧೯೦೮ರ ಭಾರತದ ನೋಂದಣಿ ಕಾಯಿದೆ (ಇಂಡಿಯನ್ ರಜಿಸ್ಟ್ರೇಷನ್ ಆ್ಯಕ್ಟ ೧೯೦೮) ರಲ್ಲಿ ಏನೇ ಹೇಳಲಾಗಿದ್ದರೂ ಪಂಚಾಯತದ ಅಂತರ್ಗತವಾಗಿರತಕ್ಕದ್ದು.

ಆದರೆ ಪಂಚಾಯತವು ಇಂತಹ ಸ್ಥಾವರ ಆಸ್ತಿಯ ಯಾವುದೇ ಬಾಡಿಗೆ ಮಾರಾಟ ಇಲ್ಲವೆ ಇತರ ಹಸ್ತಾಂತರವು ತಾಲೂಕ ಬೋರ್ಡಿನ ಪೂರ್ವಸಮ್ಮತಿ ಇಲ್ಲದಿದ್ದರೆ ಅದು ಕಾಯಿದೆಬದ್ಧವಲ್ಲ.

(೨) ಪಂಚಾಯತ ನಿಧಿಯಿಂದ ಕಟ್ಟಿಸಲ್ಪಟ್ಟ ಪ್ರತಿಯೊಂದು ರಚನೆಯು ಇಂತಹ ಪಂಚಾಯತದ ಅಂತರ್ಗತವಾಗಿರತಕ್ಕದ್ದು.

**ವಿವೇಚನೆ**

ತಾಲೂಕಬೋರ್ಡು ತನ್ನ ಅಧಿಕಾರದಲ್ಲಿದ್ದ ಆಸ್ತಿಯನ್ನು ಪಂಚಾಯತದ ಹೊಂದಿಕೆಯೊಡನೆ ಆದಕ್ಕೆ ಕಾಲಕಾಲಕ್ಕೆ ಹಸ್ತಾಂತರಿಸಬಹುದು, ಈ ಹಸ್ತಾಂತರವು ಆಗುವ ಮೊದಲು ತಾಲೂಕಬೋರ್ಡು ಒಂದು ನಿರ್ದೇಶನವನ್ನು ಹೊರಡಿಸತಕ್ಕದ್ದು ಈ ನಿರ್ದೇಶನವು ಕಾಯದೇಶೀರ ಹಸ್ತಾಂತರಕ್ಕೆ ಆಧಾರವಾದ ಪತ್ರವಿದ್ದಂತೆ. ಅದೂ ಈ ಕಲಮಿನ ಅಧಿಕಾರದ ಮೂಲಕ ಕಾಯಿದೆಬದ್ಧ ಹಸ್ತಾಂತರವಾಗುವುದು. ಏಕೆಂದರೆ ಸಾಮಾನ್ಯವಾಗಿ ಸ್ಥಾವರ ಆಸ್ತಿಗಳು ಹಸ್ತಾಂತರಿಸಲ್ಪಡಬೇಕಾದಾಗ ಆಸ್ತಿ ಹಸ್ತಾಂತರ ಕಾಯಿದೆ ಮತ್ತು ನೊಂದಣಿ ಕಾಯಿದೆಯಂತೆ ಆಗಬೇಕಾಗುವುದು. ಆದರೆ ತಾಲೂಕಬೋರ್ಡು ಪಂಚಾಯತಕ್ಕೆ ಆಸ್ತಿಹಸ್ತಾಂತರಿಸಲು ಮೇಲೆ ಹೇಳಿದ ಆ ಎರಡು ಕಾಯಿದೆಗಳು ನಿರ್ಬಂಧಿಸುವುದಿಲ್ಲ.

ತಾಲೂಕಬೋರ್ಡು ಹಸ್ತಾಂತರಿಸಿದ ಮೇಲೆ ಪಂಚಾಯತದ ಆಸ್ತಿಯಾಗಿರುವ ಸ್ಥಾವರ ಆಸ್ತಿಯನ್ನು ಬಾಡಿಗೆ ಕೊಡಬೇಕಾದರೆ ಖರೀದಿಗೆ ಕೊಡಬೇಕಾದರೆ ಇಲ್ಲವೆ ಬೇರೆ ರೀತಿಯಲ್ಲಿ ಹಸ್ತಾಂತರಿಸಬೇಕಾದರೆ ಪಂಚಾಯತವು ತಾಲೂಕಬೋರ್ಡದ ಪೂರ್ವಸಮ್ಮತಿ ಪಡೆಯಬೇಕು. ಪೂರ್ವಸಮ್ಮತಿಯಿಲ್ಲದೆ ಮಾಡಿದ ವ್ಯವಹಾರವು ಕಾಯಿದೆಬದ್ಧವಲ್ಲ.

ಆದರೆ ಪಂಚಾಯತ ಫಂಡದಿಂದ ಮಾಡಿದ ರಚನೆಗಳು ಮಾತ್ರ ಪಂಚಾಯತದ ಪೂರ್ಣ ಸ್ವಾಮಿತ್ವದ ಆಸ್ತಿಗಳು ಎಂದು ತಿಳಿಯತಕ್ಕದ್ದು.

## ೭೦. ಪಂಚಾಯತದ ಪರವಾಗಿ ಇಲ್ಲವೆ ವಿರುದ್ಧವಾಗಿ ಇದ್ದ ಆಸ್ತಿಗಳ ಹಕ್ಕುಗಳ ಬಗ್ಗೆ ನಿರ್ಣಯ

(೧) ಸಾಮಾನ್ಯವಾಗಿ ಒಕ್ಕಲುತನಕ್ಕಾಗಿ ಉಪಯೋಗಿಸಲಾದ ಭೂಮಿಗಳನ್ನು ಬಿಟ್ಟು ಇತರ ಭೂಮಿಗಳ ಸಂಬಂಧವಾಗಿ ಯಾವುದೇ ಗ್ರಾಮದಲ್ಲಿ ಸರ್ವೇ ಯೋಜನೆಯು ಆ ಕಾಲಕ್ಕೆ ಜಾರಿಯಲ್ಲಿದ್ದ ಯಾವುದೇ ಕಾಯಿದೆಯಿಂದ ಹತ್ತಿದೆ ಇಲ್ಲವೆ ಹಚ್ಚಲ್ಪಡುವುದದೆ ಆ ಗ್ರಾಮದಲ್ಲಿಯ ಯಾವುದೇ ಆಸ್ತಿ ಇಲ್ಲವೆ ಯಾವುದೇ ಆಸ್ತಿಯಲ್ಲಿ ಇಲ್ಲವೆ ಅದರ ಬಗ್ಗೆ ಯಾವುದೇ ಹಕ್ಕು ಪಂಚಾಯತದ ಪರವಾಗಿ ಇಲ್ಲವೆ ಪಂಚಾಯತದಿಂದ ಇಲ್ಲವೆ ಪಂಚಾಯತದ ವಿರುದ್ಧವಾಗಿ ಯಾವುದೇ ವ್ಯಕ್ತಿಯಿಂದ ಮಂಡಿಸಲ್ಪಟ್ಟಾಗ ಯೋಗ್ಯ ನೋಟೀಸು ಕೊಡಲ್ಪಟ್ಟ ಮೇಲೆ ಡೆಪ್ಯೂಟಿ

ಕಮಿಶನರನು ವಿಚಾರಣೆಯನ್ನು ನಡೆಸುವುದು ಆ ಬಗ್ಗೆ ಹುಕುಂ ಮಾಡುವುದು ಕಾಯಿದೆಬದ್ಧವಾಗುವುದು.

(೨) ಉಪಕಲಮು (೧) ರನ್ವಯವಾಗಿ ಡೆಪ್ಯೂಟಿ ಕಮಿಶನರನಿಂದ ಮಾಡಲ್ಪಟ್ಟ ಯಾವುದೇ ಹುಕುಮಿನ ತಾರೀಖಿನಿಂದ ಒಂದು ವರುಷದ ನಂತರ ಯಾವುದೇ ದಿವಾಣಿ ನ್ಯಾಯಾಲಯದಲ್ಲಿ ಯಾವುದೇ ದಾವೆಯು ಮಾಡಲ್ಪಟ್ಟಾಗ ಇಲ್ಲವೆ ಇಂತಹ ಹುಕುಮಿನ ಮೇಲೆ ಗೊತ್ತು ಮಾಡಿದ ಕಾಲಾವಧಿಯ ಒಳಗೆ ಯಾವುದಾದರೂ ಅಪೀಲು ಮಾಡಲ್ಪಟ್ಟಿದ್ದರೆ, ಆಗ ಅಪೀಲಾಧಿಕಾರಿಯು ಮಾಡಿದ ಯಾವುದೇ ಹುಕುಮಿನ ತಾರೀಖಿನಿಂದ ( ಆ ದಾವೆಯಲ್ಲಿ ಕಾಲಮಿತಿಯ ಬಗ್ಗೆ ತಕರಾರು ತೆಗೆದುಕೊಳ್ಳಲ್ಪಡದೆ ಇದ್ದರೂ ) ಆ ದಾವೆಯು ಅಂತಹ ಹುಕುಮನ್ನು ರದ್ದು ಮಾಡುವುದರ ಸಲುವಾಗಿ ತರಲ್ಪಟ್ಟಿದ್ದರೆ ಇಲ್ಲವೆ, ದಾವೆಯಲ್ಲಿಯ ಮಾಗಣಿಯು ಆ ಹುಕುಮಿಗೆ ಅಸಂಗತವಾಗುತ್ತಿದ್ದರೆ, ಆ ಹುಕುಮಿನ ಬಗ್ಗೆ ಯೋಗ್ಯ ನೋಟೀಸು ವಾದಿಯಿಂದ ಸ್ವೀಕರಿಸಲ್ಪಟ್ಟಿದ್ದರೆ, ದಾವೆಯನ್ನು ಕಿತ್ತಿಹಾಕತಕ್ಕದ್ದು.

(೩) ಈ ಕಲಮಿನನ್ವಯವಾಗಿದ್ದ ಯಾವುದೇ ವಿಚಾರಣೆ ಇಲ್ಲವೆ ನೋಟೀಸು ಗೊತ್ತುಮಾಡಿದ ರೀತಿಯಲ್ಲಿ ಕೊಡಲ್ಪಟ್ಟಿದ್ದರೆ ಯಾವುದೇ ವ್ಯಕ್ತಿಗೆ ಅದು ಯೋಗ್ಯ ನೋಟೀಸು ಆಗಿದೆಯೆಂದು ಗಣಿಸಲ್ಪಡಲಾಗುವುದು.

## ವಿವೇಚನೆ

ಗ್ರಾಮದಲ್ಲಿಯ ಭೂಮಿಗಳ ಸರ್ವೆ ಆಗಿರುವುದುಂಟು. ಈ ಭೂಮಿಗಳಲ್ಲಿ ಒಕ್ಕಲುತನ ಭೂಮಿಗಳೂ ಒಕ್ಕಲತನಕ್ಕಾಗಿ ಇರದೆ ಇರುವ ಭೂಮಿಗಳೂ ಇರುತ್ತವೆ. ಒಕ್ಕಲುತನಕ್ಕಾಗಿ ಇರದೆ ಇರುವ ಭೂಮಿಗಳ ಬಗ್ಗೆ ಪಂಚಾಯತದ ಪರವಾಗಿ ಇಲ್ಲವೆ ಪಂಚಾಯತದ ವಿರುದ್ಧವಾಗಿ ಯಾವುದೇ ಹಕ್ಕು ಮಾಗಣಿ ಮಾಡಲ್ಪಟ್ಟರೆ ಆ ಬಗ್ಗೆ ಡೆಪ್ಯೂಟಿ ಕಮಿಶನರು ಸಂಬಂಧಪಟ್ಟವರಿಗೆ ನೋಟೀಸು ಕೊಟ್ಟು ವಿಚಾರಣೆ ಮಾಡಬೇಕು. ಮತ್ತು ಆ ಮಾಗಣಿಯ ಬಗ್ಗೆ ನಿರ್ಣಯ ಕೊಡಬೇಕು. ಈ ಅಧಿಕಾರ ಡೆಪ್ಯೂಟಿ ಕಮಿಶನರನಿಗೆ ಈ ಕಲಮಿನ ಮೂಲಕ ಕೊಡಲಾಗಿದೆ.

ಡೆಪ್ಯೂಟಿ ಕಮಿಶನರು ಮೇಲೆ ಹೇಳಿದಂತೆ ಹುಕುಂ ಮಾಡಿದ್ದರ ವಿರುದ್ಧ ಆ ಮಾಗಣಿಯ ಬಗ್ಗೆ ದಾವೆ ಮಾಡಲಾಗಿದ್ದರೆ, ಆ ದಾವೆಯು ಆ ಹುಕುಮು ಮಾಡಿದ ತಾರೀಖಿನಿಂದ ಒಂದು ವರುಷದ ನಂತರ ಮಾಡಲ್ಪಟ್ಟಿದ್ದರೆ, ಆ ದಾವೆಯನ್ನು ಕಿತ್ತಿ ಹಾಕಬೇಕು. ಕಾಲಾವಧಿ ಮೀರದೆ ಇದ್ದ ಅವಧಿಯಲ್ಲಿ ಆ ಹುಕುಮಿನ ವಿರುದ್ಧ ಅಪೀಲು ಮಾಡಲ್ಪಟ್ಟಿದ್ದರೆ, ಅಪಿಲಾಧಿಕಾರಿಯು ಕೊಟ್ಟ ನಿರ್ಣಯದ ತಾರೀಖಿನಿಂದ ಆ ದಾವೆಯನ್ನು ಕಿತ್ತಿ ಹಾಕಬೇಕು. ಅಪೀಲಿನಲ್ಲಿ ಕಾಲ

ಮಿತಿಯ ಬಾಧೆಯ ಬಗ್ಗೆ ತಕರಾರು ತೆಗೆದುಕೊಂಡಿರಬೇಕೆಂದು ಇಲ್ಲ. ಆದರೆ ಕಿತ್ತಿ ಹಾಕಲ್ಪಡುವ ದಾವೆಯು ಡೆಪ್ಯೂಟಿ ಕಮಿಶನರರ ಹುಕುಮನ್ನು ರದ್ದು ಮಾಡಲಿಕ್ಕೆಂದು ಇದ್ದರೆ, ಇಲ್ಲವೆ ಆ ಹುಕುಮಿಗೆ ಅಸಂಗತವಾಗುವ ಹಾಗೆ ಮಾಗಣಿ ಇದ್ದರೆ, ವಾದಿಗೆ ಯೋಗ್ಯ ನೋಟೀಸು ಕೊಟ್ಟು ಕಿತ್ತಿ ಹಾಕಬೇಕು. ಇವರಲ್ಲಿ ಹೇಳಲಾದ ನೋಟೀಸನ್ನು ಗೊತ್ತು ಮಾಡಿದ ರೀತಿಯಲ್ಲಿ ಕೊಟ್ಟಿದ್ದರೆ ಅದು ಯೋಗ್ಯ ನೋಟೀಸು ಆಯಿತೆಂದು ತಿಳಿಯಬೇಕು.

ಅಂದರೆ ಸರ್ವೆ ಆದ, ಒಕ್ಕಲುತನಕ್ಕಾಗಿ ಅಲ್ಲದ ಭೂಮಿಯ ಬಗ್ಗೆ ತಂಟೆ ಇರಬೇಕು. ಆ ಭೂಮಿಯ ಬಗ್ಗೆ ಪಂಚಾಯತವು ಇಲ್ಲವೆ ಅದರ ವಿರುದ್ಧ ಬೇರೆ ವ್ಯಕ್ತಿಯು ಹಕ್ಕಿನ ಮಾಗಣಿ ಮಾಡಿರಬೇಕು. ಈ ತಕರಾರನ್ನು ಚೌಕಶಿ ಮಾಡುವ ಅಧಿಕಾರ ಡೆಪ್ಯೂಟಿ ಕಮಿಶನರರಿಗೆ ಇದೆ. ಅಲ್ಲದೆ ಅವನ ಹುಕುಮಿನ ವಿರುದ್ಧ ಅಪೀಲು ಇದೆ. ಅಲ್ಲದೆ ಬೇರೆ ದಿವಾಣಿ ನ್ಯಾಯಾಲಯದಲ್ಲಿ ದಾವೆ ಮಾಡಲು ಅಧಿಕಾರ ಇದೆ. ಎಂದು ಈ ಕಲಮು ಹೇಳುತ್ತದಲ್ಲದೆ ದಾವೆಯು ಮಾಡಲ್ಪಟ್ಟ ತಾರೀಖು ಮತ್ತು ಮಾಡಿದ ಮಾಗಣಿ ಇವುಗಳ ಮೇಲೆ ಆ ದಿವಾಣಿ ನ್ಯಾಯಾಲಯವು ಅದನ್ನು ಯಾವ ಕಾರಣದಿಂದ ಕಿತ್ತಿ ಹಾಕಬೇಕೆಂಬ ಬಗೆ ಹೇಳಲಾಗಿದೆ. ಕಾಲಮಿತಿಯ ಬಗ್ಗೆ ಲಕ್ಷ್ಯವಹಿಸಬೇಕು, ಎಂಬುದನ್ನು ಸೂಚಿಸಲಾಗಿದೆ.

## ೭೧. ಪಂಚಾಯತದ ನಿಧಿ

(೧) ಒಂದೊಂದು ಪಂಚಾಯತಕ್ಕೆ ಪಂಚಾಯತ ನಿಧಿ ಎಂಬ ಹೆಸರಿನಿಂದ ಒಂದು ನಿಧಿ ಇರತಕ್ಕದ್ದು.

(೨) ಈ ಕೆಳಗೆ ಕಾಣಿಸಿದ್ದು ಇಲ್ಲವೆ ಈ ಕೆಳಗೆ ಕಾಣಿಸಿದಂತೆ ಪಂಚಾಯತ ನಿಧಿಯ ಭಾಗವಾಗಿರತಕ್ಕದ್ದು. ಇಲ್ಲವೆ ಅದಕ್ಕೆ ಜಮಾ ಮಾಡತಕ್ಕದ್ದು.

(ಅ) ಈ ಕಾಯಿದೆಯ ಇಲ್ಲವೆ ಬೇರೆ ಯಾವುದೇ ಕಾಯಿದೆಯ ಕಕ್ಷೆಗಳಿಗಂಕಿತವಾಗಿ ಸರಕಾರವು ಪಂಚಾಯತ ನಿಧಿಗಾಗಿ ಎಂದು ಕೊಟ್ಟ ಹಣವು.

(ಬ) ಪಂಚಾಯತವು ಹಾಕಿದ ಯಾವುದೇ ಕರದ ವಸೂಲಿಯ ಹಣವು.

(ಕ) ಪಂಚಾಯತ ನಿಧಿಯಲ್ಲಿ ಜಮಾ ಮಾಡಬೇಕೆಂದು ನ್ಯಾಯಾಲಯದ ಹುಕುಮು ಮಾಡಿದ ಎಲ್ಲ ರಕಮುಗಳು.

(ಡ) ಪಂಚಾಯತದ ಸೇವಕರು ಕೂಡಿಹಾಕಿದ ಎಲ್ಲತರದ ಕಸ, ಹೊಲಸು ಶಗಣಿ, ಇಲ್ಲವೆ ಕೊಳೆ (ಪ್ರಾಣಿಗಳ ಸತ್ತ ದೇಹಗಳನ್ನು ಒಳಗೊಂಡು) ಇವುಗಳನ್ನು

ಮಾರಾಟಮಾಡಿದ್ದರ ಬಾಬತ್ತು— ಇದರಲ್ಲಿ ಯಾವುದೇ ವ್ಯಕ್ತಿಯು ಇಡಿಯಾಗಿ ಇಲ್ಲವೆ ಭಾಗವಾಗಿ ಪಡೆಯಲು ಬಾಧ್ಯಸ್ಥನಾಗಿದ್ದುದನ್ನು ಹೊರತುಪಡಿಸಿ ಉಳಿದ ಯಾವತ್ತು ಹಣ.

(ಇ) ಸರಕಾರದಿಂದ ಇಲ್ಲವೆ ತಾಲೂಕಬೋರ್ಡದಿಂದ ಪಂಚಾಯತ ನಿಧಿಗಾಗಿ ಕೊಡಲ್ಪಟ್ಟ ವಂತಿಗೆ ಹಣ.

(ಫ) ಸರಕಾರದಿಂದ ಇಲ್ಲವೆ ತಾಲೂಕಬೋರ್ಡದಿಂದ ಇಲ್ಲವೆ ಬೇರೆ ಯಾವುದೇ ಅಧಿಕಾರದಿಂದ ಇಲ್ಲವೆ ವ್ಯಕ್ತಿಯಿಂದ ಸಾಲದ ರೂಪದಲ್ಲಿ ಇಲ್ಲವೆ ವಂತಿಗೆಯ ರೂಪದಲ್ಲಿ ಬಂದ ಎಲ್ಲ ಹಣ ಇಲ್ಲವೆ ದಾನರೂಪದಲ್ಲಿ ಬಂದ ಎಲ್ಲ ಹಣವು.

(ಗ) ಪಂಚಾಯತದ ಅಂತರ್ಗತವಾಗಿರುವ ಯಾವುದೇ ಆಸ್ತಿಯಿಂದ ಬರುವ ಉತ್ಪನ್ನ ಇಲ್ಲವೆ ಆಸ್ತಿಯ ಮೂಲಕ ಬರುವ ಹಣ; ಮತ್ತು,

(ಹ) ಸರಕಾರದ ಪೂರ್ವ ಸಮ್ಮತಿಯಿಂದ ಪಂಚಾಯತದಿಂದ ಎತ್ತಲಾದ ಸಾಲದಿಂದ ಬಂದ ಹಣವು.

## ವಿವೇಚನೆ

ಪಂಚಾಯತ ನಿಧಿಯೆಂದು ಒಂದು ಹೆಸರು ಇದ್ದ ನಿಧಿಯು ಪ್ರತಿ ಒಂದು ಪಂಚಾಯತಕ್ಕೆ ಇರತಕ್ಕದ್ದು. ಆದರೆ ಅದರಲ್ಲಿ ಸಮಾವೇಶವಾಗುವ ಹಣದ ಉಗಮ ರೀತಿ ಯಾವುದು ಎಂಬುದನ್ನು ಇದರಲ್ಲಿ ಹೇಳಿದೆ. ಈ ಒಂದೊಂದು ಇಲ್ಲವೆ ಎಲ್ಲ ರೀತಿಯಲ್ಲಿ ಬಂದ ಹಣವೂ ಪಂಚಾಯತ ನಿಧಿಯಲ್ಲಿ ಸೇರ್ಪಡೆಯಾಗುವುದು.

## ೭೨. ಪಂಚಾಯತ ನಿಧಿಯ ವಿನಿಯೋಗ

ಈ ಕಾಯಿದೆಯನ್ವಯವಾಗಿ ಪಂಚಾಯತದ ಅಂತರ್ಗತವಾಗಿದ್ದ ಎಲ್ಲ ಆಸ್ತಿಯು ಮತ್ತು ಈ ಕಾಯಿದೆಯ ಕಕ್ಷೆಗಳಿಗನುಸಾರವಾಗಿ ಅದರಿಂದ ಸ್ವೀಕರಿಸಲ್ಪಟ್ಟ ಎಲ್ಲ ನಿಧಿಗಳು, ಮತ್ತು ಆ ಕಾಲಕ್ಕೆ ಜಾರಿಯಲ್ಲಿರುವ ಯಾವುದೇ ಕಾಯಿದೆಯ ಕಕ್ಷೆಗಳನ್ವಯವಾಗಿ ಅದರ ಅಧಿಕಾರಕ್ಕೆ ಬರುತ್ತಿರುವ ಎಲ್ಲ ರಕಮುಗಳು ಈ ಕಾಯಿದೆಯ ಕಕ್ಷೆಗಳಿಗಂಕಿತವಾಗಿ ಮತ್ತು ಅದರ ಉದ್ದೇಶಗಳಿಗಾಗಿ ವಿನಿಯೋಗಿಸಲ್ಪಡತಕ್ಕದ್ದು. ಮತ್ತು ಇಂತಹ ಎಲ್ಲ ನಿಧಿಗಳು ಮತ್ತು ರಕಮುಗಳು ಡೆಪ್ಯೂಟಿ ಕಮಿಶನರನಿಂದ ಒಪ್ಪಿತವಾದ ಸರಕಾರದ ಸೇವಿಂಗ್ಸ ಬ್ಯಾಂಕಿನಲ್ಲಿ ಇಲ್ಲವೆ ಪೋಸ್ಟದ ಸೇವಿಂಗ್ಸ ಬ್ಯಾಂಕಿನಲ್ಲಿ ಇಲ್ಲವೆ ಶಿಡ್ಯೂಲ್ಡ ಬ್ಯಾಂಕಿನಲ್ಲಿ ಇಲ್ಲವೆ ರಾಜ್ಯದಲ್ಲಿಯ ಸಹಕಾರಿ ಬ್ಯಾಂಕಿನಲ್ಲಿ ಠೇವಾಗಿ ಇಡತಕ್ಕದ್ದು.

**ವಿವೇಚನೆ**

ಪಂಚಾಯತದ ಎಲ್ಲ ಆಸ್ತಿ, ಎಲ್ಲ ಹಣ, ಎಲ್ಲ ನಿಧಿಯು ಈ ಕಾಯಿದೆಯ ಉದ್ದೇಶಗಳಿಗಾಗಿ ಉಪಯೋಗವಾಗತಕ್ಕದ್ದು. ಉಪಯೋಗವನ್ನು ಈ ಕಾಯಿದೆ ಹೇಳುವಂತೆ ಮಾಡತಕ್ಕದ್ದು. ಮತ್ತು ಪಂಚಾಯತದ ಹತ್ತಿರ ಇದ್ದ ಹಣವು ಯಾವುದೊಂದು ಬ್ಯಾಂಕಿನಲ್ಲಿ ಠೇವು ಇಡಲ್ಪಡತಕ್ಕದ್ದು. ಆ ಬ್ಯಾಂಕು ಯಾವುದೆಂಬುವನ್ನು ಹೇಳಿದೆಯಲ್ಲದೆ ಅಲ್ಲಿ ಠೇವು ಇಡುವುದಕ್ಕೆ ಮೊದಲು ಆ ಬ್ಯಾಂಕಿನ ಬಗ್ಗೆ ಡೆಪ್ಯೂಟಿ ಕಮಿಶನರ ಒಪ್ಪಿಗೆ ಪಡೆಯತಕ್ಕದ್ದು ಅಂದರೆ ಹಣವು ಒಂದು ನಿರ್ದಿಷ್ಟವಾದ ಬ್ಯಾಂಕಿನಲ್ಲಿ ಠೇವಾಗಿ ಇಡಲ್ಪಡಬೇಕು. ಮತ್ತು ಬ್ಯಾಂಕು ನಿರ್ದಿಷ್ಟವಾಗಲಿಕ್ಕೆ ಡೆಪ್ಯೂಟಿ ಕಮಿಶನರನ ಒಪ್ಪಿಗೆ ಬೇಕು. ಸಾರ್ವಜನಿಕ ಹಣದ ಭದ್ರತೆಗಾಗಿ ಈ ಕರಾರು ಹಾಕಿದ್ದಾರೆ.

## ೭೩. ಕರ ತೆರಿಗೆಗಳು ಮತ್ತು ಕೆಲವೊಂದು ರೀತಿಯ ಫೀ

(೧) ಪ್ರತಿಯೊಂದು ಪಂಚಾಯತವು ಗೊತ್ತು ಮಾಡಬಹುದಾದಂತಹ ವಿನಾಯತಿಗಳಂಕಿತವಾಗಿ ಮತ್ತು ದರಗಳ ಪ್ರಕಾರ, ಕೋಷ್ಟಕ ೧ ರಲ್ಲಿ ನಿರ್ದಿಷ್ಟ ಪಡಿಸಿದ ದರಗಳ ಮೇಲ್ಮಿತಿಯನ್ನು ಮೀರದಂತಹ ರೀತಿಯಲ್ಲಿ ಕರ ಹಾಕತಕ್ಕದ್ದು.

(ಅ) ಗ್ರಾಮದ ಪ್ರಾದೇಶಿಕ ಪರಿಮಿತಿಯಲ್ಲಿ ಯಾವ ಭೂಮಿಗಳು ಒಕ್ಕಲುತನ ಕಂದಾಯವನ್ನು ಕೊಡುವ ಭಾರವನ್ನು ಹೊಂದಿಲ್ಲವೊ ಅಂತಹ ಭೂಮಿಗಳ ಮೇಲೆ ಮತ್ತು ಒಕ್ಕಲುತನ ಕಂದಾಯ ಕೊಡಬೇಕಾಗಲಿ ಇಲ್ಲವೆ ಇಲ್ಲದಿರಲಿ, ಅಂತಹ ಭೂಮಿಗಳ ಮೇಲೆ ಇರುವ ಕಟ್ಟಡಗಳ ಮೇಲೆ ಕರ ಹಾಕತಕ್ಕದ್ದು.

(ಬ) ಧಂದೆಗಳು, ವ್ಯಾಪಾರಗಳು, ಉದ್ಯೋಗಗಳು ಮತ್ತು ನೌಕರಿಗಳ ಮೇಲೆ ಕರ ಹಾಕತಕ್ಕದ್ದು.

(ಕ) ಯಾವ ಸ್ಥಳದಲ್ಲಿ ಲಾಭದ ಉದ್ದೇಶಗಳಿಗಾಗಿ ವ್ಯಾಪಾರ ಇಲ್ಲವೆ ವ್ಯವಹಾರ ನಡೆಸಲ್ಪಡುವುದೋ ಅಂತಹ ಸ್ಥಳಗಳ ಮೇಲೆ ಈ ವ್ಯಾಪಾರ-ವ್ಯವಹಾರಗಳಲ್ಲಿ ತೊಡಗಿದ ವ್ಯಕ್ತಿ ಇಲ್ಲವೆ ವ್ಯಕ್ತಿಗಳಿಂದ ಸಂದಾಯವಾಗುವಂತಹ ಕರ ಹಾಕತಕ್ಕದ್ದು.

ಆದರೆ, ಎಲ್ಲಿ ಪಂಚಾಯತವು ವಾಕ್ಯಾವಳಿ (ಕ) ದ ಪ್ರಕಾರ ಕರ ಹಾಕಬೇಕೆಂದು ನಿರ್ಣಯಿಸುವುದೋ ಅಲ್ಲಿ ಕರವನ್ನು ಕೊಡುವಂತಹ ವ್ಯಕ್ತಿ ಇಲ್ಲವೆ ವ್ಯಕ್ತಿಗಳು ವಾಕ್ಯಾವಳಿ (ಬ) ದನ್ವಯವಾಗಿ ಕೊಡಬೇಕಾದ ಕರವನ್ನು

ಇಂತಹ ಸ್ಥಳದಲ್ಲಿ ನಡೆಸಿದ ವ್ಯಾಪಾರ ಇಲ್ಲವೆ ವ್ಯವಹಾರದ ಸಂಬಂಧವಾಗಿ ವಿನಾಯತಿಯನ್ನು ಪಡೆದಿರುವರು.

(೨) ಒಂದು ಕಟ್ಟಡದ ಇಲ್ಲವೆ ಭೂಮಿಯ ಮಾಲಕನು ಗ್ರಾಮವನ್ನು ಬಿಟ್ಟು ಹೋಗಿರುವನೋ ಇಲ್ಲವೆ ಇತರ ರೀತಿಯಲ್ಲಿ ಹುಡುಕಿದರೆ ಪತ್ತೆ ಹತ್ತುವದಿಲ್ಲವೋ ಅಂತಹ ಸಂದರ್ಭದಲ್ಲಿ ಅಂತಹ ಕಟ್ಟಡ ಇಲ್ಲವೆ ಭೂಮಿಯು ಯಾರ ಹೆಸರಿನಲ್ಲಿ ಹಸ್ತಾಂತರವಾಗಿರುವುದೋ ಅಂತಹ ಯಾವುದೇ ವ್ಯಕ್ತಿಯು ಉಪಕಲಮು (೧)ರನ್ವಯವಾಗಿ ಹಾಕಲ್ಪಡಬಹುದಾದ ಕರವನ್ನು ಕೊಡಲು ಹೊಣೆಗಾರನಾಗುತ್ತಾನೆ.

(೩) ಗೊತ್ತುಮಾಡಬಹುದಾದಂತಹ ರೀತಿಯಲ್ಲಿ ಮತ್ತು ಅಂತಹ ವಿನಾಯತಿಗಳಿಗಂಕಿತವಾಗಿ ಮತ್ತು ಅಂತಹ ದರದ ಪ್ರಕಾರ, ಕೋಷ್ಟಕ (೧) ರಲ್ಲಿ ನಿರ್ದಿಷ್ಟಪಡಿಸಿದ ಮೇಲ್ಮಿತಿಯ ದರವನ್ನು ಮೀರದೆ ಪಟ್ಟಣ ಪಂಚಾಯತವು ಜಕಾತಿಯನ್ನು ಹಾಕಬಹುದು.

ಆದರೆ ಪಟ್ಟಣ ಪಂಚಾಯತದ ಅಧಿಕಾರ ಕ್ಷೇತ್ರದ ಮಿತಿಯಲ್ಲಿಯ ಯಾವುದೇ ಪ್ರದೇಶದಲ್ಲಿ ಬೆಳೆದ ಒಕ್ಕಲುತನ ಹುಟ್ಟುವಳಿಯ ಸಂಬಂಧವಾಗಿ ಯಾವುದೇ ಜಕಾತಿ ಹಾಕಲ್ಪಡತಕ್ಕದ್ದಲ್ಲ.

(೪) ಗೊತ್ತುಮಾಡಬಹುದಾದಂತಹ ರೀತಿಯಲ್ಲಿ ಮತ್ತು ಅಂತಹ ವಿನಾಯತಿಗಳಿಗಂಕಿತವಾಗಿ ಮತ್ತು ಪಂಚಾಯತವು ನಿರ್ದಿಷ್ಟಪಡಿಸಬಹುದಾದಂತಹ ದರದ ಪ್ರಕಾರ ಕೋಷ್ಟಕ ೧ರಲ್ಲಿ ನಿರ್ದಿಷ್ಟಪಡಿಸಿದ ಮೇಲ್ಮಿತಿಯ ದರವನ್ನು ಮೀರದೆ ಪಂಚಾಯತವು ಕೆಳಗೆ ಕಾಣಿಸಿದ ಎಲ್ಲ ಇಲ್ಲವೆ ಯಾವುದೇ ಕರಗಳನ್ನು ಇಲ್ಲವೆ ಫೀಗಳನ್ನು ಹಾಕಬಹುದು: ಅವು ಯಾವುವೆಂದರೆ—

(i) ಜಾತ್ರೆಗಳು ಉತ್ಸವಗಳು ಮತ್ತು ಮನರಂಜನೆಗಳು ಇವುಗಳ ಮೇಲಿನ ಕರ;

(ii) ಮೋಟರ ವಾಹನಗಳಲ್ಲದ ವಾಹನಗಳ ಮೇಲೆ ಕರ;

(iii) ಬಸ್ ಸ್ಟ್ಯಾಂಡಗಳ ಮೇಲೆ ಫೀ.

(iv) ಮಾರ್ಕೆಟುಗಳ ಮೇಲೆ ಫೀ.

(v) ಬಂಡಿಗಳ ಸ್ಟ್ಯಾಂಡುಗಳ ಮೇಲೆ ಫೀ.

(vi) ಪಂಚಾಯತದ ಅಂತರ್ಗತವಾಗಿದ್ದ ನೀರಿನ ಸಂಗ್ರಹಾಲಯದಿಂದ ನೀರಿನ ಪೂರೈಕೆಯ ಮೇಲೆ ಫೀ.

ಆದರೆ, ಪ್ರವಾಸಿಗಳಿಗಾಗಿ ತಕ್ಕ ಸೌಕರ್ಯಗಳಿಂದ ಒಡಗೂಡಿದ ಬಸಸ್ಟ್ಯಾಂಡು ಸ್ಥಾಪಿತವಾದ ಹೊರತು ಇಂತಹ ಫೀ ಹಾಕಲು ಡೆಪ್ಯೂಟಿ ಕಮಿಶನರನ ಪೂರ್ವ ಸಮ್ಮತಿ ಇದ್ದ ಹೊರತು ಬಸ್ ಸ್ಟ್ಯಾಂಡುಗಳ ಮೇಲೆ ಯಾವುದೇ ಫೀ ಆಕರಣೆ ಮಾಡತಕ್ಕದ್ದಲ್ಲ.

(೫) ಪಂಚಾಯತಕ್ಕೆ ತನ್ನ ಪಕ್ಷಮಂಡನೆಯನ್ನು ಮಾಡಲು ಅನಕಾಶ ಮಾಡಿಕೊಟ್ಟ ನಂತರ ಸರಕಾರವು ಪ್ರಕಟನೆ ಪರಿಪತ್ರ ಹೊರಡಿಸಿ ಯಾವುದೇ ಕರ ಇಲ್ಲವೆ ಫೀ ಹಾಕಿರುವುದನ್ನು ಸಸ್ಪೆಂಡ ಮಾಡಬಹುದು. ಮತ್ತು ಯಾವುದೇ ಕಾಲಕ್ಕೆ ಇಂತಹ ಸಸ್ಪೆಂಡ ಮಾಡಿದ್ದನ್ನು ಮರಳಿಸಬಹುದು.

## ವಿವೇಚನೆ

ಪಂಚಾಯತವು ಸಾರ್ವಜನಿಕ ಸಂಸ್ಥೆ. ಅದು ಬಾಳುವುದು ಸಾರ್ವಜನಿಕ ಹಿತದ ಸಲುವಾಗಿ; ಸಾರ್ವಜನಿಕರಿಂದ ಕರ ತೆರಿಗೆ ಫೀ ವಸೂಲಿ ಮಾಡಿಯೆ ಅದು ತನ್ನ ಕರ್ತವ್ಯಗಳನ್ನು ನೆರವೇರಿಸಬೇಕಾಗುತ್ತದೆ. ಆದ್ದರಿಂದ ಕರ, ತೆರಿಗೆ, ಫೀ ಹಾಕಲು ಅದಕ್ಕೆ ಅಧಿಕಾರ ಬೇಕಾಗುತ್ತದೆ. ಈ ಅಧಿಕಾರವನ್ನು ಈ ಕಲಮು ಕೊಡುತ್ತದೆ. ಇದರಲ್ಲಿ ಪಂಚಾಯತವು ಹೇಗೆ ಮತ್ತು ಎಷ್ಟು ಕರ ಇಲ್ಲವೆ ಫೀಯನ್ನು ಯಾವ ಯಾವ ವಿಷಯದ ಬಗ್ಗೆ ಹಾಕಬಹುದು ಎಂಬುದನ್ನು ಹೇಳಿದೆ. ಕೋಷ್ಟಕ ೧ ರಲ್ಲಿ ದರಗಳ ಮೇಲ್ಮಿತಿ ನಿರ್ಣಯಿಸಲಾಗಿದೆ. ಅದನ್ನು ಮೀರದ ಹಾಗೆ ದರದ ಆಕರಣೆಗಳು ಇರಬೇಕು. ನಿಯಮಗಳಲ್ಲಿ ವಿನಾಯತಿಯನ್ನು ರೀತಿಯನ್ನು ಹೇಳಿರುತ್ತದೆ, ಅವುಗಳಿಗಂಕಿತವಾಗಿ ದರಗಳನ್ನು ನಿರ್ಣಯಿಸಬೇಕು. ಈ ಪರಿಮಿತಿಯಲ್ಲಿ ಕರ ಇಲ್ಲವೆ ಫೀಯ ಆಕರಣೆಯನ್ನು ಪಂಚಾಯತವು ಮಾಡಬಹುದಾಗಿದೆ.

ಕಟ್ಟಡ, ಜಾಗಾ,ವ್ಯಾಪಾರ, ಉದ್ಯಮ, ವ್ಯವಹಾರ, ಧಂದೆ, ಜಾತ್ರೆ, ಉತ್ಸವ, ಮನರಂಜನೆ, ವಾಹನ, ಮಾರ್ಕೆಟು, ನೀರಿನ ಪೂರೈಕೆ ಮುಂತಾದ ಅನೇಕ ವಿಷಯಗಳ ಮೇಲೆ ಕರ ಇಲ್ಲವೆ ಫೀ ಹಾಕಬಹುದಾಗಿದೆ.

ಪಟ್ಟಣ ಪಂಚಾಯತಿ ಇದ್ದರೆ ಅದು ಜಕಾತಿಯನ್ನು ಹಾಕಬಹುದಾಗಿದೆ.

ಪಂಚಾಯತಗಳು ಮೇಲೆ ಹೇಳಿದ ಪರಿಮಿತಿಯಲ್ಲಿ ಕರ ಇಲ್ಲವೆ ಫೀ ಆಕರಣೆ ಮಾಡಿದರೂ ಸರಕಾರವು ಆ ಪಂಚಾಯತಕ್ಕೆ ತನ್ನ ವಾದವನ್ನು ಮಂಡಿಸಲು ಅನುಕೂಲ ಮಾಡಿಕೊಟ್ಟು ಆ ಕರ ಇಲ್ಲವೆ ಫೀ ಹಾಕಿದ್ದನ್ನು ಸಸ್ಪೆಂಡ ಮಾಡುವ ಅಧಿಕಾರವುಳ್ಳದ್ದಾಗಿರುವುದು. ಅದರಂತೆ ಮಾಡಿದ ಸಸ್ಪೆಂಡನ್ನು ಹಿಂತೆಗೆದುಕೊಳ್ಳಲೂಬಹುದು. ಸರಕಾರವು ಸಸ್ಪೆಂಡ ಆಜ್ಞೆ ಮಾಡುವುದಕ್ಕಿಂತ ಮೊದಲು ಸಂಬಧಪಟ್ಟ ಪಂಚಾಯತಕ್ಕೆ ತನ್ನ ಪಕ್ಷ ಮಂಡಿಸಲು ಅವಕಾಶ ಕೊಡಬೇಕು.

## ೭೪. ಕರಾಕರಣೆಯ ವಿರುದ್ಧ ಅಪೀಲು

ಯಾವುದೇ ಕರ ಇಲ್ಲವೆ ಫೀಯ ಆಕರಣೆ ಇಲ್ಲವೆ ಎತ್ತುವಳಿಯಿಂದ ಬಾಧಿತನಾಗಿದ್ದರೆ ಯಾವುದೇ ವ್ಯಕ್ತಿಯು ಕಮಿಶನರರ ಕಡೆಗೆ ಅಪೀಲು ಮಾಡಿಕೊಳ್ಳಬಹುದು. ಮತ್ತು ಅಪೀಲಿನ ಮೇಲಿನ ಕಮಿಶನರ ನಿರ್ಣಯವು ಕೊನೆಯದಾಗಿರತಕ್ಕದ್ದು.

**ವಿವೇಚನೆ**

ಕರವು ಇಲ್ಲವೆ ಫೀಯು ಆಕರಿಸದಿದ್ದರೆ ಪಂಚಾಯತವು ನಡೆಯುವುದು ಕಠಿಣವಿದೆ. ಆದರೆ ಈ ಕರಾಕರಣೆಯು ಭಾರವಾಗಿರಬಾರದು. ಕರಾಕರಣೆಯಿಂದ ಬಾಧಿತನಾದ ವ್ಯಕ್ತಿಗೆ ಅಪೀಲು ಮಾಡಿಕೊಳ್ಳುವ ಅಧಿಕಾರ ಇದೆ. ಈ ಅಪೀಲನ್ನು ಕಮಿಶನರರ ಕಡೆಗೆ ಮಾಡಿಕೊಳ್ಳಬೇಕು. ಮತ್ತು ಅವನು ಆ ಸಂಬಂಧವಾಗಿ ಕೊಟ್ಟ ನಿರ್ಣಯವೇ ಕೊನೆಯದು. ಅದರ ಮೇಲೆ ಮತ್ತೆ ಅಪೀಲು ಇಲ್ಲ.

## ೭೫. ಮಾರ್ಕೆಟ ಫೀ

ಕಲಮು ೭೩ ರ ಉಪಕಲಮು (೪) ರ ವಾಕ್ಯಾವಳಿ (iv) ಇಲ್ಲವೆ (v) ರನ್ವಯವಾಗಿ ಹಾಕಲಾದ ಯಾವುದೇ ಫೀಯ ವಸೂಲಿಯನ್ನು ಸಾರ್ವಜನಿಕ ಲಿಲಾವಿನ ಮೂಲಕ ಲಾವಣಿ ಕೊಡಲು ಇಲ್ಲವೆ ಡೆಪ್ಯೂಟಿ ಕಮಿಶನರರ ಪೂರ್ವ ಸಮ್ಮತಿಯಿಂದ ಖಾಸಗಿ ಕರಾರು ಮಾಡಿಕೊಳ್ಳಲು ಪಂಚಾಯತಕ್ಕೆ ಕಾಯಿದೇಶೀರ ಅನುಕೂಲತೆ ಇದೆ.

ಆದರೆ, ಲಾವಣಿದಾರನು ಲಾವಣಿ ಕರಾರಿನಲ್ಲಿ ಕಾಣಿಸಲಾದ ಕರಾರುಗಳನ್ನು ಯೋಗ್ಯ ರೀತಿಯಲ್ಲಿ ಪೂರೈಸುವುದರ ಬಗ್ಗೆ ತಕ್ಕ ಜಾಮೀನು ಕೊಡತಕ್ಕದ್ದು.

**ವಿವೇಚನೆ**

ಕಲಮು ೭೪ರ ಉಪಕಲಮು (೪) ರ ವಾಕ್ಯಾವಳಿ (iv) ಇಲ್ಲವೆ (v) ಇದರಲ್ಲಿ ಮಾರ್ಕೆಟುಗಳ ಮೇಲಿನ ಫೀ, ಮತ್ತು ಬಂಡಿಗಳ ಸ್ಟ್ಯಾಂಡಿನ ಮೇಲಿನ ಫೀ ಬಗ್ಗೆ ಹೇಳಿದೆ. ಈ ಫೀಯನ್ನು ಪಂಚಾಯತವು ತಾನೇ ವಸೂಲಿ ಮಾಡಬಹುದು. ಇಲ್ಲವೆ ಕರ ಆಕರಣೆ ಮಾಡಿದ ನಂತರ ಆ ವಸೂಲಿಯ ಕೆಲಸದ ಬಗ್ಗೆ ಲಾವಣಿ ಕೊಡಬಹುದು. ಈ ಲಾವಣಿಯನ್ನು ಸಾರ್ವಜನಿಕ ಲಿಲಾವಿನಿಂದ ಕೊಡಬಹುದು. ಇಲ್ಲವೆ ಡೆಪ್ಯೂಟಿ ಕಮಿಶನರರ ಸಮ್ಮತಿ ಪಡೆದು ಖಾಸಗಿ ವ್ಯಕ್ತಿಯ ಜತೆಗೆ ಕರಾರು ಮಾಡಿಕೊಂಡು ಲಾವಣಿ ಕೊಡಬಹುದು. ಯಾರೇ ಲಾವಣಿ ಹಿಡಿಯಲಿ, ಅವರು ಕರಾರು ಪೂರೈಸುವುದರ ಬಗ್ಗೆ ಯೋಗ್ಯ ಜಾಮೀನು ಕೊಡತಕ್ಕದ್ದು. ಇದರಿಂದ ಹಣದ ಭದ್ರತೆಯಾಗುವುದು. ಪಂಚಾಯತಕ್ಕೆ ವಸೂಲಿಯ ತ್ರಾಸು ತಪ್ಪುವುದು.

## ೭೬. ಪಂಚಾಯತದ ಕರಾಕರಣೆಯನ್ನು ಹೆಚ್ಚಿಸಲು ನಿರ್ದೇಶಿಸು ವುದು ಡೆಪ್ಯೂಟಿ ಕಮಿಶನರನ ಅಧಿಕಾರ

(೧) ಕಲಮು ೪೨ ಮತ್ತು ೪೩ ರಲ್ಲಿ ನಿರ್ದಿಷ್ಟಪಡಿಸಲಾದ ಕರ್ತವ್ಯಗಳ ಯೋಗ್ಯ ನಿರ್ವಹಣೆಗಾಗಿ ಆವಶ್ಯಕವಾದುದಕಿಂತ ಪಂಚಾಯತದ ನಿಯತ ಉತ್ಪನ್ನವು ಕಡಿಮೆಯಾಗುವುದೆಂದು ಡೆಪ್ಯೂಟಿ ಕಮಿಶನರನ ಅಭಿಪ್ರಾಯವಾದರೆ, ಅವನಿಗೆ ಆವಶ್ಯಕವೆಂದು ಅನ್ನಿಸುವಷ್ಟು ಪ್ರಮಾಣದಲ್ಲಿ ಪಂಚಾಯತದ ಉತ್ಪನ್ನವು ಹೆಚ್ಚಾಗುವುದಕ್ಕೆ ಯೋಗ್ಯಕ್ರಮುಗಳನ್ನು ಆರು ತಿಂಗಳಲ್ಲಿ ಪಂಚಾಯತವು ಕೈಕೊಳ್ಳು ವಂತೆ ಡೆಪ್ಯೂಟಿ ಕಮಿಶನರನು ಆದೇಶಿಸಬಹುದು. ಅಗತ್ಯವಾದ ಮಟ್ಟದಷ್ಟು ಉತ್ಪನ್ನ ವನ್ನು ಹೆಚ್ಚಿಸಲು ತಕ್ಕ ಕ್ರಮುಗಳನ್ನು ತೆಗೆದುಕೊಳ್ಳಲು ಪಂಚಾಯತವು ತಪ್ಪಿದರೆ ಕಲಮು ೭೩ ರಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಕರ ಇಲ್ಲವೆ ಫೀ ಹೆಚ್ಚಿಸಲು ಇಲ್ಲವೆ ಎತ್ತುವಳಿ ಮಾಡಲು ಡೆಪ್ಯೂಟಿ ಕಮಿಶನರನು ಆದೇಶಿಸಬಹುದು.

(೨) ಉಪಕಲಮು (೧) ರನ್ವಯವಾಗಿದ್ದ ಹುಕುಮಿನ ವಿರುದ್ಧ ಯಾವುದೇ ಪಂಚಾಯತವು ಕಮಿಶನರನ ಕಡೆಗೆ ಅಪೀಲು ಮಾಡಿಕೊಳ್ಳಬಹುದು. ಮತ್ತು ಅಪೀಲು ನಿರ್ಣಯವಾಗುವತನಕ ಆ ಹುಕುಮು ಕಾರ್ಯಕಾರಿಯಾಗುವುದನ್ನು ಕಮಿಶನರನು ತಡೆಯಬಹುದು.

### ವಿವೇಚನೆ

ಪಂಚಾಯತವು ಮಾಡಲೇಬೇಕಾದ ಹಾಗೂ ಮಾಡಬಹುದಾದ ಕರ್ತವ್ಯ ಗಳನ್ನು ಕಲಮು ೪೨ ಮತ್ತು ೪೩ ರಲ್ಲಿ ಹೇಳಿದೆ. ಈ ಕರ್ತವ್ಯಗಳನ್ನು ನೆರವೇರಿಸಲು ಹಣವು ಬೇಕು. ಪಂಚಾಯತದ ಉತ್ಪನ್ನವು ಸಾಕಷ್ಟು ಇರದೆ ಇದ್ದರೆ, ಹಾಗೂ ಅದು ಆ ಕರ್ತವ್ಯಗಳನ್ನು ನೆರವೇರಿಸಲು ಸಮರ್ಥವಾಗಿರುವಷ್ಟು ಇಲ್ಲವೆಂದು ಡೆಪ್ಯೂಟಿ ಕಮಿಶನರನ ಅಭಿಪ್ರಾಯವಾದರೆ, ಉತ್ಪನ್ನ ಹೆಚ್ಚಿಸಲು ಕ್ರಮ ತೆಗೆದು ತೆಗೆದುಕೊಳ್ಳಲು ಪಂಚಾಯತಕ್ಕೆ ಡೆಪ್ಯೂಟಿ ಕಮಿಶನರನು ಆದೇಶಿಸಬಹುದು. ಈ ಕ್ರಮ ತೆಗೆದುಕೊಳ್ಳಲು ಆರು ತಿಂಗಳು ಕಾಲಾವಧಿ. ಇದರಲ್ಲಿ ಯಾವ ಕ್ರಮ ವನ್ನು ಪಂಚಾಯತವು ತೆಗೆದುಕೊಳ್ಳದಿದ್ದರೆ ಕಲಮು ೭೩ ರಲ್ಲಿ ಹೇಳಿದ ಯಾವುದೇ ಕರ- ಇಲ್ಲವೆ ಫೀ ಹೆಚ್ಚಿಸಬೇಕೆಂದು ಪಂಚಾಯತಕ್ಕೆ ಡೆ. ಕಮಿಶನರನು ಆದೇಶಿಸಬಹುದು.

ಕರ-ಭಾರವನ್ನು ಹೆಚ್ಚು ಮಾಡುವ ಇಚ್ಛೆಯು ಪಂಚಾಯತದ್ದು ಇರದಿದ್ದರೆ ಡೆ. ಕಮಿಶನರನ ಹುಕುಮು ಅವರಿಗೆ ಅಡ್ಡಿಯಾಗುವುದು. ಆಗ ಪಂಚಾಯತಕ್ಕೆ ಆ ಹುಕುಮಿನ ವಿರುದ್ಧ ಅಪೀಲು ಮಾಡಿಕೊಳ್ಳಲು ಅವಕಾಶವಿದೆ. ಕಮಿಶನರನ

ಕಡೆಗೆ ಅಪೀಲು ಮಾಡಿಕೊಳ್ಳಬೇಕು. ನಿರ್ಣಯವಾಗುವತನಕ ಡೆ. ಕಮಿಶನರನ ಹುಕುಮು ಕಾರ್ಯಕಾರಿಯಾಗಬಾರದೆಂದು ತಡೆಯಾಜ್ಞೆ ಹೊರಡಿಸಲು ಕಮಿಶ ನರನಿಗೆ ಈ ಕಲಮಿನ ಮೂಲಕ ಅಧಿಕಾರ ಕೊಡಲಾಗಿದೆ.

## ೭೭. ಕರ ವಸೂಲಿ ಮತ್ತು ಇತರ ಬಾಕಿ ವಸೂಲಿ

(೧) ಯಾವುದೇ ಕರ ಇಲ್ಲವೆ ಫೀಯು ಬಾಕಿಯಾಗಿ ಉಳಿದಾಗ ವ್ಯಾವಹಾ ರಿಕವಾಗಿ ತೀರ ಕಡಿಮೆ ವಿಲಂಬದಿಂದ, ಆ ಬಾಕಿ ಹಣವನ್ನು ಸಂದಾಯಮಾಡಲು ಹೊಣೆಗಾರನಾದ ವ್ಯಕ್ತಿಗೆ ಅವನಿಂದ ಬಾಕಿ ಬರಬೇಕಾದ ರಕಮಿಗೆ, ಅದರಲ್ಲಿ ಯಾವ ತಾರೀಖಿಗೆ ಇಲ್ಲವೆ ಅದರಕಿಂತ ಮೊದಲು ಹಣ ಸಂದಾಯವಾಗಬೇಕೆಂದು ನಿರ್ದಿಷ್ಟಪಡಿಸಿದ ಬಿಲ್ಲು ಕೊಡಲ್ಪಡುವಂತೆ ಪಂಚಾಯತವು ಮಾಡತಕ್ಕದ್ದು.

(೨) ಯಾವುದೇ ಕರ ಇಲ್ಲವೆ ಫೀ ಇಲ್ಲವೆ, ಈ ಕಾಯಿದೆ, ಇಲ್ಲವೆ ನಿಯಮ ಇಲ್ಲವೆ ಪೋಟನಿಯಮಗಳನಯವಾಗಿ ಪಂಚಾಯತಕ್ಕೆ ಸಂದಾಯಮಾಡಬೇಕಾದ ಬೇರೆ ಯಾವುದೇ ರಕಮು ಸಂದಾಯ ಮಾಡಬೇಕಾದ ತಾರೀಖಿಗೆ ಇಲ್ಲವೆ ಅದಕ್ಕೂ ಮೊದಲು ಸಂದಾಯ ಮಾಡಲು ಯಾವುದೇ ವ್ಯಕ್ತಿಯು ತಪ್ಪಿದರೆ, ಗೊತ್ತು ಮಾಡಿದ ನಮೂನೆಯಲ್ಲಿ ತಪ್ಪಿತಸ್ಥನ ಮೇಲೆ, ಪ್ರಾರ್ಥನಾದೇಶ ಪತ್ರವನ್ನು ಪಂಚಾಯತವು ಜಾರಿಮಾಡಿಸತಕ್ಕದ್ದು.

(೩) ಉಪಕಲಮು (೧) ರನ್ವಯವಾಗಿರುವ ಪ್ರತಿಯೊಂದು ಬಿಲ್ಲಿನ ಸಾದರ ಪಡಿಸುವಿಕೆಯು ಮತ್ತು ಉಪಕಲಮು (೨) ರನ್ವಯವಾಗಿರುವ ಪ್ರಾರ್ಥನಾದೇಶ ಪತ್ರದ ಜಾರಿ ಮಾಡಿಸುವಿಕೆಯು ಪಂಚಾಯತದ ಅಧಿಕಾರಿಯಿಂದ ಇಲ್ಲವೆ ಸೇವಕ ನಿಂದ ಇಲ್ಲವೆ ಈ ಸಂಬಂಧದಲ್ಲಿ ಪಂಚಾಯತದಿಂದ ಅಧಿಕರಿಸಲ್ಪಟ್ಟ ಬೇರೆ ವ್ಯಕ್ತಿಯಿಂದ,

(ಅ) ಯಾರಿಗೆ ಅದನ್ನು ಉದ್ದೇಶಿಸಲಾಗಿರುವುದೋ ಆ ವ್ಯಕ್ತಿಗೆ ಆ ಬಿಲ್ಲನ್ನು ಇಲ್ಲವೆ ಆದೇಶಪತ್ರವನ್ನು ಕೊಡುವುದರಿಂದ ಇಲ್ಲವೆ ಕೊಡಮಾಡುವುದರಿಂದ ನಿರ್ವಹಿಸಲ್ಪಡತಕ್ಕದ್ದು; ಇಲ್ಲವೆ

(ಬ) ಇಂತಹ ವ್ಯಕ್ತಿಯು ಸಿಕ್ಕದಿದ್ದರೆ, ಗ್ರಾಮದ ಪರಿಮಿತಿಯಲ್ಲಿದ್ದರೆ, ಅವನು ಹಿಂದೆ ವಾಸವಾಗಿದ್ದನೆಂದು ತಿಳಿದು ಬಂದ ವಾಸಸ್ಥಳದಲ್ಲಿ ಆ ಬಿಲ್ಲನ್ನು ಇಲ್ಲವೆ ಆದೇಶಪತ್ರವನ್ನು ಇಟ್ಟು ಇಲ್ಲವೆ ಕುಟುಂಬದ ವಯಸ್ಕ ಗಂಡಿಸಿಗೆ ಕೈಯ್ಯಲ್ಲಿ ಇಲ್ಲವೆ ನೌಕರನಿಗೆ ಆ ಬಿಲ್ಲು ಇಲ್ಲವೆ ಆದೇಶ ಪತ್ರವನ್ನು ಕೊಡುವುದರಿಂದ ಇಲ್ಲವೆ ಕೊಡಮಾಡುವುದರಿಂದ ನಿರ್ವಹಿಸಲ್ಪಡತಕ್ಕದ್ದು; ಇಲ್ಲವೆ,

(ಕ) ಇಂತಹ ವ್ಯಕ್ತಿಯು ಗ್ರಾಮದ ಪ್ರಾದೇಶಿಕ ಪರಿಮಿತಿಯಲ್ಲಿ ವಾಸವಾಗಿರದಿದ್ದರೆ, ಮತ್ತು ಬೇರೆ ಕಡೆ ಇರುವ ಅವನ ವಿಳಾಸವು ಚೇರಮನ್ನನಿಗೆ ಇಲ್ಲವೆ ಬಿಲ್ಲು ಇಲ್ಲವೆ ಆದೇಶಪತ್ರವನ್ನು ಹೊರಡಿಸಿಲು ನಿರ್ದೇಶನ ಮಾಡುವ ಬೇರೆ ವ್ಯಕ್ತಿಗೆ ಗೊತ್ತಿದ್ದರೆ, ಆಗ ಅಂತಹ ಬಿಲ್ಲು ಇಲ್ಲವೆ ಆದೇಶ ಪತ್ರವನ್ನು ಪಾಕೀಟಿನಲ್ಲಿ ಹಾಕಿ ಮೇಲೆ ವಿಳಾಸ ಬರೆದು ಅಂತಹ ವ್ಯಕ್ತಿಗೆ ರಜಿಸ್ಟರ ಪೋಸ್ಟದಿಂದ ಕಳಿಸುವುದ ರಿಂದ ನಿರ್ವಹಿಸಲ್ಪಡತಕ್ಕದ್ದು.

(ಡ) ಮೇಲೆ ಹೇಳಿದ ಯಾವುದೇ ಸಾಧನವು ಅನುಕೂಲವಾಗದಿದ್ದರೆ, ಯಾವ ಕಟ್ಟಡ ಇಲ್ಲವೆ ಭೂಮಿಯ ಸಂಬಂಧವಾಗಿ ಆ ಬಿಲ್ಲು ಇಲ್ಲವೆ ಆದೇಶ ಪತ್ರವು ಸಂಬಂಧಿಸಿರುವುದೋ ಆ ಕಟ್ಟಡದ ಇಲ್ಲವೆ ಭೂಮಿಯ ಎದ್ದು ಕಾಣುವ ಯಾವುದೇ ಭಾಗಕ್ಕೆ ಆ ಬಿಲ್ಲನ್ನು ಇಲ್ಲವೆ ಆದೇಶ ಪತ್ರವನ್ನು ಅಂಟಿಸುವಂತೆ ಮಾಡಿ ನಿರ್ವಹಿಸಲ್ಪಡತಕ್ಕದ್ದು.

(೪) ಯಾವುದಕ್ಕಾಗಿ ಪ್ರಾರ್ಥನಾದೇಶ ಪತ್ರವು ಜಾರಿ ಮಾಡಲಾಗಿರು ವುದೋ ಆ ರಕಮು ಅಂತಹ ಜಾರಿಯಾದ ಮುವ್ವತ್ತು ದಿವಸಗಳಲ್ಲಿ ಸಂದಾಯ ಮಾಡಲ್ಪಡದಿದ್ದರೆ, ಇಂತಹ ರಕಮನ್ನು ತಪ್ಪಿತಸ್ಥನ ಜಂಗಮ ಮಾಲನ್ನು ಗೊತ್ತುಪಡಿಸಿದ ರೀತಿಯಲ್ಲಿ ಜಪ್ತು ಮಾಡಿಸಿ ಮತ್ತು ಮಾರಾಟ ಮಾಡಿಸಿ ಪಂಚಾ ಯತವು ಎತ್ತುವಳಿಯಿಂದ ವಸೂಲು ಮಾಡಬಹುದು.

(೫) ಫೀಯನ್ನು

(ಅ) ಉಪಕಲಮು (೪) ರನ್ವಯವಾಗಿ ಮಾಡಿದ ಪ್ರತಿಯೊಂದು ಜಪ್ತಿಯ ಸಲುವಾಗಿ,

(ಬ) ಉಪಕಲಮು (೨) ರನ್ವಯವಾಗಿ ಹೊರಡಿಸಲಾದ ಪ್ರತಿಯೊಂದು ಪ್ರಾರ್ಥನಾದೇಶ ಪತ್ರದ ಸಲುವಾಗಿ,

(ಕ) ಉಪಕಲಮು (೪) ರನ್ವಯವಾಗಿ ಜಪ್ತಿ ಮಾಡಿದ ಪ್ರಾಣಿಗಳನ್ನು ಪರಿಪಾಲನೆ ಮಾಡುವುದರ ಸಲುವಾಗಿ,

ಗೊತ್ತು ಮಾಡಬಹುದಾದಂತಹ ದರದಂತೆ ಆಕರಿಸಲ್ಪಡತಕ್ಕದ್ದು.

(೬) ಮೇಲಿನ ಉಪಕಲಮಿನಲ್ಲಿ ಏನೇ ಹೇಳಲಾಗಿದ್ದರೂ ನಿಯಮಗಳ ಅನುಸಾರವಾಗಿ ಬೇಡಿದಾಗ ಸಲ್ಲಿಸಬೇಕಾಗಿದ್ದ ಯಾವುದೇ ಕರ ಇಲ್ಲವೆ ಫೀಯು ಗೊತ್ತು ಮಾಡಿದ ರೀತಿಯಲ್ಲಿ ವಸೂಲು ಮಾಡಲ್ಪಡತಕ್ಕದ್ದು.

(೭) ಕರ ಇಲ್ಲವೆ ಫೀ ಇಲ್ಲವೆ ಮೇಲೆ ಹೇಳಿದ ಇತರ ಬಾಕಿ ರಕಮನ್ನು ವಸೂಲು ಮಾಡಲು ಪಂಚಾಯತವು ಅಸಮರ್ಥವಾಗಿದ್ದರೆ, ಪಂಚಾಯತವು ಬಾಕಿ

ಪಟ್ಟಿಯನ್ನು ತಯಾರಿಸಿ, ಅದನ್ನು ತಹಶೀಲದಾರರ ಕಡೆಗೆ ಗ್ರಾಮಾಧಿಕಾರಿಗಳ ಮುಖಾಂತರ ವಸೂಲು ಮಾಡಿಸಬೇಕೆಂಬ ವಿನಂತಿ ಮಾಡಿಕೊಂಡು ಕಳಿಸಬಹುದು. ಮತ್ತು ಇಂತಹ ಬಾಕಿ ಪಟ್ಟಿಯು ತಹಶೀಲದಾರರಿಗೆ ಮುಟ್ಟಿದ ನಂತರ ಆ ಬಾಕಿ ಪಟ್ಟಿಯು ಉಪಕಲಮು (೧) ರನ್ವಯು ಸಲ್ಲಿಸಲಾದ ಬಿಲ್ಲಿನಲ್ಲಿ ನಿರ್ದಿಷ್ಟಪಡಿಸಿದ ತಾರೀಖಿನಿಂದ ಒಂದು ವರುಷದ ಒಳಗೆ ಇದ್ದರೆ, ಇಲ್ಲವೆ ಯಾವುದೇ ಸಂದರ್ಭದಲ್ಲಿ ಡೆಪ್ಯೂಟಿ ಕಮಿಶನರನು ನಿರ್ದೇಶಿಸಬಹುದಾದ ಆದರೂ ಒಂದು ವರುಷಕ್ಕೆ ಮೀರದ ಹೆಚ್ಚಿನ ಕಾಲಾವಧಿಯಲ್ಲಿ ಕೊಡಲ್ಪಟ್ಟಿದ್ದರೆ, ತಹಶೀಲದಾರನು ಆ ರಕಮು ಭೂಕಂದಾಯದ ಬಾಕಿ ಎಂಬಂತೆ ವಸೂಲ ಮಾಡಲು ತೊಡಗತಕ್ಕದ್ದು. ಇಂತಹ ರಕಮಿನ ವಸೂಲಿಗಾಗಿ ಗೊತ್ತು ಮಾಡಿದಂತಹ ರೀತಿಯಲ್ಲಿ ಗ್ರಾಮಾಧಿಕಾರಿಗಳಿಗೆ ಪ್ರತಿಫಲ ಕೊಡಲ್ಪಡಬಹುದು.

## ವಿವೇಚನೆ

ಕರ ಇಲ್ಲವೆ ಫೀ ವಸೂಲಿ ಹೇಗೆ ಮಾಡಬೇಕು ಎಂಬುದರ ವಿವರ ಕ್ರಮುದನ್ನು ಇಲ್ಲಿ ಹೇಳಲಾಗಿದೆ. ಕರ ಇಲ್ಲವೆ ಫೀ ಕೊಡಲು ತಕ್ಕದ್ದು ಆದ ಕೂಡಲೆ ಬಿಲ್ಲು ತಯಾರಿಸಬೇಕು. ಅದರಲ್ಲಿ ಕಾಣಿಸಿದ ಹಣ ಎಂದು ಕೊಡಲ್ಪಡಬೇಕು ಎಂಬುದು ಕಾಣಿಸಿರಬೇಕು. ಅದರಲ್ಲಿ ಕಾಣಿಸಿದ ತಾರೀಖಿನ ಒಳಗೆ ಯಾರಾದರೂ ಹಣ ಕೊಡಲು ತಪ್ಪಿದರೆ ಅವನ ಹೆಸರಿಗೆ ಪ್ರಾರ್ಥನಾದೇಶ ಪತ್ರವನ್ನು ಹೊರಡಿಸಿ ಆ ತಪ್ಪಿತಸ್ಥನ ಮೇಲೆ ಜಾರಿ ಮಾಡಬೇಕು. ಬಿಲ್ಲು ಇಲ್ಲವೆ ಆದೇಶ ಪತ್ರ ಹೇಗೆ ಕೊಡಲ್ಪಡಬೇಕು, ಇಲ್ಲವೆ ಜಾರಿ ಮಾಡಲ್ಪಡಬೇಕು ಎಂಬ ಬಗ್ಗೆಯೂ ಹೇಳಲಾಗಿದೆ. ಆ ವ್ಯಕ್ತಿಗೆ ಕೊಡಬಹುದು, ಕೊಡಮಾಡಬಹುದು ಆ ವ್ಯಕ್ತಿಯು ಸಿಕ್ಕದಿದ್ದರೆ, ಅವನು ಹಿಂದೆ ವಾಸವಾಗಿದ್ದನೆಂದು ತಿಳಿದು ಬಂದ ನಿವಾಸದಲ್ಲಿ ಅವನ ಕುಟುಂಬದ ವಯಸ್ಕ ಗಂಡಸಿಗೆ ಇಲ್ಲವೆ ಸೇವಕನಿಗೆ ಕೊಡಬೇಕು. ಆದರೆ ಅವನು ಗ್ರಾಮ ಬಿಟ್ಟು ಎರಡನೆಯ ಕಡೆಗೆ ಹೋಗಿದ್ದರೆ, ಅವನ ವಿಳಾಸ ಗೊತ್ತಿದ್ದರೆ, ರಜಿಷ್ಟರ ಪೋಸ್ಟಿನಿಂದ ಕಳಿಸಬೇಕು. ಆ ವಿಳಾಸವೂ ಗೊತ್ತಿರದಿದ್ದರೆ ಯಾವ ಕಟ್ಟಡ ಇಲ್ಲವೆ ಭೂಮಿಯ ಸಂಬಂಧವಾಗಿ ಆ ಬಿಲ್ಲು ಇಲ್ಲವೆ ಆದೇಶಪತ್ರ ಇರುವುದೋ ಅದರ ಎದ್ದು ಕಾಣುವ ಭಾಗಕ್ಕೆ ಅಂಟಿಸಬೇಕು. ಈ ಕ್ರಮವು ಒಂದಾದ ಮೇಲೆ ಒಂದು ಸೂಚಿಸುವುದು: ಮೊದಲನೆಯ ರೀತಿಯಲ್ಲಿ ಜಾರಿ ಆದರೆ ಎರಡನೆಯದು ಅನವಶ್ಯಕ. ಮೊದಲನೆಯ ರೀತಿಯಲ್ಲಿ ಜಾರಿ ಆಗದಿದ್ದರೆ ಎರಡನೆಯದು ಎರಡನೆಯದು ಆಗದಿದ್ದರೆ ಮೂರನೆಯದು ಹೀಗೆ ಸಾಗಬೇಕಾಗುವುದು. ಜಾರಿಆದ ಮೇಲೆ ೩೦ ದಿವಸಗಳಲ್ಲಿ ರಕಮು ಕೊಡದಿದ್ದರೆ, ಆ ವ್ಯಕ್ತಿಯ ಜಂಗಮ ಮಾಲು ಜಪ್ತ ಮಾಡಿಸಿ, ಮಾರಿಸಿ, ಹಣ ವಸೂಲು ಮಾಡಿಕೊಳ್ಳುವ ಅಧಿಕಾರ ಪಂಚಾಯತಕ್ಕೆ ಕೊಟ್ಟಿದೆ.

ಪಂಚಾಯತವು ಎಷ್ಟು ಪ್ರಯತ್ನ ಮಾಡಿದರೂ ವಸೂಲಾಗದಿದ್ದರೆ ಆ ಬಾಕಿ ಪಟ್ಟಿಯನ್ನು ತಯಾರಿಸಿ ತಹಶೀಲದಾರ ಕಡೆಗೆ ಗ್ರಾಮಾಧಿಕಾರಿಗಳಿಂದ ವಸೂಲ ಮಾಡಿಸಲು ಕಳಿಸಬೇಕು. ಆದರೆ ಬಿಲ್ಲಿನಲ್ಲಿ ಕಾಣಿಸಿದ ತಾರೀಖಿನಿಂದ ಒಂದು ವರುಷದ ಒಳಗೇನೆ ಆ ಬಾಕಿ ಪಟ್ಟಿಯನ್ನು ತಹಶೀಲದಾರರ ಕಡೆಗೆ ಕಳಿಸಿರಬೇಕು. ಇದಕ್ಕೂ ಹೆಚ್ಚು ಕಾಲಾವಧಿ ಆಗಿದ್ದರೆ, ಡೆಪ್ಯೂಟಿ ಕಮಿಶನರರು ನಿರ್ದೇಶನ ಮಾಡಿದ್ದರೆ ಮತ್ತೆ ಒಂದು ವರುಷಕ್ಕೆ ಹೆಚ್ಚಾಗದ ಕಾಲಾವಧಿಯ ಒಳಗೆ ತಹಶೀಲದಾರರ ಕಡೆಗೆ ಕಳಿಸಬಹುದು. ಹಾಗೆ ಬಂದ ಬಾಕಿ ಪಟ್ಟಿಯಲ್ಲಿಯ ರಕಮನ್ನು ಭೂಕಂದಾಯ ವಸೂಲು ಮಾಡಿದಂತೆ ತಹಶೀಲದಾರರು ಗ್ರಾಮಾಧಿಕಾರಿಗಳಿಂದ ವಸೂಲು ಮಾಡಿಸುವರು. ಮತ್ತು ಈ ಹೆಚ್ಚಿನ ಕೆಲಸವನ್ನು ಗ್ರಾಮಾಧಿಕಾರಿಗಳು ಮಾಡುವುದರಿಂದ ಅವರಿಗೆ ಈ ಸಂಬಂಧವಾಗಿ ಪ್ರತಿಫಲ ಕೊಡಲ್ಪಡುವುದು; ಪಂಚಾಯತವೇ ಕೊಡಬೇಕಾಗುವುದು.

## ೭೮. ಸರಕಾರದಿಂದ ಸಹಾಯಧನ

(೧) ಆ ಗ್ರಾಮದಲ್ಲಿ ವಸೂಲಾದ ಭೂಕಂದಾಯದಲ್ಲಿ ನೂರಕ್ಕೆ ಮೂವತ್ತರಷ್ಟು ಹಣವನ್ನು ಪ್ರತಿಯೊಂದು ಪಂಚಾಯತಕ್ಕೆ ಸರಕಾರವು ವಾರ್ಷಿಕವಾಗಿ ಸಹಾಯಧನವೆಂದು ಕೊಡತಕ್ಕದ್ದು.

(೨) ರಾಜ್ಯದಲ್ಲಿಯ ಭೂಕಂದಾಯದ ವಸೂಲಿಯಲ್ಲಿಯ ನೂರಕ್ಕೆ ಐದರಷ್ಟು ಹಣವನ್ನು ರಾಜ್ಯದಲ್ಲಿಯ ಪಂಚಾಯತಗಳಿಗಾಗಿ ಸರಕಾರವು ಬೇರೆಯಾಗಿ ಸಿಟ್ಟು, ಸರಕಾರವು ಕಾಲಕಾಲಕ್ಕೆ ಯಾವ ಉದ್ದೇಶಗಳಿಗಾಗಿ ವೆಚ್ಚಮಾಡಬೇಕೆಂದು ನಿರ್ದೇಶಿಸುವುದೋ ಅದಕ್ಕಾಗಿ ವೆಚ್ಚಮಾಡಲು ಯಾವುದೇ ಪಂಚಾಯತಕ್ಕೆ ಕೊಡತಕ್ಕದ್ದು.

(೩) ಉಪಕಲಮು (೧) ಮತ್ತು (೨) ರ ಉದ್ದೇಶಗಳಿಗಾಗಿ ಗ್ರಾಮದ ಮತ್ತು ರಾಜ್ಯದ ಭೂಕಂದಾಯದ ವಸೂಲಿಯನ್ನು ನಿರ್ದಿಷ್ಟಪಡಿಸುವುದರ ಸಲುವಾಗಿ, ಗ್ರಾಮದ ಸಂಬಂಧವಾಗಿ ಡೆಪ್ಯೂಟಿ ಕಮೀಶನರರನು, ರಾಜ್ಯದ ಸಂಬಂಧವಾಗಿ ಸರಕಾರವು ನಿರ್ದಿಷ್ಟ ಪಡಿಸುವ ತಾರೀಖಿನಿಂದ ಹಿಂದೆ ಐದು ವರುಷಗಳ ಕಾಲಾವಧಿಯಲ್ಲಿ ಆದ ವಸೂಲಿಯ ತಳಹದಿಯ ಮೇಲೆ, ಪ್ರತಿ ನಾಲ್ಕು ವರುಷಕ್ಕೆ ಒಮ್ಮೆ ಭೂಕಂದಾಯದ ಸರಾಸರಿ ವಸೂಲಿ ಎಷ್ಟಾಗುವದೆಂಬುದನ್ನು ನಿರ್ದಿಷ್ಟಪಡಿಸತಕ್ಕದ್ದು ಮತ್ತು ನಿರ್ದಿಷ್ಟ ಪಡಿಸಿದ ತಾರೀಖಿನಿಂದ ಮುಂದೆ ನಾಲ್ಕು ವರುಷಗಳವರೆಗೆ ಆ ಸರಾಸರಿ ಭೂಕಂದಾಯವು ಸಂದರ್ಭಾನುಸಾರವಾಗಿ ಧನಸಹಾಯಕ್ಕಾಗಿ ಕೊಡುವುದಕ್ಕೆ ಇಲ್ಲವೆ ಬೇರೆಯಾಗಿಡುವುದಕ್ಕೆ ಭೂಕಂದಾಯದ ವಸೂಲಿ ಎಂದು ಗಣಿಸಲ್ಪಡತಕ್ಕದ್ದು.

(೪) ಉಪಕಲಮು (೧) ಮತ್ತು (೨) ರನ್ವಯವಾಗಿ ಪಂಚಾಯತಕ್ಕೆ ಧನಸಹಾಯವಾಗಿ ಕೊಟ್ಟ ಮತ್ತು ಬೇರೆಯಾಗಿರಿಸಿದ ಹಣವನ್ನು ಗೊತ್ತುಮಾಡ ಬಹುದಾದ ರೀತಿಯಲ್ಲಿ ಮತ್ತು ಸಮಯಕ್ಕೆ ಪಂಚಾಯತ ನಿಧಿಗೆ ಜಮಾ ಮಾಡತಕ್ಕದ್ದು.

**ವಿವೇಚನೆ**

ಪಂಚಾಯತವು ತನ್ನ ಪ್ರದೇಶದಲ್ಲಿ ಕರ-ಫೀ ವಸೂಲಿ ಮಾಡಿ ತನ್ನ ನಿಧಿ ಯನ್ನು ಕೂಡಿಸಬೇಕೆಂದು ಮೇಲಿನ ಕಲಮಿನಲ್ಲಿ ಹೇಳಲಾಯಿತು. ಇನ್ನು ಸರಕಾರವು ಕೊಡುವ ಧನಸಹಾಯದ ಬಗ್ಗೆ ಈ ಕಲಮಿನಲ್ಲಿ ಹೇಳಲಾಗಿದೆ. ಸಹಾಯಧನವನ್ನು ಸರಕಾರವು ಎರಡು ರೀತಿಯಲ್ಲಿ ಕೊಡು ತ್ತದೆ. ಒಂದು ನಿತ್ಯವಾಗಿ ಕೊಡುವುದು ಮತ್ತೊಂದು ನೈಮಿತ್ತಿಕವಾಗಿ ಕೊಡುವುದು. ನಿತ್ಯವಾಗಿ ಕೊಡುವ ಸಹಾಯಧನವು ಆ ಗ್ರಾಮದಲ್ಲಿ ವಸೂ ಲಾಗುವ ಭೂಕಂದಾಯದಲ್ಲಿ ನೂರಕ್ಕೆ ಮೂವತ್ತರಷ್ಟು ವಾರ್ಷಿಕವಾಗಿ ಕೊಡು ವುದು. ಇದನ್ನು ಪಂಚಾಯತಕ್ಕೆ ವಾರ್ಷಿಕವಾಗಿ ನಿತ್ಯವಾಗಿ ಕೊಡಲಾಗುವುದು. ಇನ್ನು ಸರಕಾರವು ಯಾವುದೇ ಕಾರ್ಯವನ್ನು ಪಂಚಾಯತಕ್ಕೆ ಮಾಡಲು ಹೇಳಿ ದಾಗ ಅದಕ್ಕಾಗಿ ಧನಸಹಾಯವನ್ನು ಕೊಡುವುದು ನೈಮಿತ್ತಿಕವಾಗಿ. ಇದನ್ನು ಆ ಉದ್ದೇಶಕ್ಕಾಗಿ ವೆಚ್ಚಮಾಡಬೇಕು. ಈ ಬಗೆಯಾಗಿ ಕೊಡಬಹುದಾದ ಹಣ ವನ್ನು ಸರಕಾರವು ಇಡೀ ರಾಜ್ಯದಲ್ಲಿಯ ಪಂಚಾಯತಗಳಿಗಾಗಿ ಎಂದು, ರಾಜ್ಯದ ಭೂಕಂದಾಯದ ವಸೂಲಿಯಲ್ಲಿಯ ನೂರಕ್ಕೆ ಐದರಷ್ಟು ಬೇರೆಯಾಗಿಟ್ಟಿರುವುದು.

ಭೂಕಂದಾಯದ ವಸೂಲಿಯು ವರುಷಕ್ಕೆ ಎಷ್ಟಾಯಿತು ಎಂದು ನಿರ್ಣಯಿ ಸುವುದು ಹೇಗೆ? ಇಲ್ಲಿ ವಾರ್ಷಿಕ ಸರಾಸರಿ ತೆಗೆಯಬೇಕೆಂದು ಒಂದು ಕ್ರಮವನ್ನು ಸೂಚಿಸಲಾಗಿದೆ. ಗ್ರಾಮದ ಸಂಬಂಧವಾಗಿದ್ದರೆ ಡೆಪ್ಯೂಟಿ ಕಮಿಶನರನು ಸರಾಸರಿ ತೆಗೆಯಬೇಕು. ಅಂದರೆ ಅದು ಪ್ರತಿಶತ ಮೂವತ್ತರಷ್ಟು ಧನಸಹಾಯ ಪಡೆಯುವ ದಕ್ಕಾಗಿ. ರಾಜ್ಯದ ಸಂಬಂಧವಾಗಿದ್ದರೆ ಸರಕಾರವು ಸರಾಸರಿ ತೆಗೆಯಬೇಕು. ಅದು ಪ್ರತಿಶತ ಐದರಷ್ಟು ಧನಸಹಾಯ ಕೊಡುವುದಕ್ಕಾಗಿ. ಯಾವೊಂದು ತಾರೀಖಿಗೆ ಧನಸಹಾಯ ಕೊಡಬೇಕೆಂದು ಮಾಡಿರುವುದೋ ಅದರ ಹಿಂದೆ ಐದು ವರುಷಗಳ ಭೂಕಂದಾಯ ವಸೂಲಿ ಎಷ್ಟಾಯಿತು ಎಂಬುದರ ಲೆಕ್ಕತೆಗೆದು ಅದರ ತಳಹದಿಯ ಮೇಲೆ ಸರಾಸರಿ ನಿರ್ಣಯ ಮಾಡತಕ್ಕದ್ದು. ಹೀಗೆ ನಿರ್ಣಯವಾದ ಸರಾಸರಿಯೆ ಮುಂದಿನ ನಾಲ್ಕು ವರುಷಗಳ ವರೆಗೆ ಭೂಕಂದಾಯದ ವಸೂಲಿ ಎಂದು ತಿಳಿಯತಕ್ಕದ್ದು. ಅದರ ೩೦% ಮತ್ತು ೫% ಎಂದು ನಿತ್ಯ ಸಹಾಯಧನ ಕೊಡಬೇಕು. ನೈಮಿತ್ತಿಕ ಸಹಾಯಧನವೆಂದು ಬೇರೆಯಾಗಿರಿಸಬೇಕು. ಇದನ್ನು ಕಾಲಕಾಲಕ್ಕೆ ಗೊತ್ತುಮಾಡಿದ ರೀತಿಯಲ್ಲಿ ಪಂಚಾಯತ ನಿಧಿಗೆ ಜಮಾಮಾಡಬೇಕು.

## ೭೯ ತಾಲೂಕ ಬೋರ್ಡದಿಂದ ಸಾಲ

ಈ ಕಾಯಿದೆಯ ಉದ್ದೇಶಗಳಿಗಾಗಿ, ತಾಲೂಕದಲ್ಲಿಯ ಪಂಚಾಯತಕ್ಕೆ ಗೊತ್ತುಮಾಡಬಹುದಾದಂತಹ ನಿಯಮಗಳಿಗಂಕಿತವಾಗಿ, ತಾಲೂಕಬೋರ್ಡು ಸಾಲವನ್ನು ದಯಪಾಲಿಸಬಹುದು.

### ವಿವೇಚನೆ

ಕಲಮು ೭೧ ರಲ್ಲಿ ಪಂಚಾಯತವು ತನ್ನ ನಿಧಿಯನ್ನು ಹೇಗೆ ರೂಪಿಸಬೇಕೆಂದು ಹೇಳಿದಾಗ ಸಾಲವನ್ನು ಸರಕಾರದ ಪೂರ್ವಸಮ್ಮತಿಯಿಂದ ಎತ್ತಬಹುದೆಂದು ಹೇಳಿದೆ. ಈ ಕಲಮಿನಲ್ಲಿ ತಾಲೂಕಬೋರ್ಡ ತನ್ನ ತಾಲೂಕದಲ್ಲಿಯ ಪಂಚಾಯತಕ್ಕೆ ಸಾಲಕೊಡಬಹುದೆಂದು ಹೇಳಿದೆ. ಈ ಸಾಲವು ಗೊತ್ತುಮಾಡಬಹುದಾದ ನಿಯಮಗಳಿಗೆ ಅಂಕಿತವಾಗಿರತಕ್ಕದ್ದು.

## ೮೦. ಸೆಕ್ರೆಟರಿ

(೧) ಗೊತ್ತುಮಾಡಬಹುದಾದಂತಹ ನಿಯಮಗಳನುಸಾರವಾಗಿ ಕಮಿಶನರನಿಂದ ನೇಮಕವಾದ ಒಬ್ಬ ಸೆಕ್ರೆಟರಿಯು ಪ್ರತಿಯೊಂದು ಪಂಚಾಯತಕ್ಕೆ ಇರತಕ್ಕದ್ದು.

ಆದರೆ, ಎರಡು ಇಲ್ಲವೆ ಹೆಚ್ಚು ಪಂಚಾಯತಗಳು, ಯಾವ ಗ್ರಾಮಗಳಿಗಾಗಿ ಆ ಪಂಚಾಯತಗಳು ಸ್ಥಾಪಿತವಾಗಿವೆಯೋ ಆ ಗ್ರಾಮಗಳು ಒಂದರಿಂದ ಮತ್ತೊಂದು ಐದು ಮೈಲುಗಳ ಒಳಗಿನ ಅಂತರದಲ್ಲಿದ್ದರೆ, ಮತ್ತು ಇಂತಹ ಒಂದೊಂದು ಪಂಚಾಯತಕ್ಕೆ ಎರಡು ಸಾವಿರಕಿಂತ ಹೆಚ್ಚಾಗದಷ್ಟು ವಾರ್ಷಿಕ ಉತ್ಪನ್ನವಿದ್ದರೆ, ಅವು ಒಬ್ಬನನ್ನೆ ತಮ್ಮ ಸಾಮಾನ್ಯ ಸೆಕ್ರೆಟರಿಯೆಂದು ಅದೇ ವ್ಯಕ್ತಿಯನ್ನು ಮಾಡಿಕೊಳ್ಳಬಹುದು. ಇಂತಹ ಪಂಚಾಯತಗಳು ಸೆಕ್ರೆಟರಿಯ ಸಂಬಳ ಹಾಗೂ ಭತ್ತೆಗಳನ್ನು ಕಾಲ ಕಾಲಕ್ಕೆ ಕಮಿಶನರನು ನಿರ್ದಿಷ್ಟಪಡಿಸಬಹುದಾದಂತಹ ಪ್ರಮಾಣದಲ್ಲಿ ಕೊಡತಕ್ಕದ್ದು.

ಆದರೆ, ಒಂದೊಂದು ಗ್ರಾಮದಿಂದ ಮೂರು ಮೈಲುಗಳ ಒಳಗೆ ಇರುವ ಅಂತರದಲ್ಲಿ ಒಂದಕ್ಕಿಂತ ಹೆಚ್ಚು ಪಂಚಾಯತಗಳು ಸ್ಥಾಪಿತವಾಗಿದ್ದರೆ ಇಂತಹ ಪಂಚಾಯತಗಳು ಮೂರರಕಿಂತ ಹೆಚ್ಚಾಗವೆ ಇದ್ದರೆ ಅವು ಒಂದೊಂದು ಅದೇ ವ್ಯಕ್ತಿಯನ್ನು ತಮ್ಮ ಸಾಮಾನ್ಯ ಸೆಕ್ರೆಟರಿಯೆಂದು, ಮೇಲೆ ಹೇಳಿದ ಪಂಚಾಯತಗಳಲ್ಲಿ ಒಂದಕ್ಕೆ ಎರಡು ಸಾವಿರದ ರೂಪಾಯಿಗಳಕಿಂತಲೂ ವಾರ್ಷಿಕ ಉತ್ಪನ್ನವು ಹೆಚ್ಚಾದಪೂ ನೇಮಿಸಿಕೊಳ್ಳಬಹುದು.

(೨) ಭಾರತದ ರಾಜ್ಯಘಟನೆಯ ೩೦೯ ನೆಯ ನಿಬಂಧನೆಯ ಶರತುಗಳನ್ವವಾಗಿ ಮಾಡಿದ ನಿಯಮಗಳ ಕಕ್ಷೆಗಳಿಗಂಕಿತವಾಗಿ, ಇಂತಹ ಸೆಕ್ರೆಟರಿಯ ಯೋಗ್ಯತೆ, ಅಧಿಕಾರಗಳು, ಕರ್ತವ್ಯಗಳು, ಪ್ರತಿಫಲ ಮತ್ತು ಶಿಸ್ತಿನಸಂಬಂಧವಾಗಿದ್ದ ವಿಷಯಗಳನ್ನೊಳಗೊಂಡು ನೌಕರಿಯ ಕರಾರುಗಳು ಗೊತ್ತುಮಾಡಿದಂತೆ ಇರತಕ್ಕದ್ದು.

(೩) ಸರಕಾರವು ಸಾಮಾನ್ಯ ಇಲ್ಲವೆ ವಿಶಿಷ್ಟ ಹುಕುಮಿನಿಂದ ನಿರ್ದಿಷ್ಟಪಡಿಸಬಹುದಾದಂತಹ ಬೇರೆ ಕರ್ತವ್ಯಗಳನ್ನು ಸೆಕ್ರೆಟರಿಗೆ ಒಪ್ಪಿಸಬಹುದು. ಮತ್ತು ಅವನು ಆ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು. ಇಂತಹ ರೀತಿಯಲ್ಲಿ ಕರ್ತವ್ಯಗಳನ್ನು ಒಪ್ಪಿಸಲಾದರೆ, ಸಂಬಳ ಹಾಗೂ ಭತ್ತೆಗಳ ಮೇಲಿನ ಸೆಕ್ರೆಟರಿಯ ಸಂಬಂಧವಾಗಿರುವ ವೆಚ್ಚವನ್ನು ಪಂಚಾಯತ ಇಲ್ಲವೆ ಪಂಚಾಯತಗಳು ಮತ್ತು ಸರಕಾರದ ನಡುವೆ ಗೊತ್ತುಮಾಡಬಹುದಾದ ರೀತಿಯಲ್ಲಿ ಹಂಚಿಹಾಕತಕ್ಕದ್ದು.

**ವಿವೇಚನೆ**

ಪಂಚಾಯತಕ್ಕೆ ಒಬ್ಬವ ಸೆಕ್ರೆಟರಿ ಎಂದು ಇರತಕ್ಕದ್ದು, ಇವನನ್ನು ನೇಮಿಸುವ ಅಧಿಕಾರ ಕಮಿಶನರರದು. ಅದಕ್ಕಾಗಿ ನಿಯಮಗಳು ಇರುವುವು. ಒಂದು ಪಂಚಾಯತಕ್ಕೆ ಒಬ್ಬನು ಸೆಕ್ರೆಟರಿ ಇರುವುದು ಸಾಮಾನ್ಯವಾದರೆ, ಎರಡು ಇಲ್ಲವೆ ಹೆಚ್ಚು ಪಂಚಾಯತಗಳು ಕೂಡಿ ಒಬ್ಬನನ್ನು ತಮ್ಮ ಸೆಕ್ರೆಟರಿ ಎಂದು ಪಡೆಯಬಹುದು. ಹಾಗೆ ಪಡೆಯಬೇಕೆಂದು ಬಯಸಿದಾಗ ಎರಡು ಕರಾರುಗಳು. ಒಂದು ಪಂಚಾಯತದ ಗ್ರಾಮದಿಂದ ಇನ್ನೊಂದು ೫ ಮೈಲುಗಳ ಅಂತರದ ಒಳಗೆ ಇರಬೇಕು. ಮತ್ತು ಯಾವುದೊಂದು ಪಂಚಾಯತದ ವಾರ್ಷಿಕ ಉತ್ಪನ್ನವು ೨೦೦೦/– ಕಿಂತ ಹೆಚ್ಚಿರಬಾರದು. ಹೀಗಿದ್ದಾಗ ಒಂದರಕಿಂತ ಹೆಚ್ಚು ಪಂಚಾಯತಗಳಿಗೆ ಒಬ್ಬನೇ ಸೆಕ್ರೆಟರಿ ಇರಬಹುದು. ಮತ್ತು ಅವನ ಸಂಬಳ ಭತ್ತೆಗಳ ವೆಚ್ಚವನ್ನು ಕಮಿಶನರರು ನಿರ್ಣಯ ಮಾಡುವ ಪ್ರಮಾಣದಲ್ಲಿ ಒಂದೊಂದು ಪಂಚಾಯತ ವಹಿಸಬೇಕು.

ಮೂರು ಮೈಲುಗಳ ಅಂತರದಲ್ಲಿ ಪಂಚಾಯತಗಳು ಇದ್ದರೆ ಮೂರರಕಿಂತ ಹೆಚ್ಚು ಆಗದಷ್ಟು ಪಂಚಾಯಗಳಿಗೆ ಒಬ್ಬನೇ ಸೆಕ್ರೆಟರಿಯನ್ನು ಪಡೆಯಲು ಅವಕಾಶವಿದೆ. ಆಗ ಯಾವುದೊಂದು ಪಂಚಾಯತಕ್ಕೆ ವಾರ್ಷಿಕ ಉತ್ಪನ್ನವು ೨೦೦೦/– ಕಿಂತ ಹೆಚ್ಚಿದೆ ಎಂಬದು ಬಾಧಕವಲ್ಲ.

ಸೆಕ್ರೆಟರಿಯ ಯೋಗ್ಯತೆ, ಅಧಿಕಾರ ಕರ್ತವ್ಯ, ಸಂಬಳ, ಭತ್ತೆ, ನೌಕರಿಯ ಕರಾರು ಏನು ಇರಬೇಕೆಂಬುದನ್ನು ನಿಯಮಗಳು ಗೊತ್ತುಮಾಡುವುವು. ಅವು ರಾಜ್ಯ ಘಟನೆಯ ನಿಬಂಧನೆ ೩೦೯ ರಲ್ಲಿ ಹೇಳಿದ ಮಾತುಗಳಿಗಂಕಿತವಾಗಿ ಇರತಕ್ಕದ್ದು.

ಈ ಸೆಕ್ರೆಟರಿಗೆ ಸರಕಾರವು ತನ್ನ ಕೆಲಸಗಳನ್ನು ಹಚ್ಚಬಹುದು. ಪಂಚಾಯತದ ಕೆಲಸ ಮಾಡಿಕೊಂಡು ಸೆಕ್ರೆಟರಿಯು ಸರಕಾರ ಹೇಳಿವ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು. ಆದಕ್ಕಾಗಿ ಸರಕಾರವು ಸೆಕ್ರೆಟರಿಯ ಸಂಬಳ-ಭತ್ತೆಗಳಲ್ಲಿ ವೆಚ್ಚದ ಭಾಗವನ್ನು ವಹಿಸುವುದು; ಇವೆಲ್ಲಕ್ಕೆ ನಿಯಮಗಳು ಇರುವವು.

## ೮೧. ನೌಕರ ವರ್ಗದ ಕೋಷ್ಟಕ.

ಈ ಕಾಯಿದೆಯಿಂದ ಇಲ್ಲವೆ ಈ ಕಾಯಿದೆಯನ್ವಯವಾಗಿ ಹೇಳಿದ ಕರ್ತವ್ಯಗಳನ್ನು ನಿರ್ವಹಿಸಲು ಅಗತ್ಯವಾದ ಪಂಚಾಯತದ ಸೇವಕರ ಸಂಖ್ಯೆ ಹಾಗೂ ಸಂಬಳದ ಕೋಷ್ಟಕವನ್ನು ಕಲಮು ೩೨೧ ರ ಉಪಕಲಮು (೧) ರ ಕಕ್ಷೆಗಳಿಗಂಕಿತವಾಗಿ ಗೊತ್ತುಮಾಡಿ ಡೆಪ್ಯೂಟಿ ಕಮಿಶನರನ ಮಾಹಿತಿಗಾಗಿ ಕಳಿಸತಕ್ಕದ್ದು.

### ವಿವೇಚನೆ

ಪಂಚಾಯತದ ಕರ್ತವ್ಯಗಳು ಅನೇಕವಾಗಿವೆ. ಈ ಕಾಯಿದೆಯನ್ವಯಾಗಿ ಅಲ್ಲದೆ ಬೇರೆ ಕೆಲವು ಕರ್ತವ್ಯಗಳನ್ನು ಪಂಚಾಯತವು ಮಾಡಬೇಕಾಗುತ್ತದೆ. ಅದಕ್ಕಾಗಿ ನೌಕರರು ಬೇಕು ಈ ನೌಕರರ ಕೋಷ್ಟಕ, ಅವರ ಸಂಬಳದ ಕೋಷ್ಟಕವನ್ನು ಪಂಚಾಯತವು ಗೊತ್ತುಮಾಡಬೇಕು. ಈ ಕೋಷ್ಟಕವು ಕಲಮು ೩೨೧ ರ ಅಂಕಿತವಾಗಿ ಗೊತ್ತುಮಾಡಿ ಡೆಪ್ಯೂಟಿ ಕಮಿಶನನ ಮಾಹಿತಿಗಾಗಿ ಕಳಿಸಕ್ಕದ್ದು.

## ೮೨. ನೌಕರರ ನೇಮಕ

(೧) ಪಂಚಾಯತದ ನೌಕರರನ್ನು ಪಂಚಾಯತವು ನೇಮಿಸತಕ್ಕದ್ದು ಮತ್ತು ತನ್ನ ಹತ್ತಿರವಿದ್ದ ಪಂಚಾಯತ ನಿಧಿಯಿಂದ ಅವರ ಸಂಬಳವನ್ನು ಕೊಡತಕ್ಕದ್ದು. ಅವಸರದ ಪ್ರಸಂಗಗಳಿದ್ದಾಗ ತನಗೆ ಆವಶ್ಯಕವೆನ್ನಿಸಿದಂತೆ ತಾತ್ಪೂರ್ತಿಕ ನೌಕರರನ್ನು ಅದು ನೇಮಿಸಿಕೊಳ್ಳಬಹುದು. ಪಂಚಾಯತದಿಂದ ನೇಮಕ ಮಾಡಲ್ಪಟ್ಟ ಯಾವುದೇ ನೌಕರನಿಗೆ ಸೆಕ್ರೆಟರಿಯ ಲಿಖಿತ ಹುಕುಮಿನ ಮೂಲಕ ದಂಡ ಹಾಕಬಹುದು, ಅವನನ್ನು ಸಸ್ಪೆಂಡ ಮಾಡಬಹುದು, ಅವನ ಭಡತಿ ತಡೆ ಹಿಡಿಯಬಹುದು ಇಲ್ಲವೆ ಅವನ ಸಂಬಳ ಕಡಿಮೆ ಮಾಡಬಹುದು. ಪಂಚಾಯತವು ತಾನು ನೇಮಕ ಮಾಡಿದ ಯಾವುದೇ ನೌಕರನನ್ನು ಕೆಲಸದಿಂದ ಕಿತ್ತಿ ಹಾಕಬಹುದು.

(೨) ಉಪಕಲಮು (೧) ರನ್ವಯವಾಗಿ ಸೆಕ್ರೆಟರಿಯಿಂದ ಮಾಡಲ್ಪಟ್ಟ ಹುಕುಮಿನ ವಿರುದ್ಧ ಪಂಚಾಯತಕ್ಕೆ ಮತ್ತು ಪಂಚಾಯತದಿಂದ ಮಾಡಲ್ಪಟ್ಟ ಹುಕುಮಿನ ವಿರುದ್ಧ ಆಸಿಸ್ಟಂಟ ಕಮಿಶನರನಿಗೆ ಅಪೀಲು ಮಾಡಿಕೊಳ್ಳತಕ್ಕದ್ದು.

**ವಿವೇಚನೆ**

ಸೆಕ್ರೆಟರಿಯ ನೇಮಕವು ಕಮಿಶನರರನಿಂದ ಆಗುತ್ತದೆಂಬುದನ್ನು ನೆನೆಯು ಬೇಕು. ಅವನನ್ನು ಬಿಟ್ಟು ಉಳಿದ ನೌಕರರನ್ನು ಪಂಚಾಯತವು ನೇಮಿಸಿ ಕೊಳ್ಳಲು ಇಲ್ಲಿ ಅವಕಾಶ ಕೊಡಲಾಗಿದೆ. ಈ ನೌಕರರಿಗೆ ತನ್ನ ಹತ್ತಿರ ಇದ್ದ ನಿಧಿಯಲ್ಲಿಂದ ಸಂಬಳ ಕೊಡತಕ್ಕದ್ದು. ಅವಸರದ ಪ್ರಸಂಗದಲ್ಲಿ ಹೆಚ್ಚಿನ ನೌಕರರನ್ನು ನೇಮಿಸಿಕೊಳ್ಳಲು ಅವಕಾಶ ಕೊಡಲಾಗಿದೆ. ಈ ನೌಕರರನ್ನು ಪಂಚಾಯತವು ನೇಮಿಸಿಕೊಂಡರೂ ಅವರು ಸೆಕ್ರೆಟರಿಯ ಅಂಕಿತರಾಗಿ ಇರತಕ್ಕದ್ದು. ದಂಡ ಹಾಕಲು, ಸಸ್ಪೆಂಡ ಮಾಡಲು, ಭಡತಿ ತಡೆಯಲು, ಸಂಬಳ ಕಡಿಮೆ ಮಾಡಲು ಮುಂತಾದ ಅಧಿಕಾರಗಳನ್ನು ಸೆಕ್ರೆಟರಿಗೆ ಕೊಡಲಾಗಿದೆ. ಸೆಕ್ರೆಟರಿ ಈ ಸಂಬಂಧದಲ್ಲಿ ಹುಕುಮು ಮಾಡಿದರೆ ಅದು ಲಿಖಿತ ಹುಕುಮು ಇರತಕ್ಕದ್ದು. ಈ ನೌಕರರನ್ನು ಕಿತ್ತಿ ಹಾಕುವ (Dismiss) ಅಧಿಕಾರ ಸೆಕ್ರೆಟರಿಯದು ಅಲ್ಲ. ಅದು ಪಂಚಾಯ ತದ್ದು. ಸೆಕ್ರೆಟರಿ ಮಾಡಿದ ಹುಕುಮಿನ ಮೇಲೆ ಪಂಚಾಯತಕ್ಕೆ ಅಪೀಲು ಇದೆ. ಅಂದರೆ ನೌಕರದಾರ ಸಂಬಂಧವಾಗಿ ಈ ಕಲಮಿನ ಪ್ರಕಾರ ಸೆಕ್ರೆಟರಿಯು ಮಾಡಿದ ಹುಕುಮಿನ ಮೇಲೆ ಪಂಚಾಯತಕ್ಕೆ ಅಪೀಲು ಇದೆ. ಪಂಚಾಯತವು ಮಾಡಿದ ಹುಕುಮಿನ ಮೇಲೆ ಅಸಿಸ್ಟಂಟ ಕಮಿಶನರರಿಗೆ ಅಪೀಲು ಇದೆ. ಪಂಚಾ ಯತವು ಮಾಡುವ ಹುಕುಮು ಅಂದರೆ ನೌಕರರನ್ನು ಡಿಸ್‌ಮಿಸ್ ಮಾಡಿದ ಹುಕುಮು ಅಲ್ಲದೆ ಪಂಚಾಯತಕ್ಕೆ ಮಾಡಿಕೊಂಡ ಅಪೀಲಿನಲ್ಲಿ ಮಾಡಿದ ಹುಕುಮು ಎಂದೂ ಅರ್ಥವಾಗುತ್ತದೆ. ಈ ಬಗ್ಗೆ ಅಸಿಸ್ಟಂಟ ಕಮಿಶನರ ಕಡೆಗೆ ಅಪೀಲು ಮಾಡಿಕೊಳ್ಳತಕ್ಕದ್ದು.

**೮೩. ಮುಂಗಡಪತ್ರ– ಲೆಕ್ಕಪತ್ರ:– ಗ್ರಾಮದ ರಹಿವಾಸಿಗಳ ಸಭೆ ಯನ್ನು ಪಂಚಾಯತವು ಕರೆಯಬೇಕು.**

(೧) ಸರಕಾರದಿಂದ ಗೊತ್ತು ಮಾಡಲ್ಪಡಬಹುದಾದಂತಹ ನಮೂನೆಯಲ್ಲಿ ಮತ್ತು ಅಂತಹ ತಾರೀಖಿನ ಮುಂಚೆ ತಾಲೂಕ ಬೋರ್ಡದ ಮುಖ್ಯ ಕಾರ್ಯಾಧಿ ಕಾರಿಯ ಕಡೆಗೆ ಪಂಚಾಯತವು ವಾರ್ಷಿಕವಾಗಿ ನಿರ್ದಿಷ್ಟಪಡಿಸಿ ಒಂದು ಹೇಳಿಕೆ ಯನ್ನು ಕಳಿಸಿಕೊಡತಕ್ಕದ್ದು. ಆ ಹೇಳಿಕೆಯಲ್ಲಿ—

(ಅ) ಪ್ರಾರಂಭದ ಶಿಲ್ಕು ಮತ್ತು ಮುಂದಿನ ವರುಷದಲ್ಲಿ ಪಂಚಾಯತಕ್ಕೆ ಬರಬಹುದಾದ ಆದಾಯದ ಅಂದಾಜು;

(ಬ) ಸಿಬ್ಬಂದಿಯ ಮೇಲಿನ ವೆಚ್ಚದ ಸೂಚನೆ ಮತ್ತು ಕಲಮು ೪೨ ರಲ್ಲಿ ನಿರ್ದಿಷ್ಟಪಡಿಸಿದ ಕರ್ತವ್ಯಗಳ ನಿರ್ವಹಣೆಗಾಗಿ ವೆಚ್ಚ; ಮತ್ತು

(ಕ) ಕಲಮು ೪೩ ರಲ್ಲಿ ನಿರ್ದಿಷ್ಟಪಡಿಸಿದ ಮತ್ತು ಕಲಮು ೪೫ ರ ಉಪ ಕಲಮು (೧) ರಲ್ಲಿ ನಿರ್ದಿಷ್ಟಪಡಿಸಿದ ಕರ್ತವ್ಯಗಳ ನಿರ್ವಹಣೆಗಾಗಿ ವೆಚ್ಚ, ಇರತಕ್ಕದ್ದು.

(೨) ಇಂತಹ ಹೇಳಿಕೆಯು ಮುಟ್ಟಿದ ಎರಡು ತಿಂಗಳ ಒಳಗೆ ತಾಲೂಕ ಬೋರ್ಡದ ಮುಖ್ಯ ಕಾರ್ಯಾಧಿಕಾರಿಯು ಅದನ್ನು ಇದ್ದಕ್ಕಿದ್ದಂತೆ ಒಪ್ಪತಕ್ಕದ್ದು. ಇಲ್ಲವೆ ಕಲಮು ೪೨, ೪೩ ಮತ್ತು ೪೫ ರಲ್ಲಿ ನಿರ್ದಿಷ್ಟಪಡಿಸಿದ ಕರ್ತವ್ಯಗಳಮೇಲೆ ಸೂಚಿತವೆಚ್ಚವು ಹೆಚ್ಚಾಗಬೇಕು. ಇಲ್ಲವೆ ಕಡಿಮೆಯಾಗಬೇಕು ಎಂದು ನಿರ್ದೇಶಿಸತಕ್ಕದ್ದು.

ಆದರೆ, ಪ್ರಾರಂಭದ ಶಿಲ್ಕು ಮತ್ತು ಮುಂದಿನ ವರುಷದ ಉತ್ಪನ್ನದ ಆದಾಯ ಕೂಡಿ ಆದ ಪಂಚಾಯತ ನಿಧಿಯಕಿಂತ ಸೂಚಿತ ವೆಚ್ಚವು ಹೆಚ್ಚಾಗುವ ಹಾಗೆ ನಿರ್ದೇಶಿಸಲು ಮುಖ್ಯ ಕಾರ್ಯಾಧಿಕಾರಿಗೆ ಅಧಿಕಾರವಿರತಕ್ಕದ್ದಲ್ಲ.

(೩) ಗೊತ್ತು ಮಾಡಬಹುದಾದ ನಮೂನೆಯಲ್ಲಿ ಪಂಚಾಯತದ ಸೆಕ್ರೆಟರಿಯು ಲೆಕ್ಕ ಪತ್ರಗಳನ್ನು ಇಡತಕ್ಕದ್ದು. ಪಂಚಾಯತದ ಆಡಳಿತದ ವಾರ್ಷಿಕ ವರದಿಯನ್ನು ಅವನು ಸಿದ್ಧಪಡಿಸತಕ್ಕದ್ದು. ಮತ್ತು ಪಂಚಾಯತದ ಒಪ್ಪಿಗೆಗಾಗಿ ಆ ವರದಿಯನ್ನು ಮತ್ತು ಲೆಕ್ಕ ಪತ್ರವನ್ನು ಮಂಡಿಸತಕ್ಕದ್ದು. ಇಂತಹ ಲೆಕ್ಕ ಪತ್ರದ ಹೇಳಿಕೆಯನ್ನು ವಾರ್ಷಿಕ ವರದಿಯ ಸಹಿತವಾಗಿ ಒಪ್ಪಿತವಾದುದನ್ನು ಗೊತ್ತು ಮಾಡಬಹುದಾದಂತಹ ನಮೂನೆಯಲ್ಲಿ ಅಂತಹ ತಾರೀಖಿನಕಿಂತ ಮೊದಲು ತಾಲೂಕ ಬೋರ್ಡಿಗೆ ಕಳಿಸಲ್ಪಡತಕ್ಕದ್ದು.

(೪) ಗೊತ್ತು ಮಾಡಬಹುದಾದ ರೀತಿಯಲ್ಲಿ ಹಾಗೂ ಅಂತಹ ಸಮಯಕ್ಕೆ ಗ್ರಾಮದ ವಯಸ್ಕ ರಹಿವಾಸಿಗಳ ಸಭೆಯನ್ನು ಪಂಚಾಯತವು ಕರೆಯತಕ್ಕದ್ದು. ಮತ್ತು ಕಳೆದ ವರುಷದ ಆಡಳಿತದ ವರದಿಯೊಂದಿಗೆ ಲೆಕ್ಕ ಪತ್ರದ ಹೇಳಿಕೆಯನ್ನು, ಮತ್ತು ಮುಂದಿನ ವರುಷದ ಸೂಚಿತ ಕಾರ್ಯಗಳ ಕಾರ್ಯಕ್ರಮವನ್ನು ಸಭೆಯಲ್ಲಿ ಓದಿ ತೋರಿಸತಕ್ಕದ್ದು. ಮತ್ತು ಅವರ ಬಗ್ಗೆ ಅರ್ಥವಿವರಣೆ ಮಾಡತಕ್ಕದ್ದು.

**ವಿವೇಚನೆ**

ಪ್ರತಿ ವರುಷವೂ ಪಂಚಾಯತವು ಒಂದು ಗೊತ್ತು ಮಾಡಿದ ತಾರೀಖಿಗೆ ತಾಲೂಕ ಬೋರ್ಡ ಮುಖ್ಯ ಕಾರ್ಯಾಧಿಕಾರಿಯ ಕಡೆಗೆ ಒಂದು ವಿವರವಾದ

ಹೇಳಿಕೆಯನ್ನು ಕಳಿಸತಕ್ಕದ್ದು. ಆ ಹೇಳಿಕೆಯಲ್ಲಿ ಪ್ರಾರಂಭದ ಶಿಲ್ಕು ಎಷ್ಟಿದೆ, ಮುಂದಿನ ವರುಷ ಆದಾಯವೆಷ್ಟಾಗಬಹುದು ಎಂಬುದರ ಅಂದಾಜು, ಪಂಚಾಯತವು ಮಾಡಲೇಬೇಕಾದ ಕರ್ತವ್ಯಗಳ ಬಗ್ಗೆ ಮಾಡಬೇಕೆಂದಿರುವ ಖರ್ಚಿನ ಅಂದಾಜು ಪಂಚಾಯತವು ಮಾಡಬಹುದಾದ ಕಾರ್ಯಗಳ ಮೇಲೆ ಖರ್ಚುಮಾಡಬೇಕೆಂದಿರುವ ಅಂದಾಜು ಇರತಕ್ಕದ್ದು. ತಾಲೂಕ ಬೋರ್ಡದ ಮುಖ್ಯ ಅಧಿಕಾರಿಯು ಪರಿಶೀಲನೆ ಮಾಡಿ, ಹೇಳಿಕೆಯಲ್ಲಿ ನಮೂದಿಸಿದ ವೆಚ್ಚದ ವಿವರಗಳನ್ನು ಇದ್ದಕ್ಕಿದ್ದಂತೆ ಒಪ್ಪಬಹುದು ಇಲ್ಲವೆ ಹೆಚ್ಚು ಕಡಿಮೆ ಮಾಡಬಹುದು. ಆದರೆ, ಪಂಚಾಯತದ ನಿಧಿಯಾಗಿ ಆ ವರುಷಕ್ಕೆ ಪ್ರಾರಂಭದ ಶಿಲ್ಕು ಹಾಗೂ ಆದಾಯದ ಅಂದಾಜು ಕೂಡಿ ಆದ ಹಣದಕಿಂತ ಹೆಚ್ಚು ಮಾಡುವ ಅಧಿಕಾರವು ಆ ತಾಲೂಕ ಬೋರ್ಡದ ಮುಖ್ಯ ಕಾರ್ಯಾಧಿಕಾರಿಗೆ ಇಲ್ಲ. ಅಂದರೆ ಇದ್ದ ಹಣದಲ್ಲಿ ವೆಚ್ಚವನ್ನು ಬೇರೆ ಬೇರೆ ವಿಷಯಗಳಿಗೆ ಹಂಚಿ ಹಾಕಲು ಹಾಕಿದ್ದನ್ನು ಹೆಚ್ಚು ಕಡಿಮೆ ಮಾಡಲು ಮಾತ್ರ ಮುಖ್ಯ ಕಾರ್ಯಾಧಿಕಾರಿಗೆ ಅಧಿಕಾರ ಇದೆ. ವೆಚ್ಚದ ವಿವರ ತಯಾರಿಸುವುದು ಪಂಚಾಯತದ ಕಾರ್ಯವಾದರೂ ಅದನ್ನು ಒಪ್ಪುವುದು ತಾಲೂಕ ಬೋರ್ಡದ ಮುಖ್ಯ ಕಾರ್ಯಾಧಿಕಾರಿಯ ಕಡೆಗೆ ಎಂಬುದನ್ನು ಲಕ್ಷಿಸಬೇಕು.

ಸೆಕ್ರೆಟರಿಯು ಆಡಳಿತದ ವರದಿಯನ್ನು ತಯಾರಿಸಿ ಈ ಲೆಕ್ಕಪತ್ರದ ಹೇಳಿಕೆಯ ಜತೆಗೆ ತಾಲೂಕಬೋರ್ಡದ ಮುಖ್ಯ ಕಾರ್ಯಾಧಿಕಾರಿಯ ಕಡೆಗೆ ಗೊತ್ತು ಮಾಡಿದ ತಾರೀಖಿನ ಒಳಗೆ ಕಳಿಸಬೇಕು. ಹೀಗೆ ಕಳಿಸಲ್ಪಡುವ ವರದಿ ಹಾಗೂ ಲೆಕ್ಕಪತ್ರಗಳು ಪಂಚಾಯತದಿಂದ ಒಪ್ಪಿತವಾಗಿರತಕ್ಕದ್ದು.

ಇನ್ನೊಂದು ಮಹತ್ವದ ಮಾತೆಂದರೆ, ಈ ಲೆಕ್ಕಪತ್ರ ಹಾಗೂ ವರದಿಯನ್ನು ಮತ್ತು ಮುಂದಿನ ವರುಷದ ಕಾರ್ಯದ ಕ್ರಮವನ್ನು ತಿಳಿಸುವ ಹಾಗೆ ಹೇಳಿಕೆಯನ್ನು ಸಿದ್ಧಪಡಿಸಿ, ಪಂಚಾಯತವು ಗ್ರಾಮದಲ್ಲಿಯ ವಯಸ್ಕ ಜನರ ಸಭೆ ಕರೆದು ಅವರಿಗೆ ಓದಿ ತೋರಿಸಿ ತಿಳಿಸಿ ಹೇಳಬೇಕು. ಪಂಚಾಯತವು ಚುನಾಯಿತ ಸಂಸ್ಥೆಯಾದರೂ ಜನತೆಯೊಡನೆ ಸಂಪರ್ಕ ಹಾಗೂ ವಿಶ್ವಾಸಗಳಿಸಲು ಜನತೆ ಸೂಚನೆ ಮಾಡಲು ಆಸ್ಪದಕೊಡುವಂತೆ ಅನುಕೂಲವಾಗಲು ಈ ಸಭೆಯು ಉಪಯೋಗವಾಗುವುದಲ್ಲದೆ ಜನರು ಪಂಚಾಯತದ ಕಾರ್ಯದಲ್ಲಿ ಆಸ್ಥೆ ತಳೆಯಲು ಆಸ್ಪದ ದೊರೆಯುತ್ತದೆ.

## ೮೪. ಬಾಕಿ ವಸೂಲಾಗದೆ ಇದ್ದ ಹಣವನ್ನು ಸೂಟು ಬಿಡುವ ಅಧಿಕಾರ

ಕರಾರುಪತ್ರದನ್ವಯವಾಗಿರಲಿ, ಇಲ್ಲವೆ ಬೇರೆ ಯಾವ ರೀತಿಯದಾಗಿರಲಿ ಇಲ್ಲವೆ ಅದರ ಸಂಬಂಧವಾಗಿ ಕೊಡಬೇಕಾಗಿದ್ದ ಯಾವುದೇ ಹಣವಾಗಿರಲಿ,

ಪಂಚಾಯತಕ್ಕೆ ಸಲ್ಲಬೇಕಾಗಿದ್ದ ಬಾಕಿಹಣವಾದ ಯಾವುದೇ ಕರ, ಫೀ, ಇಲ್ಲವೆ ಇತರ ಹಣವು ಪಂಚಾಯತದ ಅಭಿಪ್ರಾಯದಲ್ಲಿ ಇಂತಹ ಕರ, ಫೀ ಇಲ್ಲವೆ ರಕಮು ವಸೂಲಾಗದೆ ಇರುವ ಖಟ್ಟಬಾಕಿಯಾಗಿದೆಯೆಂದು ಆದರೆ, ಗೊತ್ತುಮಾಡಬಹು ದಾದಂತಹ ನಿರ್ಬಂಧ ಮತ್ತು ನಿಯಂತ್ರಣದಂಕಿತವಾಗಿ ಪಂಚಾಯತವು ಅದನ್ನು ಸೂಟಬಿಡಬಹುದು.

ಆದರೆ ಯಾವುದೇ ಕರ, ಫೀ ಇಲ್ಲವೆ ಪಂಚಾಯತದ ಬಾಕಿ ಇತರ ರಕಮು ಇದರ ವಸೂಲಿಯನ್ನು ಡೆಪ್ಯೂಟಿ ಕಮಿಶನರ ಇಲ್ಲವೆ ಅವನ ಅಧೀನ ಯಾವುದೇ ಅಧಿಕಾರಿಗೆ ಒಪ್ಪಿಸಲ್ಪಟ್ಟಾಗ ಇಂತಹ ಕರ, ಫೀ, ಇಲ್ಲವೆ ಹಣ ಇಲ್ಲವೆ ಅದಕ್ಕೆ ಸಂಬಂಧವಾದ ಇತರ ರಕಮು ವಸೂಲಾಗದೆ ಇರುವ ಖಟ್ಟಬಾಕಿಯಾಗಿದೆ ಎಂಬು ದಕ್ಕಾಗಿ ಸೂಟುಬಿಡುವ ಅಧಿಕಾರವು ಡೆಪ್ಯೂಟಿ ಕಮಿಶನರ ಇಲ್ಲವೆ ಅವನಿಂದ ಅಧಿ ಕರಿಸಲ್ಪಟ್ಟ ಯಾವುದೇ ಅಧಿಕಾರಿಯ ಒಪ್ಪಿತದ ಅಂಕಿತವಾಗಿರತಕ್ಕದ್ದು.

**ವಿವೇಚನೆ**

ಕರ, ಫೀ, ವ ಇತರ ರಕಮು ಬಾಕಿಯಾದುದನ್ನು ವಸೂಲಮಾಡಲು ಈ ಹಿಂದೆ ಅನೇಕ ಕ್ರಮಗಳನ್ನು ಸೂಚಿಸಿದೆ. ಆ ಎಲ್ಲ ಕ್ರಮಗಳೂ ವ್ಯರ್ಥವಾಗಿ ವಸೂ ಲಾಗದೆ ಇದ್ದ ಬಾಕಿ ಉಳಿದರೆ, ಅದು ಖಟ್ಟಬಾಕಿ ಎಂದು ಪಂಚಾಯತದ ಅಭಿ ಪ್ರಾಯವಾದರೆ ಈ ಸಂಬಂಧದಲ್ಲಿ ಪಂಚಾಯತಕ್ಕೆ ಹಾಕಲಾದ ನಿರ್ಬಂಧ ಹಾಗೂ ನಿಯಂತ್ರಣಕ್ಕೆ ಒಳಪಟ್ಟ ಸೂಟುಬಿಡುವ ಅಧಿಕಾರ ಪಂಚಾಯತಕ್ಕೆ ಇದೆ. ಆದರೆ ವಸೂಲಿಯ ಕಾರ್ಯವು ಡೆಪ್ಯೂಟಿ ಕಮಿಶನರ ಇಲ್ಲವೆ ಅವನ ಅಧೀನ ಅಧಿಕಾರಿಗೆ ಒಪ್ಪಿಸಲ್ಪಟ್ಟಾಗ ಖಟ್ಟಬಾಕಿ ಸೂಟು ಬಿಡುವಾಗ ಡೆ. ಕಮಿಶನರ ಇಲ್ಲವೆ ಅವನಿಂದ ಅಧಿಕರಿಸಲ್ಪಟ್ಟ ಅಧಿಕಾರಿಯ ಒಪ್ಪಿಗೆ ಇರತಕ್ಕದ್ದು. ಅಂದರೆ ಪಂಚಾಯತವು ಸೂಟು ಬಿಡಬೇಕೆಂದು ಕೇವಲ ತನ್ನಷ್ಟಕ್ಕೆ ತಾನೆ ನಿರ್ಣಯ ಗೆದುಕೊಳ್ಳಲು ಬರುವುದಿಲ್ಲ.

## ೮೫. ಖಟ್ಟಬಾಕಿ ರಕಮು

ಡೆಪ್ಯೂಟಿ ಕಮಿಶನರನ ಅಭಿಪ್ರಾಯದಲ್ಲಿ,

(ಅ) ಯಾವುದೇ ಕರ ಬಾಕಿ, ಇಲ್ಲವೆ ಫೀ ಬಾಕಿ, ಇಲ್ಲವೆ ಪಂಚಾಯತಕ್ಕೆ ಸಲ್ಲಬೇಕಾಗಿದ್ದ ಮತ್ತು ಕಲಮು ೭೭ರ ಉಪಕಲಮು (೭) ರನ್ವಯ ತಹಶೀಲದಾರ ನಿಂದ ವಸೂಲಾಗಬೇಕಾಗಿದ್ದ ಬೇರೆ ಯಾವದೇ ಹಣದ ಬಾಕಿ, ಇಲ್ಲವೆ,

(ಬ) ಈ ಕಾಯಿದೆಯನ್ವಯವಾಗಿ ಇಲ್ಲವೆ ಬೇರೆ ರೀತಿಯಿಂದ ಪಂಚಾಯ ತಕ್ಕೆ ಸಲ್ಲಬೇಕಾಗಿದ್ದ ಬೇರೆ ಯಾವುದೇ ರಕಮು,

ಇಂತಹ ಬಾಕಿ ಇಲ್ಲವೆ ರಕಮು ವಸೂಲಾಗದೆಂದು ಅನ್ನಿಸಿದರೆ, ಅದನ್ನು ಸೂಟು ಬಿಡಬೇಕೆಂದು ಡೆಪ್ಯೂಟಿ ಕಮಿಶನರರನು ನಿರ್ದೇಶಿಸಬಹುದು.

ಆದರೆ ವಾಕ್ಯಾವಳಿ (ಬ) ದನ್ವಯವಾಗಿ ಯಾವುದೇ ರಕಮು ಐದುನೂರು ರೂಪಾಯಿಗಿಂತ ಹೆಚ್ಚಿಗೆ ಇದ್ದರೆ, ಸರಕಾರದ ಪೂರ್ವಸಮ್ಮತಿ ಇದ್ದಹೊರತು ಯಾವ ರಕಮನ್ನು ಸೂಟು ಬಿಡತಕ್ಕದ್ದಲ್ಲ.

**ವಿವೇಚನೆ**

ಕಲಮು ೮೪ ರಲ್ಲಿ ಕೆಲವೊಂದು ಬಾಕಿಯ ಬಗ್ಗೆ ಡೆ. ಕಮಿಶನರ ಒಪ್ಪಿಗೆ ಪಡೆದು ಪಂಚಾಯತವು ಸೂಟುಬಿಡಲು ಅಧಿಕಾರ ಪಡೆದುದಾಗಿತ್ತು. ಈ ಕಲಮಿನಲ್ಲಿ ಡೆ. ಕಮಿಶನರನೇ ನಿರ್ದೇಶನ ಕೊಡುವುದಕ್ಕೆ ಅನುಕೂಲತೆ ಕಲ್ಪಿಸಲಾಗಿದೆ. ತಹಶೀಲದಾರನಿಂದ ವಸೂಲಾಗಿ ಬರಬೇಕಾಗಿದ್ದ ಪಂಚಾಯತದ ಕರ, ಫೀ ಅಲ್ಲವೆ ಬೇರೆ ರಕಮು ಖಟ್ಟಬಾಕಿಯಾಗಿದೆಯೆಂದು ಡೆ. ಕಮಿಶನರನ ಅಭಿಪ್ರಾಯವಾದಲ್ಲಿ ಅದನ್ನು ಸೂಟುಬಿಡಲು ನಿರ್ದೇಶನಮಾಡಬಹುದು. ಆದರೆ ಈ ಕಾಯಿದೆಯ ಪ್ರಕಾರ ಇಲ್ಲವೆ ಬೇರೆ ಕಾಯಿದೆ ಪ್ರಕಾರ ಬಾಕಿ ಬರಬೇಕಾಗಿದ್ದ ಹಣವುವಾಕ್ಯಾವಳಿ (ಬ) ದಲ್ಲಿ ಹೇಳಿದಂತೆ ಇದ್ದರೆ ಅದು ಐದುನೂರಕ್ಕಿಂತ ಹೆಚ್ಚಿಗೆ ಇದ್ದರೆ, ಸರಕಾರದ ಪೂರ್ವಸಮ್ಮತಿ ಇದ್ದ ಹೊರತು ಸೂಟು ಬಿಡಲಿಕ್ಕೆ ಬರುವುದಿಲ್ಲ. ಅಂತಹ ಸಂದರ್ಭದಲ್ಲಿ ಬರಿಯೆ ಡೆ. ಕಮಿಶನರನ ನಿರ್ದೇಶನವಿದ್ದರೆ ಸಾಲದು.

## ೮೬ ಲೆಕ್ಕ ಪತ್ರ ತಪಾಸಣೆ

(೧) ಪಂಚಾಯತಗಳ ಲೆಕ್ಕ ಪತ್ರಗಳನ್ನು ತಪಾಸಣೆ ಮಾಡುವುದಕ್ಕಾಗಿ ಸರಕಾರದಿಂದ ಅಧಿಕರಿಸಲ್ಪಟ್ಟಂತಹ ಯಾವನೊಬ್ಬ ಅಧಿಕಾರಿ (ಇನ್ನು ಮುಂದೆ ಅವನಿಗೆ ಲೆಕ್ಕ ಪತ್ರ ತಪಾಸಿಗ ಎಂದು ಕರೆಯಲಾಗುತ್ತದೆ) ಯಿಂದ ಪಂಚಾಯತದ ಲೆಕ್ಕ ಪತ್ರಗಳ ಪ್ರತಿ ವರುಷ ತಪಾಶಿಸಲ್ಪಡತಕ್ಕದ್ದು.

(೨) ಲೆಕ್ಕ ತಪಾಸಣೆ ಮುಗಿದ ಒಂದು ತಿಂಗಳ ಒಳಗೆ ಲೆಕ್ಕ ತಪಾಸಣೆಯ ವರದಿಯ ನಕಲನ್ನು ಲೆಕ್ಕ ತಪಾಸಿಗನು ಪಂಚಾಯತಕ್ಕೆ ಮತ್ತು ಡೆಪ್ಯೂಟಿ ಕಮಿಶನರನ ಕಡೆಗೆ ಕಳಿಸತಕ್ಕದ್ದು.

(೩) ಲೆಕ್ಕ ತಪಾಸಣಿ ವರದಿಯು ಮುಟ್ಟಿದ ನಂತರ ಆ ವರದಿಯಲ್ಲಿ ತೋರಿಸಿರಬಹುದಾದ ಯಾವುದೇ ದೋಷಗಳನ್ನು ಇಲ್ಲವೆ ಅಕ್ರಮಗಳನ್ನು ಪಂಚಾಯತವು ಸರಿಪಡಿಸಿದ ಬಗ್ಗೆ ಡೆಪ್ಯೂಟಿ ಕಮಿಶನರನ ಕಡೆಗೆ ಸೂಚನೆಯನ್ನು ಕಳಿಸತಕ್ಕದ್ದು. ಇಲ್ಲವೆ, ಅದೇ ಕಾಲಾವಧಿಯಲ್ಲಿ ಪಂಚಾಯತವು ಆ ದೋಷಗಳು ಇಲ್ಲವೆ ಅಕ್ರಮಗಳ ಬಗ್ಗೆ ಕೊಡಬೇಕೆಂದು ಮಾಡಿದ ವಿವರಣೆಯನ್ನು ಡೆಪ್ಯೂಟಿ ಕಮಿಶನರನ ಕಡೆಗೆ ಕಳಿಸತಕ್ಕದ್ದು.

(೪) ಇಂತಹ ಸೂಚನೆ ಇಲ್ಲವೆ ವಿವರಣೆ ಮುಟ್ಟಿದ ನಂತರ ಡೆಪ್ಯೂಟಿ ಕಮಿಶನರನು ಆ ಲೆಕ್ಕ ತಪಾಸಣೆ ವರದಿಯಲ್ಲಿ ಚರ್ಚಿಸಲಾದ ಎಲ್ಲ ಇಲ್ಲವೆ ಯಾವುದೇ ವಿಷಯಗಳ ಸಂಬಂಧವಾಗಿ,

(ಅ) ಪಂಚಾಯತದಿಂದ ಕೊಡಲ್ಪಟ್ಟ ಸೂಚನೆ ಇಲ್ಲವೆ ವಿವರಣೆಯನ್ನು ಒಪ್ಪಬಹುದು. ಮತ್ತು ತಕರಾರನ್ನು ಹಿಂತೆಗೆದುಕೊಳ್ಳಲು ಹುಕುಮು ಮಾಡ ಬಹುದು; ಇಲ್ಲವೆ

(ಬ) ಆ ವಿಷಯವು ಮುಂದಿನ ಸಲದ ಲೆಕ್ಕ ತಪಾಸಣೆಯ ಕಾಲಕ್ಕೆ ಇಲ್ಲವೆ ಅದಕ್ಕೂ ಮೊದಲು ಯಾವುದೇ ತಾರೀಖಿಗೆ ಪುನಃ ಪರಿಶೀಲನೆಯಾಗಬೇಕೆಂದು ನಿರ್ದೇಶಿಸಬಹುದು.

(ಕ) ಲೆಕ್ಕ ತಪಾಸಣೆ ವರದಿಯಲ್ಲಿ ತೋರಿಸಲಾದ ದೋಷಗಳನ್ನು ಇಲ್ಲವೆ ಅಕ್ರಮಗಳನ್ನು ಇಲ್ಲವೆ ಅವುಗಳಲ್ಲಿ ಯಾವುದನ್ನು ಪಂಚಾಯತದಿಂದ ನಿವಾರಿಸಲ್ಪ ಡಲು ಇಲ್ಲವೆ ಸರಿ ಪಡಿಸಲ್ಪಡಲು ಆದೇಶಿಸಬಹುದು.

(ಡ) ತನಗೆ ಆವಶ್ಯಕವೆನಿಸಿದ ಹಾಗೆ ಇನ್ನು ಹೆಚ್ಚಿನ ವಿಚಾರಣೆ ಮಾಡಿ ಡೆಪ್ಯೂಟಿ ಕಮಿಶನರನಿಗೆ ಯಾವುದು ಕಾಯಿದೆ ವಿರುದ್ಧವಾಗಿದೆಯೆಂದು ಕಂಡು ಬರುವುದೋ ಅಂತಹ ಯಾವುದೇ ವೆಚ್ಚದ ವಿಷಯವನ್ನು ನಿರಾಕರಿಸಬಹುದು. ಮತ್ತು ಹಾಗೆ ನಿರಾಕರಿಸಿದ ಹಣವನ್ನು ಕಾಯಿದೆ ವಿರುದ್ಧವಾಗಿ ಕೊಡಮಾಡಿದ ಇಲ್ಲವೆ ಅಧಿಕರಿಸಿದ ವ್ಯಕ್ತಿಯ ಮೇಲೆ ಹಾಕಬಹುದು, ಮತ್ತು

(ಅ) ಯಾರ ಮೇಲೆ ಹೀಗೆ ಹಣವನ್ನು ಹಾಕಲಾಗಿರುವುದೋ ಅವರು ಸದಸ್ಯನಿದ್ದರೆ, ಅವನ ವಿರುದ್ಧ ಕಲಮು ೨೦೮ ರ ಉಪಕಲಮು (೨) ಮತ್ತು (೩) ರಲ್ಲಿ ನಿರ್ದಿಷ್ಟಪಡಿಸಿದ ರೀತಿಯಲ್ಲಿ ಕ್ರಮವನ್ನು ಕೈಕೊಳ್ಳತಕ್ಕದ್ದು.

(ಬ) ಯಾರ ಮೇಲೆ ಹೀಗೆ ಹಣವನ್ನು ಹಾಕಲಾಗಿರುವುದೋ ಅವನು ಸದಸ್ಯನಾಗಿರದಿದ್ದರೆ, ಸಂಬಂಧಪಟ್ಟ ವ್ಯಕ್ತಿಯಿಂದ ವಿವರಣೆ ಕೇಳಿಕೊಂಡು ಆ ವ್ಯಕ್ತಿಯು ಅಂತಹ ಹಣವನ್ನು ಪಂಚಾಯತಕ್ಕೆ ಸಲ್ಲಿಸಬೇಕೆಂದು ಡೆಪ್ಯೂಟಿ ಕಮಿಶ ನರನು ಲಿಖಿತ ಹುಕುಮಿನ ಮೂಲಕ ಆದೇಶಿಸಬಹುದು. ಮತ್ತು ಹಣವು ಹಾಗೆ ಕೊಡಲ್ಪಡದಿದ್ದರೆ, ಆ ಹಣವು ಭೂಕಂದಾಯದ ಬಾಕಿಯೆಂಬಂತೆ ಡೆಪ್ಯೂಟಿ ಕಮಿಶನರನು ವಸೂಲ ಮಾಡತಕ್ಕದ್ದು. ಮತ್ತು ಪಂಚಾಯತ ನಿಧಿಗೆ ಜಮಾ ಮಾಡತಕ್ಕದ್ದು.

**ವಿವೇಚನೆ**

ಸಾರ್ವಜನಿಕ ಸಂಸ್ಥೆಯಾದ ಪಂಚಾಯತದ ಲೆಕ್ಕ ಪತ್ರಗಳು ತಪಾಸಿ ಸಲ್ಪಡತಕ್ಕದ್ದು ನ್ಯಾಯವಾದ ವಿಷಯ. ಪಂಚಾಯತಗಳ ಲೆಕ್ಕವನು

ತಪಾಸ ಮಾಡಲು ಒಬ್ಬ ಸರಕಾರದಿಂದ ಅಧಿಕೃತ ವ್ಯಕ್ತಿಯು ಇರುವನು. ಅವನಿಗೆ ಲೆಕ್ಕ ತಪಾಸಿಗ ಎಂದು ಅನ್ನುವರು. ಆ ಲೆಕ್ಕ ತಪಾಸಿಗನು ತನ್ನ ತಪಾಸಣೆ ಮುಗಿದ ಒಂದು ತಿಂಗಳ ಒಳಗೆ ವರದಿಯ ನಕಲನ್ನು ಒಂದು ಪ್ರತಿ ಪಂಚಾಯತಕ್ಕೆ :ಇನ್ನೊಂದು ಪ್ರತಿ ಡೆಪ್ಯೂಟಿ ಕಮಿಶನರ ಕಡೆಗೆ ಕಳಿಸತಕ್ಕದ್ದು. ಪಂಚಾಯತಕ್ಕೆ ವರದಿಯ ನಕಲು ಬಂದ ಕೂಡಲೇ ಅದು ಅದರಲ್ಲಿ ತೋರಿಸಲಾದ ದೋಷ ಇಲ್ಲವೆ ಅಕ್ರಮಗಳನ್ನು ಸರಿಪಡಿಸಿ ಆ ಬಗ್ಗೆ ಮೂರು ತಿಂಗಳ ಒಳಗೆ ಡೆ. ಕಮಿಶನರರಿಗೆ ತಿಳಿಸಬೇಕು. ದೋಷಗಳು ಇಲ್ಲವೆ ಅಕ್ರಮಗಳು ಸರಿಪಡಿಸಲ್ಪಡುವ ಬದಲು ವಿವರಣೆಗೆ ಯೋಗ್ಯವಾಗಿದ್ದರೆ ಹಾಗೆ ವಿವರಣೆಯನ್ನು ಮೂರು ತಿಂಗಳ ಅವಧಿಯೊಳಗೆ ಡೆ. ಕಮಿಶನರ ಕಡೆಗೆ ಕಳಿಸತಕ್ಕದ್ದು. ಅಂದರೆ ಲೆಕ್ಕ ತಪಾಸಣಿ ವರದಿಯ ಮೇಲೆ ಕೈಕೊಂಡ ಕ್ರಮದಬಗ್ಗೆ ಮೂರು ತಿಂಗಳಲ್ಲಿ ಡೆ.ಕಮಿಶನರಿಗೆ ತಿಳಿಸಬೇಕೆಂದ ಮೇಲೆ ಕ್ರಮ ೩ ತಿಂಗಳ ಒಳಗೆ ತೆಗೆದುಕೊಳ್ಳಲ್ಪಟ್ಟಿರಬೇಕು. ಪಂಚಾಯತವು ಸರಿಪಡಿಸಿದ್ದನ್ನು ಇಲ್ಲವೆ ಕೊಟ್ಟ ವಿವರಣೆಯನ್ನು ಡೆ. ಕಮಿಶನರನು ಒಪ್ಪಬಹುದು. ಇಲ್ಲವೆ ಪುನಃ ಪರಶೀಲನೆಮಾಡಲು ಅಕ್ರಮ ತಿದ್ದುಪಡಿ ಮಾಡಲು ಆದೇಶಿಸಬಹುದು. ಹೀಗೆ ವಿಚಾರಣೆ ಮಾಡುತ್ತಿರುವಾಗ ಯಾವುದೊಂದು ವೆಚ್ಚದ ವಿಷಯವು ಬೇಕಾಯಿದೆಶೀರ ಆಗಿದೆಯೆಂದು ಡೆ. ಕಮಿಶನರಿಗೆ ಕಂಡುಬಂದರೆ, ಯಾರು ಆ ವೆಚ್ಚವನ್ನು ಮಾಡಿಸಿರುವರೋ ಅವರು ಅದನ್ನು ತುಂಬಬೇಕೆಂದು ವಿಧಿಸಬಹುದು. ಆ ವ್ಯಕ್ತಿಯು ಸದಸ್ಯನಿದ್ದರೆ ಒಂದು ದಾರಿ. ಕಲಮು ೨೦೮ ಆದರ ಬಗ್ಗೆ ಹೇಳುವುದು. ಸದಸ್ಯನಲ್ಲದ ವ್ಯಕ್ತಿಯು ಆಗಿದ್ದರೆ ಆ ಹಣವನ್ನು ಅವನ ಕಡೆಯಿಂದ ಭೂಕಂದಾಯದ ಬಾಕಿ ಎಂಬಂತೆ ವಸೂಲ ಮಾಡಿ ಅದನ್ನು ಪಂಚಾಯತ ನಿಧಿಗೆ ಜಮಾ ಮಾಡಬೇಕು. ಅಂದರೆ ಅಧಿಕೃತ ಹಾಗೂ ಕಾಯಿದೇಶೀರ ವೆಚ್ಚಕ್ಕೆ ಮನ್ನಣೆಯು ದೊರೆತು, ಕೊಟ್ಟ ವಿವರಣೆಯು ಸ್ವೀಕೃತವಾಗುವುದು. ಬೇಕಾಯಿದೇಶೀರ ವೆಚ್ಚವನ್ನು ಮಾಡಿಸಿದವರೇ ಹೊಣೆ ಹೊರಬೇಕು. ಆದ್ದರಿಂದ ಸಂಬಂಧಪಟ್ಟವರು ಎಚ್ಚರ ವಹಿಸಬೇಕು. ಎಂದು ಸೂಚನೆ ಇದೆ.

## ಪ್ರಕರಣ : ೫ ಮುನಸಿಪಾಲಟಿಯನ್ನು ಪಂಚಾಯತವಾಗಿ ಮತ್ತು ಪಂಚಾಯತವನ್ನು ಮುನಸಿಪಾಲಟಿಯಾಗಿ ಮಾರ್ಪಡಿಸುವ ಮತ್ತು ಪಂಚಾಯತಗಳನ್ನು ಜೋಡಿಸುವ ಇಲ್ಲವೆ ವಿಭಾಗಿಸುವ ಬಗ್ಗೆ ಶರತುಗಳು.

### ೮೭. ಅರ್ಥವಿವರಣೆ

ಈ ಪ್ರಕರಣದ ಉದ್ದೇಶಕ್ಕಾಗಿ ಸಂಬಂದಾರ್ಥವು ಬೇರೆಯಾಗಿ ಹೇಳದಿದ್ದರೆ-

(ಅ) "ಮುನಸಿಪಲ್ ಕಾವ್ಪುನ್ಸಿಲ್" ಎಂಬ ಶಬ್ದವು ಮುನಸಿಪಲ್ ಕಾವುನ್ಸಿಲ್‌ದ ಅಧಿಕಾರಗಳನ್ನು ನಿರ್ವಹಿಸಲಿಕ್ಕೆ ಮತ್ತು ಕಾರ್ಯಗಳನ್ನು ಮಾಡಲಿಕ್ಕೆ ನೇಮಕವಾದ ವ್ಯಕ್ತಿ ಇಲ್ಲವೆ ವ್ಯಕ್ತಿಗಳನ್ನು ಒಳಗೊಳ್ಳುತ್ತದೆ.

(ಬ) "ಪಂಚಾಯತ" ಎಂಬ ಶಬ್ದವು ಕಲಮು ೨೦೩ ರನ್ವಯವಾಗಿ ಪಂಚಾಯತದ ಅಧಿಕಾರಗಳನ್ನು ನಿರ್ವಹಿಸಲು ಮತ್ತು ಕಾರ್ಯಗಳನ್ನು ಮಾಡಲು ನೇಮಕವಾದ ವ್ಯಕ್ತಿ ಇಲ್ಲವೆ ವ್ಯಕ್ತಿಗಳನ್ನು ಒಳಗೊಳ್ಳುತ್ತದೆ.

**ವಿವೇಚನೆ**

ಪಂಚಾಯತವು ಮತ್ತು ಮುನಸಿಪಲ್ ಕಾವುನ್ಸಿಲ್ ಎಂಬುವು ಸಾಮೂಹಿಕ ಸ್ವರೂಪದ ಸಾರ್ವಜನಿಕ ಸಂಸ್ಥೆಗಳು. ಸಂಸ್ಥೆಯು ಹೆಸರಿನಿಂದ ವ್ಯಕ್ತಿಗಳು ಕಾರ್ಯ ಮಾಡಬೇಕಾಗುತ್ತದೆ. ಆದ್ದರಿಂದ ಸಂಸ್ಥೆ ಎಂದು ಸಂಬೋಧಿಸಲ್ಪಟ್ಟಾಗ ಅದರಿಂದ ಬಂದ ಅಧಿಕಾರ ಕರ್ತವ್ಯಗಳನ್ನು ನೆರವೇರಿಸುವ ವ್ಯಕ್ತಿ ಇಲ್ಲವೆ ವ್ಯಕ್ತಿಗಳು. ಆದರೆ ಈ ವ್ಯಕ್ತಿಗಳ ವೈಯುಕ್ತಿಕ ಅಸ್ತಿತ್ವ ಕುರಿತಾಗಲೀ ವೈಯುಕ್ತಿಕ ಕರ್ತವ್ಯಗಳಾಗಲೀ ಇವಕ್ಕೆ ಸಂಬಂಧವಿಲ್ಲ ಎಂಬುವದನ್ನು ತಿಳಿಸಲು ಈ ಅರ್ಥವಿವರಣೆ ಇದೆ. ಸಂಸ್ಥಾತ್ಮಕವಾಗಿರುವ ಮುನಸಿಪಲ್ ಕಾವುನ್ಸಿಲ್ ಹಾಗೂ ಪಂಚಾಯತ ಶಬ್ದಗಳಲ್ಲಿ ಆಯಾ ಸಂಸ್ಥೆಯ ಹೆಸರಿನಿಂದ ಅದರ ಅಧಿಕಾರ ನಿರ್ವಹಿಸಿ ಅದರ ಕರ್ತವ್ಯವನ್ನು ಮಾಡುವ ವ್ಯಕ್ತಿ ಇಲ್ಲವೆ ವ್ಯಕ್ತಿಗಳೂ ಬರುವರು ಎಂಬುದನ್ನು ತಿಳಿಯಬೇಕು.

## ೮೮. ಮುನಸಿಪಾಲಟಿಯನ್ನು ಪಂಚಾಯತವನ್ನಾಗಿ ಮಾರ್ಪಡಿಸಿದುದರ ಪರಿಣಾಮ

ಮುನಸಿಪಾಲಟಿಗೆ ಸಂಬಂಧಪಟ್ಟ ಕಾಯದೆಯನ್ವಯವಾಗಿ ಹೊರಡಿಸಿದ ಪ್ರಕಟನೆ ಪರಿಪತ್ರದ ಸತ್ವದಿಂದ ಯಾವುದೇ ಸ್ಥಾನಿಕ ಪ್ರದೇಶವು ಮುನಸಿಪಾಲಟಿಯಾಗಿ ಉಳಿಯದಿದ್ದಾಗ ಮತ್ತು ಕಲಮು ೩ ರನ್ವಯವಾಗಿ ಗ್ರಾಮವೆಂದು (ಈ ಮುಂದೆ ಈ ಕಲಮಿನಲ್ಲಿ ಗ್ರಾಮವೆಂದು ಸಂಬೋಧಿಸಲ್ಪಟ್ಟದ್ದು) ಸಾರಲ್ಪಟ್ಟಾಗ ಅಂತಹ ಸ್ಥಾನಿಕ ಪ್ರದೇಶವು ಗ್ರಾಮವೆಂದು ಸಾರಲ್ಪಟ್ಟ ದಿವಸದಿಂದ (ಈ ಮುಂದೆ ಈ ಕಲಮಿನಲ್ಲಿ ಅದಕ್ಕೆ ನಿರ್ದಿಷ್ಟಪಡಿಸಲಾದ ತಾರೀಖು ಎಂದು ಅನ್ನಲಾಗಿದೆ) ಈ ಕೆಳಗಿನ ಪರಿಣಾಮಗಳು ಉಂಟಾಗುವುವು. ಅವು ಯಾವುವೆಂದರೆ—

(ಅ) ಇಂತಹ ಸ್ಥಾನಿಕ ಪ್ರದೇಶದಲ್ಲಿಯ ಮುನಸಿಪಲ್ ಕಾವುನ್ಸಿಲು ಅಸ್ತಿತ್ವದಲ್ಲಿ ಉಳಿವುದಿಲ್ಲ. ಇಲ್ಲವೆ ಕೆಲಸ ಮಾಡುವದನ್ನು ನಿಲ್ಲಿಸುವುದು.

(ಬ) ಆ ಮುನಸಿಪಾಲಟಿಯ ಕೌನ್ಸಿಲರರಾಗಿದ್ದ ವ್ಯಕ್ತಿಗಳನ್ನುಳ್ಳ ಒಂದು ಮಧ್ಯಂತರ ಪಂಚಾಯತವು ಆ ಗ್ರಾಮಕ್ಕೆ ರಚಿಸಲ್ಪಡತಕ್ಕದ್ದು ಮತ್ತು ಮುನಸಿಪಲ್ ಕಾವುನ್ಸಿಲ್‌ದ ಪ್ರೆಸಿಡೆಂಟ ಮತ್ತು ವಾಯಿಸಪ್ರೆಸಿಡೆಂಟರು ಅನುಕ್ರಮವಾಗಿ ಮಧ್ಯಂತರ ಪಂಚಾಯತದ ಚೇರಮನ್ನ ಮತ್ತು ಉಪಚೇರಮನ್ ಎಂದು ಗಣಿಸಲ್ಪಡತಕ್ಕದ್ದು.

(ಕ) ಮುನಸಿಪಲ್ ಫಂಡದಲ್ಲಿಯ ವೆಚ್ಚವಾಗದೆ ಇದ್ದ ಶಿಲ್ಕು ಮತ್ತು (ತೆರಿಗೆ, ಕರ, ಮತ್ತು ಫೀಯ ಬಾಕಿಯನ್ನು ಒಳಗೊಂಡು) ಮುನಸಿಪಲ ಕೌನ್ಸಿಲ್ ಒಡೆತನದಲ್ಲಿದ್ದ ಆಸ್ತಿಯು ಮತ್ತು ಇಂತಹ ಪ್ರಕಟನೆ ಪರಿಪತ್ರದ ಮುಂಚಿತವಾಗಿ ಮುನಸಿಪಲ್ ಕಾವುನ್ಸಿಲದಲ್ಲಿ ಅಂತರ್ಗತವಾಗಿದ್ದ ಎಲ್ಲ ಹಕ್ಕು ಹಾಗೂ ಅಧಿಕಾರಗಳು ಅವಕ್ಕೆ ಸಂಬಂಧಪಟ್ಟ ಎಲ್ಲ ಬಾಧ್ಯತೆ ಹಾಗೂ ಹೊಣೆಗಾರಿಕೆಗಳಿಗಂಕಿತವಾಗಿ ಪಂಚಾಯತ ನಿಧಿಯೆಂದು ಕಲಮು ೪೯ ರ ಉಪಕಲಮು (೧) ರ ಶರತುಗಳನುಸಾರವಾಗಿ ಹೊಸಪಂಚಾಯತವು ರಚಿಸಲ್ಪಡುವವರೆಗೆ ಮಧ್ಯಂತರ ಪಂಚಾಯತದ ಅಂತರ್ಗತವಾಗಿರತಕ್ಕದ್ದು.

(ಡ) ನಿರ್ದಿಷ್ಟಪಡಿಸಲಾದ ತಾರೀಖಿನಕಿಂತ ತತ್‌ಕ್ಷಣ ಮುಂಚಿತವಾಗಿ ಆ ಸ್ಥಾನಿಕ ಪ್ರದೇಶದ ಸಂಬಂಧವಾಗಿ, ಮುನಸಿಪಲ್ ಕಾಯಿದೆಯನ್ವಯವಾಗಿ ಮಾಡಿದ, ಹೊರಡಿಸಿದ ಇಲ್ಲವೆ ದಯಪಾಲಿಸಿದ ಯಾವುದೇ ನೇಮಕ, ಪ್ರಕಟನೆ, ನೋಟೀಸು, ಕರ, ಹುಕುಮು ಯೋಜನೆ, ಲಾಯಸೆನ್ಸು, ಪರವಾನಗಿ, ನಿಯಮ, ಪೋಟನಿಯಮ ಇಲ್ಲವೆ ನಮೂನೆ, ಜಾರಿಯಲ್ಲಿ ಉಳಿಯತಕ್ಕದ್ದು ಮತ್ತು ಈ ಕಾಯಿದೆಯನ್ವಯವಾಗಿ ಯಾವುವೇ ನೇಮಕ, ಪ್ರಕಟನೆ, ನೋಟೀಸು, ಕರ, ಹುಕುಮು, ಯೋಜನೆ, ಲಾಯಸೆನ್ಸು, ಪರವಾನಗಿ, ನಿಯಮ, ಪೋಟನಿಯಮ ಇಲ್ಲವೆ ನಮೂನೆ ಮಾಡಿ ಹೊರಡಿಸಿ ಇಲ್ಲವೆ ದಯಪಾಲಿಸಿ ಅವುಗಳು ಹಿಂದೆ ಸರಿಸಲ್ಪಡುವ ಇಲ್ಲವೆ ತಿದ್ದುಪಡಿಮಾಡುವ ತನಕ ಆ ಗ್ರಾಮದ ಸಂಬಂಧವಾಗಿ ಮಾಡಿದುದೆಂದು, ಹೊರಡಿಸಿದುದೆಂದು ಇಲ್ಲವೆ ದಯಪಾಲಿಸಲಾದುದೆಂದು ಗಣಿಸಲ್ಪಡತಕ್ಕದ್ದು.

(ಇ) ನಿರ್ದಿಷ್ಟಪಡಿಸಲಾದ ತಾರೀಖಿನಕಿಂತ ತತ್‌ಕ್ಷಣ ಮುಂಚಿತವಾಗಿ, ಅಂತಹ ಸ್ಥಾನಿಕ ಪ್ರದೇಶದ ಸಂಬಂಧವಾಗಿ, ಮುನಸಿಪಲ್ ಕಾಯಿದೆಯನ್ವಯವಾಗಿ, ಮಾಡಿದ ಇಲ್ಲವೆ ಅಧಿಕೃತವಾಗಿಸಿದ, ಎಲ್ಲ ಮುಂಗಡ ಪತ್ರಗಳ ಅಂದಾಜುಗಳು, ಕರಾಕರಣೆಗಳು, ಕರಾಕರಣೆಯ ಪಟ್ಟಿಗಳು, ಮೌಲ್ಯಮಾಪನಗಳು, ಇಲ್ಲವೆ ಅಳತೆಗಳು ಈ ಕಾಯಿದೆಯನ್ವಯವಾಗಿ ಮಾಡಲ್ಪಟ್ಟಿವೆಯೆಂದು ಇಲ್ಲವೆ ಅಧಿಕೃತವಾಗಿಸಲ್ಪಟ್ಟಿವೆಯೆಂದು ಗಣಿಸಲ್ಪಡತಕ್ಕದ್ದು.

(ಫ) ನಿರ್ದಿಷ್ಟಪಡಿಸಲಾದ ತಾರೀಖಿನಕಿಂತ ತತ್‌ಕ್ಷಣ ಮುಂಚಿತವಾಗಿ ಮುನಸಿಪಲ್ ಕಾವುನ್ಸಿಲದಿಂದ ಇಲ್ಲವೆ ಅದರ ಪರವಾಗಿ ಹೊಣೆ ಹೊತ್ತ ಎಲ್ಲ ಸಾಲಗಳು, ಮತ್ತು ಋಣಗಳು, ಮತ್ತು ಮಾಡಿಕೊಂಡ ಎಲ್ಲ ಕರಾರುಗಳು, ಮತ್ತು ಆ ನಿರ್ದಿಷ್ಟಪಡಿಸಲಾದ ತಾರೀಖಿಗೆ ಜೀವಂತವಾಗಿದ್ದವುಗಳು ಈ ಕಾಯಿದೆಯಿಂದ ಪಂಚಾಯತಕ್ಕೆ ದಯಪಾಲಿಸಲಾದ ಅಧಿಕಾರಗಳ ನಿರ್ವಹಣೆಯಲ್ಲಿ ಪಂಚಾಯತದಿಂದ ಹೊಣೆ ಹೊತ್ತವುಗಳು ಮತ್ತು ಮಾಡಲ್ಪಟ್ಟವು ಎಂದು ಗಣಿಸಲ್ಪಡತಕ್ಕದ್ದು.

(ಗ) ನಿರ್ದಿಷ್ಟಪಡಿಸಲಾದ ತಾರೀಖಿನಕಿಂತ ತತ್‌ಕ್ಷಣ ಮುಂಚಿತವಾಗಿ ಮುನಸಿಪಲ್ ಕಾವುನ್ಸಿಲದ ನೌಕರಿಯಲ್ಲಿದ್ದ ಎಲ್ಲ ಅಧಿಕಾರಿಗಳು ಮತ್ತು ಸೇವಕರು ಎಂದು ಆಗತಕ್ಕದ್ದು. ಮತ್ತು ಈ ಕಾಯಿದೆಯ ಕಕ್ಷೆಗಳಿಗನುಸಾರವಾಗಿ ಬೇರೆ ವ್ಯವಸ್ಥೆ ಮಾಡಲ್ಪಡುವ ತನಕ, ನಿರ್ದಿಷ್ಟಪಡಿಸಲಾದ ತಾರೀಖಿನಕಿಂತ ಮೊದಲು ಯಾವ ಸಂಬಳ ಮತ್ತು ಭತ್ತೆಗೆ ಬಾಧ್ಯಸ್ಥರಾಗಿದ್ದರೋ ಮತ್ತು ಯಾವ ನೌಕರಿಯ ಕರಾರುಗಳಿಗೆ ಅಂಕಿತರಾಗಿದ್ದರೋ ಅಂತಹ ಸಂಬಳ ಮತ್ತು ಭತ್ತೆಗಳನ್ನು ಸ್ವೀಕರಿಸತಕ್ಕದ್ದು. ಮತ್ತು ಅಂತಹ ನೌಕರಿಯ ಕರಾರುಗಳಿಗೆ ಅಂಕಿತರಾಗಿರತಕ್ಕದ್ದು.

ಆದರೆ, ಪಂಚಾಯತದ ನೌಕರಿಯ ಅಗತ್ಯದ ದೃಷ್ಟಿಯಿಂದ ಅವಶ್ಯವಲ್ಲವೆಂದು ಇಲ್ಲವೆ ಹೊಂದಿಕೆಯಾಗುವುದಿಲ್ಲವೆಂದು ಪಂಚಾಯತದ ಅಭಿಪ್ರಾಯವಾದರೆ ಸರಕಾರದ ಪೂರ್ವ ಸಮ್ಮತಿಯಂಕಿತವಾಗಿ ಪಂಚಾಯತವು ಯಾವುದೇ ಅಧಿಕಾರಿಯನ್ನು ಇಲ್ಲವೆ ಸೇವಕನನ್ನು ಅವನ ನೌಕರಿಯ ಕರಾರುಗಳ ಪ್ರಕಾರ ಅಂತಹ ಅಧಿಕಾರಿಗೆ ಇಲ್ಲವೆ ಸೇವಕನಿಗೆ ಕೊಡಬೇಕಾದ ನೋಟೀಸು ಕೊಟ್ಟು ನೌಕರಿಯಿಂದ ಕಡಿಮೆ ಮಾಡಲು ಪಂಚಾಯತವು ಸಮರ್ಥವಾಗಿರತಕ್ಕದ್ದು. ಮತ್ತು ಯಾರ ನೌಕರಿಯು ಕಡಿಮೆ ಮಾಡಲ್ಪಟ್ಟಿರುವುದೋ ಅಂತಹ ಪ್ರತಿಯೊಬ್ಬ ಅಧಿಕಾರಿ ಇಲ್ಲವೆ ಸೇವಕನು ಯಾವ ಮುನಸಿಪಲ್ ಕಾವುನ್ಸಿಲದ ನೌಕರಿಯಲ್ಲಿರುವನೋ ಆ ಮುನಸಿಪಲ್ ಕಾವುನ್ಸಿಲವು ಅಸ್ತಿತ್ವದಲ್ಲಿ ಉಳಿದಿದ್ದರೆ ಅಶಕ್ತತೆಯ ಕಾರಣದ ಮೂಲಕ ಯಾವ ರಜೆ,ಪೆನಶನು, ಪ್ರೊವಿಡೆಂಟ ಫಂಡ ಮತ್ತು ಗ್ರಾಚೂಟಿಗಳಿಗೆ ಬಾಧ್ಯಸ್ಥನಾಗುತ್ತಿದ್ದನೋ ಅಂತಹ ರಜೆ, ಪೆನಶನು, ಪ್ರೊವಿಡೆಂಟ ಫಂಡ ಮತ್ತು ಗ್ರಾಚೂಟಿ ತೆಗೆದುಕೊಳ್ಳಲು ಇಲ್ಲವೆ ಪಡೆಯಲು ಬಾಧ್ಯಸ್ಥನಾಗತಕ್ಕದ್ದು.

(ಹ) ನಿರ್ದಿಷ್ಟಪಡಿಸಲಾದ ತಾರೀಖಿನಕಿಂತ ತತ್‌ಕ್ಷಣ ಮುಂಚಿತವಾಗಿ ಮುನಸಿಪಲ್ ಕಾವುನ್ಸಿಲದ ಎದುರು ನಡೆಯುತ್ತಿದ್ದ ಎಲ್ಲ ಪ್ರಕರಣಗಳು

ಪಂಚಾಯತಕ್ಕೆ ಹಸ್ತಾಂತರಿಸಲ್ಪಟ್ಟಂಥವುಗಳೆಂದು ಗಣಿಸಲ್ಪಡತಕ್ಕದ್ದು. ಮತ್ತು ಪಂಚಾಯತದಿಂದ ಮುಂದುವರೆಸಲ್ಪಟ್ಟಂಥವು ಎಂದು ಗಣಿಸಲ್ಪಡತಕ್ಕದ್ದು.

(ಈ) ನಿರ್ದಿಷ್ಟಪಡಿಸಲಾದ ತಾರೀಖಿನಕಿಂತ ತತ್‌ಕ್ಷಣ ಮುಂಚಿತವಾಗಿ ಮುನಸಿಪಲ್ ಕಾವುನ್ಸಿಲದ ಎದುರು ನಡೆಯುತ್ತಿದ್ದ ಎಲ್ಲ ಅಪೀಲಗಳು ವ್ಯಾವಹಾರಿಕವಾಗಿರುವಷ್ಟು ಮಟ್ಟಿಗೆ, ಅವು ದಾಖಲ ಆದ ತಾರೀಖಿಗೆ ಆ ಸ್ಥಾನಿಕ ಪ್ರದೇಶವು ಗ್ರಾಮದಲ್ಲಿ ಸಮಾವೇಶವಾಗಿದ್ದ ಹಾಗಿ ನಿಕಾಲಿ ಮಾಡಲ್ಪಡತಕ್ಕದ್ದು.

(ಜ) ನಿರ್ದಿಷ್ಟಪಡಿಸಲಾದ ತಾರೀಖಿಗೆ, ಚಾಲತಿಯಲ್ಲಿದ್ದ, ಮುನಸಿಪಲ್ ಕಾವುನ್ಸಿಲದಿಂದ ಇಲ್ಲವೆ ಅದರ ಪರವಾಗಿ ಪ್ರಾರಂಭಿಸಲಾಗಿದ್ದ ಎಲ್ಲ ಖಟ್ಲೆಗಳು ಮತ್ತು ಇಂತಹ ಮುನಸಿಪಲ್ ಕಾವುನ್ಸಿಲದಿಂದ ಇಲ್ಲವೆ ಅದರ ವಿರುದ್ಧ ಇಲ್ಲವೆ ಯಾವುದೇ ಅಧಿಕಾರಿಯ ವಿರುದ್ಧ ಪ್ರಾರಂಭಿಸಲಾದ ಎಲ್ಲ ದಾವೆಗಳು ಇಲ್ಲವೆ ಕಾಯ್ದೇಶೀರ ಪ್ರಕರಣಗಳು, ಪಂಚಾಯತದಿಂದ ಇಲ್ಲವೆ ಅದರ ವಿರುದ್ಧ ಇಂತಹ ಖಟ್ಲೆ, ದಾವೆಗಳು, ಮತ್ತು ಪ್ರಕರಣಗಳು ದಾಖಲಾದ ತಾರೀಖಿಗೆ ಆ ಸ್ಥಾನಿಕ ಪ್ರದೇಶವು ಗ್ರಾಮದಲ್ಲಿ ಸಮಾವೇಶವಾಗಿದ್ದ ಹಾಗೆ ಮುಂದುವರೆಸಲ್ಪಡತಕ್ಕದ್ದು.

**ವಿವೇಚನೆ**

ಮುನಸಿಪಾಲಿಟಿಯಾಗಿದ್ದ ಸ್ಥಾನಿಕ ಅಧಿಕಾರವು ಪಂಚಾಯತವೆಂದು ಮಾರ್ಪಡಬಹುದೆಂಬ ಸೂಚನೆ ಇಲ್ಲಿದೆ. ಹಾಗೆ ಮಾರ್ಪಟ್ಟರೆ, ಪರಿಣಾಮಗಳು ಏನು ಆಗುವುವು ಎಂಬುದರ ಬಗ್ಗೆ ಇಲ್ಲಿ ವಿವರ ಹೇಳಲಾಗಿದೆ : ಆ ಸ್ಥಾನಿಕ ಪ್ರದೇಶಕ್ಕೆ ಮುನಸಿಪಾಲಿಟಿ ಇಲ್ಲದಾಗುವುದು; ಅದರ ಸ್ಥಳದಲ್ಲಿ ಪಂಚಾಯತವು ಉದಯವಾಗುವುದು. ತತ್‌ಕ್ಷಣ ಸ್ಥಾನಾಪನ್ನವಾದ ಪಂಚಾಯತವು ಮಧ್ಯಂತರ ಪಂಚಾಯತವು. ಏಕೆಂದರೆ ಪಂಚಾಯತಕ್ಕೆ ಚುನಾವಣಿ ಆಗಿರುವುದಿಲ್ಲ. ಅಲ್ಲದೆ ಮುನಸಿಪಾಲಿಟಿಯ ಒಟ್ಟು ಸದಸ್ಯ ಸಂಖ್ಯೆ ಬೇರೆ ಪಂಚಾಯತದ ಒಟ್ಟು ಸದಸ್ಯ ಸಂಖ್ಯೆ ಬೇರೆ. ಆದರೆ ಮಧ್ಯಂತರ ಅವಧಿಯಲ್ಲಿ ಈ ಸಂಖ್ಯೆ ಹಾಗೂ ಚುನಾವಣೆಯ ಬಾಧೆ ಬಾರದೆ ಹಿಂದೆ ಇದ್ದ ಮುನಸಿಪಲ್ ಕೌನ್ಸಿಲದು ಉದಯವಾದ ಮಧ್ಯಂತರ ಪಂಚಾಯತದ ಸದಸ್ಯರಾಗುವರು. ಆ ಮುನಸಿಪಲ್ ಕಾವುನ್ಸಿಲದ ಪ್ರೆಸಿಡೆಂಟರು ಈ ಮಧ್ಯಂತರ ಪಂಚಾಯತದ ಚೇರಮನ್ನರಾಗುವನು ವಾಯಿಸ ಪ್ರೆಸಿಡೆಂಟರು-ಉಪಚೇರಮನ್ನರಾಗುವನು.

ಪಂಚಾಯತವು ಹೀಗೆ ರೂಪುತಾಳಿದ ಮೇಲೆ ಆ ಮುನಸಿಪಾಲಿಟಿಯ ಆಸ್ತಿ, ನಿಧಿ, ಹಕ್ಕು, ಬಾಧ್ಯತೆ, ಹೊಣೆಗಾರಿಕೆಗಳು, ಎಲ್ಲವೂ ಪಂಚಾಯತದ ಅಂತರ್ಗತವಾಗುವುವು. ಮುನಸಿಪಾಲಿಟಿಯು ಮಾಡಿದ ಪ್ರಕಟನೆ, ನೋಟೀಸು, ಹಾಕಿದ ಕರ,

ಕೊಟ್ಟ ಆಜ್ಞೆ, ಹೂಡಿದ ಯೋಜನೆ, ದಯಪಾಲಿಸಿದ ಲಾಯಸೆನ್ಸ್, ಪರವಾನಗಿ, ಗೊತ್ತುಮಾಡಿದ ನಿಯಮ, ಪೋಟ ನಿಯಮಗಳು, ನಮೂನೆಗಳು, ಇವೆಲ್ಲವೂ ಪಂಚಾಯತವೇ ಈ ಕಾಯಿದೆಯನ್ವಯ ಮಾಡಿದವುಗಳೆಂದು ಗಣಿಸಲಾಗುವುದು. ಮುಂಗಡಪತ್ರ, ಕರಆಕರಣೆ, ಕರಆಕರಣೆಯ ಪಟ್ಟಿಗಳು, ಇವು ಈ ಕಾಯಿದೆಯನ್ವಯ ವಾಗಿಮಾಡಲಾದುವು ಎಂದು ತಿಳಿಯತಕ್ಕದ್ದು. ಅದರಂತೆ ಮುನಸಿಪಾಲಟಿಯ ಸಾಲ. ಕರಾರುಪತ್ರಗಳು ಹೊಣೆಗಾರಿಕೆಗಳು, ಪಂಚಾಯತಕ್ಕೆ ಬಂದುವೆಂದು ತಿಳಿಯತಕ್ಕದ್ದು. ಅಧಿಕಾರಿಗಳು, ನೌಕರರು ಸೇವಕರು, ಅವರು ಯಾವ ಕರಾರಿನ ಮೇಲೆ, ಯಾವ ಸಂಬಳ-ಭತ್ತೆಯಮೇಲೆ ನೇಮಕವಾಗಿದ್ದರೋ ಅವೇ ಮುಂದುವರೆ ಯುವುವು. ಪಂಚಾಯತಕ್ಕೆ ಅನವಶ್ಯವೆಂದು ಕಂಡುಬಂದ ಇಲ್ಲವೆ ಹೊಂದಿಕೆಯಾಗು ವುದಿಲ್ಲವೆಂದು ಕಂಡುಬಂದ ಅಧಿಕಾರಿಗಳನ್ನು ಇಲ್ಲವೆ ಸೇವಕರನ್ನು ಅವರ ನೌಕರಿಯ ಕರಾರುಗಳ ಪ್ರಕಾರ ನೋಟೀಸುಕೊಟ್ಟು ಆ ಬಗ್ಗೆ ಸರಕಾರದ ಪೂರ್ವಸಮ್ಮತಿ ಪಡೆದು ನೌಕರಿಯಿಂದ ಕಡಿಮೆಮಾಡುವ ಅಧಿಕಾರ ಪಂಚಾಯತಕ್ಕೆ ಇದೆ. ಮುನಸಿಪಾಲಟಿ ಎದುರು ಇದ್ದ ಪ್ರಕರಣಗಳು, ಅಪೀಲುಗಳು ಪಂಚಾಯತದ ಎದುರು ಬರುವುವು ಮತ್ತು ಮುನಸಿಪಾಲಟಿ ಪರವಾಗಿ ಇಲ್ಲವೆ ವಿರುದ್ಧ ನಡೆದ ಖಟ್ಲೆ, ದಾವೆ, ಪ್ರಕರಣಗಳು ಪಂಚಾಯತದಿಂದ ಮುಂದುವರಿಸಲ್ಪಡುವುವು. ಒಟ್ಟಿನಮೇಲೆ ಮುನಸಿಪಾಲಟಿಯ ಸ್ಥಾನದಲ್ಲಿ ಪಂಚಾಯತವು ಬಂದು ಅದು ಕಾರ್ಯಗಳನ್ನು ಈ ಕಾಯಿದೆಯನ್ವಯವಾಗಿ ಆ ಸ್ಥಾನಿಕ ಪ್ರದೇಶವು ಒಂದುವೇಳೆ ಗ್ರಾಮದಲ್ಲಿ ಸಮಾವೇಶವಾಗಿದ್ದರೆ ಏನು ಮಾಡಬಹುದಾಗಿತ್ತೋ ಅದನ್ನು ಪಂಚಾ ಯತವು ಆ ಪ್ರದೇಶದ ಬಗ್ಗೆ ಮಾಡುವುದು. ಸ್ಥಾನಿಕ ಅಧಿಕಾರದ ಹೆಸರು ರೂಪ ಬದಲಾದವು; ಹಿಂದಿನ ಕಾಯಿದೆಯ ಬದಲು ಈ ಕಾಯಿದೆಯು ಅನ್ವಯಿಸ ತೊಡಗಿತು ಎಂಬಂತೆ ಆಗುವುದೇ ಹೊರತು, ಯಾವ ಕಾರ್ಯವು ನಿಂತು ಹೋಗು ವುದಿಲ್ಲ. ಎಲ್ಲವೂ ಮುಂದುವರೆಯುವುವು.

## ೮೯. ಮಧ್ಯಂತರ ಪಂಚಾಯತದ ಸದಸ್ಯರ ಅಧಿಕಾರ ಕಾಲಾವಧಿ ಮತ್ತು ಅವರ ಅಧಿಕಾರ

(೧) ಕಲಮು ೮೮ ರನ್ವಯವಾಗಿ ಎಂದು ಮಧ್ಯಂತರ ಪಂಚಾಯತವು ರಚಿಸಲ್ಪಟ್ಟಿತೋ ಆ ತಾರೀಖಿನಿಂದ ಒಂದು ವರುಷದ ಒಳಗಿನ ಕಾಲಾವಧಿಯಲ್ಲಿ ಹೊಸ ಪಂಚಾಯತದ ಚುನಾವಣೆ ನಡೆಸಲ್ಪಡಲು ಡೆಪ್ಯುಟಿ ಕಮಿಶನರನು ಕ್ರಮ ಗಳನ್ನು ಕೈಕೊಳ್ಳತಕ್ಕದ್ದು.

(೨) ಹೊಸ ಪಂಚಾಯತದ ಮೊದಲನೆಯ ಸಭೆಯ ತಾರೀಖಿನಕಿಂತ ತತ್‌ಕ್ಷಣ ಹಿಂದಿನ ತಾರೀಖಿನ ವರೆಗೆ ಮಧ್ಯಂತರ ಪಂಚಾಯತದ ಸದಸ್ಯರು ಅಧಿಕಾರಪದದಲ್ಲಿ ಇರತಕ್ಕದ್ದು.

(೩) ಮಧ್ಯಂತರ ಪಂಚಾಯತದಲ್ಲಿಯ ಯಾವುದೇ ಅಧಿಕಾರ ಪದವು ತೆರವಾದದ್ದು, ಅನುಕೂಲವಾದಷ್ಟು ಬೇಗನೇ, ಡೆಪ್ಯೂಟಿ ಕಮಿಶನರನಿಂದ ನೇಮಕದಿಂದ ಭರತಿಮಾಡಲ್ಪಡತಕ್ಕದ್ದು.

(೪) ಮಧ್ಯಂತರ ಪಂಚಾಯತದಲ್ಲಿ ಅಂತರ್ಗತವಾಗಿದ್ದ ಎಲ್ಲ ತೆರಿಗೆ, ಕರ ಮತ್ತು ಫೀಗಳ ಬಾಕಿಯು, ಇಂತಹ ತೆರಿಗೆ, ಕರ, ಮತ್ತ ಫೀಗಳು ಈ ಕಾಯಿದೆಯನ್ವಯವಾಗಿ ಎತ್ತುವಳಿ ಮಾಡಲು ಬರಲಾರದಂತಹವಿದ್ದರೂ ಅದು ಈ ಕಾಯಿದೆಯ ಕಲಮು ೭೩ ರನ್ವಯ ಹಾಕಲಾದ ಕರಗಳ ವಸೂಲಿ ಮಾಡುವ ರೀತಿಯಲ್ಲಿ ವಸೂಲು ಮಾಡಲ್ಪಡತಕ್ಕದ್ದು.

ಆದರೆ, ಮಧ್ಯಂತರ ಪಂಚಾಯತದಲ್ಲಿ ಅಂತರ್ಗತವಾದ ತಾರೀಖಿನಿಂದ ಮೂರು ವರುಷಗಳ ಕಾಲಾವಧಿಯಲ್ಲಿ ತೆರಿಗೆಯು, ಕರದ, ಮತ್ತು ಫೀಗಳ ಬಾಕಿ ವಸೂಲಿಗಾಗಿ ಕ್ರಮ ತೆಗೆದುಕೊಳ್ಳಲ್ಪಡತಕ್ಕದ್ದು.

(೫) ಇನ್ನುಳಿದ ವಿಷಯಗಳ ಸಂಬಂಧವಾಗಿ, ಈ ಕಾಯಿದೆಯ ಶರತುಗಳು ಆವಶ್ಯಕ ಬದಲಾವಣೆಯೊಂದಿಗೆ, ಮಧ್ಯಂತರ ಪಂಚಾಯತಕ್ಕೂ ಮತ್ತು ಅದರ ಸದಸ್ಯರಿಗೂ ಅನ್ವಯಿಸತಕ್ಕದ್ದು.

(೬) ಒಂದು ವೇಳೆ

(i) ಮಧ್ಯಂತರ ಪಂಚಾಯತದ ಇಲ್ಲವೆ ಅದರ ವಾರಸದಾರವಾಗಿ ಬಂದ ಹೊಸ ಪಂಚಾಯತದ ರಚನೆಯಲ್ಲಿ, ಇಲ್ಲವೆ,

(ii) ಕಲಮು ೮೬ ರ ಶರತುಗಳನ್ನು ಮತ್ತು ಈ ಕಲಮಿನ ಶರತುಗಳನ್ನು ಪರಿಣಾಮಕಾರಿಯಾಗಿಸುವುದರಲ್ಲಿ,

ಯಾವುದೇ ತೊಡಕು ಉಂಟಾದರೆ, ಸರಕಾರವು ಆ ಪ್ರಸಂಗಕ್ಕೆ ತಕ್ಕಂತೆ ಈ ಕಾಯಿದೆಯಲ್ಲಿ ಇಲ್ಲವೆ ಬೇರೆ ಯಾವುದೇ ಕಾಯಿದೆಯಲ್ಲಿ ಏನೇ ಹೇಳಿದ್ದರೂ ಪ್ರಕಟನೆ ಪರಿಪತ್ರ ಹೊರಡಿಸಿ, ಆ ತೊಡಕು ನಿವಾರಣೆಗಾಗಿ ಆವಶ್ಯಕವಾದುದೆಂದು ಕಂಡು ಬಂದ ಯಾವುದೇ ಕಾರ್ಯವನ್ನು ಮಾಡಬಹುದು.

**ವಿವೇಚನೆ**

ಮಧ್ಯಂತರ ಪಂಚಾಯತವು ಈ ಕಾಯಿದೆಯ ಪ್ರಕಾರ ಹೇಗೆ ಪಂಚಾಯತ ರಚನೆಯಾಗಬೇಕೆಂದು ಹೇಳಿರುವುದೋ ಹಾಗೆ ಆಗಿರುವುದಿಲ್ಲ. ಆದರೆ ಮಧ್ಯಂತರ ಪಂಚಾಯತ ರಚನೆಯಾದ ಕೂಡಲೇ ಈ ಕಾಯಿದೆಯು ಅನ್ವಯಿಸತೊಡಗುವುದು. ಆದಕ್ಕೆ ಅದರ ಬಗ್ಗೆ ಈ ಕಲಮು ಇದೆ. ಮಧ್ಯಂತರ ಪಂಚಾಯತವು ರಚನೆಯಾದ ತಾರೀಖಿನಿಂದ ಒಂದು ವರುಷದ ಒಳಗೆ ಹೊಸ ಪಂಚಾಯತದ ಚುನಾವಣೆ ನಡೆವ ಹಾಗೆ ಡೆಪ್ಯೂಟಿ ಕಮಿಶನರು ವ್ಯವಸ್ಥೆ ಮಾಡತಕ್ಕದ್ದು.

ಚುನಾವಣೆಯಾಗಿ ಹೊಸ ಪಂಚಾಯತವು ರೂಪುಗೊಂಡು ಮೊದಲನೆಯ ಸಭೆಯು ಸೇರುವ ದಿನದ ಮುಂಚಿನ ದಿನದ ತನಕ ಮಧ್ಯಂತರ ಪಂಚಾಯತವ ಹಾಗೂ ಅದರ ಸದಸ್ಯರ ಅಧಿಕಾರ ಕಾಲಾವಧಿ; ಮಧ್ಯಂತರ ಪಂಚಾಯತವು ಅಧಿಕಾರದಲ್ಲಿರುವಾಗ ಯಾವುವೇ ಸದಸ್ಯನ ಸ್ಥಳವು ತೆರವಾದರೆ, ಅದನ್ನು ಆದಷ್ಟು ಬೇಗ, ಡೆ. ಕಮಿಶನರನು ನೇಮಕ ಮಾಡಿ ಭರತಿ ಮಾಡತಕ್ಕದ್ದು. ಅಂದರೆ ಅದಕ್ಕೆ ಚುನಾವಣೆ ನಡೆಯಲಿಕ್ಕಿಲ್ಲ. ಮಧ್ಯಂತರ ಪಂಚಾಯತವು ಪಂಚಾಯತವಾದರೂ ಅದು ಮುನಸಿಪಾಲಟಿಯ ಕರ,ತೆರಿಗೆ, ಫೀ ಬಾಕಿಯನ್ನು ವಹಿಸಿಕೊಂಡಿರುತ್ತದೆ. ಆ ಕರ ತೆರಿಗೆಗಳು ಈ ಕಾಯಿದೆಯ ಪ್ರಕಾರ ಇಟದೇ ಇದ್ದರೂ ಅವು ಕಲಮು ೭೩ರಲ್ಲಿ ಹೇಳಿದ ಕರಗಳ ಬಾಕಿ ವಸೂಲಿಯ ರೀತಿಯಲ್ಲಿಯೇ ಮಾಡತಕ್ಕದ್ದು. ಈ ಕಾಯಿದೆಯ ಪ್ರಕಾರ ಇರದೆ ಇದ್ದಂತಹ ಕರ-ಫೀಗಳಾದರೂ ಈ ಕಲಮು ಆ ಬಾಕಿ ವಸೂಲಿಗೆ ಅಧಿಕಾರಕೊಡುತ್ತದೆ. ಆದರೆ ಈ ಅಧಿಕಾರವು ಮಧ್ಯಂತರ ಪಂಚಾಯತವು ರಚಿತವಾದ ತಾರೀಖಿನಿಂದ ಮೂರು ವರುಷಗಳ ವರೆಗೆ ಮಾತ್ರ. ಆ ನಂತರ ಆ ಹಿಂದಿನ ಬಾಕಿ ವಸೂಲು ಮಾಡಲು ಬರುವುದಿಲ್ಲ. ಈ ಬಗೆಯಾಗಿ ಹೇಳಿದ ಸ್ಪಷ್ಟ ವಾದ ಅಧಿಕಾರವ ಹೊರತುಪಡಿಸಿ, ಉಳಿದ ಅಧಿಕಾರಗಳು. ಆವಶ್ಯಕ ಬದಲಾವಣೆ ಯೊಂದಿಗೆ ಈ ಕಾಯಿದೆಯ ಪ್ರಕಾರ ಇದ್ದ ಪಂಚಾಯತ ಹಾಗೂ ಅದರ ಸದಸ್ಯರಿಗೆ ಇದ್ದ ಅಧಿಕಾರಗಳು ಮಾತ್ರ ಬರುವುವು. ಈ ರೀತಿಯಾಗಿ ಮುನಸಿಪಾಲಿಟಿಯ ಬದಲು ಪಂಚಾಯತವು ಅಸ್ತಿತ್ವದಲ್ಲಿ ಬಂದಾಗ ಆದರ ರಚನೆಯಲ್ಲಿ, ಅಧಿಕಾರದಲ್ಲಿ, ಲೆಕ್ಕತಪಾಸಣೆಯಲ್ಲಿ ಯಾವುವೇ ತೊಡಕು ಉಂಟಾದರೆ, ಆದರ ಪರಿಹಾರವು ಬೇರೆ ರೀತಿಯಲ್ಲಿ ಕಂಡು ಬರದಿದ್ದರೆ, ಈ ಕಾಯಿದೆಯಲ್ಲಿ ಇಲ್ಲವೆ ಬೇರೆ ಕಾಯಿದೆಯಲ್ಲಿ ಏನೇ ಹೇಳಿದ್ದರೂ ಡೆ ಕಮಿಶನರನು ಒಂದು ಪ್ರಕಟನೆ ಹೊರಡಿಸಿ ತೊಡಕು ನಿವಾ ರಣೆಮಾಡಲು ಈ ಕಲಮು ಅಧಿಕಾರ ಕೊಡುತ್ತದೆ. ಅದರಿಂದ ಆ ಪ್ರಕಟನೆಯು ಮೂಲಕ ಆದ ಘಟನೆಯು ಈ ಕಾಯಿದೆ ಪ್ರಕಾರ ಸರಿಯಾಗಿ ಬಿಡುತ್ತದೆ.

### ೯೦. ಗ್ರಾಮಗಳ ಜೋಡಣೆಯಿಂದ ಆಗುವ ಪರಿಣಾಮ

ಎರಡು ಇಲ್ಲವೆ ಹೆಚ್ಚು ಗ್ರಾಮಗಳು ಗ್ರಾಮಗಳೆಂದು ಉಳಿಯದೆ ಇದ್ದಾಗ ಮತ್ತು ಇಂತಹ ರಚಿತ ಗ್ರಾಮಗಳ ಸ್ಥಾನಿಕ ಪ್ರದೇಶಗಳು ಜೋಡಣೆ ಮಾಡಲ್ಪಟ್ಟರೆ, ಮತ್ತು ಒಂದು ಗ್ರಾಮವೆಂದು ( ಈ ಮುಂದೆ ಈ ಕಲಮಿನಲ್ಲಿ ಜೋಡಣೆಮಾಡಿದ ಗ್ರಾಮ ಎಂದು ಕರೆಯಲಾಗಿದೆ ) ಕಲಮು ೩ ರನ್ವಯವಾಗಿರುವ ಪ್ರಕಟನೆ ಪರಿ ಪತ್ರದ ಸತ್ವದಿಂದ ಸಾರಲ್ಪಟ್ಟರೆ, ಅಂತಹ ಪ್ರಕಟನೆ ಪರಿಪತ್ರ ಹೊರಡಿಸಲಾದ ತಾರೀಖಿನಿಂದ ( ಈ ಕಲಮಿನಲ್ಲಿ ಈ ಮುಂದೆ ನಿರ್ದಿಷ್ಟಪಡಿಸಲಾದ ತಾರೀಖು ಎಂದು ಕರೆಯಲಾಗಿದೆ) ಈ ಕೆಳಗಿನ ಪರಿಣಾಮಗಳು ಉಂಟಾಗುವುವು; ಅವು ಯಾವುವೆಂದರೆ—

(ಅ) ಇಂತಹ ಸ್ಥಾನಿಕ ಪ್ರದೇಶಗಳ ಪಂಚಾಯತಗಳು ಇಲ್ಲದಾಗುವುವು ಮತ್ತು ಇಂತಹ ಪಂಚಾಯತಗಳ ಎಲ್ಲ ಸದಸ್ಯರು ತಮ್ಮ ಅಧಿಕಾರಪದಗಳನ್ನು ಖಾಲೀ ಮಾಡತಕ್ಕದ್ದು.

(ಬ) ಇಂತಹ ಪಂಚಾಯತಗಳ ಎಲ್ಲ ಅಧಿಕಾರಗಳು ಹಾಗೂ ಕರ್ತವ್ಯಗಳು ಈ ಸಂಬಂಧದಲ್ಲಿ ಸರಕಾರವು ನೇಮಕ ಮಾಡುವಂತಹ ವ್ಯಕ್ತಿಯಿಂದ (ಈ ಮುಂದೆ ಆಡಳಿತಗಾರ ಎಂದು ಕರೆಯಲಾಗಿದೆ) ನಿರ್ವಹಿಸಲ್ಪಡತಕ್ಕದ್ದು ಮತ್ತು ಮಾಡಲ್ಪಡತಕ್ಕದ್ದು.

(ಕ) ಇಂತಹ ಪಂಚಾಯತದ ಒಡೆತನದಲ್ಲಿದ್ದ ವೆಚ್ಚವಾಗದೆ ಇದ್ದ ಪಂಚಾಯತದ ನಿಧಿಗಳ, ಶಿಲ್ಕು ಮತ್ತು (ತೆರಿಗೆ, ಕರ ಮತ್ತು ಫೀಗಳ ಬಾಕಿಯನ್ನು ಒಳಗೊಂಡು) ಎಲ್ಲ ಆಸ್ತಿಗಳು ಮತ್ತು ನಿರ್ದಿಷ್ಟಪಡಿಸಲಾದ ತಾರೀಖಿನ ಮುಂಚಿತ ಇಂತಹ ಪಂಚಾಯತಗಳ ಅಂತರ್ಗತವಾಗಿದ್ದು ಎಲ್ಲ ಹಕ್ಕುಗಳು ಮತ್ತು ಅಧಿಕಾರ ಗಳು ಅವಕ್ಕೆ ಸಂಬಂಧಿಸಿದ ಎಲ್ಲ ಬಾಧ್ಯತೆ-ಹೊಣೆಗಾರಿಕೆಗಳಿಗಂಕಿತವಾಗಿ, ಪಂಚಾಯತ ನಿಧಿ ಎಂದು—

(i) ಜೋಡಣೆ ಮಾಡಿದ ಗ್ರಾಮಕ್ಕೆ ಪಂಚಾಯತವು (ಈ ಮುಂದೆ ಜೋಡಣೆ ಮಾಡಿದ ಪಂಚಾಯತವೆಂದು ಕರೆಯಲಾಗಿದೆ) ರಚಿತವಾಗುವ ವರೆಗೆ ಮತ್ತು ಕಲಮು ೨೫ ರನ್ವಯವಾಗಿ ಸದಸ್ಯರ ಅಧಿಕಾರ ಕಾಲಾವಧಿಯು ಪ್ರಾರಂಭ ವಾಗುವರೆಗೆ ಆಡಳಿತಗಾರನಲ್ಲಿ ಅಂತರ್ಗತವಾಗಿರತಕ್ಕದ್ದು ಮತ್ತು

(ii) ಆ ನಂತರ, ಜೋಡಣೆ ಮಾಡಿದ ಪಂಚಾಯತದಲ್ಲಿ ಅಂತರ್ಗತ ವಾಗಿರತಕ್ಕದ್ದು.

(ಡ) ಪಂಚಾಯತ ನಿಧಿಗಳ ವೆಚ್ಚವಾಗದೆ ಇದ್ದ ಶಿಲ್ಕು ಮತ್ತು (ತೆರಿಗೆ ಗಳು, ಕರಗಳು ಮತ್ತು ಫೀಗಳು ಇವುಗಳ ಬಾಕಿಯನ್ನು ಒಳಗೊಂಡು) ಎಲ್ಲ ಆಸ್ತಿಗಳು ಜೋಡಣೆಯಾದ ಪಂಚಾಯತವು ರಚನೆಯಾಗುವ ವರೆಗೆ, ಇಂತಹ ಸ್ಥಾನಿಕ ಪ್ರದೇಶಗಳ ರಹಿವಾಸಿಗಳ ಹಿತಕ್ಕಾಗಿ, ಮತ್ತು ಆಡಳಿತಗಾರನು ಯೋಗ್ಯ ವೆಂದು ಕಂಡ ರೀತಿಯಲ್ಲಿ ಉಪಯೋಗಿಸಲ್ಪಡತಕ್ಕದ್ದು.

(ಇ) ಇಂತರ ಸ್ಥಾನಿಕ ಪ್ರದೇಶಗಳ ಸಂಬಂಧವಾಗಿ, ಮಾಡಿದ, ಹೊರಡಿ ಸಿದ, ಹಾಕಿದ ಇಲ್ಲವೆ ದಯಪಾಲಿಸಲಾದ ಮತ್ತು ನಿರ್ದಿಷ್ಟಪಡಿಸಲಾದ ತಾರೀಖಿಗೆ ಜಾರಿಯಲ್ಲಿದ್ದ ಯಾವುದೇ ನೇಮಕ, ಪ್ರಕಟನೆ, ನೋಟೀಸು, ಕರ, ಹುಕುಮು, ಯೋಜನೆ, ಲಾಯಸೆನ್ಸು, ಪರವಾನಗಿ, ನಿಯಮ, ಪೋಟನಿಯಮ ಇಲ್ಲವೆ ನಮೂನೆಯು ಜಾರಿಯಲ್ಲಿ ಮುಂದುವರೆಯತಕ್ಕದ್ದು ಮತ್ತು ಈ ಕಾಯಿದೆಯನ್ವಯ ವಾಗಿ ಮಾಡಿದ, ಹೊರಡಿಸಿದ, ಹಾಕಿದ ಇಲ್ಲವೆ ದಯಪಾಲಿಸಲಾದ ಯಾವುದೇ

ಸೇವುಕದಿಂದ, ಪ್ರಕಟನೆಯಿಂದ, ನೋಟೀಸಿನಿಂದ; ಕರದಿಂದ, ಹುಕುಮಿನಿಂದ, ಯೋಜನೆಯಿಂದ, ಲಾಯಸೆನ್ಸದಿಂದ, ಪರವಾನಗಿಯಿಂದ, ನಿಯಮದಿಂದ, ಪೋಟಿ ನಿಯಮದಿಂದ ಇಲ್ಲವೆ ನಮೂನೆಯಿಂದ ಹಿಂದೆ ಸರಿಸುವತನಕ ಇಲ್ಲವೆ ತಿದ್ದುಪಡಿ ಮಾಡುವ ತನಕ ಜೋಡಣೆ ಮಾಡಿದ ಗ್ರಾಮದ ಸಂಬಂಧವಾಗಿ ಮಾಡಿದುದೆಂದು ಹೊರಡಿಸಲಾದುದೆಂದು, ಹಾಕಲಾದುದೆಂದು ಇಲ್ಲವೆ ದಯಪಾಲಿಸಲಾದುದೆಂದು ಗಣಿಸಲ್ಪಡತಕ್ಕದ್ದು.

(ಫ) ನಿರ್ದಿಷ್ಟಪಡಿಸಲಾದ ತಾರೀಖಿನಕಿಂತ ತತ್‌ಕ್ಷಣ ಮುಂಚಿತವಾಗಿ ಇಂತಹ ಪಂಚಾಯತಗಳಿಂದ ಮಾಡಿದ ಇಲ್ಲವೆ ಅಧಿಕೃತವಾಗಿಸಿದ ಎಲ್ಲ ಮುಂಗಡ ಪತ್ರದ ಅಂದಾಜುಗಳು, ಕರಾಕರಣೆಗಳು, ಕರಾಕರಣೆಯ ಪಟ್ಟಿಗಳು, ಮೌಲ್ಯ ಮಾಪನಗಳು, ಇಲ್ಲವೆ ಅಳತೆಗಳು ಈ ಕಾಯಿದೆಯನ್ವಯವಾಗಿ ಜೋಡಣೆಮಾಡಿದ ಪಂಚಾಯತವ ಸಂಬಂಧವಾಗಿ ಮಾಡಲ್ಪಟ್ಟಿದ್ದೆಂದು ಇಲ್ಲವೆ ಅಧಿಕೃತವಾಗಿಸಲ್ಪಟ್ಟಿದ್ದೆಂದು ಗಣಿಸಲ್ಪಡತಕ್ಕದ್ದು.

(ಗ) ನಿರ್ದಿಷ್ಟ ಪಡಿಸಲಾದ ತಾರೀಖಿನಿಂದ ತತ್‌ಕ್ಷಣ ಮುಂಚಿತವಾಗಿ, ಇಂತಹ ಪಂಚಾಯತಗಳಿಂದ ಇಲ್ಲವೆ ಅವುಗಳ ಪರವಾಗಿ, ಹೊಣೆ ಹೊತ್ತ ಎಲ್ಲ ಸಾಲಗಳು ಮತ್ತು ಋಣಗಳು, ಮತ್ತು ಮಾಡಿಕೊಂಡ ಎಲ್ಲ ಕರಾರುಗಳು ಮತ್ತು ಆ ನಿರ್ದಿಷ್ಟ ಪಡಿಸಲಾದ ತಾರೀಖಿಗೆ ಜೀವಂತವಾದವುಗಳು ಈ ಕಾಯಿದೆಯಿಂದ ಜೋಡಣೆ ಮಾಡಿದ ಪಂಚಾಯತಕ್ಕೆ ದಯಪಾಲಿಸಲಾದ ಅಧಿಕಾರಿಗಳ ನಿರ್ವಹಣೆಯಲ್ಲಿ ಜೋಡಣೆ ಮಾಡಿದ ಪಂಚಾಯತದಿಂದ ಹೊಣೆ ಹೊತ್ತವುಗಳು ಮತ್ತು ಮಾಡಲ್ಪಟ್ಟಂತಹವು ಎಂದು ಗಣಿಸತಕ್ಕದ್ದು.

(ಹ) ನಿರ್ದಿಷ್ಟ ಪಡಿಸಲಾದ ತಾರೀಖಿನಕಿಂತ ತತ್‌ಕ್ಷಣ ಮುಂಚಿತವಾಗಿ, ಇಂತಹ ಪಂಚಾಯತಗಳ ನೌಕರಿಯಲ್ಲಿದ್ದ ಎಲ್ಲ ಅಧಿಕಾರಿಗಳು ಮತ್ತು ಸೇವಕರು ಜೋಡಣೆ ಮಾಡಿದ ಪಂಚಾಯತದ ಅಧಿಕಾರಿಗಳು ಮತ್ತು ಸೇವಕರು ಅಗತಕ್ಕದ್ದು. ಮತ್ತು ಈ ಕಾಯಿದೆಯ ಕಕ್ಷೆಗಳನುಸಾರವಾಗಿ ಬೇರೆ ವ್ಯವಸ್ಥೆ ಮಾಡಲ್ಪಡುವ ತನಕ ನಿರ್ದಿಷ್ಟಪಡಿಸಲಾದ ತಾರೀಖಿನಕಿಂತ ಮೊದಲು ಯಾವ ಸಂಬಳ ಮತ್ತು ಭತ್ತೆಗೆ ಬಾಧ್ಯಸ್ಥರಾಗಿದ್ದರೋ ಮತ್ತು ಯಾವ ನೌಕರಿ ಕರಾರುಗಳಿಗೆ ಅಂಕಿತರಾಗಿದ್ದರೋ ಅಂತಹ ಸಂಬಳ ಮತ್ತು ಭತ್ತೆಗಳನ್ನು ಸ್ವೀಕರಿಸತಕ್ಕದ್ದು. ಮತ್ತು ಅಂತಹ ನೌಕರಿಯ ಕರಾರುಗಳಿಗೆ ಅಂಕಿತರಾಗಿರತಕ್ಕದ್ದು.

ಆದರೆ, ಜೋಡಣೆ ಮಾಡಿದ ಗ್ರಾಮದ ಪಂಚಾಯತದ ನೌಕರಿಯ ಅಗತ್ಯದ ದೃಷ್ಟಿಯಿಂದ ಅವಶ್ಯವಲ್ಲನೆಂದು ಇಲ್ಲವೆ ಹೊಂದಿಕೆಯಾಗುವುದಿಲ್ಲವೆಂದು ಆಡಳಿತಗಾರನ ಇಲ್ಲವೆ ಜೋಡಣೆಮಾಡಿದ ಪಂಚಾಯತದ ಅಭಿಪ್ರಾಯವಾದರೆ, ಸರಕಾರದ ಪೂರ್ವ ಸಮ್ಮತಿಯಂಕಿತವಾಗಿ, ಆಡಳಿತಗಾರನು ಇಲ್ಲವೆ ಜೋಡಣೆ ಮಾಡಿದ

ಪಂಚಾಯತವು, ಯಾವುದೇ ಅಧಿಕಾರಿಯನ್ನು ಇಲ್ಲವೆ ಸೇವಕನನ್ನು ಅವನ ನೌಕರಿಯ ಕರಾರುಗಳ ಪ್ರಕಾರ ಅಂತಹ ಅಧಿಕಾರಿಗೆ ಇಲ್ಲವೆ ಸೇವಕನಿಗೆ ಕೊಡಬೇಕಾದ ನೋಟೀಸು ಕೊಟ್ಟು ನೌಕರಿಯಿಂದ ಕಡಿಮೆ ಮಾಡಲು ಸಮರ್ಥವಾಗಿರತಕ್ಕದ್ದು. ಮತ್ತು ಯಾರ ನೌಕರಿಯು ಕಡಿಮೆ ಮಾಡಲ್ಪಟ್ಟಿರುವುದೋ ಅಂತಹ ಪ್ರತಿಯೊಬ್ಬ ಅಧಿಕಾರಿ ಇಲ್ಲವೆ ಸೇವಕನು ಯಾವ ಪಂಚಾಯತಗಳ ನೌಕರಿಯಲ್ಲಿರುವನೋ ಅಂತಹ ಪಂಚಾಯತವು ಅಸ್ತಿತ್ವದಲ್ಲಿ ಉಳಿದಿದ್ದರೆ, ಅಶಕ್ತತೆಯ ಕಾರಣದ ಮೂಲಕ ಯಾವ ರಜೆ, ಪೆನಶನು, ಪ್ರೊವಿಡೆಂಟ ಫಂಡ, ಮತ್ತು ಗ್ರ್ಯಾಚೂಟಿಗಳಿಗೆ ಬಾಧ್ಯಸ್ಥನಾಗುತ್ತಿದ್ದನೋ ಅಂತಹ ರಜೆ, ಪೆನಶನು, ಪ್ರೊವಿಡೆಂಟ ಫಂಡ ಮತ್ತು ಗ್ರ್ಯಾಚೂಟಿ ತೆಗೆದುಕೊಳ್ಳಲು ಇಲ್ಲವೆ ಪಡೆಯಲು ಬಾಧ್ಯಸ್ಥನಾಗತಕ್ಕದ್ದು.

(ಈ) ನಿರ್ದಿಷ್ಟಪಡಿಸಲಾದ ತಾರೀಖಿನಕಿಂತ ತತ್‌ಕ್ಷಣ ಮುಂಚಿತವಾಗಿ ಇಂತಹ ಪಂಚಾಯತಗಳ ಎದುರು ಚಾಲತಿಯಲ್ಲಿದ್ದ ಎಲ್ಲ ಪ್ರಕರಣಗಳು ಸಂದರ್ಭಾನುಸಾರ ಆಡಳಿತಗಾರನ ಕಡೆಗೆ ಇಲ್ಲವೆ ಜೋಡಣೆ ಮಾಡಿದ ಪಂಚಾಯತದ ಕಡೆಗೆ ಹಸ್ತಾಂತರಿಸಲ್ಪಟ್ಟವುಗಳೆಂದು ಮತ್ತು ಮುಂದುವರೆಸಲ್ಪಟ್ಟವುಗಳೆಂದು ಗಣಿಸಲ್ಪಡತಕ್ಕದ್ದು.

(ಜ) ನಿರ್ದಿಷ್ಟಪಡಿಸಲಾದ ತಾರೀಖಿನಕಿಂತ ತತ್‌ಕ್ಷಣ ಮುಂಚಿತವಾಗಿ ಇಂತಹ ಪಂಚಾಯತಗಳ ಎದುರು ಚಾಲತಿಯಲ್ಲಿದ್ದ ಎಲ್ಲ ಅಪೀಲುಗಳು ವ್ಯಾವಹಾರಿಕವಾಗಿರುವಷ್ಟು ಮಟ್ಟಿಗೆ, ಸಂದರ್ಭಾನುಸಾರವಾಗಿ ಆಡಳಿತಗಾರನಿಂದ ಇಲ್ಲವೆ ಜೋಡಣೆ ಮಾಡಲಾದ ಪಂಚಾಯತದಿಂದ ನಿಕಾಲೆ ಮಾಡಲ್ಪಡತಕ್ಕದ್ದು.

(ಕಾ) ನಿರ್ದಿಷ್ಟಪಡಿಸಲಾದ ತಾರೀಖಿಗೆ ಚಾಲತಿಯಲ್ಲಿದ್ದ ಇಂತಹ ಪಂಚಾಯತಗಳಿಂದ ಇಲ್ಲವೆ ಅವುಗಳ ಪರವಾಗಿ, ಪ್ರಾರಂಭಿಸಲಾಗಿದ್ದ ಎಲ್ಲ ಖಟ್ಲೆಗಳು ಮತ್ತು ಇಂತಹ ಪಂಚಾಯತಗಳಿಂದ ಇಲ್ಲವೆ ಅವುಗಳ ವಿರುದ್ಧ ಇಲ್ಲವೆ ಅವುಗಳ ಯಾವುದೇ ಅಧಿಕಾರಿಯ ವಿರುದ್ಧ ಪ್ರಾರಂಭಿಸಲಾದ ಎಲ್ಲ ದಾವೆಗಳು ಇಲ್ಲವೆ ಕಾಯಿದೇಶೀರ ಪ್ರಕರಣಗಳು ಜೋಡಣೆ ಮಾಡಲಾದ ಪಂಚಾಯತದಿಂದ ಇಲ್ಲವೆ ಅದರ ವಿರುದ್ಧ ಮುಂದುವರಿಸಲ್ಪಡತಕ್ಕದ್ದು.

**ವಿವೇಚನೆ**

ಎರಡು ಇಲ್ಲವೆ ಹೆಚ್ಚು ಪಂಚಾಯತಗಳನ್ನು ಒಂದುಗೂಡಿಸಿ ಒಂದೇ ಪಂಚಾಯತವನ್ನಾಗಿ ಮಾಡಿದರೆ ಯಾವ ಪರಿಣಾಮ ಉಂಟಾಗುವುದು ಎಂಬುದನ್ನು ಈ ಕಲಮು ಹೇಳುತ್ತದೆ. ಆ ಪಂಚಾಯತಗಳು ಇಲ್ಲದಾಗುವುವು. ಮತ್ತು ಅದರಲ್ಲಿ ಸದಸ್ಯರ ಅಧಿಕಾರಪದವನ್ನು ತೆರವುಮಾಡುವರು. ಆ ಪಂಚಾಯತಗಳಿಂದ

ಅಧಿಕಾರ-ಕರ್ತವ್ಯಗಳು ಸರಕಾರ ನೇಮಿತ ಆಡಳಿತಗಾರನ ಕೈಗೆ ಬೀಳುವುವು. ಅನಂತರ ಅಸ್ತಿತ್ವ ಕಳೆದುಕೊಂಡಿದ್ದ ಪಂಚಾಯತಗಳ ಸ್ಥಳದಲ್ಲಿ ಜೋಡಣೆಮಾಡಿದ ಪಂಚಾಯತವು ಬರುವುದು. ಈ ಮಧ್ಯಂತರ ಅವಧಿಯಲ್ಲಿ ಆಡಳಿತಗಾರನು ಇರುವನು. ಅಸ್ತಿತ್ವಕಳೆದುಕೊಂಡ ಪಂಚಾಯತದ ಎಲ್ಲ ನಿಧಿಗಳು, ಆಸ್ತಿಗಳು, ಅಧಿಕಾರಗಳ ಕರ್ತವ್ಯಗಳು, ಅಧಿಕಾರಿಗಳು, ಸೇವಕರು, ಮುಂತಾದ ಎಲ್ಲವೂ ಜೋಡಣೆಮಾಡಿದ ಪಂಚಾಯತಕ್ಕೆ ಬರುವುವು.

ಈ ಕಲಮು ಮತ್ತು ಕಲಮು ೮೮ ಸಾಮಾನ್ಯವಾದ ಶರತುಗಳುಳ್ಳ ಕಲಮುಗಳಾಗಿವೆ. ಅದರಲ್ಲಿ ವಿವೇಚನೆ ಮಾಡಿದ ಮಾತುಗಳೇ ಇಲ್ಲಿಯೂ ಸಾಮಾನ್ಯವಾಗಿ ಅನ್ವಯಿಸುವುವು. ಅಲ್ಲಿ ಅಸ್ತಿತ್ವಕಳೆದುಕೊಂಡುದು ಮುನಸಿಪಾಲಟಿಯಾದರೆ ಇಲ್ಲಿ ಈ ಕಾಯಿದೆಯನ್ವಯವಾಗಿ ರಚಿತವಾದ ಎರಡು ಇಲ್ಲವೆ ಹೆಚ್ಚು ಗ್ರಾಮಗಳ ಪಂಚಾಯತಗಳು. ಅಲ್ಲಿದ್ದ ತೊಡಕು ಇಲ್ಲಿ ಇಲ್ಲ. ಅಲ್ಲಿಯ ಪರಿಣಾಮ ಇಲ್ಲಿಯೂ ಇದೆ.

## ೯೧. ಗ್ರಾಮದ ವಿಭಾಗೀಕರಣದಿಂದ ಆಗುವ ಪರಿಣಾಮ

ಒಂದು ಗ್ರಾಮದ ಪ್ರಾದೇಶಿಕ ಪರಿಮಿತಿಯಲ್ಲಿಯ ಯಾವುದೇ ಸ್ಥಾನಿಕ ಪ್ರದೇಶವು ಗ್ರಾಮವೆಂದು ಉಳಿಯದಿದ್ದಾಗ ಮತ್ತು ಕಲಮು ೩ ರನ್ವಯವಾಗಿರುವ ಪ್ರಕಟನೆಯ ಸತ್ವದಿಂದ ಎರಡು ಇಲ್ಲವೆ ಹೆಚ್ಚು ಹೊಸ ಗ್ರಾಮಗಳು ಎಂದು ರಚಿತವಾಗಿವೆಯಾಗಿ ಸಾರಲ್ಪಟ್ಟಾಗ, ಆ ಪ್ರಕಟನೆಯು ಎಂದು ಹೊರಡಿಸಲ್ಪಟ್ಟಿರುವುದೋ ಆ ತಾರೀಖಿನಿಂದ ( ಈ ಮುಂದೆ ಈ ಕಲಮಿನಲ್ಲಿ ನಿರ್ದಿಷ್ಟಪಡಿಸಲಾದ ತಾರೀಖು ಎಂದು ಕರೆಯಲಾಗಿದೆ ) ಈ ಕೆಳಗಿನ ಪರಿಣಾಮಗಳು ಉಂಟಾಗುವುವು; ಅವು ಯಾವುವೆಂದರೆ—

(ಅ) ಇಂತಹ ಸ್ಥಾನಿಕ ಪ್ರದೇಶಕ್ಕಾಗಿ ರಚಿತವಾದ ಪಂಚಾಯತವು ಇಲ್ಲದಾಗುವುದು ಮತ್ತು ಕಾರ್ಯವನ್ನು ನಿಲ್ಲಿಸುವುದು ಮತ್ತು ಪಂಚಾಯತದ ಎಲ್ಲ ಸದಸ್ಯರು ಅಧಿಕಾರಪದದ ಸ್ಥಳಗಳನ್ನು ಖಾಲಿಮಾಡುವರು.

(ಬ) ಒಂದೊಂದು ಹೊಸ ಗ್ರಾಮಕ್ಕೆ ಇಂತಹ ಗ್ರಾಮಗಳಿಗೆ ಪಂಚಾಯತಗಳು ರಚಿತವಾಗುವ ತನಕ ಪಂಚಾಯತದ ಎಲ್ಲ ಅಧಿಕಾರಿಗಳು ಮತ್ತು ಕರ್ತವ್ಯಗಳು ಸರಕಾರ ನೇಮಿಸತಕ್ಕಂತಹ ವ್ಯಕ್ತಿಯಿಂದ ( ಈ ಮುಂದೆ ಆಡಳಿಗಾರನೆಂದು ಕರೆಯಲಾಗಿದೆ ) ನಿರ್ವಹಿಸಲ್ಪಡತಕ್ಕದ್ದು ಮತ್ತು ಮಾಡಲ್ಪಡತಕ್ಕದ್ದು.

(ಕ) ಇಂತಹ ಪಂಚಾಯತದ ಒಡೆತನದಲ್ಲಿದ್ದ ಪಂಚಾಯತ ನಿಧಿಯಲ್ಲಿ ವೆಚ್ಚವಾಗದೆ ಇದ್ದ ಶಿಲ್ಕು ಮತ್ತು ತೆರಿಗೆ, ಕರ, ಮತ್ತು ಫೀಗಳ ಬಾಕಿಯನ್ನು

ಒಳಗೊಂಡು ಎಲ್ಲ ಆಸ್ತಿಯು ಸರಕಾರವು ಆದೇಶಿಸಬಹುದಾದ ರೀತಿಯಲ್ಲಿ ಮತ್ತು ಅಂತಹ ಪ್ರಮಾಣದಲ್ಲಿ ಹೊಸ ಪಂಚಾಯತಗಳಲ್ಲಿ ಅಂತರ್ಗತವಾಗಿರತಕ್ಕದ್ದು.

(ಡ) ಇಂತಹ ಪಂಚಾಯತದ ಅಧಿಕಾರಿಗಳನ್ನು ಮತ್ತು ಸೇವಕರನ್ನು ಸರಕಾರವು ಆದೇಶಿಸಬಹುದಾದ ರೀತಿಯಲ್ಲಿ ಹೊಸ ಪಂಚಾಯತಗಳ ನಡುವೆ, ಹಂಚಿಹಾಕತಕ್ಕದ್ದು.

(ಇ) (ಅ) ದಿಂದ (ಡ) ದ ವರೆಗೆ ಇರುವ ವಾಕ್ಯಾವಳಿ ಅಂಕಿತವಾಗಿ ಕಲಮು ೮೮ ರ ಶರತುಗಳು ಆವಶ್ಯಕ ಬದಲಾವಣೆಯೊಂದಿಗೆ, ಹೊಸ ಪಂಚಾಯತ ಗಳ ಆಡಳಿತಗಾರನಿಗೆ ಮತ್ತು ಅವುಗಳ ಸದಸ್ಯರಿಗೆ ಅನ್ವಯಿಸುವುವು.

**ವಿವೇಚನೆ**

ಒಂದು ಗ್ರಾಮವಿದ್ದುದನ್ನು ಒಡೆದು ಎರಡು ಇಲ್ಲವೆ ಹೆಚ್ಚು ಗ್ರಾಮಗಳ ನ್ನಾಗಿ ಮಾಡಲಾದರೆ ಏನು ಪರಿಣಾಮವಾಗುವುದು, ಎಂಬುದನ್ನು ಇಲ್ಲಿ ಹೇಳಿದೆ. ಕಲಮು ೮೮, ೯೦ ಮತ್ತು ೯೧. ಇವು ಸ್ಥಾನಿಕ ಪ್ರದೇಶದಲ್ಲಿ ಆಗಬಹುದಾದ ಸ್ಥಿತ್ಯಂತರಗಳನ್ನು ಅನುಲಕ್ಷಿಸಿ ಮಾಡಿದ ಕಲಮುಗಳಾಗಿವೆ ಯಾವುದೊಂದು ಪ್ರದೇಶದಲ್ಲಿ ಜನವಸತಿ, ಉತ್ಪನ್ನ ಹೆಚ್ಚಾಗಬಹುದು. ಇಲ್ಲವೆ ಕಡಿಮೆಯಾಗಬಹುದು. ಆಗ ಮುನಸಿಪಾಲಟಿ ಹೋಗಿ ಪಂಚಾಯತವಾಗಬಹುದು. ಇಲ್ಲವೆ ಎರಡು ಗ್ರಾಮಗಳು ಕರಗಿ ಒಂದು ಜೋಡಣೆಯಾದ ಗ್ರಾಮವಾಗಬಹುದು. ಇಲ್ಲವೆ ಒಂದು ಗ್ರಾಮವು ಒಡೆಯಲ್ಪಟ್ಟು ಎರಡು ಇಲ್ಲವೆ ಹೆಚ್ಚು ಗ್ರಾಮಗಳು ಆಗ ಬಹುದು. ಈ ಸ್ಥಿತ್ಯಂತರಗಳಿಂದ ಕಾಯದೇಶೀರ ಪರಿಣಾಮಗಳು ಏನಾಗುವುವು ಎಂಬುದನ್ನು ಈ ಮೂರು ಕಲಮುಗಳು ಸ್ಪಷ್ಟಮಾಡುವುವು.

ಒಂದು ಗ್ರಾಮವನ್ನು ಒಡೆದು ಹೆಚ್ಚು ಗ್ರಾಮಗಳನ್ನು ಮಾಡಿದರೆ, ಮೂಲ ಪಂಚಾಯತವು ಇಲ್ಲದಾಗುವುದು. ಸದಸ್ಯರು ಅಧಿಕಾರಪದ ತೆರವುಮಾಡಬೇಕಾ ಗುವುದು. ಹೊಸ ಪಂಚಾಯತವು ರಚನೆಯಾಗುವತನಕ ಹಳೆಯ ಪಂಚಾಯತದ ಅಧಿಕಾರಗಳು ಹಾಗೂ ಕರ್ತವ್ಯಗಳು ಆಡಳಿತಗಾರನಿಂದ ಮಾಡಲ್ಪಡುವುವು. ಇವನನ್ನು ಸರಕಾರವು ನೇಮಿಸುವುದು. ಒಂದು ಪಂಚಾಯತ ಹೋಗಿ ಹೆಚ್ಚು ಸಂಖ್ಯೆಯಲ್ಲಿ ಪಂಚಾಯತಗಳು ಆಗುವುದರಿಂದ ಆಸ್ತಿ ಸೊತ್ತುಗಳ ಹಂಚಿಕೆಯಾಗ ಬೇಕಲ್ಲ! ಈ ಹಂಚಿಕೆಯು ಸರಕಾರವು ನಿರ್ಣಯಿಸುವ ಪ್ರಮಾಣದಲ್ಲಿ ನಡೆಯು ವುದು. ಅದರಂತೆ ಅಧಿಕಾರಿಗಳ ಹಾಗು ಸೇವಕರ ಹಂಚಿಕೆಯು. ಇನ್ನುಳಿದ ಮಾತುಗಳು ಮೇಲಿನ ಮಾತುಗಳಿಕಿಂತವಾಗಿ ಆಡಳಿತಗಾರನಿಗೆ ಮತ್ತು ಪಂಚಾ ಯತದ ಸದಸ್ಯರಿಗೆ ಆವಶ್ಯಕ ಬದಲಾವಣೆಗಳನ್ನು ಲಕ್ಷಿಸಿ, ಕಲಮು ೮೮ ರಲ್ಲಿಯವು ಅನ್ವಯಿಸುವುವು. ಆ ಕಲಮಿನಲ್ಲಿಯ ಮಾತುಗಳನ್ನು ನೋಡಬೇಕು.

## ೬೨. ಗ್ರಾಮದ ಪ್ರಾದೇಶಿಕ ಸೀಮೆಯ ಸ್ಥಿತ್ಯಂತರದಿಂದ ಆದ ಪಂಚಾಯತದ ಮುರುಗಡೆ ಹಾಗೂ ಪುನರ್‌ರಚನೆ

(೧) ಒಂದು ಪಂಚಾಯತದ ಅಧಿಕಾರಕಾಲಾವಧಿಯಲ್ಲಿ ಒಂದು ಗ್ರಾಮದ ರಚನೆಯಾದ ಕಾರಣದಿಂದ ಇಲ್ಲವೆ ಬೇರೆ ಯಾವುದೇ ಕಾರಣಕ್ಕಾಗಿ, ಒಂದು ಗ್ರಾಮದ ಪ್ರಾದೇಶಿಕ ಸೀಮೆಗಳು ಹೆಚ್ಚು ಕಡಿಮೆಯಾದರೆ, ಅಧಿಕೃತ ಗ್ಯಾಜೆಟ ದಲ್ಲಿಯ ಪ್ರಕಟನೆಯಿಂದ ಡೆಪ್ಯೂಟಿ ಕಮಿಶನರನು ಇಂತಹ ಪಂಚಾಯತವನ್ನು ಮುರುಗಡೆ ಮಾಡಬಹುದು. ಮತ್ತು

(i) ಯಾವ ಗ್ರಾಮಕ್ಕೆ ಪಂಚಾಯತವು ಮುರಗಡೆ ಮಾಡಲ್ಪಟ್ಟಿರುವುದೋ ಆ ಗ್ರಾಮಕ್ಕೆ ಪಂಚಾಯತವು ಪುನಾ ರಚಿತವಾಗಬೇಕೆಂದು ಆದೇಶಿಸಬಹುದು, ಇಲ್ಲವೆ

(ii) ಯಾವ ಗ್ರಾಮವು ಹೊಸದಾಗಿ ರಚಿತವಾಗಿರುವುದೋ ಆ ಗ್ರಾಮಕ್ಕೆ ಪಂಚಾಯತವು ಸ್ಥಾಪಿಸಲ್ಪಡಬೇಕೆಂದು ಆದೇಶಿಸಬಹುದು.

(೨) ಉಪಕಲಮು (೧) ರನ್ವಯವಾಗಿ ಯಾವ ಪಂಚಾಯತವು ಮುರು ಗಡೆಮಾಡಲ್ಪಟ್ಟಿರುವುದೋ ಆ ಪಂಚಾಯತದ ಸದಸ್ಯರು ಡೆಪ್ಯೂಟಿ ಕಮಿಶನರನ ಹುಕುಮಿನಲ್ಲಿ ನಿರ್ದಿಷ್ಟಪಡಿಸಲಾದ ತಾರೀಖಿನಿಂದ ಅಧಿಕಾರಪದದ ಸ್ಥಳಗಳನ್ನು ಖಾಲೀಮಾಡತಕ್ಕದ್ದು.

(೩) ಉಪಕಲಮು (೧) ರ ಕಕ್ಷೆಗಳನ್ವಯವಾಗಿ ಪುನಾರಚಿತವಾದ ಇಲ್ಲವೆ ಸ್ಥಾಪಿತವಾದ ಪಂಚಾಯತವು ಡೆಪ್ಯೂಟಿ ಕಮಿಶನರನು ಆಜ್ಞೆಯ ಮೂಲಕ ನಿರ್ದೇಶಿಸಬಹುದಾದ ರೀತಿಯಲ್ಲಿ ಮತ್ತು ಸಂಖ್ಯೆಯಲ್ಲಿ ಚುನಾಯಿತ ಇಲ್ಲವೆ ನೇಮಕವಾದ ಸದಸ್ಯರನ್ನುಳ್ಳದ್ದಾಗಿರತಕ್ಕದ್ದು.

(೪) ಹೀಗೆ ಪುನಾರಚಿತವಾದ ಪಂಚಾಯತವ ಚೇರಮನ್ನ ಹಾಗೂ ಉಪ ಚೇರಮನ್ನನು ಈ ಕಾಯಿದೆಯಲ್ಲಿ ಹೇಳಿದ ಪ್ರಕಾರ ಚುನಾಯಿಸಲ್ಪಡತಕ್ಕದ್ದು.

(೫) ಹೀಗೆ ಪುನಾರಚಿತವಾದ ಇಲ್ಲವೆ ಸ್ಥಾಪಿತವಾದ ಪಂಚಾಯತದ ಅಧಿ ಕಾರ ಕಾಲಾವಧಿಯು ಡೆಪ್ಯೂಟಿ ಕಮಿಶನರನ ಲಿಖಿತ ಹುಕುಮಿನಲ್ಲಿ ನಿರ್ದಿಷ್ಟಪಡಿಸಿ ದಂತಹ ಒಂದು ವರುಷಕ್ಕೆ ಮಿಕ್ಕದಷ್ಟು ಕಾಲಾವಧಿಯು ಇರತಕ್ಕದ್ದು.

(೬) ಉಪಕಲಮು (೫)ರ ಶರತುಗಳನುಸಾರವಾಗಿ ಪಂಚಾಯತದ ಅಧಿ ಕಾರ ಕಾಲಾವಧಿಯು ಮುಗಿದ ನಂತರ ಪಂಚಾಯತವು ಈ ಕಾಯಿದೆಯಲ್ಲಿ ಹೇಳಿದ ಪ್ರಕಾರ ರಚಿಸಲ್ಪಡತಕ್ಕದ್ದು.

## ವಿವೇಚನೆ

ಒಂದು ಗ್ರಾಮವು ಹೊಸದಾಗಿ ರಚಿತವಾಯಿತೆಂಬುದು ಒಂದು ಕಾರಣ. ಅದಕ್ಕೆ ಹೊಸದಾಗಿ ಪಂಚಾಯತವು ಸ್ಥಾಪಿಸಲ್ಪಡಬೇಕು. ಇದ್ದ ಪ್ರಾದೇಶಿಕ ಸೀಮೆಯಲ್ಲಿ ಬದಲಾವಣೆಯಾಗಿ ಗ್ರಾಮವು ರಚಿತವಾದರೆ, ಇದ್ದ ಪಂಚಾಯತವನ್ನು ಮುರಗಡೆ ಮಾಡಬೇಕಾಗುವುದು. ಅದನ್ನು ಮಾಡುವ ಅಧಿಕಾರ ಡೆಪ್ಯೂಟಿ ಕಮಿಶನರರದು. ಗ್ಯಾಜೆಟದಲ್ಲಿ ಪ್ರಕಟನೆ ಹೊರಡಿಸಿ ಪಂಚಾಯತವನ್ನು ಮುರಗಡೆ ಮಾಡಿದಮೇಲೆ ಹೊಸದು ಸ್ಥಾಪಿತವಾಗಬೇಕು. ಮುರಗಡೆಯಾದ ಪಂಚಾಯತದ ಸದಸ್ಯರು ಅಧಿಕಾರ ಸ್ಥಳವನ್ನು ಖಾಲಿ ಮಾಡಬೇಕು. ಏಕೆಂದರೆ ಅವರು ಸದಸ್ಯರಾಗಿ ಉಳಿಯಲು ಪಂಚಾಯತವೇ ಇರುವುದಿಲ್ಲ. ಹೊಸದಾಗಿ ಸ್ಥಾಪಿತವಾದ ಇಲ್ಲವೆ ಪುನಾರಚಿತವಾದ ಪಂಚಾಯತದ ಸದಸ್ಯರ ಸಂಖ್ಯೆ ಎಷ್ಟಿರಬೇಕು, ಅವರು ಚುನಾಯಿತರಾಗಿರಬೇಕೋ, ನೇಮಕವಾಗಿರಬೇಕೋ ಎಂಬುದನ್ನು ಡೆ. ಕಮಿಶನರನು ನಿರ್ಣಯಿಸುವನು. ಹೀಗೆ ರಚಿತವಾದ ಪಂಚಾಯತದ ಕಾಲಾವಧಿ ಒಂದು ವರುಷಕ್ಕಿಂತ ಹೆಚ್ಚು ಆಗದು. ಇವನ್ನು ಬಿಟ್ಟರೆ ಉಳಿದ ಎಲ್ಲ ಚುನಾವಣೆ ರಚನೆ ಮುಂತಾದವುಗಳು ಈ ಕಾಯಿದೆಯ ಪ್ರಕಾರವೇ ನಡೆಯತಕ್ಕದ್ದು.

## ೯೩. ಮುರಗಡೆಯಾದ ಪುನಾರಚಿತವಾದ ಇಲ್ಲವೆ ಸ್ಥಾಪಿತವಾದ ಪಂಚಾಯತದ ಆಸ್ತಿಯ ಅಧಿಕಾರ

(೧) ಕಲಮು ೯೨ ರನ್ವಯವಾಗಿ, ಪಂಚಾಯತವು ಮುರಗಡೆಯಾದಾಗ ಮತ್ತು ಪುನಾರಚಿತವಾದಾಗ ಇಲ್ಲವೆ ಸ್ಥಾಪಿತವಾದಾಗ, ಯಾವ ಪಂಚಾಯತವು ಮುರಗಡೆ ಮಾಡಲ್ಪಟ್ಟಿರುವುದೋ ಆ ಪಂಚಾಯತದ ಅಂತರ್ಗತವಾಗಿದ್ದ ಪಂಚಾಯತ ನಿಧಿ ಮತ್ತು ಇತರ ಆಸ್ತಿಯು ಕಲಮು ೯೨ ರನ್ವಯವಾಗಿ ಪುನಾರಚಿತವಾದ ಇಲ್ಲವೆ ಸ್ಥಾಪಿತವಾದ ಪಂಚಾಯತದಲ್ಲಿ ಡೆಪ್ಯೂಟಿ ಕಮಿಶನರರನು ಲಿಖಿತ ಹುಕುಮಿನ ಮೂಲಕ ಆದೇಶಿಸಿದಂತೆ ಅಂತರ್ಗತವಾಗತಕ್ಕದ್ದು. ಮತ್ತು ಸಾಲದ ಹಾಗೂ ಋಣದ ಅಂತಹ ಭಾಗವು ಹಸ್ತಾಂತರಿಸಲ್ಪಡತಕ್ಕದ್ದು.

(೨) ಪುನಾರಚಿತವಾದ ಇಲ್ಲವೆ ಸ್ಥಾಪಿಸಲ್ಪಟ್ಟ ಪಂಚಾಯತದ ಅಧಿಕಾರದ ಅಂಕಿತವಾಗಿರುವ ಪ್ರದೇಶದ ಇಲ್ಲವೆ ಅದರ ಭಾಗಕ್ಕೆ ಸಂಬಂಧಪಟ್ಟ ಇಲ್ಲವೆ ಅಲ್ಲಿ ಉದ್ಭವಿಸಿದ ದಿವಾಣಿ ಮತ್ತು ಫೌಜದಾರಿ ಪ್ರಕರಣಗಳು, ಕರಾರುಗಳು, ಒಪ್ಪಂದಗಳು ಮತ್ತು ಇತರ ವಿಷಯಗಳು ಇಲ್ಲವೆ ವಸ್ತುಗಳು ಇವುಗಳ ಬಗ್ಗೆ ಮುರಗಡೆಯಾದ ಪಂಚಾಯತದ ಹಕ್ಕು ಮತ್ತು ಬಾಧ್ಯತೆಗಳು ಇಂತಹ ಪಂಚಾಯತದ ಅಂತರ್ಗತವಾಗಿರತಕ್ಕದ್ದು.

(೨) ಮುರಗಡೆ ಮಾಡಲ್ಪಟ್ಟ ಪಂಚಾಯತದಿಂದ ಯಾವುದು ಪುನಾರಚಿತ ವಾಗಿರುವುದೋ ಇಲ್ಲವೆ ಸ್ಥಾಪಿತವಾಗಿರುವುದೋ ಆ ಪಂಚಾಯತದ ಅಧಿಕಾರದ ಅಂಕಿತವಾಗಿರುವ ಪ್ರದೇಶದ ಯಾವುದೇ ಭಾಗಕ್ಕೆ ಸಂಬಂಧಪಟ್ಟ, ಮಾಡಿದ, ಹೊರಡಿಸಿದ, ಹಾಕಿದ ಇಲ್ಲವೆ ದಯಪಾಲಿಸಲಾದ ಯಾವುದೇ ನೇಮಕ, ಪ್ರಕಟನೆ, ನೋಟೀಸು, ಕರ, ಹುಕುಮು, ಯೋಜನೆ, ಲಾಯಸೆನ್ಸ್, ಪರವಾನಗಿ, ನಿಯಮ, ಪೋಟ ನಿಯಮ, ಇಲ್ಲವೆ ನಮೂನೆ ಇಂತಹ ಪಂಚಾಯತದಿಂದ ಮಾಡಿದ, ಹೊರ ಡಿಸಿದ, ಹಾಕಿದ, ಇಲ್ಲವೆ ದಯಪಾಲಿಸಲಾದ ನೇಮಕದಿಂದ, ಪ್ರಕಟನೆಯಿಂದ, ನೋಟೀಸಿನಿಂದ, ಕರದಿಂದ, ಹುಕುಮಿನಿಂದ, ಯೋಜನೆಯಿಂದ, ಲಾಯಸೆನ್ಸ ದಿಂದ, ಪರವಾನಗಿಯಿಂದ, ನಿಯಮದಿಂದ, ಪೋಟ ನಿಯಮದಿಂದ ಇಲ್ಲವೆ ನಮೂನೆಯಿಂದ, ಹಿಂದೆ ಸರಿಸುವ ತನಕ ಇಲ್ಲವೆ ಹೊರತು ತಿದ್ದುಪಡಿ, ಮಾಡುವ ತನಕ ಇಲ್ಲವೆ ಹೊರತು, ಇಂತಹ ಪಂಚಾಯತದಿಂದ ಮಾಡಿದ್ದವೆಂದು, ಹೊರಡಿಸ ಲಾದುದೆಂದು, ಹಾಕಲಾದುದೆಂದು ಇಲ್ಲವೆ ದಯಪಾಲಿಸಲಾದುವೆಂದು ಗಣಿಸಲ್ಪಡ ತಕ್ಕದ್ದು.

## ವಿವೇಚನೆ

ಒಂದು ಪಂಚಾಯತವು ಮುರಗಡೆ ಮಾಡಲಾದರೆ, ಮತ್ತೆ ಬೇರೆ ಪಂಚಾ ಯತವು ಪುನಾರಚಿತವಾಗುವುದು ಇಲ್ಲವೆ ಸ್ಥಾಪಿತವಾಗುವುದು. ಹೀಗೆ ಪುನಾ ರಚಿತವಾದ ಇಲ್ಲವೆ ಸ್ಥಾಪಿತವಾದ ಪಂಚಾಯತಗಳು ಮುರಗಡೆ ಮಾಡಲಾದ ಪಂಚಾಯತದ ಅಧಿಕಾರ-ಹಕ್ಕು-ಹೊಣೆಗಾರಿಕೆಗಳನ್ನು ಪಡೆಯು ವುವು. ಮುರಗಡೆಯಾದ ಪಂಚಾಯತವು ಇಲ್ಲದಾಗಿ, ಅದು ಯಾವ ಪ್ರದೇಶಕ್ಕೆ ಪಂಚಾಯತವಾಗಿದ್ದಿತೋ ಆ ಸ್ಥಳವು ಯಾವ ಪುನಾರಚಿತ ಇಲ್ಲವೆ ಸ್ಥಾಪಿತ ಪ್ರದೇಶದ ಪಂಚಾಯತದಲ್ಲಿ ಬಂದಿರುವುದೋ ಆ ಸ್ಥಳದ ಸಂಬಂಧವಾಗಿರುವ ಹಿಂದಿನ ಮುರಗಡೆಯಾದ ಪಂಚಾಯತದ ಎಲ್ಲ ಅಧಿಕಾರ, ಹಕ್ಕು, ಹೊಣೆಗಾರಿಕೆ ಗಳು ಬರುವುವು ಮತ್ತು ಅವರ ಸ್ಥಾನದಲ್ಲಿ ಅವು ಅಂದರೆ ಪುನಾ ರಚಿತವಾದ ಇಲ್ಲವೆ ಸ್ಥಾಪಿತವಾದ ಪಂಚಾಯತಗಳು ಬರುವುವು. ಕಾರ್ಯವು ನಿರಂತರವಾಗಿ ಸಾಗುವುದು. ಹಿಂದೆ ಮಾಡಲಾದ ಕಾರ್ಯಗಳು, ಹೊಸ ಪಂಚಾಯತಗಳಿಂದ ಮುಂದುವರೆಸಲ್ಪಡುವುವು.

## ೯೪. ಆತಂಕಗಳ ನಿವಾರಣೆ

ಕಲಮು ೯೦, ೯೧, ೯೨, ಮತ್ತು ೯೩ ರಲ್ಲಿಯ ಶರತುಗಳನ್ನು ಪರಿಣಾಮ ಕಾರಿಯಾಗಿ ಮಾಡುವ ಪ್ರಸಂಗದಲ್ಲಿ ಯಾವುದೇ ಆತಂಕ ಉಂಟಾದರೆ, ಸರಕಾರವು

ಅಧಿಕೃತ ಗ್ಯಾಜೆಟದಲ್ಲಿ ಪ್ರಕಟನೆ ಹೊರಡಿಸಿದ ಹುಕುಮಿನಿಂದ, ಪ್ರಸಂಗಕ್ಕೆ ತಕ್ಕಂತೆ ಆತಂಕನಿವಾರಣೆಗಾಗಿ ಯಾವುದನ್ನು ಮಾಡುವುದು ಅವಶ್ಯವೆಂದು ಅನ್ನಿಸುವುದೋ ಅಂತಹ ಯಾವುದನ್ನೂ ಮಾಡಬಹುದು.

## ವಿವೇಚನೆ

ಕಲಮು ೯೦ ಪಂಚಾಯತಗಳ ಜೋಡಣೆಮಾಡುವ ಬಗ್ಗೆ ಇದೆ; ಕಲಮು ೯೧, ಪಂಚಾಯತಗಳನ್ನು ವಿಭಾಗಿಸುವ ಬಗ್ಗೆ ಇದೆ; ಕಲಮು ೯೨ ಪಂಚಾಯತಗಳನ್ನು ಮುರುಗಡೆ-ಪುನಾರಚಗೆ-ಸ್ಥಾಪನೆ-ಮಾಡುವ ಬಗ್ಗೆ ಇದೆ; ಕಲಮು ೯೩ ಹಾಗೆ ಮುರುಗಡೆಯಾದ ಪಂಚಾಯತ ಪ್ರದೇಶದಲ್ಲಿ ಪುನಾರಚಿತವಾದ ಇಲ್ಲವೆ ಸ್ಥಾಪಿತವಾದ ಪಂಚಾಯತಗಳ ಆಸ್ತಿ ಹಕ್ಕು ಅಧಿಕಾರದ ಬಗ್ಗೆ ಇದೆ ಪಂಚಾಯತಗಳಲ್ಲಿ ಸ್ಥಿತ್ಯಂತರವಾಗುವುದರಿಂದ ಒಂದು ಇಲ್ಲದಾಗಿ, ಇಲ್ಲವೆ ಮುರಗಡೆಯಾಗಿ ಬೇರೆ ರಚಿತವಾಗುವುವು-ಸ್ಥಾಪಿತವಾಗುವುವು. ಆಗ ಆಸ್ತಿ ಋಣಗಳ ಹಸ್ತಾಂತರ, ಖಟ್ಲೆ-ದಾವೆಗಳ ಮುಂದುವರಿಸುವಿಕೆಗಳು ನಡೆಯಬೇಕಾಗುತ್ತದೆ. ಪಂಚಾಯತಗಳು ಶಾಶ್ವತ ಹಾಗೂ ನಿರಾತಂಕ ಹಾಗೂ ನಿರಂತರವಾಗಿ ನಡೆಯಬೇಕಾದ ಸಂಸ್ಥೆಗಳಾಗಿದ್ದುದರಿಂದ ಒಂದರ ಬದಲು ಮತ್ತೊಂದು ಉದಯವಾದಾಗಿ ಹಿಂದಿನ ಪರಂಪರೆಯನ್ನು ಮುಂದುವರೆಸಬೇಕಾದಾಗ, ಕೆಲವು ಆತಂಕಗಳು ಬರುವುವು. ಸಾಧ್ಯವಾದ ಮಟ್ಟಿಗೆ ಆಯಾ ಕಲಮಿನಲ್ಲಿ ಪರಿಣಾಮವಾಗುವ ವಿಷಯಗಳನ್ನು ಹೇಳಿದೆ. ಆದರೂ ಅವುಗಳಲ್ಲಿ ಹೇಳದೆ ಇದ್ದಂತಹ ಸಂಗತಿಯ ಬಗ್ಗೆ ಆತಂಕ, ತೊಡಕು ಉಂಟಾದರೆ ಅದನ್ನು ನಿವಾರಿಸಲು ಸರಕಾರಕ್ಕೆ ಈ ಕಲಮಿನ ಮೂಲಕ ಅಧಿಕಾರ ಕೊಡಲಾಗಿದೆ. ಸರಕಾರವು ಆಜ್ಞೆ ಹೊರಡಿಸಿ, ಅದನ್ನು ಗ್ಯಾಜೆಟದಲ್ಲಿ ಪ್ರಕಟಿಸಿ, ಪ್ರಸಂಗಕ್ಕೆ ತಕ್ಕಂತೆ ಆತಂಕ ನಿವಾರಣೆಮಾಡಬಹುದು. ಅಂದರೆ ಬದಲಾವಣೆಯಾದರೂ ಅದರಿಂದ ಯಾವ ಆತಂಕವೂ ಉಳಿಯಲಾರದು.

# ಭಾಗ : ಮೂರು

## ತಾಲೂಕ ಅಭಿವೃದ್ಧಿ ಬೋರ್ಡುಗಳು

### ಪ್ರಕರಣ : ೬ ತಾಲೂಕ ಬೋರ್ಡುಗಳ ರಚನೆ

**೯೫. ತಾಲೂಕಬೋರ್ಡುಗಳ ರಚನೆ ಹಾಗೂ ಅವುಗಳ ಸಂಸ್ಥೀಕರಣ**

(೧) ಪ್ರಕರಣ ೧೧ ಇಲ್ಲವೆ ಜಾರಿಯಲ್ಲಿದ್ದ ಬೇರೆ ಯಾವುದೇ ಕಾಯಿದೆ ಯನ್ವಯವಾಗಿ ರಚಿತವಾದ ಪಟ್ಟಣ ಪ್ರದೇಶ ಕಮಿಟಿಯ ಇಲ್ಲವೆ ಸ್ಯಾನಿಟರಿ ಬೋರ್ಡದ ಅಧಿಕಾರದನ್ವಯವಾಗಿದ್ದ ಇಲ್ಲವೆ ಮುನಸಿಪಾಲಟಿಯಲ್ಲಿ ಸಮಾವೇಶ ವಾಗಿದ್ದ ತಾಲೂಕ ಭಾಗಗನ್ನು ಹೊರತುಪಡಿಸಿ, ಇಡೀ ತಾಲೂಕದ ಮೇಲೆ ಅಧಿಕಾರವಿರುವ ಹಾಗೆ ಪ್ರತಿಯೊಂದು ಭೂಕಂದಾಯ ತಾಲೂಕಕ್ಕೆ ಅಭಿವೃದ್ಧಿ ಬೋರ್ಡು ಇರತಕ್ಕದ್ದು.

(೨) ಪ್ರತಿಯೊಂದು ತಾಲೂಕಬೋರ್ಡು ಒಂದು ಸಂಸ್ಥೀಕೃತರೂಪ ತಳೆದದ್ದು ಇದ್ದು "                    ತಾಲೂಕ ಅಭಿವೃದ್ಧಿ ಬೋರ್ಡು" ಎಂಬ ಹೆಸರು ಪಡೆದಿದ್ದು ನಿರಂತರವಾದ ವಾರಸಾ ಇರುವ ಮತ್ತು ಸಾಮಾನ್ಯ ಮುದ್ರೆ ಇರುವ ಸಂಸ್ಥೆಯಾಗಿದ್ದು ಈ ಕಾಯಿದೆಯಿಂದ ಇಲ್ಲವೆ ಬೇರೆ ಕಾಯಿದೆಯಿಂದ ಹಾಕಲಾದ ನಿರ್ಬಂಧಗಳಿಗಂಕಿತವಾಗಿರತಕ್ಕದ್ದು. ತನ್ನ ಸಂಸ್ಥೆಯ ಹೆಸರಿನಲ್ಲಿ ವಾದಿಯಾಗಿ ಇಲ್ಲವೆ ಪ್ರತಿವಾದಿಯಾಗಿ ನಿಲ್ಲುವ ಸಾಮರ್ಥ್ಯ ಕೊಡಲ್ಪಟ್ಟಿದ್ದು ಇದ್ದು, ತನ್ನ ಅಧಿಕಾರ ಇರುವ ಪ್ರದೇಶದ ಒಳಗೆ ಇಲ್ಲವೆ ಹೊರಗೆ ಸ್ಥಾವರ ಇಲ್ಲವೆ ಜಂಗಮ ಆಸ್ತಿಗಳನ್ನು ಪಡೆಯಲು, ಧಾರಣಮಾಡಲು, ಮತ್ತು ಹಸ್ತಾಂತರಿಸಲು, ಸಾಮರ್ಥ್ಯ ವುಳ್ಳದ್ದು, ಕರಾರು ಪತ್ರದಲ್ಲಿ ಭಾಗಿಯಾಗಲು, ಮತ್ತು ಯಾವ ಉದ್ದೇಶಗಳಿಗಾಗಿ ಅದು ರಚಿತವಾಗಿರುವುದೋ ಅದನ್ನು ಸಾಧಿಸುವುದಕ್ಕಾಗಿ, ಅವಶ್ಯಕವಾದ, ಯೋಗ್ಯವಾದ, ಇಲ್ಲವೆ ಪ್ರಸಂಗೋಚಿತವಾದ ಎಲ್ಲ ವಿಷಯಗಳನ್ನು ಮಾಡಲು ಸಾಮರ್ಥ್ಯವುಳ್ಳದ್ದು ಆಗಿರುತ್ತದೆ.

**ವಿವೇಚನೆ**

ಪ್ರತಿಯೊಂದು ಭೂಕಂದಾಯ ತಾಲೂಕಿಗೆ ಒಂದು ತಾಲೂಕ ಅಭಿವೃದ್ಧಿ ಬೋರ್ಡು ಇರತಕ್ಕದ್ದು. ಇದರ ಅಧಿಕಾರ ಕ್ಷೇತ್ರದಲ್ಲಿ ಇಡಿ ತಾಲೂಕ ಪ್ರದೇಶ ಇರುವುದು. ಆದರೆ ಈ ತಾಲೂಕ ಪ್ರದೇಶದಲ್ಲಿ ಯಾವುದೇ ಮುನಸಿಪಾಲಿಟಿ, ಸ್ಯಾನಿಟರಿ ಬೋರ್ಡು, ಪಟ್ಟಣ ಪ್ರದೇಶ ಕಮಿಟಿ ಇದ್ದರೆ ಅವುಗಳ ಅಧಿಕಾರದಲ್ಲಿ ಇರುವ ಪ್ರದೇಶದ ಭಾಗವನ್ನು ಹೊರತುಪಡಿಸಿ ಉಳಿದ ತಾಲೂಕದ ಎಲ್ಲ ಪ್ರದೇಶದ ಮೇಲೆ ತಾಲೂಕ ಅಭಿವೃದ್ಧಿ ಬೋರ್ಡದ ಅಧಿಕಾರ ಇರುತ್ತದೆ.

ತಾಲೂಕ ಬೋರ್ಡು ಒಂದು ಸಂಸ್ಥೆ. ಸಂಸ್ಥೆಯ ಹೆಸರು"..................... ತಾಲೂಕ ಅಭಿವೃದ್ಧಿ ಬೋರ್ಡ" ಎಂದು. ಈ ಹೆಸರಿನಿಂದ ಅದು ಗುರುತಿಸಲ್ಪಡುವುದು. ಇದಕ್ಕೆ ಶಾಶ್ವತ ಹಾಗೂ ನಿರಂತರ ಅಸ್ತಿತ್ವವುಂಟು. ಇದು ಸಂಸ್ಥೆಯ ರೂಪದಲ್ಲಿಯೆ, ವಾದಿಯಾಗಿ-ಪ್ರತಿವಾದಿಯಾಗಿ ಕೆಲಸ ನಡೆಸತಕ್ಕದ್ದು, ಕರಾರು ಮಾಡಿಕೊಳ್ಳತಕ್ಕದ್ದು, ಆಸ್ತಿ ಪಡೆಯತಕ್ಕದ್ದು, ಧಾರಣ ಮಾಡತಕ್ಕದ್ದು, ಹಸ್ತಾಂತರ ಮಾಡಿಕೊಳ್ಳತಕ್ಕದ್ದು. ಈ ಕಾಯಿದೆಯ ಪ್ರಕಾರ ಇಲ್ಲವೆ ಬೇರೆ ಯಾವುದೇ ಕಾಯಿದೆಯ ಸಲುವಾಗಿ ಮಾಡಬೇಕಾದ ಎಲ್ಲ ಕಾರ್ಯಗಳನ್ನು ಸಂಸ್ಥೆಯಾಗಿ ಸಂಸ್ಥೆಯ ಹೆಸರಿನಿಂದ ಸಾಮಾನ್ಯ ಮುದ್ರೆಯಿಂದ ಮಾಡತಕ್ಕದ್ದು.

## ೯೬. ತಾಲೂಕ ಬೋರ್ಡದ ಸ್ವರೂಪ

(೧) ಈ ಕಾಯಿದೆಯ ಶರತುಗಳ ಮತ್ತು ಈ ಕಾಯಿದೆಯನ್ವಯವಾಗಿ ಮಾಡಲಾದ ನಿಯಮಗಳ ಅನುಸಾರವಾಗಿ ಸಾಮಾನ್ಯ ಸ್ಥಳಗಳನ್ನು ಮತ್ತು ಪರಿಶಿಷ್ಟ ವರ್ಗದವರಿಗಾಗಿ ಮತ್ತು ಮಹಿಳೆಯರಿಗಾಗಿ ಕಾದಿಟ್ಟ ಸ್ಥಳಗಳಿಗಾಗಿ, ಪ್ರತಿಯೊಂದು ತಾಲೂಕದಲ್ಲಿಯ ಮತದಾರರಿಂದ ಗುಪ್ತ ಮತದಾನ ಪದ್ಧತಿಯಿಂದ ನೇರವಾಗಿ ಚುನಾಯಿತರಾದ ಸದಸ್ಯರಿಂದ ಪ್ರತಿಯೊಂದು ತಾಲೂಕ ಬೋರ್ಡು ನಿರ್ಮಾಣವಾಗತಕ್ಕದ್ದು.

(೨) ಯಾರ ಪ್ರಾದೇಶಿಕ ಮತದಾರ ಕ್ಷೇತ್ರಗಳು ತಾಲೂಕದ ಪರಿಮಿತಿಯಲ್ಲಿ ಇರುವವೊ ತಾಲೂಕದ ಇಲ್ಲವೆ ಅದರ ಭಾಗದ ಪ್ರತಿನಿಧಿಗಳೆಂದು ಆಗಿರುವ ಅಂತಹ ರಾಜ್ಯ ಶಾಸನ ಸಭೆಯ ಸದಸ್ಯರು ಮತ್ತು ತಾಲೂಕದಲ್ಲಿ ಸಾಧಾರಣವಾಗಿ ರಹಿವಾಸಿಯಾಗಿದ್ದ ರಾಜ್ಯ ಶಾಸನ ಪರಿಷತ್ತಿನ ಸದಸ್ಯರು ತಾಲೂಕ ಬೋರ್ಡದ ಸಭೆಗಳಲ್ಲಿಯ ಕಾರ್ಯಕಲಾಪಗಳಲ್ಲಿ ಭಾಗ ವಹಿಸಲು, ಮತದಾನ ಮಾಡಲು ಬಾಧ್ಯಸ್ಥರಾಗಿರತಕ್ಕದ್ದು.

### ವಿವೇಚನೆ

ತಾಲೂಕ ಬೋರ್ಡು ಚುನಾಯಿತರಾದ ಸದಸ್ಯರಿಂದ ನಿರ್ಮಾಣವಾಗತಕ್ಕದ್ದು. ಚುನಾವಣೆಗಾಗಿ ಸಾಮಾನ್ಯ ಸ್ಥಳಗಳು ಹಾಗೂ ಕಾದಿಟ್ಟ ಸ್ಥಳಗಳು ಇರುವುವು. ಕಾದಿಟ್ಟ ಸ್ಥಳಗಳು, ಪರಿಶಿಷ್ಟ ವರ್ಗದವರಿಗಾಗಿ ಹಾಗೂ ಮಹಿಳೆಯರಿಗಾಗಿ ಚುನಾವಣೆಯು ತಾಲೂಕದಲ್ಲಿಯ ಮತದಾರರಿಂದ ಗುಪ್ತ ಮತದಾನ ಪದ್ಧತಿಯ ಮೇಲೆ ನಡೆಯತಕ್ಕದ್ದು. ಹೀಗೆ ಚುನಾಯಿತರಾದ ಸದಸ್ಯರು ತಾಲೂಕ ಬೋರ್ಡನ್ನು ನಿರ್ಮಾಣ ಮಾಡತಕ್ಕದ್ದು. ಈ ಚುನಾವಣೆಗಳು ಈ ಕಾಯಿದೆ ಹಾಗೂ ಈ ಕಾಯಿದೆಯನ್ವಯ ಮಾಡಿದ ನಿಯಮಗಳ ಅನ್ವಯವಾಗಿ ನಡೆಯತಕ್ಕದ್ದು.

ಈ ತಾಲೂಕದ ಪ್ರತಿನಿಧಿಯಾಗಿ ರಾಜ್ಯದ ಶಾಸನ ಸಭೆ ಹಾಗೂ ಶಾಸನ ಪರಿಷತ್ತಿನಲ್ಲಿ ಸದಸ್ಯರಾಗಿರುವವರಿಗೆ ತಾಲೂಕ ಬೋರ್ಡದ ಸಭೆಗಳಲ್ಲಿ ಭಾಗವಹಿಸಲು ಹಾಗೂ ಮತದಾನ ಮಾಡಲು ಅಧಿಕಾರ ಇದೆ. ಈ ಅಧಿಕಾರ ಅವರಿಗೆ ಇದೆಯೆಂದಾಕ್ಷಣ ಅವನು ತಾಲೂಕ ಬೋರ್ಡದ ಸದಸ್ಯರೆಂದು ಆಗಲಿಲ್ಲ ವೆಂಬುದನ್ನು ನೆನೆಯಬೇಕು.

## ೯೭. ಚುನಾಯಿತ ಸದಸ್ಯರ ಸಂಖ್ಯೆ

ಕಲಮು ೯೬ ರ ಉಪಕಲಮು (೧) ರಲ್ಲಿ ಸೂಚಿಸಲಾದ ತಾಲೂಕಬೋರ್ಡದ ಚುನಾಯಿತ ಸದಸ್ಯರ ಸಂಖ್ಯೆಯು ಸರಕಾರದಿಂದ ಪ್ರಕಟನೆಯ ಮೂಲಕ ಆ ತಾಲೂಕದ ಜನವಸತಿ ( ಮುನಸಿಪಾಲಟಿ, ಸ್ಯಾನಿಟರಿ ಬೋರ್ಡದ ಅಧಿಕಾರದ ಅಧೀನವಾಗಿದ್ದ ಪ್ರದೇಶ, ಟಾವುನ ಬೋರ್ಡ, ಪಟ್ಟಣ ಪ್ರದೇಶ ಕಮಿಟಿ, ನೋಟೀ-ಫಾಯಿಡ ಏರಿಯಾ ಕಮಿಟಿ, ಇಲ್ಲವೆ ಕ್ಯಾಂಟೋನಮೆಂಟ ಬೋರ್ಡ, ಇವುಗಳಲ್ಲಿ ಸಮಾವೇಶವಾದಂತಹ ತಾಲೂಕದಲ್ಲಿಯ ಭಾಗಗಳನ್ನು ಹೊರತುಪಡಿಸಿ ) ತಳಹದಿಯ ಮೇಲೆ ಕೆಳಗೆ ಕೊಟ್ಟ ಕೋಷ್ಟಕದಲ್ಲಿ ಸೂಚಿಸಿದಂತೆ ನಿರ್ದಿಷ್ಟಪಡಿಸ ಬಹುದಾದಷ್ಟು ಇರತಕ್ಕದ್ದು :

**ಕೋಷ್ಟಕ**

| ಜನವಸತಿ ಇರುವ ತಾಲೂಕ. | ಸ್ಥಳಗಳ ಸಂಖ್ಯೆ. |
|---|---|
| ೧. ಕಳೆದ ಜನಗಣತಿಯಲ್ಲಿ ಲಕ್ಷಕ್ಕಿಂತ ಕಡಿಮೆ............ | ೧೫ |
| ೨. ಕಳೆದ ಜನಗಣತಿಯಲ್ಲಿ ಒಂದು ಲಕ್ಷ ಮತ್ತು ಅದಕ್ಕೂ ಹೆಚ್ಚು............ | ೧೯ |

### ವಿವೇಚನೆ

ತಾಲೂಕ ಬೋರ್ಡದಲ್ಲಿ ಸದಸ್ಯರ ಸಂಖ್ಯೆ ಎಷ್ಟು ಇರಬೇಕು? ಮತ್ತು ಅದನ್ನು ಯಾರು ನಿರ್ಣಯಿಸಬೇಕು? ಹೇಗೆ ನಿರ್ಣಯಿಸಬೇಕು ? ಎಂಬುದನ್ನು ಈ ಕಲಮಿನಲ್ಲಿ ಹೇಳಲಾಗಿದೆ. ತಾಲೂಕ ಪ್ರದೇಶದಲ್ಲಿ ಕೆಲಭಾಗಗಳು ಮುನಸಿ ಪಾಲಿಟಿ, ಸ್ಯಾನಿಟರಿ ಬೋರ್ಡ, ಟಾವುನ ಬೋರ್ಡ, ಪಟ್ಟಣ ಪ್ರದೇಶ ಕಮಿಟಿ, ನೋಟೀಫಾಯಿಡ ಏರಿಯಾ ಕಮಿಟಿ, ಇಲ್ಲವೆ ಕ್ಯಾಂಟೋನಮೆಂಟ ಬೋರ್ಡ, ಎಂಬ ಸ್ಥಾನಿಕ ಅಧಿಕಾರಗಳು ಇರುವ ಸಂಭವವಿದೆ. ಹಾಗೆ ಇದ್ದವುಗಳ ಆಡಳಿತದ ಅಂಕಿತವಾಗಿದ್ದ ಪ್ರದೇಶಗಳನ್ನು ಬಿಟ್ಟು ತಾಲೂಕದಲ್ಲಿಯ ಪ್ರದೇಶವು ತಾಲೂಕ ಬೋರ್ಡದ ಅಧೀನವಾಗಿದ್ದ ಪ್ರದೇಶವು. ಈ ಪ್ರದೇಶದಲ್ಲಿ ಜನವಸತಿ ಎಷ್ಟಿರುವದೋ ಅದರ ಮೇಲಿಂದ ಸದಸ್ಯರ ಸಂಖ್ಯೆಯನ್ನು ಸರಕಾರವು ಪ್ರಕಟನೆಯ ಮೂಲಕ ನಿರ್ದಿಷ್ಟಪಡಿಸುವುದು. ಜನವಸತಿಯನ್ನು ಕಳೆದ ಜನಗಣತಿಯ ಸಂಖ್ಯೆಯಂತೆ ಹಿಡಿಯತಕ್ಕದ್ದು. ಒಂದು ಲಕ್ಷಕಿಂತ ಕಡಿಮೆ

ಜನವಸತಿ ಇದ್ದ ತಾಲೂಕಿಗೆ ೧೫ ಜನ ಸದಸ್ಯರು ಆ ತಾಲೂಕ ಬೋರ್ಡಿಗೆ; ಒಂದು ಲಕ್ಷ ಮತ್ತು ಹೆಚ್ಚು ಇದ್ದರೆ ೧೯ ಜನ ಸದಸ್ಯರು ಎಂದು ಹೇಳಿದೆ. ಈ ಎಲ್ಲ ಸದಸ್ಯರು ಕಲಮು ೯೭ ರ ಉಪಕಲಮು ೧ ರಲ್ಲಿ ಹೇಳಿದಂತೆ ಚುನಾಯಿತ ರಾಗಬೇಕಾದ ಸದಸ್ಯರು ಎಂಬುದನ್ನು ಲಕ್ಷದಲ್ಲಿಡಬೇಕು.

## ೯೮. ಪರಿಶಿಷ್ಟ ವರ್ಗಗಳ ಪ್ರಾತಿನಿಧ್ಯ

ತಾಲೂಕದಲ್ಲಿಯ ಒಟ್ಟು ಜನವಸತಿಯ ದೃಷ್ಟಿಯಿಂದ ಪರಿಶಿಷ್ಟವರ್ಗದ ಜನ ವಸತಿಯು ಯಾವ ಪ್ರಮಾಣದಲ್ಲಿ ಇರುವುದೋ ಶಕ್ಯವಾದಷ್ಟು ಮಟ್ಟಿಗೆ ತಾಲೂಕ ಬೋರ್ಡದಲ್ಲಿಯ ಒಟ್ಟು ಸದಸ್ಯಸಂಖ್ಯೆಗೆ ತಾಲೂಕ ಬೋರ್ಡದಲ್ಲಿ ಪರಿಶಿಷ್ಟವರ್ಗ ದವರಿಗಾಗಿ ಕಾದಿಟ್ಟ ಸ್ಥಳಗಳ ಪ್ರಮಾಣವು ಅಷ್ಟೇ ಆಗಿರುವಂತೆ ತಾಲೂಕ ಬೋರ್ಡದಲ್ಲಿ ಪರಿಶಿಷ್ಟ ವರ್ಗದವರಿಗಾಗಿ ಕಾದಿಟ್ಟ ಸ್ಥಳಗಳು ಇರತಕ್ಕದ್ದು.

ಆದರೆ, ಭಾರತದ ರಾಜ್ಯಘಟನೆಯ ನಿಬಂಧನೆ ೩೩೪ ರಲ್ಲಿ ನಿರ್ದಿಷ್ಟಪಡಿಸಿದ ಕಾಲಾವಧಿಯ ನಂತರ ಈ ಕಲಮು ಪರಿಣಾಮವನ್ನುಂಟುಮಾಡತಕ್ಕದ್ದಲ್ಲ.

ಆದರೆ, ಅದರ ಸದಸ್ಯರ ಅಧಿಕಾರ ಕಾಲಾವಧಿ ಮುಗಿಯುವ ತನಕ ತಾಲೂಕ ಬೋರ್ಡದಲ್ಲಿಯ ಯಾವುದೇ ಪ್ರಾತಿನಿಧ್ಯವು ಮೇಲೆ ಹೇಳಿದ ಶರತುಗಳಿಂದ ಬಾಧಿತ ವಾಗತಕ್ಕದ್ದಲ್ಲ.

**ವಿವರಣೆ :**

ಈ ಕಲಮಿನ ಉದ್ದೇಶಗಳಿಗಾಗಿ " ಜನವಸತಿ " ಯನ್ನು ಕಲಮು ೯೭ ರಲ್ಲಿ ನಿರ್ದಿಷ್ಟಪಡಿಸಲಾದ ರೀತಿಯಲ್ಲಿ ಲೆಕ್ಕಹಾಕಲ್ಪಡತಕ್ಕದ್ದು.

**ವಿವೇಚನೆ**

ತಾಲೂಕ ಬೋರ್ಡದಲ್ಲಿಯ ಸದಸ್ಯ ಸಂಖ್ಯೆಯು ತಾಲೂಕದಲ್ಲಿಯ ಜನವಸ ತಿಯ ಮೇಲೆ ನಿರ್ಣಯವಾಗಿರುವುದು. ಕಾದಿಟ್ಟ ಸ್ಥಳಗಳಾದರೂ ಜನವಸತಿಯ ತಳಹದಿಯ ಮೇಲೆಯೆ ಆಗಬೇಕು. ಇಡೀ ತಾಲೂಕಿನಲ್ಲಿರುವ ಜನವಸತಿಯಲ್ಲಿ ಯಾವ ಪ್ರಮಾಣದಲ್ಲಿ ಪರಿಶಿಷ್ಟವರ್ಗದ ಜನರು ಇರುವರೋ ಅದೇ ಪ್ರಮಾಣ ಹಿಡಿದು ತಾಲೂಕ ಬೋರ್ಡದ ಒಟ್ಟು ಸದಸ್ಯ ಸಂಖ್ಯೆಯಲ್ಲಿ ಪರಿಶಿಷ್ಟವರ್ಗದವರಿ ಗಾಗಿ ಕಾದಿಟ್ಟ ಸ್ಥಳಗಳ ಪ್ರಮಾಣ ಇರತಕ್ಕದ್ದು. ಈ ಸ್ಥಳ ಕಾದಿಡುವಿಕೆಯು ರಾಜ್ಯಘಟನೆಯ ನಿಬಂಧನೆಯ ೩೩೪ ರಲ್ಲಿ ಹೇಳಿದಂತೆ ಅಂದರೆ ರಾಜ್ಯಘಟನೆಯು ಜಾರಿಯಲ್ಲಿ ಬಂದ ನಂತರ ಹತ್ತು ವರುಷಗಳ ವರೆಗೆ. ಆ ಹತ್ತು ವರುಷಗಳು ಜನವರಿ ೨೫-೧೯೬೦ ಕ್ಕೆ ಆಗುವುದು. ಒಂದು ವೇಳೆ ಈ ಅವಧಿ ಹೆಚ್ಚು ಮಾಡ ಲ್ಪಟ್ಟರೂ, ಅಲ್ಲಿ ಹೇಳಿದ ಕಾಲಾವಧಿಯ ವರೆಗೆ ಸ್ಥಳಗಳನ್ನು ಕಾದಿಡತಕ್ಕದ್ದು. ಕಾದಿಟ್ಟ ಸ್ಥಳಗಳಲ್ಲಿಯ ಸದಸ್ಯರ ಅಧಿಕಾರ ಕಾಲಾವಧಿ ಮುಗಿವ ಮುಂಚೆಯೇ

೩೩ಳ ನೆಯ ನಿಬಂಧನೆಯಲ್ಲಿ ಹೇಳಿದ ಕಾಲಾವಧಿ ಮುಗಿದು ಹೋದರೆ ಅವು ಆ ಸದಸ್ಯರ ಅಧಿಕಾರ ಕಾಲಾವಧಿಯ ವರೆಗೆ ಅವರನ್ನು ಬಾಧಿಸುವುದಿಲ್ಲ.

ಜನವಸತಿಯನ್ನು ಹೇಗೆ ಲೆಕ್ಕ ಹಾಕಬೇಕು ಎಂಬುದಕ್ಕೆ ಕಲಮು ೯೭ ರಲ್ಲಿ ಹೇಳಿದ್ದನ್ನು ನೆನೆಯಬೇಕೆಂದು ಹೇಳಲಾಗಿದೆ. ಅಂದರೆ ತಾಲೂಕ ಪ್ರದೇಶವಲ್ಲಿದ್ದ ಬೇರೆ ಸ್ಥಾನಿಕ ಅಧಿಕಾರದ ಅಧೀನವಾಗಿದ್ದ ಪ್ರದೇಶಗಳನ್ನು ಹೊರತು ಪಡಿಸಿ ಉಳಿದ ಭಾಗದಲ್ಲಿಯ ಜನವಸತಿ-ತಾಲೂಕದ ಜನವಸತಿ ಎಂಬುದನ್ನು ತಿಳಿಯ ಬೇಕೆಂದ ಹಾಗೆ, ಪರಿಶಿಷ್ಟ ವರ್ಗದ ಜನವಸತಿಯನ್ನು ಕೂಡ ಹಾಗೆ ಆ ಸ್ಥಾನಿಕ ಅಧಿಕಾರಗಳಲ್ಲಿಯ ಪ್ರದೇಶ ಹೊರತು ಪಡಿಸಿ ಉಳಿದ ಭಾಗದಲ್ಲಿಯ ಪರಿಶಿಷ್ಟ ವರ್ಗದ ಜನ ಎಂದು ತಿಳಿಯಬೇಕು.

## ೯೯. ಸ್ತ್ರೀ ಪ್ರಾತಿನಿಧ್ಯ

ಪ್ರತಿಯೊಂದು ತಾಲೂಕ ಬೋರ್ಡದಲ್ಲಿ ಸ್ತ್ರೀಯರಿಗಾಗಿ ಸ್ಥಳಗಳನ್ನು ಕಾದಿಡ ತಕ್ಕದ್ದು; ಯಾವುದೇ ತಾಲೂಕ ಬೋರ್ಡದಲ್ಲಿ ಹೀಗೆ ಕಾದಿಡಲಾದ ಸ್ಥಳಗಳು ಎರಡರಕಿಂತ ಹೆಚ್ಚಾಗತಕ್ಕದ್ದಲ್ಲ.

## ವಿವೇಚನೆ

ಗ್ರಾಮಪಂಚಾಯತದಲ್ಲಿಯೂ ಸ್ತ್ರೀ ಪ್ರಾತಿನಿಧ್ಯವಿದೆ. ಅಲ್ಲಿ ಎರಡರಕಿಂತ ಕಡಿಮೆಯಾಗದಷ್ಟು ಎಂದು ಹೇಳಿದೆ. ಕಲಮು ೫ ನೋಡಿರಿ. ಇಲ್ಲಿ ಎರಡರ ಕಿಂತ ಹೆಚ್ಚು ಆಗದಷ್ಟು ಎಂದು ಹೇಳಿದೆ. ಅಷ್ಟು ಸಂಖ್ಯೆಯಲ್ಲಿ ಸ್ತ್ರೀಯರ ಪ್ರತಿನಿಧಿಗಳಿಗಾಗಿ ತಾಲೂಕ ಬೋರ್ಡದಲ್ಲಿ ಸ್ಥಳಗಳನ್ನು ಕಾದಿಡತಕ್ಕದ್ದು.

## ೧೦೦. ಪ್ರಾದೇಶಿಕ ಮತದಾರ ಸಂಘಗಳ ಸೀಮಾ ನಿರ್ಣಯ

(೧) ಉಪಕಲಮು (೬) ರ ಶರತುಗಳಿಗಂಕಿತವಾಗಿ ಸರಕಾರವು ಪ್ರಕ ಟನೆಯಿಂದ—

(ಅ) ತಾಲೂಕ ಬೋರ್ಡ ಚುನಾವಣೆಗಳ ಉದ್ದೇಶಕ್ಕಾಗಿ ಪ್ರತಿಯೊಂದು ತಾಲೂಕ ಬೋರ್ಡದ ಅಧಿಕಾರ ಕ್ಷೇತ್ರದಲ್ಲಿರುವ ಪ್ರದೇಶವನ್ನು ಮತದಾರ ಸಂಘ ಗಳನ್ನಾಗಿ ವಿಭಾಗ ಮಾಡಬೇಕೆಂಬುದನ್ನು ನಿರ್ಣಯಿಸತಕ್ಕದ್ದು.

(ಬ) ಒಂದೊಂದು ಮತದಾರ ಕ್ಷೇತ್ರದ ವ್ಯಾಪ್ತಿಯನ್ನು ನಿರ್ಣಯಿಸ ತಕ್ಕದ್ದು.

(ಕ) ಎರಡು ಇಲ್ಲವೆ ಮೂರು ಸ್ಥಳಗಳು ಇರುವಂತೆ ಒಂದೊಂದು ಮತ ದಾರ ಕ್ಷೇತ್ರಕ್ಕೆ ಸ್ಥಳಗಳು ಎಷ್ಟಿರಬೇಕೆಂಬುದನ್ನು ನಿರ್ಣಯಿಸತಕ್ಕದ್ದು.

(ಡ) ಒಂದೊಂದು ಮತದಾರ ಕ್ಷೇತ್ರದಲ್ಲಿ ಪರಿಶಿಷ್ಟ ವರ್ಗದವರಿಗೆ ಇಲ್ಲವೆ ಸ್ತ್ರೀಯರಿಗೆ ಕಾದಿಟ್ಟ ಸ್ಥಳಗಳು ಇದ್ದರೆ, ಅವು ಎಷ್ಟಿರಬೇಕು ಎಂಬುದನ್ನು ನಿರ್ಣಯಿಸತಕ್ಕದ್ದು.

(೨) ತಾಲೂಕದಲ್ಲಿಯ ಒಂದೊಂದು ಪ್ರಾದೇಶಿಕ ಮತದಾರ ಕ್ಷೇತ್ರದಿಂದ ಚುನಾಯಿತರಾಗಬೇಕಾಗಿದ್ದ ಸದಸ್ಯರ ಸಂಖ್ಯೆಯು ಮತ್ತು ಕಳೆದ ಜನಗಣತಿಯ ಕಾಲಕ್ಕೆ ನಿಶ್ಚಿತವಾದಂತೆ ಇರುವ ಆ ಮತದಾರ ಕ್ಷೇತ್ರದ ಜನಸಂಖ್ಯೆಯು, ವ್ಯಾವಹಾರಿಕವಾಗಿ ಶಕ್ಯವಾದಷ್ಟು ಮಟ್ಟಿಗೆ, ಇಡೀ ತಾಲೂಕದಲ್ಲಿ ಒಂದೇ ಪ್ರಮಾಣದಲ್ಲಿ ಇರತಕ್ಕದ್ದು.

**ವಿವೇಚನೆ**

ತಾಲೂಕದಲ್ಲಿಯ ಪ್ರದೇಶವು ಮತದಾರ ಕ್ಷೇತ್ರವಾಗಿ ವಿಭಾಗಿತವಾಗಬೇಕು. ಹೀಗೆ ವಿಭಾಗ ಮಾಡುವಾಗ ಒಂದೊಂದು ಮತದಾರ ಕ್ಷೇತ್ರದಲ್ಲಿಯ ಜನವಸತಿ ಅಲ್ಲಿಂದ ಚುನಾಯಿತರಾಗಬೇಕಾದ ಸದಸ್ಯರ ಸಂಖ್ಯೆ ಶಕ್ಯವಾದಷ್ಟು ಮಟ್ಟಿಗೆ ಇಡಿ ತಾಲೂಕಿನಲ್ಲಿ ಒಂದೇ ಪ್ರಮಾಣದಲ್ಲಿರುವಂತೆ ಮತದಾರ ಕ್ಷೇತ್ರಗಳಾಗಿ ತಾಲೂಕ ಪ್ರದೇಶವು ವಿಭಾಗಿತವಾಗಬೇಕು. ಇದನ್ನು ಲಕ್ಷಿಸಿ, ಪ್ರಾದೇಶಿಕ ವ್ಯಾಪ್ತಿ, ಸದಸ್ಯರ ಸಂಖ್ಯೆ, ಒಂದೊಂದು ಕ್ಷೇತ್ರದಲ್ಲಿ ಎರಡು ಇಲ್ಲವೆ ಮೂರು ಇರತಕ್ಕದ್ದು. ಅಂದರೆ ಯಾವ ಮತದಾರ ಕ್ಷೇತ್ರದಲ್ಲಿ ಎರಡಕ್ಕಿಂತ ಕಡಿಮೆ ಮೂರರಕಿಂತ ಹೆಚ್ಚು ಸ್ಥಳಗಳು ಇರಕೂಡದು. ಇವುಗಳಲ್ಲಿ ಕಾದಿಟ್ಟ ಸ್ಥಳವು ಇದ್ದರೆ ಅದು ಯಾರಿಗಾಗಿ ಕಾದಿಟ್ಟದ್ದು ಎಂಬುದೂ ನಿರ್ಣಯವಾಗಬೇಕು.

## ೧೦೧. ಮತದಾರರ ಯಾದಿ

ಯಾವುದೇ ತಾಲೂಕ ಬೋರ್ಡದ ಮತದಾರ ಕ್ಷೇತ್ರದಲ್ಲಿ ಸಮಾವೇಶವಾಗಿ ಶಾಸನ ಸಭೆಯ ಮತದಾರ ಸಂಘಕ್ಕಾಗಿ, ಆ ಕಾಲಕ್ಕೆ ಜಾರಿಯಲ್ಲಿದ್ದ ಮೈಸೂರ ಶಾಸನ ಸಭೆಯ ಮತದಾರರ ಪಟ್ಟಿಯು, ಈ ಕಾಯಿದೆಯ ಉದ್ದೇಶಗಳಿಗಾಗಿ ಇಂತಹ ತಾಲೂಕ ಬೋರ್ಡದ ಮತದಾರ ಕ್ಷೇತ್ರಕ್ಕಾಗಿ ಮತದಾರರ ಯಾದಿ ಯೆಂದು ಗಣಿಸಲ್ಪಡತಕ್ಕದ್ದು. ಒಂದೊಂದು ತಾಲೂಕ ಬೋರ್ಡದ ಮತದಾರ ಕ್ಷೇತ್ರಕ್ಕಾಗಿ ಮತದಾರರ ಯಾದಿಯನ್ನು ಗೊತ್ತು ಮಾಡಿದ ರೀತಿಯಲ್ಲಿ ತಾಲೂಕ ಬೋರ್ಡದ ಮುಖ್ಯ ಕಾರ್ಯಾಧಿಕಾರಿಯು ಸುಸ್ಥಿತಿಯಲ್ಲಿಡತಕ್ಕದ್ದು.

**ವಿವರಣೆ :** ಈ ಕಲಮಿನ ಉದ್ದೇಶಗಳಿಗಾಗಿ ಚುನಾವಣೆಯ ಮತದಾರರ ಯಾದಿಯೆಂದರೆ, ಆ ಕಾಲಕ್ಕೆ ಜಾರಿಯಲ್ಲಿರುವ ೧೯೫೦ ರ ಜನತೆಯ ಪ್ರಾತಿನಿಧ್ಯ ಕಾಯಿದೆ (೧೯೫೦ ರ ಕೇಂದ್ರ ಕಾಯಿದೆ ನಂ. XLIII) ಯ ಕಕ್ಷೆಗಳಿಗನ್ವಯವಾಗಿ ಸಿದ್ಧಪಡಿಸಲಾದ ಮತದಾರ ಪಟ್ಟಿಯೆಯೆಂದು ತಿಳಿಯಬೇಕು.

**ವಿವೇಚನೆ**

ರಾಜ್ಯ ಶಾಸನ ಸಭೆಯ ಮತದಾರರ ಪಟ್ಟಿಯೆ ತಾಲೂಕ ಬೋರ್ಡದ ಮತದಾರರ ಯಾದಿ. ತಾಲೂಕ ಬೋರ್ಡದ ಮತದಾರ ಕ್ಷೇತ್ರದಲ್ಲಿ ಶಾಸನ ಸಭೆಯ

ಮತದಾರ ಕ್ಷೇತ್ರವು ಎಷ್ಟು ಸಮಾವೇಶವಾಗಿರುವುದೋ ಅಷ್ಟು ಆ ತಾಲೂಕ ಬೋರ್ಡದ ಮತದಾರ ಕ್ಷೇತ್ರಕ್ಕಾಗಿ ಶಾಸನ ಸಭೆಯ ಮತದಾರರೇ ಮತದಾರರಾಗುವರು. ಆದರೆ ಇಂತಹ ಮತದಾರರ ಪಟ್ಟಿಯನ್ನು ಒಂದೊಂದು ತಾಲೂಕ ಬೋರ್ಡದ ಮತದಾರ ಕ್ಷೇತ್ರಕ್ಕಾಗಿ ತಾಲೂಕ ಬೋರ್ಡದ ಮುಖ್ಯ ಕಾರ್ಯಾಧಿಕಾರಿಯು ಬೇರೆಯಾಗಿ ಇಡಬೇಕು. ಅದನ್ನು ಹೇಗೆ ಇಡಬೇಕು ಎಂಬ ಬಗ್ಗೆ ನಿಯಮಗಳು ಹೇಳುವುವು. ಶಾಸನ ಸಭೆಯ ಮತದಾರ ಯಾದಿ ಯಾವುದೆಂದರೆ, ೧೯೫೦ ರ ಜನತಾ ಪ್ರಾತಿನಿಧ್ಯಕಾಯಿದೆಯ ಪ್ರಕಾರ ತಯಾರ ಮಾಡಲಾದುದು ಎಂದು ಹೇಳಿದೆ.

## ೧೦೨. ಉಮೇದವಾರರ ಅರ್ಹತೆ

(೧) ಉಪಕಲಮು (೨) ರ ಶರತುಗಳಿಗಂಕಿತವಾಗಿ, ಅವನು ಭಾರತದ ನಾಗರಿಕ ಮತ್ತು ಇಪ್ಪತ್ತೈದು ವರುಷಗಳ ವಯಸ್ಸಿನಕಿಂತ ಕಡಿಮೆ ಇಲ್ಲದವನು ಆಗಿರದೆ ಇದ್ದರೆ, ಆ ವ್ಯಕ್ತಿಯು ಯಾವುದೇ ತಾಲೂಕ ಬೋರ್ಡದ ಸ್ಥಳ ಭರತಿ ಮಾಡಲು ಆರಿಸಲ್ಪಡಲು ಅರ್ಹತೆಯುಳ್ಳವನು ಆಗತಕ್ಕದ್ದಲ್ಲ.

(೨) ಯಾವ ಭೂಕಂದಾಯದ ತಾಲೂಕಿಗಾಗಿ ಇಂತಹ ತಾಲೂಕ ಬೋರ್ಡ ಸ್ಥಾಪಿತವಾಗಿರುವುದೋ ಅಂತಹ ಭೂಕಂದಾಯದ ತಾಲೂಕಿನಲ್ಲಿ ಸಮಾವೇಶವಾದ ಶಾಸನಸಭೆಯ ಮತದಾರ ಕ್ಷೇತ್ರದ ಅಂತಹ ಭಾಗಕ್ಕೆ ಆ ಕಾಲಕ್ಕೆ ಜಾರಿಯಲ್ಲಿರುವ ಮೈಸೂರ ಶಾಸನಸಭೆಯ ಮತದಾರರ ಪಟ್ಟಿಯಲ್ಲಿ ಅವನ ಹೆಸರು ಸಮಾವೇಶವಾಗಿದ್ದ ಹೊರತು, ತಾಲೂಕ ಬೋರ್ಡದಲ್ಲಿಯ ಸ್ಥಳವನ್ನು ಭರತಿ ಮಾಡುವುದರ ಸಲುವಾಗಿ ಆರಿಸಲ್ಪಡಲು ಆ ವ್ಯಕ್ತಿಯು ಅರ್ಹತೆಯುಳ್ಳವನು ಆಗತಕ್ಕದ್ದಲ್ಲ.

(೩) ತಾಲೂಕ ಬೋರ್ಡದಲ್ಲಿಯ ಸ್ಥಳವನ್ನು ಭರತಿ ಮಾಡುವುದಕ್ಕಾಗಿ ಆರಿಸಲ್ಪಡಲು ಆ ವ್ಯಕ್ತಿಯು–

(i) ಪರಿಶಿಷ್ಟ ವರ್ಗದವರಿಗಾಗಿ ಕಾದಿಟ್ಟ ಸ್ಥಳವಾಗಿದ್ದ ಸಂದರ್ಭದಲ್ಲಿ ಅವನು ಆ ವರ್ಗಗಳ ಸದಸ್ಯನಾಗಿದ್ದ ಹೊರತು ಅರ್ಹತೆಯುಳ್ಳವನು ಆಗತಕ್ಕದ್ದಲ್ಲ; ಮತ್ತು

(ii) ಸ್ತ್ರೀಯರಿಗಾಗಿ ಕಾದಿಟ್ಟದ ಸ್ಥಳವಾಗಿದ್ದ ಸಂದರ್ಭದಲ್ಲಿ ಆ ವ್ಯಕ್ತಿಯು ಸ್ತ್ರೀಯಾಗಿದ್ದ ಹೊರತು, ಅರ್ಹತೆಯುಳ್ಳ ವ್ಯಕ್ತಿ ಎಂದು ಆಗತಕ್ಕದ್ದಲ್ಲ.

## ವಿವೇಚನೆ

ಉಮೇದವಾರನಾಗಬೇಕಾದರೆ ಆ ವ್ಯಕ್ತಿಯು ಭಾರತದ ನಾಗರಿಕ ನಾಗಿರಬೇಕು; ಅವನಿಗೆ ೨೫ ರ ಕಿಂತ ಕಡಿಮೆ ವಯಸ್ಸು ಆಗಿರಬಾರದು. ಅವನ ಹೆಸರು ಆ ಭಾಗದ ಮೈಸೂರ ಶಾಸನ ಸಭೆಯ ಮತದಾರರ ಯಾದಿಯಲ್ಲಿ

ಬಂದಿರಬೇಕು. ಕಾದಿಟ್ಟ ಸ್ಥಳಕ್ಕೆ ಉಮೇದವಾರನಾಗಿದ್ದರೆ ಯಾವ ಸ್ಥಳಕ್ಕೆ ಉಮೇದವಾರನಾಗಿರುವನೋ ಆ ವರ್ಗದವನಾಗಿರಬೇಕು. ಅಂದಾಗ ಮಾತ್ರ ತಾಲೂಕ ಬೋರ್ಡದ ಸದಸ್ಯನಾಗಲು ಉಮೇದವಾರನೆಂದು ಅರ್ಹತೆಯುಳ್ಳವನು ಆಗುವನು. ಸ್ತ್ರೀ ಸ್ಥಳಕ್ಕೆ ಉಮೇದವಾರರು ಸ್ತ್ರೀಯೆ ಆಗಿರತಕ್ಕದ್ದು. ಅಲ್ಲದೆ ಮೇಲೆ ವಿವರಿಸಿದ ಎಲ್ಲ ಬಗೆಯ ಅರ್ಹತೆಗಳು ಇರತಕ್ಕದ್ದು.

**೧೦೩. ಸದಸ್ಯರ ಅನರ್ಹತೆ**

(೧) ತಾಲೂಕ ಬೋರ್ಡದ ಸದಸ್ಯನಾಗಿ ಆರಿಸಲ್ಪಡಲು ಮತ್ತು ಉಳಿಯಲು ಈ ಕೆಳಗಿನ ಕಾರಣಗಳ ಮೂಲಕ ಒಬ್ಬ ವ್ಯಕ್ತಿಯು ಅನರ್ಹತೆಯನ್ನು ಪಡೆದವನಾಗಿರತಕ್ಕದ್ದು.

(ಅ) ನೈತಿಕ ದೋಷವುಳ್ಳಂತಹ ಅಪರಾಧಕ್ಕಾಗಿ ಫೌಜದಾರಿ ನ್ಯಾಯಾದಿಂದ ಕಾರಾವಾಸದ ಶಿಕ್ಷೆಗೆ ಆ ವ್ಯಕ್ತಿಯು ಒಳಪಟ್ಟಿದ್ದರೆ, ಮತ್ತು ಆ ಅಪರಾಧವು ಆರು ತಿಂಗಳಕಿಂತ ಹೆಚ್ಚು ಕಾರಾವಾಸದ ಶಿಕ್ಷೆಗೆ ಯೋಗ್ಯವಾದಂತಹದು ಇದ್ದು ಇಂತಹ ಶಿಕ್ಷೆಯು ತದನಂತರದಲ್ಲಿ ಕಡಿಮೆಯಾಗದೆ ಇದ್ದು ಇಲ್ಲವೆ ಇಲ್ಲದಂತಾಗದೆ ಇದ್ದು ಆ ವ್ಯಕ್ತಿಯು ಕಾರಾವಾಸದ ಶಿಕ್ಷೆಗೆ ಒಳಪಟ್ಟಿದ್ದರೆ, ಇಲ್ಲವೆ,

(ಬ) ೧೮೯೮ ರ ಕ್ರಿಮಿನಲ್ ಪ್ರೊಸೀಜರ ಕೋಡ (೧೮೯೮ ರ ಕೇಂದ್ರದ ಕಾಯಿದೆ ನಂ. v ) ದ ಕಲಮು ೧೧೦ ರನ್ವಯವಾಗಿ ಪ್ರಾರಂಭಿಸಲಾದ ಪ್ರಕರಣಗಳಲ್ಲಿ ಕ್ರಿಮಿನಲ್ ಪ್ರೊಸೀಜರ ಕೋಡದ ಕಲಮು ೧೧೮ ರನ್ವಯವಾಗಿ ಅವನ ವಿರುದ್ಧ ಹುಕುಮು ಮಾಡಲ್ಪಟ್ಟಿದ್ದರೆ, ಮತ್ತು ಅಂತಹ ಹುಕುಮು ನಂತರದಲ್ಲಿ ಹೊರಳದೆ ಇಲ್ಲವೆ ರದ್ದುಪಡಿಸದೆ ಇದ್ದರೆ, ಇಲ್ಲವೆ,

(ಕ) ಅವನು ಸರಕಾರದ ಸೇವೆಯಿಂದ ಇಲ್ಲವೆ ಯಾವುದೇ ಸ್ಥಾನಿಕ ಅಧಿಕಾರದ ಸೇವೆಯಿಂದ ಕಿತ್ತಿಹಾಕಲ್ಪಟ್ಟಿದ್ದರೆ (Dismiss), ಇಲ್ಲವೆ,

(ಡ) ಅವನು ವಕೀಲನಾಗಿದ್ದು ಯಾವುದೇ ಸಮರ್ಥ ನ್ಯಾಯಾಲಯದಿಂದ ಡಿಸ್‌ಮಿಸ್ ಇಲ್ಲವೆ ಸಸ್ಪೆಂಡ ಮಾಡಲ್ಪಟ್ಟಿದ್ದರೆ, ಸಸ್ಪೆಂಡ ಆಗಿದ್ದರೆ, ಅನರ್ಹತೆಯು ಆ ಸಸ್ಪೆಂಡದ ಕಾಲಾವಧಿಯವರೆಗೆ ಮಾತ್ರ, ಇಲ್ಲವೆ,

(ಇ) ಅವನು ಮುಕ್ತನಾಗದೆ ಇದ್ದ ನಾದಾರಿಯಾಗಿದ್ದರೆ, ಇಲ್ಲವೆ,

(ಫ) ಅವನು ಬಂಧುರವಲ್ಲದ ಮನಸ್ಸಿನವನು ಆಗಿದ್ದರೆ ಮತ್ತು ಹಾಗೆ ಅವನು ಇದ್ದಾನೆಂದು ಸಮರ್ಥ ನ್ಯಾಯಾಲಯದಿಂದ ಸಾರಲ್ಪಟ್ಟಿದ್ದರೆ, ಇಲ್ಲವೆ,

(ಗ) ಅವನು ಮುನಸಿಪಲ್ ಕಾವುನ್ಸಿಲರನಾಗಿದ್ದರೆ, ಇಲ್ಲವೆ ಬೆಂಗಳೂರಿನ ಮುನಸಿಪಲ್ ಕಾರ್ಪೋರೇಶನದ ಕಾವುನ್ಸಿಲರನಾಗಿದ್ದರೆ, ಇಲ್ಲವೆ ಸ್ಯಾನಿಟರಿ ಬೋರ್ಡದ, ಟಾವುನಬೋರ್ಡದ, ಪಟ್ಟಣ ಪ್ರದೇಶ ಕಮಿಟಿಯ, ನೋಟಿಫಾಯಿಡ ಏರಿಯಾ ಕಮಿಟಿಯ ಇಲ್ಲವೆ ಕ್ಯಾಂಟೋನಮೆಂಟ ಬೋರ್ಡದ ಸದಸ್ಯನಾಗಿದ್ದರೆ,

(ಹ) ಅವನು ಯಾವುದೇ ಸ್ಥಾನಿಕ ಅಧಿಕಾರದ ಸದಸ್ಯತ್ವದಿಂದ ತೆಗೆದು ಹಾಕಲ್ಪಟ್ಟಿದ್ದರೆ, ಇಲ್ಲವೆ,

(ಈ) ಈ ಕಾಯಿದೆಯನ್ವಯವಾಗಿ ಮಾಡಲಾದ ನಿಯಮಗಳು ಆ ಧಾರಣ ಮಾಡಿದವನು ಅನರ್ಹನಲ್ಲನೆಂದು ಸಾರಿ ಹೇಳಿದಂತಹ ಅಧಿಕಾರ ಪದಗಳನ್ನು ಬಿಟ್ಟು ಬೇರೆ ಲಾಭದಾಯಕ ಅಧಿಕಾರ ಪದಗಳನ್ನು ಭಾರತ ಸರಕಾರದಂಕಿತವಾಗಿ, ಇಲ್ಲವೆ ಮೈಸೂರ ಸರಕಾರದಕಿಂತವಾಗಿ, ಇಲ್ಲವೆ ಭಾರತದಲ್ಲಿಯ ಯಾವುದೇ ರಾಜ್ಯ ಸರಕಾರದಂಕಿತವಾಗಿ, ಇಲ್ಲವೆ ಮೇಲ್ಕಾಣಿಸಿದ ಸರಕಾರಗಳ ಅಂಕಿತವಾಗಿ ರುವ ಬೇರೆ ಯಾವುದೇ ಸ್ಥಾನಿಕ ಇಲ್ಲವೆ ಇತರ ಅಧಿಕಾರದಂಕಿತವಾಗಿ ಧಾರಣ ಮಾಡಿದ್ದರೆ, ಇಲ್ಲವೆ

(ಜ) ಇನ್ನು ಮುಂದೆ ಹೇಳಲಾದುದನ್ನು ಬಿಟ್ಟು, ತಾಲೂಕ ಬೋರ್ಡದ ಹುಕುಮಿನಿಂದ ನಡೆಯುವ ಯಾವುದೇ ಕೆಲಸದಲ್ಲಿ ಇಲ್ಲವೆ ತಾಲೂಕ ಬೋರ್ಡದ ಪರವಾಗಿ ಇಲ್ಲವೆ ತಾಲೂಕ ಬೋರ್ಡದೊಂದಿಗೆ ನಡೆದ ಯಾವುದೇ ಕರಾರಿನಲ್ಲಿ ಇಲ್ಲವೆ ತಾಲೂಕ ಬೋರ್ಡದಲ್ಲಿ ಇಲ್ಲವೆ ಅದರಂಕಿತವಾದ ಸೇವೆಯಲ್ಲಿ ಅವನಿಗೆ ಪ್ರತ್ಯಕ್ಷ ಇಲ್ಲವೆ ಅಪ್ರತ್ಯಕ್ಷವಾದ ಯಾವುದೇ ಪಾಲು ಇಲ್ಲವೆ ಹಿತಾಸಕ್ತಿ ಇದ್ದರೆ, ಇಲ್ಲವೆ,

(ಕಾ) ಅವನು ತಾಲೂಕ ಬೋರ್ಡದ ಪರವಾಗಿ ವಕೀಲನೆಂದು ವೇತನ ಕ್ಕಾಗಿ ಸೇವೆಯಲ್ಲಿದ್ದರೆ, ಇಲ್ಲವೆ ತಾಲೂಕ ಬೋರ್ಡದ ವಿರುದ್ಧವಾಗಿ ವಕೀಲನೆಂದು ಸೇವೆಯನ್ನು ಸ್ವೀಕರಿಸಿದ್ದರೆ,

ಆದರೆ,

(ಅ) ವಾಕ್ಯಾವಳಿ (ಬ) ದಲ್ಲಿ ಹೇಳಿದ ಅನರ್ಹತೆಯು ಜಾಮೀನು ಕೊಡಲು ಮಾಡಿದ ಹುಕುಮಿನಲ್ಲಿ ಕಾಣಿಸಿವ ಕಾಲಾವಧಿಯು ಮುಗಿದ ನಂತರ ಇಲ್ಲದಾಗುವುದು.

(ಬ) ವಾಕ್ಯಾವಳಿ (ಅ), (ಕ), ಇಲ್ಲವೆ (ಡ) ದಲ್ಲಿ ಹೇಳಿದ ಅನರ್ಹತೆಯು ಅಂತಹ ಶಿಕ್ಷೆಯ ಇಲ್ಲವೆ ಕಿತ್ತಿ ಹಾಕಿದ, ಇಲ್ಲವೆ ತೆಗೆದು ಹಾಕಿದ ತಾರೀಖಿನಿಂದ ಮೂರು ವರುಷಗಳು ಮುಗಿದ ನಂತರ ಇಲ್ಲದಂತಾಗುವುದು.

(ಕ) ವಾಕ್ಯಾವಳಿ (ಹ) ದಲ್ಲಿ ಹೇಳಿದ ಅನರ್ಹತೆಯು ತೆಗೆದು ಹಾಕು ವಿಕೆಯ ತಾರೀಖಿನಿಂದ ಐದು ವರುಷಗಳು ಮುಗಿದ ನಂತರ ಇಲ್ಲದಂತಾಗುವುದು.

(ಡ) ವಾಕ್ಯಾವಳಿ (ಜ) ದನ್ವಯವಾಗಿ ಯಾವುದೇ ವ್ಯಕ್ತಿಯು ಈ ಕೆಳಗೆ ಕಾಣಿಸಿದ ಕಾರಣಗಳಿಗಾಗಿ ಅನರ್ಹತೆಯುಳ್ಳವನಾಗಿದ್ದಾನೆಂದು ಗಣಿಸಲ್ಪಡ ಬಾರದು.

(i) ತಾಲೂಕ ಬೋರ್ಡದೊಂದಿಗೆ ಇಲ್ಲವೆ ತಾಲೂಕ ಬೋರ್ಡದಿಂದ ಇಲ್ಲವೆ ತಾಲೂಕ ಬೋರ್ಡದ ಪರವಾಗಿ ಕರಾರು ಮಾಡಿಕೊಂಡ ಇಲ್ಲವೆ ಸೇವೆ ವಹಿಸಿದ ಯಾವುದೇ ಜಾಯಿಂಟ ಸ್ಟಾಕ ಕಂಪನಿ, ಇಲ್ಲವೆ ಸೊಸಾಯಿಟಿ ರಜಿಸ್ಟ್ರೇಶನ್ ಕಾಯಿದೆಯ ಪ್ರಕಾರ ನೋಂದಾಯಿಸಲ್ಪಟ್ಟ ಯಾವುದೇ ಸಂಘ ಇಲ್ಲವೆ ಯಾವುದೇ ಸಹಕಾರಿ ಸಂಘ ಇದರಲ್ಲಿ ಪಾಲು ಇಲ್ಲವೆ ಹಿತಾಸಕ್ತಿ ಇರುವ ಕಾರಣದಿಂದ, ಇಲ್ಲವೆ,

(ii) ತಾಲೂಕ ಬೋರ್ಡದ ವ್ಯವಹರಣೆಗಳ ಬಗ್ಗೆ ಯಾವುದೇ ಜಾಹೀರಾತು ಪ್ರಕಟಿಸಲ್ಪಟ್ಟಿರುವ ಯಾವುದೇ ವೃತ್ತಪತ್ರದ ಸಂಘಟನೆಯಲ್ಲಿ ಪಾಲು ಇಲ್ಲವೆ ಹಿತಾಸಕ್ತಿ ಇರುವ ಕಾರಣದಿಂದ, ಇಲ್ಲವೆ,

(iii) ತಾಲೂಕ ಬೋರ್ಡದಿಂದ ಇಲ್ಲವೆ ತಾಲೂಕ ಬೋರ್ಡದ ಪರವಾಗಿ ಎತ್ತಲಾದ ಸಾಲದಲ್ಲಿ ಡಿಬೆಂಚರ ಪಡೆದು ಇಲ್ಲವೆ ಬೇರೆ ಯಾವುದೇ ರೀತಿಯ ಸಂಬಂಧ ಇದೆಯೆಂಬ ಕಾರಣದಿಂದ ಅನರ್ಹತೆಯನ್ನು ಪಡೆದಿರುವನೆಂದು ಗಣಿಸಲ್ಪಡಬಾರದು.

(೨) ತಾಲೂಕ ಬೋರ್ಡದ ಯಾವುದೇ ಸದಸ್ಯನು.

(ಅ) ಉಪಕಲಮು (೧) ರಲ್ಲಿ ಹೇಳಿದ ಯಾವುದೇ ಅನರ್ಹತೆಯುಳ್ಳವನಾದರೆ, ಇಲ್ಲವ (ಬ) ಉಪಕಲಮು (೧) ರ ವಾಕ್ಯಾವಳಿ (ಡ) ದಲ್ಲಿಯ (i) ಮತ್ತು (ii) ದಲ್ಲಿ ವರ್ಣಿಸಲಾದ ಹಾಗೆ ಯಾವುದೇ ಅಂತಹ ಪಾಲು ಇಲ್ಲವೆ ಹಿತಾಸಕ್ತಿಯು ಅವನಿಗೆ ಯಾವುದರಲ್ಲಿ ಪ್ರತಕ್ಷ್ಯವಾಗಿ ಇಲ್ಲವೆ ಅಪ್ರತಕ್ಷ್ಯವಾಗಿ ಇರುವುದೋ ಅಂತಹ ಯಾವುದೇ ವಿಷಯದ ಚರ್ಚೆಯಲ್ಲಿ ಸದಸ್ಯನೆಂದು ಭಾಗವಹಿಸಿದರೆ ಇಲ್ಲವೆ ಮತದಾನ ಮಾಡಿದರೆ, ಇಲ್ಲವೆ,

(ಕ) ಕಲಮು ೧೧೭ ರ ಉಪಕಲಮು (೨) ರ ವಾವ್ಯಾವಳಿ (ಗ) ದ ಶರತುಗಳ ವಿರುದ್ಧವಾಗಿ ಯಾವುದೇ ಪ್ರಶ್ನೆಯ ಚರ್ಚೆಯಲ್ಲಿ ಭಾಗ ವಹಿಸಿದರೆ ಇಲ್ಲವೆ ಮತದಾನ ಮಾಡಿದರೆ, ಇಲ್ಲವೆ,

(ಡ) ಬೋರ್ಡದಿಂದ ಆರು ತಿಂಗಳಕಿಂತ ಹೆಚ್ಚು ಆಗದಷ್ಟು ರಜೆಯು ದಯಪಾಲಿಸಲ್ಪಟ್ಟು, ಹಾಗೆ ಗೈರಹಾಜರಿ ಉಳಿಯಲು ರಜೆಯು ಕೊಟ್ಟ ಹೊರತು ತಾಲೂಕ ಬೋರ್ಡದ ಮೂರು ಸಾದಾ ಸಭೆಗಳಿಗೆ ಸತತವಾಗಿ ಗೈರಹಾಜರಿಯಾಗಿ ಉಳಿದರೆ, ಇಲ್ಲವೆ, ತಾಲೂಕ ಬೋರ್ಡದ ಸಭೆಗಳಿಗೆ ಆರು ತಿಂಗಳ ಮೇಲ್ಪಟ್ಟು ಸತತವಾಗಿ ಗೈರಹಾಜರಿಯಾಗಿ ಉಳಿದರೆ,

ಅವನ ಸ್ಥಳವು ಆ ಕಾರಣದಿಂದ ಖಾಲಿಯಾಗತಕ್ಕದ್ದು.

ಆದರೆ, ವಾಕ್ಯಾವಳಿ (ಡ) ದನ್ವಯವಾಗಿ ಸದಸ್ಯನಿಂದ ಗೈರಹಾಜರಿ ಉಳಿಯುವುದಕ್ಕಾಗಿ ತಾಲೂಕ ಬೋರ್ಡಿಗೆ ಅರ್ಜಿ ಮಾಡಲಾಗಿದ್ದರೆ, ಮತ್ತು ಅರ್ಜಿಯ

ತಾರೀಖಿನಿಂದ ಮೂರು ತಿಂಗಳ ಕಾಲಾವಧಿಯ ವರೆಗೆ ಆ ಅರ್ಜಿಯ ಬಗ್ಗೆ ತೆಗೆದು ಕೊಂಡ ನಿರ್ಣಯವನ್ನು ಅರ್ಜದಾರನಿಗೆ ತಿಳಿಸಲು ಬೋರ್ಡು ತಪ್ಪಿದರೆ, ಅರ್ಜಿ ಮಾಡಲಾದ ರಜೆಯು ಬೋರ್ಡದಿಂದ ದಯಪಾಲಿಸಲ್ಪಟ್ಟಿದೆಯೆಂದು ಗಣಿಸ ಲ್ಪಡತಕ್ಕದ್ದು.

(೩) ಉಪಕಲಮು (೨) ರನ್ವಯವಾಗಿ ಸ್ಥಳವು ಖಾಲಿಯಾಗಿದೆಯೆ ಎಂಬ ಯಾವುದೇ ಪ್ರಶ್ನೆ ಬಂದಾಗ ಆ ಪ್ರಶ್ನೆಯನ್ನು ಅದರ ನಿರ್ಣಯಕ್ಕಾಗಿ ಕಮಿಶನರನ ಕಡೆಗೆ ಕಳಿಸತಕ್ಕದ್ದು, ಮತ್ತು ಕಮಿಶನರನು ಸಂಬಂಧಪಟ್ಟ ಸದಸ್ಯನಿಗೆ ಅವನ ಪಕ್ಷವುಂಡಿಸಲು ಅವಕಾಶಕೊಟ್ಟು ಪ್ರಶ್ನೆಯನ್ನು ನಿರ್ಣಯಿಸಬೇಕು.

**ವಿವೇಚನೆ**

ಸದಸ್ಯನು ಅನರ್ಹನಾಗಲು ಹಾಗು ಅನರ್ಹನಾಗಿ ಉಳಿಯಲು ಆಗುವ ಪರಿಸ್ಥಿತಿಯ ವರ್ಣನೆ ಇಲ್ಲಿ ಕೊಟ್ಟಿದೆ. ಕಲಮು ೧೧ ರಲ್ಲಿ ಪಂಚಾಯತದ ಸದಸ್ಯನ ಅನರ್ಹತೆಯ ಬಗ್ಗೆ ಹೇಳಿತ್ತು. ಈ ಕಲಮು ಕೂಡ ಅದೇ ಮಾದರಿಯಲ್ಲಿದೆ. ಆದರೆ ಕಲಮು ೧೧ ಪಂಚಾಯತ ಸದಸ್ಯನಿಗೆ ಸಂಬಂಧಪಟ್ಟಿದ್ದು, ಇದು ತಾಲೂಕ ಬೋರ್ಡದ ಸದಸ್ಯನಿಗೆ ಸಂಬಂಧಪಟ್ಟಿದ್ದು. ಕಲಮು ೧೧ ರ ಬಗ್ಗೆ ವಿವೇಚನೆ ಮಾಡುವಾಗ ಸುದೀರ್ಘವಾಗಿ ಈ ಅನರ್ಹತೆಯ ವಿಚಾರವನ್ನು ಚರ್ಚಿಸಲಾಗಿದೆ. ಅದನ್ನು ನೋಡಬೇಕು.

ಈ ಕಲಮಿನ ಉಪಕಲಮು(೧)ರಲ್ಲಿ (ಗ)ವಾಕ್ಯಾವಳಿಯು ತಾಲೂಕಬೋರ್ಡಿಗೆ ಪ್ರತ್ಯೇಕವಾದದ್ದು ಇದೆ ಅದರಂತೆ ಉಪಕಲಮು (೨) ರ ವಾಕ್ಯಾವಳಿ (ಕ) ಇದು ತಾಲೂಕಬೋರ್ಡಿಗೆ ಪ್ರತ್ಯೇಕವಾಗಿದೆ. - ಇವೆರಡನ್ನು ಬಿಟ್ಟರೆ, ಸಾಮಾನ್ಯವಾಗಿ ಉಳಿದ ಮಾತುಗಳು ಕಲಮು ೧೧ ರಲ್ಲಿ ಹೇಳಿದಂತೆ, ತಾಲೂಕಬೋರ್ಡಿಗೆ ಸಂಬಧಪಟ್ಟ ಬದಲಾವಣೆಗಳೊಂದಿಗೆ ಇವೆ.

ಉಪಕಲಮು (೧) (ಗ) ದಲ್ಲಿಯ ಅನರ್ಹತೆಯು ಆ ವ್ಯಕ್ತಿಗೆ ಬರುವುದು ಅವನು ಬೇರೆ ಮುನಸಿಪಲ್ ಕಾವುನ್ಸಿಲದ ಸದಸ್ಯನಾಗಿದ್ದರೆ, ಬೆಂಗಳೂರಿನ ಮುನಸಿಪಲ್ ಕಾರ್ಪೋರೇಶನದ ಸದಸ್ಯನಾಗಿದ್ದರೆ-ಹಾಗೆ ಅಲ್ಲಿ ಹೇಳಿದ ಇತರ ಸ್ಥಾನಿಕ ಅಧಿಕಾರದ ಸದಸ್ಯನಾಗಿದ್ದರೆ ಅವನು ತಾಲೂಕಬೋರ್ಡದ ಸದಸ್ಯನಾಗಲು ಅನರ್ಹನಾಗುತ್ತಾನೆ ಒಂದು ವ್ಯಕ್ತಿಯು ಒಂದೇಕಾಲಕ್ಕೆ ಹಲವಾರು ಸ್ಥಾನಿಕ ಅಧಿಕಾರದ ಸದಸ್ಯನಾಗಿ ಇರಬಾರದು. ಇದ್ದರೆ ಅವನಿಗೆ ಯಾವಸ್ಥಳದಲ್ಲಿಯೂ ಕಾರ್ಯಮಾಡಲು ಸಾಧ್ಯವಾಗುವುದಿಲ್ಲ. ತಾಲೂಕಬೋರ್ಡದ ಸದಸ್ಯನು ಕೇವಲ ತಾಲೂಕಬೋರ್ಡದ ಅಭಿವೃದ್ಧಿಗಾಗಿ ಮನಸ್ಸುಹಾಕಿ ದುಡಿಯಲು ಉದ್ದೇಶ ವುಳ್ಳವನು ಇರಬೇಕು, ಎಂಬುದೇ ಮುಖ್ಯಮಾತು. ಅಲ್ಲದೆ ಸಾರ್ವಜನಿಕ ಸೇವೆಯು

ಯಾರೊಬ್ಬರ ಗುತ್ತಿಗೆಯು ಕೆಲಸವಲ್ಲ. ಬಹಳ ಜನರಿಗೆ ಅವಕಾಶ ಉಂಟಾಗ ಬೇಕೆಂದೂ ಈ ನಿಯಮ ಹಾಕಲಾಗಿದೆ

೧೧೭ ನೇ ಕಲಮಿನ ಉಪಕಲಮು (೨) ರ (ಗ) ದಲ್ಲಿ ಹೇಳಿದ ಮಾತು ಕಲಮು ೩೭ ರಲ್ಲಿಯ ಉಪಕಲಮು (೪) ರಲ್ಲಿ ಹೇಳಿದ ಮಾತಿನ ಹಾಗೆಯೆ ಇದೆ ಹಿತಾಸಕ್ತಿ ಇದ್ದ ಸದಸ್ಯನು ಆ ವಿಷಯದ ಚರ್ಚೆಯಲ್ಲಿ ಭಾಗವಹಿಸಬಾರದು. ಹಾಗೂ ಮತದಾನ ಮಾಡಬಾರದು. ಸ್ವಾರ್ಥ ಹಾಗೂ ಸಾರ್ವಜನಿಕ ಹಿತದ ಪ್ರಶ್ನೆ ಬಂದಾಗ ಸ್ವಾರ್ಥಕ್ಕೆ ಇಲ್ಲಿ ಸ್ಥಾನವಿಲ್ಲ ಎಂದು ತೋರಲು ಹೇಳಿದೆ. ಅಲ್ಲದೆ ಸಾರ್ವಜನಿಕ ಸೇವೆ ಮಾಡುವವರು ಸ್ವಾರ್ಥಸಾಧಕರು ಇರಬಾರದು ಎಂದು ಈ ಕಲಮಿನ ಮೂಲಕ ಸೂಚಿಸಲಾಗಿದೆ.

ಸದಸ್ಯರ ಗೈರಹಾಜರಿಯಬಗ್ಗೆ ಇಲ್ಲಿ ಬೇರೆ ಮಾತುಗಳು ಇವೆ. ಸದಸ್ಯನು ರಜೆಪಡೆಯದೆ ಸತತ ಮೂರು ಸಭೆಗಳಿಗೆ ಗೈರಹಾಜರಿಯಾದರೆ ಅವನು ಅನರ್ಹ ನಾಗುವನು. ಅದರಂತೆ ರಜೆ ಪಡೆಯದೆ ಆರುತಿಂಗಳಕಿಂತ ಹೆಚ್ಚು ಕಾಲಾವಧಿಯ ವರೆಗೆ ಸಭೆಗಳಿಗೆ ಗೈರಹಾಜರಿಯಾದರೆ ಅವನು ಅನರ್ಹತೆ ಪಡೆವನು.

ಈ ಬದಲಾವಣೆಗಳನ್ನು ಬಿಟ್ಟರೆ, ಕಲಮು ೧೧ ಮತ್ತು ಕಲಮು ೧೦೩ ಎರಡೂ ಒಂದೇತರಹದ ಮಾತುಗಳನ್ನು ಹೇಳುತ್ತವೆ. ಕಲಮು ೧೧ ರ ವಿವೇಚನೆ ಯಲ್ಲಿ ಹೇಳಿದ ಹಿನ್ನೆಲೆಯ ಮಾತುಗಳನ್ನು ಈ ಕಲಮಿನ ವಿಚಾರದಲ್ಲಿಯೂ ಲಕ್ಷಿಸಬೇಕು.

### ೧೦೪. ಚುನಾವಣೆಗಳಿಗಾಗಿ ಮತದಾನದ ಪದ್ಧತಿ ಮತ್ತು ಕಾರ್ಯ ವಿಧಾನ

(೧) ಪ್ರತಿಯೊಬ್ಬ ಮತದಾರನಿಗೆ ಎಷ್ಟು ಸದಸ್ಯರನ್ನು ಚುನಾಯಿಸುವುದು ಇದೆಯೋ ಅಷ್ಟು ಮತಗಳು ಇರತಕ್ಕದ್ದು, ಆದರೆ ಯಾವುದೇ ಒಬ್ಬ ಉಮೇದು ವಾರನಿಗೆ ಯಾವುದೇ ಮತದಾರನು ಒಂದರಕಿಂತ ಹೆಚ್ಚು ಮತವನ್ನು ಕೊಡ ತಕ್ಕದ್ದಲ್ಲ.

(೨) ಈ ಕಾಯಿದೆಯ ಕಕ್ಷೆಗಳಿಗಂಕಿತವಾಗಿ, ಗೊತ್ತುಮಾಡಬಹುದಾದ ನಿಯಮಗಳ ಅನುಸಾರವಾಗಿ, ತಾಲೂಕ ಬೋರ್ಡದ ಚುನಾವಣೆಗಳು ಗುಪ್ತ ಮತದಾನ ಪದ್ಧತಿಯಂತೆ ನಡೆಯತಕ್ಕದ್ದು.

(೩) ಕಲಮು ೧೫, ೧೬, ೧೭, ೧೮, ೧೯, ೨೦, ೨೧, ೨೨ ಮತ್ತು ೨೩, ಇವುಗಳ ಶರತುಗಳು ಪಂಚಾಯತದ ಚುನಾವಣೆಗಳಿಗಾಗಿ ಅನ್ವಯಿಸುವಂತೆ ತಾಲೂಕ ಬೋರ್ಡದ ಚುನಾವಣೆಗಳಿಗಾಗಿಯೂ ಅನ್ವಯಿಸತಕ್ಕದ್ದು.

**ವಿವೇಚನೆ**

ಚುನಾವಣೆಗಳಲ್ಲಿ ಅನೇಕ ಉಮೇದವಾರರು ಇರುವರು. ಒಂದು ಮತದಾರ ಕ್ಷೇತ್ರದಲ್ಲಿ ಮತದಾರನ ಹೆಸರು ಇರುವುದು. ಆ ಮತದಾರ ಕ್ಷೇತ್ರದಿಂದ ಎಷ್ಟು

ಸದಸ್ಯರನ್ನು ಆರಿಸಬೇಕಾಗಿದೆಯೋ ಅಷ್ಟು ಮತಗಳು ಪ್ರತಿಯೊಬ್ಬ ಮತದಾರನಿಗೆ ಇರುತ್ತವೆ. ಅಂದರೆ ಒಂದು ಮತದಾರ ಕ್ಷೇತ್ರದಲ್ಲಿ ಮೂರು ಸದಸ್ಯರನ್ನು ಆರಿಸ ಬೇಕಾಗಿದ್ದರೆ ಆ ಮತದಾರ ಕ್ಷೇತ್ರದ ಪ್ರತಿಯೊಬ್ಬ ಮತದಾರನಿಗೆ ಆ ಚುನಾವಣೆಯ ಸಲುವಾಗಿ ಮೂರು ಮತಗಳು; ಆದರೆ ಈ ಮೂರು ಮತಗಳನ್ನು ಒಬ್ಬ ಉಮೇದು ವಾರನಿಗೆ ಹಾಕಲು ಬರುವುದಿಲ್ಲ. ಒಬ್ಬ ಉಮೇದವಾರನಿಗೆ ಒಂದೇ ಮತ ಹಾಕ ತಕ್ಕದ್ದು ಮತದಾರನಿಗೆ ಮೂರು ಮತ ಇರುವ ಕಾರಣದಿಂದ ಉಮೇದುವಾರನಿಗೆ ಮೂರೂ ಹಾಕಲು ಬರುವುದಿಲ್ಲ. ಒಬ್ಬ ಉಮೇದುವಾರನಿಗೆ ಒಂದರಂತೆ, ಎಷ್ಟು ಸದಸ್ಯರನ್ನು ಆರಿಸಲು ಬೇಕಾಗಿರುವುದೋ ಅಷ್ಟು ಉಮೇದುವಾರರಿಗೆ ಒಂದರಂತೆ ಹಾಕಲು ಮತದಾರನಿಗೆ ಅಧಿಕಾರವಿದೆ ಎಂದು ಹೇಳಿದ ಹಾಗೆ. ಈ ಮತದಾನವು ಗುಪ್ತ ಮತದಾನ ಪದ್ಧತಿಯಂತೆ; ಇದರ ಬಗ್ಗೆ ಕಾಯಿದೆಯಲ್ಲಿ ಹಾಗೂ ನಿಯಮ ಗಳಲ್ಲಿ ಹೇಳಲಾಗಿದೆ.

ಪಂಚಾಯತದ ಚುನಾವಣೆಯ ಸಲುವಾಗಿ ಕೆಲವೊಂದು ಕಲಮುಗಳು ಇವೆ. ಅವೇ ಕಲಮುಗಳು ತಾಲೂಕಬೋರ್ಡದ ಚುನಾವಣೆಯ ಸಲುವಾಗಿಯೂ ಇವೆಯೆಂದು ಈ ಕಲಮು ಹೇಳುತ್ತದೆ. ಅಂದರೆ ತಾಲೂಕ ಬೋರ್ಡದ ಚುನಾ ವಣೆ ಸಂಬಂಧವಾಗಿಯೂ ಕಲಮು ೧೫,೧೬,೧೭, ೧೮, ೧೯, ೨೦, ೨೧, ೨೨ ಮತ್ತು ೨೩ ಇವು ಅನ್ವಯಿಸುವುವು. ಅವು ಪಂಚಾಯತಕ್ಕಾಗಿ ರೂಪಿಸಲಾಗಿದ್ದರೂ ತಾಲೂಕ ಬೋರ್ಡುಗಳಿಗೂ ಅವು ಅನ್ವಯಿಸುವುವು. ತತ್ವ ಒಂದೇ ಆಗಿರುವುದರಿಂದ ಪುನರುಕ್ತಿ ಕಾರಣವಿಲ್ಲವೆಂದು ಹೀಗೆ ಹೇಳಲಾಗಿದೆ.

## ೧೦೫. ಏಕ ಕಾಲಕ್ಕೆ ಬೇರೆ ಬೇರೆ ಮತದಾರ ಸಂಘದಿಂದ ಸದಸ್ಯ ನಾಗಲು ನಿರ್ಬಂಧ

(೧) ಒಂದು ವ್ಯಕ್ತಿಯು ಒಂದರಕಿಂತ ಹೆಚ್ಚು ತಾಲೂಕ ಬೋರ್ಡ ಮತದಾರ ಸಂಘದಿಂದ ಚುನಾಯಿತನಾಗಿದ್ದರೆ, ತಾನು ಯಾವ ಒಂದು ಮತದಾರ ಸಂಘಕ್ಕೆ ಸೇವೆ ಸಲ್ಲಿಸಬೇಕೆಂಬುದನ್ನು ಗೊತ್ತು ಪಡಿಸಿದ ಕಾಲಾವಧಿಯಲ್ಲಿ ಬರೆಹದ ಮೂಲಕ, ಅದನ್ನು ತಾನೇ ಸಹಿ ಮಾಡಿ ನೋಟೀಸನ್ನು ಅಸಿಸ್ಟಂಟ ಕಮಿಶನರನಿಗೆ ಇಲ್ಲವೆ ಬೇರೆ ಗೊತ್ತು ಮಾಡಿದ ಅಧಿಕಾರಿಗೆ ಕೊಟ್ಟು ಆರಿಸಿಕೊಳ್ಳಬೇಕು. ಮತ್ತು ಹೀಗೆ ಮಾಡಿದ ಆಯ್ಕೆಯು ಕೊನೆಯದು.

(೨) ಇಂತಹ ಆಯ್ಕೆಯನ್ನು ಮಾಡಿದಾಗ ಆ ವ್ಯಕ್ತಿಯು ಸೇವೆ ಸಲ್ಲಿಸಲು ಆರಿಸಿಕೊಂಡ ಮತದಾರ ಸಂಘವನ್ನು ಬಿಟ್ಟು, ಬೇರೆ ಮತದಾರ ಸಂಘ ಇಲ್ಲವೆ ಸಂಘಗಳು, ಬೇರೆ ವ್ಯಕ್ತಿ ಇಲ್ಲವೆ ವ್ಯಕ್ತಿಗಳನ್ನು ಚುನಾಯಿಸಲು ಯೋಜಿಸಲ್ಪಡ ಬೇಕು.

(೩) ಉಪಕಲಮು (೧) ರಲ್ಲಿ ಸೂಚಿಸಲಾದಂತೆ ಯಾವುದೇ ಉಮೇದು ವಾರನು ತನ್ನ ಆಯ್ಕೆಯ ನಿರ್ಣಯ ಮಾಡದಿದ್ದರೆ, ಇಂತಹ ವ್ಯಕ್ತಿಯ ಚುನಾವಣೆಯು ರದ್ದಾಗುವುದು. ಮತ್ತು ಸಂಬಂಧಪಟ್ಟ ಮತದಾರ ಸಂಘಗಳು ಬೇರೆ ವ್ಯಕ್ತಿಯನ್ನು ಇಲ್ಲವೆ ವ್ಯಕ್ತಿಗಳನ್ನು ಚುನಾಯಿಸಲು ಯೋಜಿಸಲ್ಪಡಬೇಕು.

**ವಿವೇಚನೆ**

ಈ ಕಲಮು ಕಲಮು ೧೨ ರ ಹಾಗೆ ಇದೆ. ಆ ಕಲಮಿನ ವಿವೇಚನೆಯನ್ನೂ ನೋಡಬೇಕು. ತತ್ವ-ಹಾಗೂ ಹಿನ್ನೆಲೆ ಒಂದೇ ಆಗಿದೆ.

ಬೇರೆ ಬೇರೆ ಜನರಿಗೆ ಸೇವೆಯ ಆಸ್ಪದ ಮಾಡಿಕೊಡಬೇಕೆಂಬ ಉದ್ದೇಶವಲ್ಲದೆ ತಾಲೂಕ ಬೋರ್ಡದ ಸದಸ್ಯ ಸಂಖ್ಯೆಯು ಭರತಿಯಾಗಬೇಕು. ಆದಕ್ಕಾಗಿ ಈ ಕಲಮು ಇದೆ. ಪ್ರತಿನಿಧಿ ತತ್ವವು ಅಡಕವಾಗಿರುವುದರಿಂದ ಒಬ್ಬನು ಒಂದು ಮತದಾರ ಸಂಘದ ಪ್ರತಿನಿಧಿಯಾಗಲು ಸಾಧ್ಯವಿದೆ.

**೧೦೬. ಚುನಾವಣೆಗಳ ಕಾಯಿದೆಬದ್ಧತೆಯನ್ನು ನಿರ್ಣಯಿಸುವುದು**

(೧) ಚುನಾವಣೆಯ ಫಲಿತಾಂಶವು ಪ್ರಕಟವಾದ ನಂತರ ಹದಿನೈದು ದಿವಸಗಳಲ್ಲಿ ಯಾವುದೇ ಕಾಲಕ್ಕೆ, ಚುನಾವಣೆಗೆ ನಿಂತ ಯಾವುದೇ ಉಮೇದುವಾರನು ಇಲ್ಲವೆ, ಆ ಚುನಾವಣೆಯಲ್ಲಿ ಮತದಾನ ಮಾಡಲು ಅರ್ಹನಿದ್ದ ಯಾವುದೇ ವ್ಯಕ್ತಿಯು ವೆಚ್ಚದ ಸಲುವಾಗಿ ಭದ್ರತೆಯೆಂದು ಒಂದು ನೂರು ರೂಪಾಯಿಗಳ ಠೇವಿನೊಂದಿಗೆ, ಸಂಬಂಧಪಟ್ಟ ತಾಲೂಕದಲ್ಲಿ ಅಧಿಕಾರ ಕ್ಷೇತ್ರವಿರುವ ಮುನಸೀಫನ ಕಡೆಗೆ ಆ ಚುನಾವಣೆಯ ಕಾಯಿದೆ ಬದ್ಧತೆಯನ್ನು ನಿರ್ಣಯಿಸುವುದರ ಸಲುವಾಗಿ ಅರ್ಜಿ ಮಾಡಬಹುದು.

**ವಿವರಣೆ :** ಈ ಕಲಮಿನ ಉದ್ದೇಶಗಳಿಗಾಗಿ ಮುನಸೀಫ್ ಎಂದರೆ (i) ಮುಂಬೈ ಪ್ರದೇಶಕ್ಕಾಗಿ ಜೂನಿಯರ ಡಿವಿಜನದ ಸಿವಿಲ ಜಜ್ಜ ಎಂದೂ (ii) ಮದ್ರಾಸ ಪ್ರದೇಶಕ್ಕಾಗಿ ಜಿಲ್ಲಾ ಮುನಸೀಫ್ ಎಂದೂ ಅರ್ಥವಾಗುತ್ತದೆ.

(೨) ತನಗೆ ಅವಶ್ಯವೆಂದು ಕಂಡಂತಹ ವಿಚಾರಣೆಯನ್ನು ನಡೆಸಿದ ನಂತರ ಮುನಸೀಫನು ಚುನಾವಣೆಯ ಪ್ರಕಟಿತ ಫಲಿತಾಂಶವನ್ನು ಸ್ಥಿರೀಕರಿಸುವ ಇಲ್ಲವೆ ತಿದ್ದುಪಡಿ ಮಾಡುವ ಇಲ್ಲವೆ ಚುನಾವಣೆಯನ್ನು ಅಲ್ಲಗಳೆಯುವ ಹುಕುಮನ್ನು ಮಾಡತಕ್ಕದ್ದು. ಮೇಲ್ಕಾಣಿಸಿದ ವಿಚಾರಣೆಯ ಸಲುವಾಗಿ ಮುನಸೀಫನು ದಿವಾಣಿ ನ್ಯಾಯಾಲಯದ ಯಾವುದೇ ಅಧಿಕಾರವನ್ನು ಚಲಾಯಿಸಬಹುದು. ತನಗೆ ಯೋಗ್ಯ ಕಂಡಂತಹ ರೀತಿಯಲ್ಲಿ ಅವನು ವಿಚಾರಣೆಯ ವೆಚ್ಚವನ್ನು ಕೊಡಿಸಬಹುದು. ಮತ್ತು ಇಂತಹ ವೆಚ್ಚವು ೧೯೦೮ ರ (೧೯೦೮ ರ ಕೇಂದ್ರ

ಕಾಯಿದೆ ನಂಬರು v) ; ಸಿವಿಲ ಪ್ರೊಸೀಜರ ಕೋಡದನ್ವಯವಾಗಿ ನಡೆದ ದಾವೆಯಲ್ಲಿ ಕೊಡಿಸಲಾದ ಕೋರ್ಟ ವೆಚ್ಚವನ್ನು ವಸೂಲು ಮಾಡುವಂತೆ ಮಾಡಲ್ಪಡಲಾಗುವುದು. ಅವನು ಚುನಾವಣೆಯನ್ನು ಅಲ್ಲಗಳೆದ ನಿರ್ಣಯವನ್ನು ಕೊಟ್ಟರೆ, ಆ ಸಂಗತಿಯನ್ನು ಕೂಡಲೆ ಡೆಪ್ಯೂಟಿ ಕಮಿಶನರನಿಗೆ ತಿಳಿಸತಕ್ಕದ್ದು. ಹೊಸ ಚುನಾವಣೆಯನ್ನು ನಡೆಸಲು ಆವಶ್ಯಕ ಕ್ರಮಗಳನ್ನು ಡೆಪ್ಯೂಟಿ ಕಮಿಶನರನು ತೆಗೆದುಕೊಳ್ಳತಕ್ಕದ್ದು.

(೩) ಉಪಕಲಮು (೨) ರಲ್ಲಿ ಹೇಳಿದ ಶರತುಗಳಿಗಂಕಿತವಾಗಿ,

(ಎ) ಮುನಸೀಫರ ಅಭಿಪ್ರಾಯವು,

(ಅ) ಚುನಾವಣೆಯಾದ ತಾರೀಖಿಗೆ ಚುನಾಯಿತನಾದ ಉಮೇದುವಾರನು ಈ ಕಾಯಿದೆಯನ್ವಯವಾಗಿ, ಅರ್ಹತೆ ಪಡೆದವನು ಆಗಿದ್ದಿಲ್ಲವೆಂದು ಇಲ್ಲವೆ, ಆ ಸ್ಥಳವನ್ನು ಭರತಿ ಮಾಡಲು ಆಯ್ಕೆಗೊಳ್ಳಲು ಅನರ್ಹತೆಯುಳ್ಳವನಾಗಿದ್ದಾನೆಂದು ಆಗಿದ್ದರೆ; ಇಲ್ಲವೆ

(ಬ) ಚುನಾಯಿತನಾದ ಉಮೇದುವಾರನಿಂದ ಇಲ್ಲವೆ ಅವನ ಚುನಾವಣೆಯ ಏಜೆಂಟನಿಂದ ಇಲ್ಲವೆ ಚುನಾಯಿತನಾದ ಉಮೇದುವಾರನ ಇಲ್ಲವೆ ಅವನ ಚುನಾವಣೆ ಏಜೆಂಟನ ಸಮ್ಮತಿಯಿಂದ ಬೇರೆ ಯಾವುದೇ ವ್ಯಕ್ತಿಯಿಂದ ಯಾವುದಾದರೂ ಕಲುಷಿತ ವ್ಯವಹರಣೆ ಮಾಡಲ್ಪಟ್ಟಿವೆಯೆಂದು ಆಗಿದ್ದರೆ, ಇಲ್ಲವೆ

(ಕ) ಯಾವುದೇ ನಾಮಕರಣ ಪತ್ರವು ಯೋಗ್ಯ ಕಾರಣವಿಲ್ಲದೆ ತಿರಸ್ಕೃತವಾಗಿದೆಯೆಂದು ಆಗಿದ್ದರೆ; ಇಲ್ಲವೆ

(ಡ) ಚುನಾಯಿತನಾದ ಉಮೇದುವಾರನ ಸಂಬಂಧವಾಗಿ ಈ ಕೆಳಗಿನ ಕಾರಣಗಳ ಮೂಲಕ ಚುನಾವಣೆಯ ಫಲಿತಾಂಶವು ಬಾಧಿಸಲ್ಪಟ್ಟಿದೆಯೆಂದು ಆಗಿದ್ದರೆ—:

(i) ಯಾವುದೇ ನಾಮಕರಣ ಪತ್ರವು ಅಯೋಗ್ಯವಾಗಿ ಸ್ವೀಕರಿಸಲ್ಪಟ್ಟಿರುವುದರಿಂದ, ಇಲ್ಲವೆ

(ii) ಚುನಾಯಿತನಾದ ಉಮೇದುವಾರನ ಹಿತಕ್ಕಾಗಿ, ಆ ಉಮೇದುವಾರನಲ್ಲದ, ಇಲ್ಲವೆ ಅವನ ಚುನಾವಣೆ ಏಜೆಂಟನಲ್ಲದ, ಇಲ್ಲವೆ ಉಮೇದವಾರನ ಇಲ್ಲವೆ ಅವನ ಚುನಾವಣೆ ಏಜೆಂಟನ ಸಮ್ಮತಿ ಪಡೆದ ಬೇರೆ ಯಾವುದೇ ವ್ಯಕ್ತಿಯಿಂದ ಯಾವುದೇ ಕಲುಷಿತ ವ್ಯವಹರಣೆ ನಡೆಸಲ್ಪಟ್ಟಿದ್ದರಿಂದ; ಇಲ್ಲವೆ,

(iii) ಯಾವುದೇ ಮತವನ್ನು ಅಯೋಗ್ಯವಾಗಿ ಸ್ವೀಕರಿಸಿದ್ದುದರಿಂದ ನಿರಾಕರಿಸಿದ್ದುದರಿಂದ, ಇಲ್ಲವೆ ತಳ್ಳಿಹಾಕಿದ್ದರಿಂದ ಎಲ್ಲವೆ ರದ್ದಾದಂತಹ ಮತವನ್ನು ಸ್ವೀಕರಿಸಿದ್ದುದರಿಂದ, ಇಲ್ಲವೆ,

(iv) ಈ ಕಾಯಿದೆಯ ಶರತುಗಳ ಇಲ್ಲವೆ ಈ ಕಾಯಿದೆಯನ್ವಯವಾಗಿ ಮಾಡಲಾದ ಯಾವುದೇ ನಿಯಮಗಳ ಇಲ್ಲವೆ ಹುಕುಮಗಳ ಯಾವುದೇ ಉಲ್ಲಂಘನೆಯಿಂದ,

ಆಗ, ಚುನಾಯಿತರಾದ ಯಾವುದೇ ಇಲ್ಲವೆ ಎಲ್ಲ ಉಮೇದುವಾರರ ಚುನಾವಣೆಯು ರದ್ದೆಂದು ಮುನಸೀಫನು ಸಾರತಕ್ಕದ್ದು. ಮತ್ತು ಅರ್ಜದಾರನು ಇಲ್ಲವೆ, ಬೇರೆ ಯಾವುದೇ ಉಮೇದವಾರನು ಯೋಗ್ಯ ರೀತಿಯಲ್ಲಿ ಚುನಾಯಿತನಾಗಿದ್ದಾನೆಂದು ಸಾರತಕ್ಕದ್ದು;

(ಬಿ) ಮೇಲಿನ ವಾಕ್ಯಾವಳಿ (ಎ) ಇದು ಯಾವುದಾದರೂ ಪ್ರಕರಣಕ್ಕೆ ಅನ್ವಯಿಸದಿದ್ದರೆ, ಇಬ್ಬರು ಇಲ್ಲವೆ ಹೆಚ್ಚು ಉಮೇದವಾರರ ನಡುವೆ ಚುನಾವಣೆಯ ಕಾಯಿದೆ ಬದ್ಧತೆಯ ಬಗ್ಗೆ ವಾದವುಂಟಾಗಿದ್ದರೆ, ಇಂತಹ ಪ್ರತಿಯೊಬ್ಬ ಉಮೇದುವಾರನ ಪರವಾಗಿ ಹಾಕಲ್ಪಟ್ಟ ಮತಗಳ ಪರಿಶೀಲನೆ ಹಾಗೂ ಎಣಿಕೆಮಾಡಿದ ನಂತರ ಯಾವ ಉಮೇದವಾರನಿಗೆ ಹೆಚ್ಚು ಸಂಖ್ಯೆಯಲ್ಲಿ ಕಾಯಿದೇಶೀರ ಮತಗಳು ಬಿದ್ದಿರುತ್ತವೆಂದು ಕಂಡು ಬರುತ್ತದೆಯೋ ಅವನು ಯೋಗ್ಯ ರೀತಿಯಲ್ಲಿ ಚುನಾಯಿತನಾಗಿದ್ದಾನೆಂದು ಮುನಸೀಫನು ಸಾರತಕ್ಕದ್ದು.

ಆದರೆ ಇಂತಹ ಎಣಿಕೆಯ ಉದ್ದೇಶಕ್ಕಾಗಿ ಯಾವುದೇ ಮತವು ಒಬ್ಬ ಅನರ್ಹ ವ್ಯಕ್ತಿಯಿಂದ ಕೊಡಲ್ಪಟ್ಟಿದೆಯೆಂದು ಇಲ್ಲವೆ ಅದನ್ನು ಕೊಡುವಾಗ ಇಲ್ಲವೆ ಪಡೆಯುವಾಗ ಯಾವುದೇ ನಿರ್ದಿಷ್ಟ ಇಲ್ಲವೆ ಅನಿರ್ದಿಷ್ಟ ವ್ಯಕ್ತಿಯಿಂದ ಯಾವುದೇ ಕಲುಷಿತ ವ್ಯವಹರಣೆ ನಡೆಸಲ್ಪಟ್ಟಿದೆಯೆಂದು ಮುನಸೀಫನಿಗೆ ಕಂಡು ಬಂದರೆ ಆ ಮತವು ಕಾಯಿದೇಶೀರ ಮತವು ಎಂದು ಗಣಿಸಲ್ಪಡತಕ್ಕದ್ದಲ್ಲ.

ಆದರೆ, ಇಂತಹ ಎಣಿಕೆಯು ಮುಗಿದ ನಂತರ ಉಮೇದುವಾರರ ನಡುವೆ ಸಮಸಂಖ್ಯೆಯ ಮತಗಳು ಇವೆಯೆಂದು ಕಂಡು ಬಂದರೆ, ಮತ್ತು ಒಂದು ಮತವನ್ನು ಕೂಡಿಸುವುದರಿಂದ ಯಾವೊಬ್ಬ ಉಮೇದವಾರನು ಚುನಾಯಿತನೆಂದು ಸಾರಲ್ಪಡಲು ಅಧಿಕಾರವುಳ್ಳನಾಗುವನೆಂದು ಕಂಡು ಬಂದರೆ, ಮುನಸೀಫನು ನಿರ್ಣಯಿಸಬಹುದಾದ ರೀತಿಯಲ್ಲಿ ಅವನ ಸಮಕ್ಷಮ ಚೀಟಿಹಾಕಿ ಆರಿಸಿ, ಅಂತಹ ಉಮೇದುವಾರನ ಇಲ್ಲವೆ ಉಮೇದವಾರರ ಪರವಾಗಿ ಕಾಯಿದೇಶೀರ ಮತಗಳ ಸಂಖ್ಯೆಗೆ, ಒಂದು ಹೆಚ್ಚಿನ ಮತವನ್ನು ಸೇರಿಸತಕ್ಕದ್ದು.

(೪) ಈ ಕೆಳಗೆ ಹೇಳಿದಂತೆ ಮಾಡಿದರೆ, ಒಂದು ವ್ಯಕ್ತಿಯು ಕಲುಷಿತ ವ್ಯವಹರಣೆಯನ್ನು ಮಾಡಿದ್ದಾನೆಂದು ಪರಿಗಣಿಸಲ್ಪಡತಕ್ಕದ್ದು.

(ಅ) ಯಾವುದೇ ಉಮೇದುವಾರನ ಪರವಾಗಿ ಮತವನ್ನು ಕೊಡಲು ಇಲ್ಲವೆ ಕೊಡದೆ ಇರಲು, ಯಾವುದೇ ಮತದಾರನನ್ನು ಮನವೊಲಿಸುವ ಉದ್ದೇಶದಿಂದ ಯಾರಾದರೂ ಯಾವುದೇ ಹಣ ಇಲ್ಲವೆ ಬೆಲೆಯುಳ್ಳ ಸಂಭಾವನೆ

ಕೊಡಮಾಡಿದ್ದರೆ, ಇಲ್ಲವೆ ಕೊಟ್ಟರೆ, ಇಲ್ಲವೆ ವೈಯಕ್ತಿಕಲಾಭದ ಆಮಿಷದ ವಚನ ಮುಂದೆ ಮಾಡಿದರೆ, ಇಲ್ಲವೆ ಯಾವುದೇ ವ್ಯಕ್ತಿಗೆ ಅಪಾಯ ಮಾಡುವ ಯಾವುದೇ ಹೆದರಿಕೆಯನ್ನು ಮುಂದೆ ಮಾಡಿದರೆ, ಇಲ್ಲವೆ

(ಬ) ಯಾವನು ಮತದಾನ ಮಾಡುವನೋ ಆ ವ್ಯಕ್ತಿಯಾಗಿರದೆ, ಆ ಮತದಾರನ ಹೆಸರಿನಲ್ಲಿ ಯಾರಾದರೂ ಮತಕೊಟ್ಟರೆ, ಪಡೆದರೆ ಇಲ್ಲವೆ ಕೊಡುವು ದನ್ನು ಪ್ರೋತ್ಸಾಹಿಸಿದರೆ, ಇಲ್ಲವೆ,

(ಕ) ಯಾವುದೇ ಮತದಾನ ಕಟ್ಟೆಗೆ, ಮತ್ತು ಅಲ್ಲಿಂದ ಮರಳಿ ಯಾವುದೇ ಮತದಾರನ (ತನ್ನ ಹಾಗೂ ತನ್ನ ಕುಟುಂಬದ ಸದಸ್ಯರು ಇಲ್ಲವೆ ತನ್ನ ಏಜೆಂಟ ಇವರನ್ನು ಬಿಟ್ಟು) ಸಾಗಾಟದ ಸಲುವಾಗಿ ಯಾರಾದರೂ ಯಾವುದೇ ವಾಹನ ಇಲ್ಲವೆ ನಾವೆಯನ್ನು ಹಣಕ್ಕಾಗಿ ಇಲ್ಲವೆ ಬೇರೆ ರೀತಿಯಿಂದ ಬಾಡಿಗೆ ಹಿಡಿದರೆ, ಇಲ್ಲವೆ ಪಡೆದರೆ,

ಅವನು ಕಲುಷಿತ ವ್ಯವಹರಣೆ ಮಾಡಿದ್ದಾನೆಂದು ಪರಿಗಣಿಸಲ್ಪಡತಕ್ಕದ್ದು.

ಆದರೆ, ಮತದಾನ ಕಟ್ಟೆಗೆ ಇಲ್ಲವೆ ಅಲ್ಲಿಂದ ಮರಳಿ ಸಾಗಾಟದ ಸಲುವಾಗಿ ಯಾವೊಬ್ಬ ಮತದಾರನು ಇಲ್ಲವೆ ಅನೇಕ ಮತದಾರರು ತಮ್ಮ ಸಾಮೂಹಿಕ ವೆಚ್ಚದಿಂದ ವಾಹನವನ್ನು ಇಲ್ಲವೆ ನಾವೆಯನ್ನು ಬಾಡಿಗೆ ಹಿಡಿದುದೂ ಮತ್ತು ಹೀಗೆ ಬಾಡಿಗೆ ಹಿಡಿಯಲಾದ ವಾಹನ ಇಲ್ಲವೆ ನಾವೆಯು ಯಾಂತ್ರಿಕ ಶಕ್ತಿಯಿಂದ ನಡೆ ಯುವಂತಹದು ಆಗಿರದೆ ಇದ್ದರೆ, ಈ ವಾಕ್ಯಾವಳಿಯನ್ವಯವಾಗಿ ಅದು ಕಲುಷಿತ ವ್ಯವಹರಣೆಯೆಂದು ಪರಿಗಣಿಸಲ್ಪಡತಕ್ಕದ್ದಲ್ಲ.

ಆದರೆ, ಯಾವುದೇ ಮತದಾರನಿಂದ ತನ್ನ ಸ್ವಂತದ ವೆಚ್ಚದಿಂದ ಯಾವುದೇ ಸಾರ್ವಜನಿಕ ವಾಹನ ಇಲ್ಲವೆ ನಾವೆ, ಇಲ್ಲವೆ ಯಾವುದೇ ಟ್ರಾಮುಗಾಡಿ, ಇಲ್ಲವೆ ರೇಲವೆ ವಾಹನವು ಇಂತಹ ಯಾವುದೇ ಮತದಾನ ಕಟ್ಟೆಗೆ, ಇಲ್ಲವೆ ಮತದಾನ ಕ್ಕಾಗಿ ಗೊತ್ತುಮಾಡಿದ ಸ್ಥಳಕ್ಕೆ ಹೋಗಲು ಇಲ್ಲವೆ ಅಲ್ಲಿಂದ ಮರಳಿ ಬರಲು ಉಪ ಯೋಗಿಸಲ್ಪಟ್ಟಿದ್ದರೆ ಅದು ಈ ವಾಕ್ಯಾವಳಿಯನ್ವಯವಾಗಿ ಕಲುಷಿತ ವ್ಯವಹರಣೆ ಯೆಂದು ಪರಿಗಣಿಸಲ್ಪಡತಕ್ಕದ್ದಲ್ಲ.

ಅದು ಅವನ ತಿಳಿವಳಿಕೆಯಿಂದ ಮತ್ತು ಸಮ್ಮತಿಯಿಂದ ನಡೆಸಲ್ಪಟ್ಟಿದ್ದಾ ಗಿದ್ದರೆ, ಇಲ್ಲವೆ ಚುನಾವಣೆಯ ಸಂಬಂಧವಾಗಿ ಅಂತಹ ಉಮೇದುವಾರನ ಸಾಮಾನ್ಯ ಇಲ್ಲವೆ ನಿರ್ದಿಷ್ಟ ಅಧಿಕಾರದ ಮೂಲಕ ಕಾರ್ಯ ಮಾಡುತ್ತಿರುವ ವ್ಯಕ್ತಿಯಿಂದ ನಡೆಸಲ್ಪಟ್ಟಿದ್ದಾಗಿದ್ದರೆ, ಆ ಕಲಷಿತ ವ್ಯವಹರಣೆಯು ಆ ಉಮೇದು ವಾರನಿಂದ ನಡೆಸಲ್ಪಟ್ಟಿದೆಯೆಂದು ಪರಿಗಣಿಸಲ್ಪಡತಕ್ಕದ್ದು.

**ವಿವರಣೆ ೧ :** "ವೈಯಕ್ತಿಕ ಲಾಭದ ಆಮಿಷದ ವಚನ" ಎಂಬ ಪದ ಪ್ರಯೋಗವು (i) ತಾಲೂಕಬೋರ್ಡದ ಎದುರು ವಿಚಾರಣೆಗೆ ಬರಬಹುದಾದಂತಹ ಯಾವುದೇ ವಿಶಿಷ್ಟ ಯೋಜನೆಗೆ ಅನುಕೂಲವಾಗಿ ಇಲ್ಲವೆ ಪ್ರತಿಕೂಲವಾಗಿ ಮತ ದಾನಮಾಡುವ ವಚನವನ್ನು ಒಳಗೊಳ್ಳುವದಿಲ್ಲ, ಆದರೆ,

(ii) ಮೇಲೆ ಹೇಳಿದ್ದಕ್ಕೆ ಅಂಕಿತವಾಗಿ ಆ ವ್ಯಕ್ತಿಯು ಸ್ವಂತ ಲಾಭಕ್ಕಾಗಿ ಇಲ್ಲವೆ ಯಾವ ವ್ಯಕ್ತಿಯಲ್ಲಿ ಅವನಿಗೆ ಹಿತಾಸಕ್ತಿ ಇದೆಯೋ ಆ ಯಾವುದೇ ವ್ಯಕ್ತಿಯ ಲಾಭಕ್ಕಾಗಿ ಕೊಟ್ಟ ವಚನವನ್ನು ಒಳಗೊಳ್ಳುತ್ತದೆ.

**ವಿವರಣೆ ೨ :** "ವಾಹನ" ಎಂದರೆ ರಸ್ತೆಯ ಮೇಲೆ ಸಾರಿಗೆಯ ಉದ್ದೇಶ ದಿಂದ ಉಪಯೋಗಿಸಲ್ಪಡುವ ಇಲ್ಲವೆ ಉಪಯೋಗಿಸಲು ಸಮರ್ಥವಾದ ಯಾವುದೇ ವಾಹನ; ಅದು ಯಾಂತ್ರಿಕ ಶಕ್ತಿಯಿಂದ ನಡೆಸಲ್ಪಡಲಿ, ಬಿಡಲಿ, ಅದು ಇತರ ವಾಹನಗಳನ್ನು ಎಳೆಯುವುದಕ್ಕಾಗಿ ಇರಲಿ, ಇಲ್ಲದಿರಲಿ.

(೫) ಚುನಾವಣೆಗೆ ಸಂಬಂಧವಾಗಿ ಮಾಡಲಾದ ನಿಯಮಗಳನ್ನು ಕಾರ್ಯ ಕಾರಿ ಮಾಡುವುದರ ಸಲುವಾಗಿ ಹೊಣೆಗಾರಿಕೆಯುಳ್ಳ ಅಧಿಕಾರಿಯು ಯಾವುದೇ ತಪ್ಪುಮಾಡಿರುವನೆಂಬ ಕಾರಣವನ್ನು ಇಲ್ಲವೆ ಕಲುಷಿತ ರೀತಿಯಲ್ಲಿ ಉಂಟಾಗದೆ ಇದ್ದ ಅಕ್ರಮ ಇಲ್ಲವೆ ವಿಧಾನರಾಹಿತ್ಯದ ಕಾರಣವನ್ನು ಮಾತ್ರ ಆಧರಿಸಿ ಚುನಾ-ವಣೆಯ ಕಾಯಿದೆಬದ್ಧತೆಯ ಪ್ರಶ್ನೆಯನ್ನು ಎತ್ತಲಾಗಿದ್ದರೆ ಮುನಸೀಫನು ಆ ಚುನಾವಣೆಯನ್ನು ಅಲ್ಲಗಳೆಯತಕ್ಕದ್ದಲ್ಲ.

**ವಿವರಣೆ :** ಈ ಉಪಕಲಮಿನಲ್ಲಿಯ "ತಪ್ಪು" ಎಂಬ ಶಬ್ದವು ಈ ಕಾಯಿದೆಯ ಕಕ್ಷೆಗಳ ಇಲ್ಲವೆ ಅದರನ್ವಯವಾಗಿ ಮಾಡಿದ ನಿಯಮಗಳ ಯಾವುದೇ ಉಲ್ಲಂಘನೆ ಇಲ್ಲವೆ ಕಾರ್ಯಕಾರಿ ಮಾಡುವುದನ್ನು ಬಿಟ್ಟಿರುವಿಕೆ ಇಲ್ಲವೆ ಮಾಡ-ಬೇಕಾಗುವುದನ್ನು ಮಾಡದೇ ಇರೋಣ—ಯಾವುದರಿಂದ ಚುನಾವಣೆಯ ಫಲಿತಾಂಶವು ಸತ್ವತಃ ಬಾಧಿಸಲ್ಪಟ್ಟಿದೆಯೋ-ಅಂತಹವನ್ನು ಒಳಗೊಳ್ಳುವುದಿಲ್ಲ.

(೬) ಉಪಕಲಮು (೩) ರಲ್ಲಿಯ ವಾಕ್ಯಾವಳಿ (ಎ) ದಲ್ಲಿಯ (ಬ) ವಾಕ್ಯ ದನ್ವಯವಾಗಿ ಮುನಸೀಫನು ಚುನಾವಣೆಯನ್ನು ಅಲ್ಲಗಳೆದರೆ, ಅವನಿಗೆ ಅದು ಯೋಗ್ಯವಾಗಿ ಕಂಡರೆ, ಈ ಕಲಮಿನ ಪ್ರಕಾರ ಯಾರಿಂದ ಕಲುಷಿತ ವ್ಯವಹರಣೆಯು ಮಾಡಲ್ಪಟ್ಟಿದೆಯೋ ಅಂತಹ ಯಾವುದೇ ವ್ಯಕ್ತಿಯು ಐದು ವರುಷಗಳ ಕಾಲಾವಧಿ ಮಿಕ್ಕದಷ್ಟು ಕಾಲಾವಧಿಯವರೆಗೆ ಯಾವುದೇ ಸ್ಥಾನಿಕ ಅಧಿಕಾರದ ಸದಸ್ಯನಾಗಲು ಅನರ್ಹತೆಯುಳ್ಳವನಾಗಿದ್ದಾನೆಂದು ಅವನು ಸಾರಬಹುದು.

ಆದರೆ, ಚುನಾಯಿತನಾಗಿರುವ ಉಮೇದುವಾರನನ್ನಲ್ಲದೆ ಮತ್ತು ಅಂತಹ ವ್ಯಕ್ತಿಗೆ ಅಂತಹ ಸಾರುವಿಕೆಯನ್ನು ಏಕೆ ಮಾಡಬಾರದೆಂಬ ಬಗ್ಗೆ ಕಾರಣ

ತೋರಿಸಲು ಎಲ್ಲ ಅವಕಾಶ ಮಾಡಿಕೊಡದೆ, ಯಾವುದೇ ವ್ಯಕ್ತಿಯ ಸಂಬಂಧವಾಗಿ ಇಂತಹ ಸಾರುವಿಕೆಯು ಮಾಡಲ್ಪಡಲಾಗದು.

ಆದರೆ, ಆ ಸಂಬಂಧದಲ್ಲಿ ಸರಕಾರದ ಹುಕುಮಿನ ಮೂಲಕ ಅಂತಹ ಅನರ್ಹತೆಯಿಂದ ಯಾವುದೇ ಕಾಲಕ್ಕೆ ಇಂತಹ ವ್ಯಕ್ತಿಯನ್ನು ಮುಕ್ತಮಾಡ ಬಹುದು.

(೭) ಈ ಕಲಮಿನನ್ವಯವಾಗಿರುವ ಮುನಸೀಫನ ಯಾವುದೇ ನಿರ್ಣಯ ದಿಂದ ಇಲ್ಲವೆ ಹುಕುಮಿನಿಂದ ಯಾವುದೇ ವ್ಯಕ್ತಿಯು ಬಾಧಿತನಾಗಿದ್ದರೆ ಇಂತಹ ನಿರ್ಣಯದ ಇಲ್ಲವೆ ಹುಕುಮಿನ ತಾರೀಖಿನಿಂದ ಮುವ್ವತ್ತು ದಿವಸಗಳ ಒಳಗೆ ಅವನು ಜಿಲ್ಹಾ ನ್ಯಾಯಾಧೀಶ (District Judge) ನ ಕಡೆಗೆ ಅಪೀಲು ಮಾಡಿಕೊಳ್ಳಬಹುದು. ಮತ್ತು ಇಂತಹ ಅಪೀಲಿನ ಮೇಲಿನ ಜಿಲ್ಹಾ ನ್ಯಾಯಾ ಧೀಶನ ನಿರ್ಣಯವು ಕೊನೆಯದೂ ನಿರ್ಣಾಯಕವೂ ಆಗತಕ್ಕದ್ದು.

## ವಿವೇಚನೆ

ಈ ಕಲಮು ೧೩ ನೆಯ ಕಲಮಿನಂತೆ ಇದೆ. ಅಲ್ಲಿ ಪಂಚಾಯತದ ಚುನಾ ವಣೆಯ ಕಾಯಿದೆ ಬದ್ಧತೆಯನ್ನು ನಿರ್ಣಯಿಸುವ ಕ್ರಮವನ್ನು ಹೇಳಲಾಗಿದೆ; ಇಲ್ಲಿ ತಾಲೂಕ ಬೋರ್ಡಿನ ಚುನಾವಣೆಯ ಕಾಯಿದೆ ಬದ್ಧತೆಯನ್ನು ನಿರ್ಣಯಿ ಸುವ ಕ್ರಮವನ್ನು ಹೇಳಲಾಗಿದೆ. ಎರಡೂ ಕಲಮುಗಳಲ್ಲಿ ಅಡಕವಾದ ತತ್ವಗಳು ಒಂದೇ. ಆದ್ದರಿಂದ ವಿವರಕ್ಕಾಗಿ ಕಲಮು ೧೩ ರ ವಿವೇಚನೆಯನ್ನು ನೋಡ ಬೇಕು.

ಕಲಮು ೧೩ ಕ್ಕೆ ಹಾಗೂ ಕಲಮು ೧೦೬ ಕ್ಕೆ ಇರುವ ವ್ಯತ್ಯಾಸ ಇಷ್ಟೇ. ಅರ್ಜಿಯ ಸಂಗಡ ಠೇವಾಗಿ ಕಲಮು ೧೦೬ ರ ಪ್ರಕಾರ ಒಂದು ನೂರು ರೂಪಾಯಿ ಇಡಬೇಕು.

ಕಲಮು ೧೩ ರಲ್ಲಿ ವಿಚಾರಣೆಯ ವೆಚ್ಚದ ಬಗ್ಗೆ ಮುನಸೀಫನು ಕೊಟ್ಟ ನಿರ್ಣಯವು 'ಕೊನೆಯದು ಎಂದು ಹೇಳಲಾಗಿದೆ; ಕಲಮು ೧೦೬ ರಲ್ಲಿ ಹಾಗೆ ನಿರ್ಬಂಧವಿಲ್ಲ. ಅದರಂತೆ ಕಲಮು ೧೩ ರನ್ವಯವಾಗಿ ಕೊಡಲಾದ ಮುನಸೀಫನ ನಿರ್ಣಯವು ಕೊನೆಯದೂ ನಿರ್ಣಾಯಕವೂ ಎಂದು ಅಲ್ಲಿನ ಉಪಕಲಮು (೭) ರಲ್ಲಿ ಹೇಳಿದೆ. ಆದರೆ ಕಲಮು ೧೦೬ ರಲ್ಲಿಯ ಉಪಕಲಮು (೭) ರಲ್ಲಿ ಹಾಗೆ ಹೇಳದೆ, ಮುನಸೀಫನ ನಿರ್ಣಯದ ಮೇಲೆ ಅಪೀಲಿಗೆ ಅವಕಾಶ ಕೊಡಲಾಗಿದೆ. ಈ ಅಪೀಲನ್ನು ಜಿಲ್ಹಾ ನ್ಯಾಯಾಧೀಶನಿಗೆ ಮಾಡಿಕೊಳ್ಳತಕ್ಕದ್ದು. ಜಿಲ್ಹಾ ನ್ಯಾಯಾಧೀಶನು ಕೊಟ್ಟ ಅಪೀಲಿನ ಮೇಲೆ ನಿರ್ಣಯವು ಮಾತ್ರ ಕೊನೆಯದೂ ನಿರ್ಣಾಯಕವೂ ಎಂದು ಹೇಳಿದೆ.

ಇವಿಷ್ಟು ವ್ಯತ್ಯಾಸಗಳನ್ನು ಬಿಟ್ಟರೆ ಕಲಮು ೧೩ ಹಾಗೂ ೧೦೬ ಎರಡೂ ಒಂದೇ ಆಗಿವೆ.

## ೧೦೭. ಸದಸ್ಯರ ಹೆಸರುಗಳ ಪ್ರಕಟನೆ

ಯಾವುದೇ ತಾಲೂಕ ಬೋರ್ಡಗೆ ಚುನಾಯಿತರಾದ ಎಲ್ಲ ಸದಸ್ಯರ ಹೆಸರುಗಳನ್ನು ಕಮಿಶನರನಿಗೆ ವರದಿ ಮಾಡಲ್ಪಡಬೇಕು; ಅವನು ಅವುಗಳನ್ನು ಅಧಿಕೃತ ಗ್ಯಾಜೆಟದಲ್ಲಿ ಪ್ರಕಟಿಸತಕ್ಕದ್ದು.

### ವಿವೇಚನೆ

ತಾಲೂಕ ಬೋರ್ಡಿಗೆ ಚುನಾವಣೆಯಾಗಿ ಫಲಿತಾಂಶವು ನಿರ್ಣಯವಾದ ಮೇಲೆ ಆಗ ಚುನಾಯಿತರಾದ ಸದಸ್ಯರ ಹೆಸರುಗಳು ಕಮಿಶನರನ ಕಡೆಗೆ ಕಳಿಸಲ್ಪಡಬೇಕು. ತಾಲೂಕ ಬೋರ್ಡು ಕಳಿಸಬೇಕೋ, ಚುನಾವಣೆಯ ಅಧಿಕಾರಿ ಕಳಿಸಬೇಕೋ ಎಂಬುದು ಈ ಕಲಮುನಲ್ಲಿ ಸ್ಪಷ್ಟವಾಗಿಸಿಲ್ಲ. ಚುನಾಯಿತರಾದ ಸದಸ್ಯರ ಹೆಸರುಗಳು ಕಮಿಶನರನ ಕಡೆಗೆ ಕಳಿಸಲ್ಪಟ್ಟ ಮೇಲೆ ಅವನು ಆ ಹೆಸರುಗಳನ್ನು ಅಧಿಕೃತ ಗ್ಯಾಜೆಟದಲ್ಲಿ ಪ್ರಕಟಿಸಬೇಕು. ಅಂದರೆ ಚುನಾವಣೆಯ ಫಲಿತಾಂಶವು ಅಧಿಕೃತವಾಗುವುದು.

## ೧೦೮. ಸದಸ್ಯರ ಅಧಿಕಾರ ಕಾಲಾವಧಿ

ಈ ಕಾಯಿದೆಯಲ್ಲಿ ಬೇರೆಯಾಗಿ ಅನುಕೂಲ ಮಾಡಿಕೊಟ್ಟುದನ್ನು ಹೊರತುಪಡಿಸಿ ಸಾಧಾರಣ ಚುನಾವಣೆಯಲ್ಲಿ ಚುನಾಯಿತರಾದ ತಾಲೂಕ ಬೋರ್ಡದ ಸದಸ್ಯರು ನಾಲ್ಕು ವರುಷಗಳ ಕಾಲಾವಧಿಯ ವರೆಗೆ ಅಧಿಕಾರಪದದಲ್ಲಿ ಇರತಕ್ಕದ್ದು.

ಆದರೆ, ಸರಕಾರವು ಪ್ರಕಟನೆ ಪರಿಪತ್ರದಿಂದ ಅದರಲ್ಲಿ ಕಾಣಿಸಿದ ಕಾರಣಗಳಿಗಾಗಿ, ಕಾಲಕಾಲಕ್ಕೆ, ಮೇಲ್ಕಾಣಿಸಿದ ಕಾಲಾವಧಿಯನ್ನು ಒಟ್ಟಿನಲ್ಲಿ ಐದು ವರುಷ ಮಿಕ್ಕದಷ್ಟು ಕಾಲಾವಧಿಯ ವರೆಗೆ ಹೆಚ್ಚಿಸಬಹುದು.

### ವಿವೇಚನೆ

ಸಾಧಾರಣ ಚುನಾವಣೆಯಲ್ಲಿ ಚುನಾಯಿತರಾದ ತಾಲೂಕ ಬೋರ್ಡದ ಸದಸ್ಯರ ಅಧಿಕಾರ ಕಾಲಾವಧಿ ನಾಲ್ಕು ವರುಷ. ಕಾರಣಾಂತರದಿಂದ ಈ ಅವಧಿಯನ್ನು ಹೆಚ್ಚಿಸಬೇಕೆಂದು ಸರಕಾರಕ್ಕೆ ಅನ್ನಿಸಿದರೆ, ಆ ಕಾರಣಗಳನ್ನು ಸ್ಪಷ್ಟಪಡಿಸಿ ಪ್ರಕಟನೆ ಹೊರಡಿಸಿ ಆ ಕಾಲಾವಧಿಯನ್ನು ಹೆಚ್ಚಿಸಬಹುದು. ಕಾಲಕಾಲಕ್ಕೆ ಹೀಗೆ ಹೆಚ್ಚಿಸಿದ ಕಾಲಾವಧಿಯು ಒಟ್ಟಿನಲ್ಲಿ ಐದು ವರುಷ ಮಿಕ್ಕಬಾರದು.

## ೧೦೯. ಸದಸ್ಯರ ಅಧಿಕಾರ ಕಾಲಾವಧಿಯ ಪ್ರಾರಂಭ

ಕಲಮು ೯೬ ರ ಉಪಕಲಮು (೧) ರನ್ವಯವಾಗಿರುವ ಸಾಧಾರಣ ಚುನಾವಣೆಯಲ್ಲಿ ಚುನಾಯಿತರಾದ ಸದಸ್ಯರ ಅಧಿಕಾರ ಕಾಲಾವಧಿಯು, ತಾಲೂಕ

ಬೋರ್ಡದಿಂದ ನಿವೃತ್ತಿಯಾಗುವ ಸದಸ್ಯರ ಅಧಿಕಾರ ಕಾಲಾವಧಿಯು ಮುಗಿದ ನಂತರದ ತಾರೀಖಿನಿಂದ ಇಲ್ಲವೆ ಕಲಮು ೧೦೭ ರನ್ವಯವಾಗಿ ಅವರ ಹೆಸರುಗಳು ಪ್ರಕಟವಾದ ತಾರೀಖಿನಿಂದ ಇದರಲ್ಲಿ ಯಾವುದು ನಂತರದ ದಿನಾಂಕವಿರುವುದೋ ಆ ತಾರೀಖಿನಿಂದ ಪ್ರಾರಂಭವಾಗುವುದು.

## ವಿವೇಚನೆ

ಹೊಸದಾಗಿ ತಾಲೂಕ ಬೋರ್ಡು ರಚಿತವಾದಾಗ, ಸದಸ್ಯರ ಅಧಿಕಾರ ಕಾಲಾವಧಿಯು ಗ್ಯಾಜೆಟದಲ್ಲಿ ಅವರ ಹೆಸರು ಪ್ರಕಟವಾದ ತಾರೀಖಿನಿಂದ ಪ್ರಾರಂಭವಾಗುವುದು. ಇನ್ನು ಒಮ್ಮೆ ತಾಲೂಕ ಬೋರ್ಡು ಅಸ್ತಿತ್ವದಲ್ಲಿ ಬಂದ ಮೇಲೆ ನಡೆದ ಸಾಧಾರಣ ಚುನಾವಣೆಯಲ್ಲಿ ಚುನಾಯಿತರಾದ ಸದಸ್ಯರ ಅಧಿಕಾರ ಕಾಲಾವಧಿಯು ನಿವೃತ್ತಿಯಾಗುವ ಸದಸ್ಯರ ಅಧಿಕಾರ ಕಾಲಾವಧಿ ಮುಗಿದ ನಂತರದ ತಾರೀಖಿನಿಂದ ಪ್ರಾರಂಭವಾಗುವುದು. ಆದರೆ ಆ ತಾರೀಖಿಗೆ ಸದಸ್ಯರ ಹೆಸರುಗಳು ಗ್ಯಾಜೆಟದಲ್ಲಿ ಇನ್ನೂ ಪ್ರಕಟವಾಗಿದ್ದಿಲ್ಲವಾದರೆ, ಈ ಎರಡು ತಾರೀಖು ಗಳಲ್ಲಿ ಯಾವುದು ನಂತರದ ದಿನಾಂಕವಿರುವುದೋ ಅಂದು ಪ್ರಾರಂಭವಾಗುವುದು. ಅಂದರೆ ಅಧಿಕಾರ ಕಾಲಾವಧಿ ಪ್ರಾರಂಭವಾಗಲು ಇದ್ದ ಸದಸ್ಯರು ನಿವೃತ್ತಿಯಾಗಿರ ಬೇಕು; ಹೊಸ ಸದಸ್ಯರ ಹೆಸರು ಗ್ಯಾಜೆಟದಲ್ಲಿ ಪ್ರಸಿದ್ಧವಾಗಿರಬೇಕು. ಈ ಎರಡೂ ಸಂಗತಿಗಳು ಇದ್ದ ವಿನಾ ಅಧಿಕಾರ ಕಾಲಾವಧಿಯು ಪ್ರಾರಂಭವಾಗುವದಿಲ್ಲ. ಆದ್ದರಿಂದ ಗ್ಯಾಜೆಟದಲ್ಲಿ ಮೊದಲು ಹೆಸರು ಪ್ರಕಟವಾಗಿದ್ದರೆ, ಹಳೆಯ ಸದಸ್ಯರು ನಿವೃತ್ತಿಯಾಗುವ ದಿನದ ಮರುದಿನದಿಂದ ಹೊಸ ಸದಸ್ಯರ ಅಧಿಕಾರ ಕಾಲಾವಧಿ ಪ್ರಾರಂಭವಾಗುವುದು. ಹಳೆಯ ಸದಸ್ಯರು ನಿವೃತ್ತಿಯಾಗಿದ್ದರೂ ಹೊಸ ಸದಸ್ಯರ ಹೆಸರುಗಳು ಇನ್ನೂ ಗ್ಯಾಜೆಟದಲ್ಲಿ ಪ್ರಸಿದ್ಧವಾಗಿರದಿದ್ದರೆ, ಎಂದು ಅವು ಪ್ರಕಟ ವಾಗುವುವೋ ಆ ತಾರೀಖಿನಿಂದ ಅಧಿಕಾರ ಕಾಲಾವಧಿ ಪ್ರಾರಂಭ, ಎಂದು ಲಕ್ಷಿಸಬೇಕು.

## ೧೧೦. ಸದಸ್ಯನ ರಾಜೀನಾಮೆ

ತಾಲೂಕ ಬೋರ್ಡದ ಪ್ರಸಿಡೆಂಟರನ್ನುದ್ದೇಶಿಸಿ ಬರೆಹದಲ್ಲಿ ತನ್ನ ಸಹಿ ಯೊಂದಿಗೆ ಇದ್ದ ಪತ್ರದ ಮುಖಾಂತರ ತಾಲೂಕ ಬೋರ್ಡದ ಸದಸ್ಯನು ತನ್ನ ಸದಸ್ಯತ್ವಕ್ಕೆ ರಾಜೀನಾಮೆ ಕೊಡಬಹುದು. ಮತ್ತು ಇಂತಹ ರಾಜೀನಾಮೆಯ ತಾರೀಖಿನಿಂದ ಪೂರ್ತಿ ಹದಿನೈದು ದಿನಗಳ ಅವಧಿ ಮುಗಿದ ನಂತರ, ಆ ಹದಿನೈದು ದಿನಗಳ ಅವಧಿ ಮುಗಿಯುವುದರೊಳಗೆ, ಪ್ರೆಸಿಡೆಂಟರನ್ನುದ್ದೇಶಿಸಿ, ಬರೆಹದಲ್ಲಿ ತನ್ನ ಸಹಿಯೊಂದಿಗೆ ಇದ್ದ ಪತ್ರದ ಮುಖಾಂತರ ಅಂತಹ ರಾಜೀನಾಮೆಯನ್ನು ಹಿಂತೆಗೆದುಕೊಂಡ ಹೊರತು, ಅವನ ಸ್ಥಳವು ಖಾಲಿಯಾಗತಕ್ಕದ್ದು.

**ವಿವೇಚನೆ**

ತಾಲೂಕ ಬೋರ್ಡದ ಸದಸ್ಯನು ತನ್ನ ಸದಸ್ಯತ್ವಕ್ಕೆ ರಾಜೀನಾಮೆ ಕೊಡಬಹುದು. ರಾಜೀನಾಮೆ ಕೊಡಬೇಕಾದಾಗ ರಾಜೀನಾಮೆಯನ್ನು ಬರೆಹದಲ್ಲಿ ಸದಸ್ಯನ ಸಹಿಯೊಂದಿಗೆ ಪ್ರೆಸಿಡೆಂಟರನ್ನುದ್ದೇಶಿಸಿ ಬರೆದ ಪತ್ರದ ಮುಖಾಂತರ ಕೊಡಬೇಕು. ಅಂದರೆ ಆ ಬಗ್ಗೆ ದಾಖಲೆ ಬೇಕು. ಅಲ್ಲದೆ ಪತ್ರವು ಪ್ರೆಸಿಡೆಂಟರಿಗೆ ಉದ್ದೇಶಿಸಿ ಬರೆದಿದ್ದರೆ ಮಾತ್ರ ಅದು ಸರಿಯಾದ ಪತ್ರವು. ಅದಕ್ಕೆ ಸದಸ್ಯನ ಸಹಿ ಇರಬೇಕು. ಈ ರಾಜೀನಾಮೆಯು ಕೊಟ್ಟು ಪೂರ್ತಿ ೧೫ ದಿನಗಳು ಮುಗಿದ ನಂತರ ಅದು ಕಾರ್ಯಕಾರಿಯಾಗುವುದು. ಆ ೧೫ ದಿನ ಮುಗಿವ ಮೊದಲೇ ಆ ಸದಸ್ಯನು ಮತ್ತೆ ಪ್ರೆಸಿಡೆಂಟರನ್ನುದ್ದೇಶಿಸಿ ಪತ್ರ ಬರೆದು ಅದಕ್ಕೆ ಸಹಿಮಾಡಿ ರಾಜೀನಾಮೆಯನ್ನು ಹಿಂದೆ ತೆಗೆದುಕೊಂಡರೆ, ಆ ರಾಜೀನಾಮೆಯು ಕಾರ್ಯಕಾರಿ ಯಾಗದು. ಹೀಗೆ ಆ ಕಾಲಾವಧಿಯಲ್ಲಿ ಹಿಂದೆ ತೆಗೆದುಕೊಳ್ಳದಿದ್ದರೆ, ರಾಜೀನಾಮೆ ಕಾರ್ಯಕಾರಿಯಾಗಿ ಅವನ ಸ್ಥಳವು ಖಾಲಿ ಆಗತಕ್ಕದ್ದು. ದುಡುಕಿನಿಂದ ಕಾರ್ಯ ಮಾಡಿದವರಿಗೆ ಪುನಃ ವಿಚಾರ ಮಾಡಲು ೧೫ ದಿನಗಳ ಅವಧಿ ಇದೆ.

**೧೧೧. ದುರ್ವರ್ತನೆಗಾಗಿ ಸದಸ್ಯರನ್ನು ತೆಗೆದು ಹಾಕುವುದು**

ತಾಲೂಕ ಬೋರ್ಡದ ಸದಸ್ಯನನ್ನು ತೆಗೆದು ಹಾಕಬೇಕೆಂದು ಶಿಫಾರಸು ಮಾಡುವಂತಹ ತಾಲೂಕ ಬೋರ್ಡದ ಠರಾವು, ಬೋರ್ಡದ ಒಟ್ಟು ಸದಸ್ಯ ಸಂಖ್ಯೆಯ ಎರಡು ಮೂರಾಂಶಕ್ಕಿಂತ ಕಡಿಮೆಯಲ್ಲದಷ್ಟು ಬಹುಮತದಿಂದ ಸ್ವೀಕರಿಸಲ್ಪಟ್ಟ ಮೇಲೆ, ಸರಕಾರವು ಅಂತಹ ಸದಸ್ಯನಿಗೆ ತನ್ನ ವಾದವನ್ನು ಮಂಡಿಸಲು ಅವಕಾಶವನ್ನು ಮಾಡಿಕೊಟ್ಟು, ಮತ್ತು ತನಗೆ ಅವಶ್ಯಕವೆಂದು ಕಂಡು ಬಂದ ವಿಚಾರಣೆಯನ್ನು ನಡೆಸಿದ ನಂತರ, ಅಂತಹ ಸದಸ್ಯನು, ಕರ್ತವ್ಯಗಳನ್ನು ನಿರ್ವಹಿಸುವುದರಲ್ಲಿ ದುರ್ವರ್ತನೆಯ ಅಪರಾಧಿಯಾಗಿದ್ದಾನೆಂದು, ಇಲ್ಲವೆ ಯಾವುದೇ ಅವಮಾನಕಾರಕ ವರ್ತನೆಯ ಅಪರಾಧಿಯಾಗಿದ್ದಾನೆಂದು, ಇಲ್ಲವೆ ಬೋರ್ಡದ ಸದಸ್ಯನೆಂದು ಕರ್ತವ್ಯ ಮಾಡಲು ಅಸಮರ್ಥನಾಗಿದ್ದಾನೆಂದು ಸರಕಾರದ ಅಭಿಪ್ರಾಯವಾದರೆ ಸರಕಾರವು ಹುಕುಮಿನ ಮೂಲಕ ಇಂತಹ ಸದಸ್ಯರನ್ನು ತೆಗೆದು ಹಾಕಬಹುದು.

**ವಿವೇಚನೆ**

ಸದಸ್ಯನು ದುರ್ವರ್ತನೆ ಮಾಡಿದರೆ ತೆಗೆದು ಹಾಕುವ ಬಗ್ಗೆ ಕ್ರಮವನ್ನು ಇಲ್ಲಿ ಹೇಳಲಾಗಿದೆ. ಸದಸ್ಯನು ದುರ್ವರ್ತನ ಮಾಡಿರಬೇಕು; ಅದಕ್ಕಾಗಿ ತಾಲೂಕ ಬೋರ್ಡು ಒಂದು ಠರಾವನ್ನು ಪಾಸು ಮಾಡಿರಬೇಕು. ಈ ಠರಾವು ಸದಸ್ಯನನ್ನು ತೆಗೆದು ಹಾಕುವ ಬಗ್ಗೆ ಶಿಫಾರಸು ಮಾಡಿರಬೇಕು. ಮತ್ತು ಈ ಠರಾವು ಒಟ್ಟು

ತಾಲೂಕ ಬೋರ್ಡದ ಸದಸ್ಯರ ಸಂಖ್ಯೆಯಲ್ಲಿಯ ೨/೩ ರ ಕಿಂತ ಕಡಿಮೆ ಇಲ್ಲ ದಷ್ಟು ಸದಸ್ಯರು ಅನುಕೂಲ ಮತ ಹಾಕಿ ಬಹುಮತ ತೋರಿರಬೇಕು. ಈ ಠರಾವನ್ನು ಸರಕಾರಕ್ಕೆ ಕಳಿಸಬೇಕು. ಅಂದಾಗ ತಾಲೂಕ ಬೋರ್ಡು ತೆಗೆದು ಕೊಳ್ಳುವ ಕ್ರಮ ಆವಂತೆ. ಆಮೇಲೆ ಸರಕಾರವು ಆ ಸಂಬಂಧಪಟ್ಟ ಸದಸ್ಯನಿಗೆ ಅವನು ಮಂಡಿಸಬಹುದಾದ ವಾದವನ್ನು ಮಂಡಿಸಲು ಅವಕಾಶ ಕಲ್ಪಿಸಿ ಕೊಡ ಬೇಕು. ಅಲ್ಲದೆ ಸರಕಾರಕ್ಕೆ ತನಗೆ ಆವಶ್ಯಕ ಕಂಡಂತೆ, ಸರಕಾರವು ವಿಚಾರಣೆ ನಡಸಿ, ಇಷ್ಟೆಲ್ಲ ಆದ ಮೇಲೆ ಆ ಸದಸ್ಯನು ದುರ್ವರ್ತನೆ ಮಾಡಿದ್ದಾನೆಂದು ಸರ ಕಾರದ ಅಭಿಪ್ರಾಯವಾದಾಗ ಮಾತ್ರ ಸರಕಾರವು ಆ ಸದಸ್ಯನನ್ನು ತೆಗೆದು ಹಾಕುವ ಬಗ್ಗೆ ಹುಕುಮು ಮಾಡಬಹುದು. ಮತ್ತು ಅವನನ್ನು ತೆಗೆದು ಹಾಕ ಬಹುದು. ಅಂದರೆ ಜನರ ಮತದಿಂದ ಚುನಾಯಿತನಾದ ವ್ಯಕ್ತಿಯನ್ನು ಸದಸ್ಯತ್ವ ದಿಂದ ತೆಗೆದು ಹಾಕಬೇಕಾದರೆ ಆವಶ್ಯಕ ಕ್ರಮ ಕೈಕೊಳ್ಳಬೇಕಾಗುವುದು. ಜನಾಭಿಪ್ರಾಯವನ್ನು ಅಲ್ಲಗಳೆಯಲು ಬೇಕಾಗುವ ಎಲ್ಲ ಆವಶ್ಯಕ ವಿಚಾರಣೆ ಸರಕಾರವು ಮಾಡಬೇಕು ಎಂದು ಸೂಚಿಸಿ ಚುನಾವಣೆಯ ಮಹತ್ವವನ್ನು ಎತ್ತಿ ಹಿಡಿಯಲಾಗಿದೆ.

## ೧೧೨. ನೈಮಿತ್ತಿಕವಾಗಿ ತೆರವಾದ ಸ್ಥಳಗಳನ್ನು ತುಂಬುವುದು ಹೇಗೆ

ಅವನ ಅಧಿಕಾರ ಕಾಲಾವಧಿಯು ಮುಗಿಯುವ ಮುಂಚಿತವಾಗಿ ತಾಲೂಕ ಬೋರ್ಡದ ಸದಸ್ಯನ ಸ್ಥಳವು ಮರಣ, ರಾಜೀನಾಮೆ, ಅನರ್ಹತೆ, ಇಲ್ಲವೆ ತೆಗೆದು ಹಾಕಲ್ಪಡುವುದು ಈ ಕಾರಣದಿಂದ ಇಲ್ಲವೆ ಸದಸ್ಯನು ಕಾರ್ಯಮಾಡಲು ಅಸಮರ್ಥನಾದನು ಎಂಬ ಕಾರಣದಿಂದ ಸ್ಥಳವು ಖಾಲಿಯಾದ ಸಂದರ್ಭದಲ್ಲಿ ಆ ಸ್ಥಳವು ಆ ಸ್ಥಳಕ್ಕಾಗಿ ಚುನಾವಣೆಯಾದ ಒಬ್ಬ ವ್ಯಕ್ತಿಯಿಂದ, ಅನುಕೂಲವಾದಷ್ಟು ಬೇಗ ತುಂಬಲ್ಪಡಬೇಕು; ಆ ಸ್ಥಳವು ಖಾಲೀ ಆಗದೆ ಇದ್ದರೆ ಆ ಸದಸ್ಯನು ಎಷ್ಟು ಕಾಲದ ವರೆಗೆ ಉಳಿಯುತ್ತಿದ್ದನೋ ಅಷ್ಟು ಕಾಲಾವಧಿಯ ವರೆಗೆ ಮಾತ್ರ ಹೀಗೆ ಚುನಾಯಿತನಾದವನು ಯಾರ ಸ್ಥಳದಲ್ಲಿ ಚುನಾಯಿತನಾಗಿರುವನೋ ಅವನು ಅಧಿಕಾರ ಪದದಲ್ಲಿ ಇರತಕ್ಕದ್ದು.

### ವಿವೇಚನೆ

ಸದಸ್ಯನೊಬ್ಬನ ಸ್ಥಳವು ಖಾಲೀಯಾದರೆ ಏನು ಮಾಡಬೇಕು? ಸ್ಥಳವು ಖಾಲಿ ಯಾಗುವುದು ಅನೇಕ ಕಾರಣಗಳಿಂದ ಮರಣ, ಅನರ್ಹತೆ, ರಾಜೀನಾಮೆ, ತೆಗೆದು ಹಾಕುವಿಕೆ, ಇಲ್ಲವೆ ಕಾರ್ಯ ಮಾಡುವ ಅಸಮರ್ಥತೆ ಇದರಿಂದ ಸ್ಥಳವು ಖಾಲಿ ಆಗಬಹುದು. ಖಾಲೀ ಆದ ಸ್ಥಳವು ಚುನಾವಣೆಯಿಂದ ಆದಷ್ಟು ಬೇಗ ತುಂಬ ಲ್ಪಡತಕ್ಕದ್ದು. ಯಾವ ಸ್ಥಳಕ್ಕೆ ಹೀಗೆ ಚುನಾವಣೆ ನಡೆಯುವುದೋ ಆ ಸ್ಥಳದ ಸದಸ್ಯನು ಖಾಲೀ ಮಾಡಿದದೆ ಇದ್ದರೆ, ಎಷ್ಟು ಕಾಲಾವಧಿಯ ವರೆಗೆ ಮುಂದೆ

ಸದಸ್ಯನಾಗಿ-ಅಂದರೆ-ಅವನ ಅಧಿಕಾರ ಕಾಲಾವಧಿಯ ವರೆಗೆ-ಉಳಿಯುತ್ತಿದ್ದನೋ ಅಷ್ಟೇ ಕಾಲಾವಧಿಯ ವರೆಗೆ ಈ ಹೊಸದಾಗಿ ಅವನ ಸ್ಥಳಕ್ಕೆ ಚುನಾಯಿತನಾಗಿ ಬಂದ ಸದಸ್ಯನು ಅಧಿಕಾರಪದದಲ್ಲಿ ಇರಬೇಕು. ಅಂದರೆ ಸದಸ್ಯನ ಅಧಿಕಾರ ಕಾಲಾವಧಿ ಸಾಮಾನ್ಯವಾಗಿ ನಾಲ್ಕು ವರುಷ ಎಂಬುವುದು ಈ ಉಪಚುನಾವಣೆಯ ಸದಸ್ಯನಿಗೆ ಅನ್ವಯಿಸುವುದಿಲ್ಲ ಎಂದು ಹೇಳಿದ ಹಾಗಾಯಿತು.

## ೧೧೩. ಅಧ್ಯಕ್ಷ ಹಾಗೂ ಉಪಾಧ್ಯಕ್ಷರ ಚುನಾವಣೆ ಮತ್ತು ಅವರ ಅಧಿಕಾರ ಕಾಲಾವಧಿ

(೧) ಪ್ರತಿಯೊಂದು ತಾಲೂಕ ಬೋರ್ಡು, ಸಾಧ್ಯವಾದಷ್ಟು ಬೇಗನೆ, ಇಬ್ಬರು ಸದಸ್ಯರನ್ನು ಅನುಕ್ರಮವಾಗಿ, ತಾಲೂಕ ಬೋರ್ಡದ ಅಧ್ಯಕ್ಷ (ಪ್ರೆಸಿಡೆಂಟ) ಮತ್ತು ಉಪಾಧ್ಯಕ್ಷ (ವಾಯಿಸ್ ಪ್ರೆಸಿಡೆಂಟ) ಎಂದು ಆರಿಸತಕ್ಕದ್ದು. ಮತ್ತು ಅಧ್ಯಕ್ಷ ಇಲ್ಲವೆ ಉಪಾಧ್ಯಕ್ಷನ ಅಧಿಕಾರ ಸ್ಥಳವು, ಅವನ ಮರಣ, ರಾಜೀನಾಮೆ, ತೆಗೆದುಹಾಕಲ್ಪಡುವುದು ಇಲ್ಲವೆ ಬೇರೆ ಕಾರಣಗಳಿಂದ ಖಾಲಿಯಾದಾಗಲೆಲ್ಲ, ಮತ್ತೊಬ್ಬ ಸದಸ್ಯನನ್ನು, ಸಂದರ್ಭಾನುಸಾರವಾಗಿ, ಅಧ್ಯಕ್ಷ ಇಲ್ಲವೆ ಉಪಾಧ್ಯಕ್ಷನೆಂದು ಆರಿಸತಕ್ಕದ್ದು.

ಆದರೆ, ಅವನ ಅಧಿಕಾರ ಕಾಲಾವಧಿಯು ಮುಗಿದುಹೋಗಿದ್ದರೂ ಅಧ್ಯಕ್ಷನು ಮುಂದಿನ ಅಧ್ಯಕ್ಷನ ಚುನಾವಣೆ ಯಾಗುವ ತನಕ ಅಧಿಕಾರ ಪದದಲ್ಲಿ ಮುಂದು ವರಿಯತಕ್ಕದ್ದು.

(೨) ತಾಲೂಕ ಬೋರ್ಡದ ಅಧ್ಯಕ್ಷನ ಇಲ್ಲವೆ ಉಪಾಧ್ಯಕ್ಷನ ಚುನಾವಣೆಯು ಮತ್ತು ಆ ಅಧಿಕಾರ ಸ್ಥಳಗಳನ್ನು ತುಂಬುವುದು ಮತ್ತು ಇಂತಹ ಚುನಾವಣೆಯ ಸಂಬಂಧವಾಗಿದ್ದ ತಂಟೆಗಳ ನಿರ್ಣಯವು ಗೊತ್ತು ಮಾಡಬಹುದಾದಂತಹ ನಿಯಮಗಳ ಅನುಸಾರವಾಗಿ ಇರತಕ್ಕದ್ದು.

ಆದರೆ, ಇಂತಹ ಚುನಾವಣೆಯ ತಂಟೆಗಳನ್ನು ನಿರ್ಣಯಿಸುವ ಅಧಿಕಾರಿಯು ಗೊತ್ತು ಮಾಡಬಹುದಾದಂತಹ ನ್ಯಾಯಾಧಿಕಾರಿ ಇರತಕ್ಕದ್ದು.

(೩) ಈ ಕಾಯಿದೆಯಲ್ಲಿ ಬೇರೆಯಾಗಿ ಅನುಕೂಲ ಮಾಡಿದ ಹೊರತು ಅಧ್ಯಕ್ಷ ಮತ್ತು ಉಪಾಧ್ಯಕ್ಷ ಇವರು ತಾಲೂಕ ಬೋರ್ಡದ ಅಧಿಕಾರ ಕಾಲಾವಧಿಯ ವರೆಗೆ ಅಧಿಕಾರ ಪದದಲ್ಲಿ ಇರತಕ್ಕದ್ದು.

### ವಿವೇಚನೆ

ತಾಲೂಕ ಬೋರ್ಡದ ಸದಸ್ಯರಲ್ಲಿಂದಲೇ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಆಯ್ಕೆ ನಡೆಯಬೇಕು ಎಂದು ಹೇಳಿದ ಮೇಲೆ ಚುನಾಯಿತ ಸದಸ್ಯನೇ ಅಧ್ಯಕ್ಷ ಇಲ್ಲವೆ ಉಪಾಧ್ಯಕ್ಷನಾಗಬೇಕು ಎಂದು ಹೇಳಿದ ಹಾಗಾಯಿತು. ತಾಲೂಕ ಬೋರ್ಡು ಚುನಾಯಿತವಾದ ಮೇಲೆ ಆದಷ್ಟು ಬೇಗ ಅಧ್ಯಕ್ಷ ಹಾಗೂ ಉಪಾಧ್ಯಕ್ಷ

ಎಂದು ಇಬ್ಬರು ಸದಸ್ಯರ ಚುನಾವಣೆ ನಡೆಯಬೇಕು. ಇವರಲ್ಲಿ ಯಾರಾದರೂ ಮರಣ, ರಾಜೀನಾಮೆ ತೆಗೆದು ಹಾಕುವುದು ಇಲ್ಲವೆ ಬೇರೆ ಕಾರಣದಿಂದ ಅಧಿಕಾರ ಸ್ಥಳವನ್ನು ಖಾಲಿ ಮಾಡಿದರೆ, ಆ ಸ್ಥಳಕ್ಕೆ ಮತ್ತೆ ಚುನಾವಣೆ ನಡೆದು ಆರಿಸಲ್ಪಡಬೇಕು. ತಾಲೂಕ ಬೋರ್ಡದ ಅಧಿಕಾರ ಕಾಲಾವಧಿಯು ನಾಲ್ಕು ವರುಷ ಸಾಮಾನ್ಯವಾಗಿರುವುದು. ಈ ಅವಧಿಯಲ್ಲಿ ಸ್ಥಳವು ಖಾಲಿ ಆದಾಗಲೆಲ್ಲ ಅಧ್ಯಕ್ಷನ ಇಲ್ಲವೆ ಉಪಾಧ್ಯಕ್ಷನ ಚುನಾವಣೆ ನಡೆಯಲೇಬೇಕು.

ಸಾಮಾನ್ಯವಾಗಿ ಸದಸ್ಯನ ಅಧಿಕಾರ ಕಾಲಾವಧಿಯು ತಾಲೂಕ ಬೋರ್ಡದ ಅಧಿಕಾರ ಕಾಲಾವಧಿಯು. ಆದರೆ ಈ ಮಾತು ಅಧ್ಯಕ್ಷನಿಗೆ ಅನ್ವಯಿಸುವುದಿಲ್ಲ. ಮುಂದಿನ ತಾಲೂಕ ಬೋರ್ಡ ಚುನಾಯಿತವಾಗಿ ಹೊಸ ಅಧ್ಯಕ್ಷನು ಆರಿಸಲ್ಪಡುವ ತನಕ ಈ ಅಧ್ಯಕ್ಷನು ಅಧಿಕಾರ ಪದವಲ್ಲಿ ಮುಂದುವರೆಯತಕ್ಕದ್ದು. ಇದೇ ತಾಲೂಕ ಬೋರ್ಡದ ನಿರಂತರತ್ವವನ್ನು ಕಾಯುವ ಸಾಧನ.

ಅಧ್ಯಕ್ಷ-ಉಪಾಧ್ಯಕ್ಷರ ಚುನಾವಣೆಯು ತಾಲೂಕ ಬೋರ್ಡದಲ್ಲಿ ಹೇಗೆ ನಡೆಯಬೇಕು, ಖಾಲಿ ಆದ ಸ್ಥಳಗಳು ಹೇಗೆ ತುಂಬಲ್ಪಡಬೇಕು ಇದರ ಬಗ್ಗೆ ನಿಯಮಗಳು ಅವೆ. ಅದರ ಅನುಸಾರವಾಗಿ ನಡೆಯಬೇಕು. ಅದರಂತೆ ಈ ಚುನಾವಣೆಯ ಬಗ್ಗೆ ಉಂಟಾದ ತಂಟೆಗಳ ನಿರ್ಣಯವೂ ನಿಯಮಗಳ ಅನುಸಾರವಾಗಿ ನಡೆಯಬೇಕು. ಈ ತಂಟೆ ನಿರ್ಣಯ ಮಾಡುವ ನ್ಯಾಯಾಧಿಕಾರಿ ಯಾರು ಎಂಬುದು ನಿಯಮಗಳು ಹೇಳುವುವು. ಸಾಧಾರಣ ಚುನಾವಣೆಯ ಬಗ್ಗೆ ಮುನಸೀಫನು ನಿರ್ಣಯದ ಅಧಿಕಾರಿ ಎಂದು ಹೇಳಿದ್ದರೂ ಈ ಬಗ್ಗೆ ಪ್ರತ್ಯೇಕ ವ್ಯವಸ್ಥೆ ಮಾಡಿದಂತಿದೆ ಎಂಬುದನ್ನು ಗಮನಿಸಬೇಕು.

## ೧೧೪. ಅಧ್ಯಕ್ಷ ಹಾಗೂ ಉಪಾಧ್ಯಕ್ಷರ ರಾಜೀನಾಮೆ ಇಲ್ಲವೆ ತೆಗೆದು ಹಾಕುವಿಕೆ ಮತ್ತು ಅಧ್ಯಕ್ಷ ಹಾಗೂ ಉಪಾಧ್ಯಕ್ಷರಿಗೆ ರಜೆ ದಯಪಾಲಿಸುವುದು

(೧) ಅಧ್ಯಕ್ಷನೆಂದು ಇಲ್ಲವೆ ಉಪಾಧ್ಯಕ್ಷನೆಂದು ಅಧಿಕಾರಪದದಲ್ಲಿರುವ ಸದಸ್ಯನು ಭೂಕಂದಾಯದ ಪ್ರಾಂತದ ಅಸಿಸ್ಟಂಟ ಕಮಿಶನರನನ್ನುದ್ದೇಶಿಸಿ, ಬರೆಹದಲ್ಲಿ ತನ್ನ ಸಹಿಯೊಂದಿಗೆ ಇದ್ದ ಪತ್ರದ ಮುಖಾಂತರ ಯಾವುದೇ ಕಾಲಕ್ಕೆ ತನ್ನ ಅಧಿಕಾರಪದಕ್ಕೆ ರಾಜೀನಾಮೆ ಕೊಡಬಹುದು ಮತ್ತು ಇಂತಹ ರಾಜೀನಾಮೆಯ ತಾರೀಖಿನಿಂದ ಪೂರ್ತಿ ಹದಿನೈದು ದಿನಗಳು ಮುಗಿದ ನಂತರ ಆ ಹದಿನೈದು ದಿನಗಳ ಕಾಲಾವಧಿಯಲ್ಲಿ ಆ ಅಸಿಸ್ಟಂಟ ಕಮಿಶನರನನ್ನುದ್ದೇಶಿಸಿ, ಬರೆಹದಲ್ಲಿ ತನ್ನ ಸಹಿಯೊಂದಿಗೆ ಇದ್ದ ಪತ್ರದ ಮುಖಾಂತರ ಆ ರಾಜೀನಾಮೆಯನ್ನು ಹಿಂತೆಗೆದುಕೊಂಡ ಹೊರತು, ಆ ಅಧಿಕಾರ ಪದವು ಖಾಲೀಯಾಗತಕ್ಕದ್ದು.

(೨) ಪ್ರತಿಯೊಬ್ಬ ಅಧ್ಯಕ್ಷ ಇಲ್ಲವೆ ಉಪಾಧ್ಯಕ್ಷನು, ಅವನು ತಾಲೂಕ ಬೋರ್ಡದ ಸದಸ್ಯನಾಗಿ ಉಳಿಯಲಿಲ್ಲವಾದರೆ, ಅಧಿಕಾರಪದವನ್ನು ಖಾಲೀ ಮಾಡತಕ್ಕದ್ದು.

(೩) ಆ ಉದ್ದೇಶಕಾಗಿ ನಿರ್ದಿಷ್ಟವಾಗಿ ಕರೆದ ಸಭೆಯಲ್ಲಿ ತಾಲೂಕ ಬೋರ್ಡದ ಒಟ್ಟು ಸದಸ್ಯರ ಸಂಖ್ಯೆಯಲ್ಲಿ ಎರಡು ಮೂರಾಂಶದಕಿಂತ ಕಡಿಮೆ ಯಿಲ್ಲದಷ್ಟು ಸದಸ್ಯರ ಬಹುಮತದಿಂದ ಅವಿಶ್ವಾಸ ತೋರುವ ಠರಾವು ಪಾಸಾ ಗಿದ್ದರೆ, ಪ್ರತಿಯೊಬ್ಬ ಅಧ್ಯಕ್ಷನು ಮತ್ತು ಪ್ರತಿಯೊಬ್ಬ ಉಪಾಧ್ಯಕ್ಷನು ಅಧಿಕಾರ ಪದದಿಂದ ಸರಕಾರದಿಂದ ತೆಗೆದುಹಾಕಲ್ಪಡತಕ್ಕದ್ದು.

ಆದರೆ, ಠರಾವು ಪಾಸಾದ ತಾರೀಖಿನಿಂದ ಅರುವತ್ತು ದಿವಸಗಳಲ್ಲಿ ಸರಕಾರ ದಿಂದ ಅವನನ್ನು ತೆಗೆದುಹಾಕುವ ಬಗ್ಗೆ ಯಾವುದೇ ಹುಕುಮು ಮಾಡಲ್ಪಡದಿದ್ದರೆ, ಆ ಕಾಲಾವಧಿ ಮುಗಿದ ನಂತರ ಅಧ್ಯಕ್ಷನು ಇಲ್ಲವೆ ಉಪಾಧ್ಯಕ್ಷನು ಅಧಿಕಾರ ಪದವನ್ನು ಖಾಲೀಮಾಡತಕ್ಕದ್ದು.

(೪) ತನ್ನ ಕರ್ತವ್ಯಗಳ ನಿರ್ವಹಣೆಯಲ್ಲಿ ದುರ್ವರ್ತನೆಗಾಗಿ, ಇಲ್ಲವೆ ಕರ್ತವ್ಯ ಮಾಡುವುದರಲ್ಲಿ ಅಸಮರ್ಥತೆ ಇಲ್ಲವೆ ಅಲಕ್ಷ್ಯಕ್ಕಾಗಿ, ಇಲ್ಲವೆ ತನ್ನ ಕರ್ತವ್ಯ ನಿರ್ವಹಣೆಯಲ್ಲಿ ಪದೇ ಪದೇ ಆಗುವ ದುರ್ಲಕ್ಷ್ಯಕ್ಕಾಗಿ, ಪ್ರತಿಯೊಬ್ಬ ಅಧ್ಯಕ್ಷನು ಮತ್ತು ಉಪಾಧ್ಯಕ್ಷನು ಅವನಿಗೆ ತನ್ನ ಪಕ್ಷ ಮಂಡಿಸಲು ಅವಕಾಶ ಮಾಡಿಕೊಟ್ಟ ನಂತರ ಅಧಿಕಾರ ಪದದಿಂದ ಸರಕಾರದಿಂದ ತೆಗೆದುಹಾಕಲ್ಪಡಲು ಪಾತ್ರನಾಗು ತ್ತಾನೆ ಮತ್ತು ಹೀಗೆ ತೆಗೆದು ಹಾಕಲ್ಪಟ್ಟ ಅಧ್ಯಕ್ಷ ಇಲ್ಲವೆ ಉಪಾಧ್ಯಕ್ಷನು ಅಂತಹ ತಾಲೂಕ ಬೋರ್ಡದ ಸದಸ್ಯರ ಅಧಿಕಾರ ಕಾಲಾವಧಿಯಲ್ಲಿ ಪುನಃ ಚುನಾಯಿತ ನಾಗಲು ಅರ್ಹನಾಗತಕ್ಕದ್ದಲ್ಲ. ದುರ್ವತನೆಗಾಗಿ ತೆಗೆದುಹಾಕಲ್ಪಟ್ಟ ಅಧ್ಯಕ್ಷ ಇಲ್ಲವೆ ಉಪಾಧ್ಯಕ್ಷನು ತಾಲೂಕ ಬೋರ್ಡದ ಸದಸ್ಯತ್ವದಿಂದಲೂ ತೆಗೆದು ಹಾಕಲ್ಪಡತಕ್ಕದ್ದು

(೫) ಅಧ್ಯಕ್ಷನೆಂದು ಇಲ್ಲವೆ ಉಪಾಧ್ಯಕ್ಷನೆಂದು ಕರ್ತವ್ಯ ಮಾಡಲು ಶಕ್ಯವಾಗದಂತಹ ರೀತಿಯಲ್ಲಿ ತಾಲೂಕದಿಂದ ಮೂರು ತಿಂಗಳಕಿಂತ ಹೆಚ್ಚು ಕಾಲಾವಧಿಯವರೆಗೆ ಗೈರಹಾಜರಿಯಲ್ಲಿರುವ ಪ್ರತಿಯೊಬ್ಬ ಅಧ್ಯಕ್ಷ ಇಲ್ಲವೆ ಉಪಾಧ್ಯ ಕ್ಷನು, ತಾಲೂಕ ಬೋರ್ಡದಿಂದ ಹಾಗೆ ಗೈರಹಾಜರಿಯಲ್ಲಿರಲು ರಜೆಯು ದಯ ಪಾಲಿಸಲ್ಪಟ್ಟ ಹೊರತು, ಸಂದರ್ಭಾನುಸಾರವಾಗಿ ಅವನು ಅಧ್ಯಕ್ಷನೆಂದು ಇಲ್ಲವೆ ಉಪಾಧ್ಯಕ್ಷನೆಂದು ಉಳಿಯತಕ್ಕದ್ದಲ್ಲ.

(೬) ಉಪಕಲಮು (೫) ರನ್ವಯವಾಗಿ ರಜೆಯು ಆರು ತಿಂಗಳಕಿಂತ ಹೆಚ್ಚಿನ ಕಾಲಾವಧಿಯ ವರೆಗೆ ದಯಪಾಲಿಸಲ್ಪಡತಕ್ಕದ್ದಲ್ಲ, ಮತ್ತು ಅಂತಹ ರಜೆಯು ಅಧ್ಯಕ್ಷ ಇಲ್ಲವೆ ಉಪಾಧ್ಯಕ್ಷನಿಗೆ ದಯಪಾಲಿಸಲ್ಪಟ್ಟಾಗ, ಅಧ್ಯಕ್ಷನ ಗೈರ

ಹಾಜರಿಯಲ್ಲಿ ಅಧಿಕಾರ ನಿರ್ವಹಿಸುತ್ತಿರುವ ಇಲ್ಲವೆ ದಯುಪಾಲಿಸಲಾದ ರಜೆಯ ಮೂಲಕ ಗೈರ ಹಾಜರಿಯಲ್ಲಿದ್ದ ಉಪಾಧ್ಯಕ್ಷನ ಎಲ್ಲ ಕರ್ತವ್ಯಗಳನ್ನು ಮಾಡಲು ಮತ್ತು ಅಧಿಕಾರ ನಡೆಸಲು ತನ್ನ ಸದಸ್ಯರಲ್ಲಿ ಒಬ್ಬನನ್ನು ತಾಲೂಕ ಬೋರ್ಡು ಚುನಾಯಿಸತಕ್ಕದ್ದು.

**ವಿವೇಚನೆ**

ಅಧ್ಯಕ್ಷ ಇಲ್ಲವೆ ಉಪಾಧ್ಯಕ್ಷ ಸ್ಥಾನದಲ್ಲಿದ್ದ ಸದಸ್ಯನು ರಾಜೀನಾಮೆ ಕೊಡಬಹುದು. ಅವನು ರಾಜೀನಾಮೆ ಕೊಡಬೇಕೆಂದು ಮನಸ್ಸು ಮಾಡಿದರೆ, ರಾಜೀನಾಮೆಯು ಬರೆಹದಲ್ಲಿದ್ದು ಅದಕ್ಕೆ ಆ ಸದಸ್ಯನ ಸಹಿಯು ಮಾಡಲ್ಪಟ್ಟಿರ-ಬೇಕು. ಅದು ಆ ಭಾಗದ ಭೂಕಂದಾಯದ ಪ್ರಾಂತದ ಅಸಿಸ್ಟಂಟ ಕಮಿಶನರನನ್ನು ಉದ್ದೇಶಿಸಿ ಬರೆಯಲ್ಪಟ್ಟಿರಬೇಕು. ರಾಜೀನಾಮೆಯ ತಾರೀಖಿನಿಂದ ಪೂರ್ತಿ ಹದಿನೈದು ದಿವಸಗಳ ನಂತರ ಅದು ಕಾರ್ಯಕಾರಿಯಾಗುವುದು. ಈ ಹದಿನೈದು ದಿವಸಗಳಲ್ಲಿ ಸದಸ್ಯನ ಮನಸ್ಸು ಬದಲಾಗಿ ರಾಜೀನಾಮೆ ಹಿಂದೆ ತೆಗೆದುಕೊಳ್ಳಬೇಕೆಂದು ಮಾಡಿದರೆ, ಅದೇ ಅಸಿಸ್ಟಂಟ ಕಮಿಶನರನನ್ನುದ್ದೇಶಿಸಿ ಪತ್ರ ಬರೆದು ಅದಕ್ಕೆ ಸಹಿಮಾಡಿ, ತನ್ನ ರಾಜೀನಾಮೆಯನ್ನು ಹಿಂತೆಗೆದುಕೊಳ್ಳಬೇಕು. ಒಂದು ವೇಳೆ ಈ ಹದಿನೈದು ದಿವಸಗಳಲ್ಲಿ ಹಾಗೆ ಹಿಂತೆಗೆದುಕೊಳ್ಳದಿದ್ದರೆ ರಾಜೀನಾಮೆಯು ಕಾರ್ಯಕಾರಿಯಾಗುವುದು. ಸದಸ್ಯನ ಸ್ಥಳವು ಖಾಲಿ ಆಗುವುದು. ಅಧ್ಯಕ್ಷನು ಇಲ್ಲವೆ ಉಪಾಧ್ಯಕ್ಷನು ಮೂಲತಃ ಸದಸ್ಯನ ಗಿರುವುದರಿಂದ ಅವನು ಸದಸ್ಯತ್ವ ಕಳೆದುಕೊಂಡರೆ ಅಧಿಕಾರಪದವನ್ನು ಕಳೆದುಕೊಂಡಂತೆ. ಅಧ್ಯಕ್ಷ ಇಲ್ಲವೆ ಉಪಾಧ್ಯಕ್ಷನ ವಿರುದ್ಧ ಅವಿಶ್ವಾಸದ ಠರಾವು ತಾಲೂಕ ಬೋರ್ಡದ ಒಟ್ಟು ಸದಸ್ಯರ ೩೨ ದ ಕಿಂತ ಕಡಿಮೆ ಇಲ್ಲದಷ್ಟು ಬಹುಮತದಿಂದ ಪಾಸಾದರೆ ಸರಕಾರವು ಆ ಅಧ್ಯಕ್ಷನನ್ನು ಇಲ್ಲವೆ ಉಪಾಧ್ಯಕ್ಷನನ್ನು ಅಧಿಕಾರಪದದಿಂದ ತೆಗೆದುಹಾಕತಕ್ಕದ್ದು. ಆದರೆ ಆ ಠರಾವು ಯಾವ ಸಭೆಯಲ್ಲಿ ಪಾಸಾಗುವುದೋ ಆ ಸಭೆ, ಆ ಉದ್ದೇಶಕ್ಕಾಗಿಯೇ ನಿರ್ದಿಷ್ಟವಾಗಿ ಕರೆಯಲ್ಪಟ್ಟಿರಬೇಕು. ಅಂದರೆ ನೋಟೀಸಿನಲ್ಲಿ ಅವಿಶ್ವಾಸದ ಠರಾವಿನ ಬಗ್ಗೆ ಸೂಚನೆ ಇರತಕ್ಕದ್ದು. ಠರಾವು ಪಾಸಾದ ೬೦ ದಿನಗಳಲ್ಲಿ ಸರಕಾರವು ಹುಕುಮು ಮಾಡಿ ತೆಗೆದುಹಾಕಬೇಕು. ಆ ಅರವತ್ತು ದಿವಸಗಳಲ್ಲಿ ಸರಕಾರವು ಅಂತಹ ಹುಕುಮು ಮಾಡದಿದ್ದರೆ, ಆ ಅರವತ್ತು ದಿವಸ ಮುಗಿದ ನಂತರ ಆ ಅಧ್ಯಕ್ಷ ಇಲ್ಲವೆ ಉಪಾಧ್ಯಕ್ಷನು ತಾನೇ ತನ್ನ ಅಧಿಕಾರ ಪದವನ್ನು ಖಾಲೀ ಮಾಡತಕ್ಕದ್ದು. ಅಂದರೆ ಅವಿಶ್ವಾಸದ ಠರಾವು ಪಾಸಾದ ಮೇಲೆ ಆ ವ್ಯಕ್ತಿಯು ಅಧಿಕಾರ ಪದದಲ್ಲಿ ಉಳಿಯತಕ್ಕದ್ದಲ್ಲ. ಸರಕಾರವು ಹುಕುಮು ಮಾಡಿದರೆ ಆಗ ಅಧಿಕಾರ ಪದ ಖಾಲೀ ಮಾಡತಕ್ಕದ್ದು. ಅರವತ್ತು ದಿನಗಳಲ್ಲಿ ಸರಕಾರವು ಹುಕುಮು ಮಾಡದಿದ್ದರೆ ಆ ಅವಧಿ ಮುಗಿದ ಮೇಲೆ ಆ ವ್ಯಕ್ತಿಯ ಅಧಿಕಾರ ಪದ ಖಾಲೀ ಮಾಡತಕ್ಕದ್ದು.

ಅವಿಶ್ವಾಸದ ಠರಾವು ಇಲ್ಲದೆ ಇದ್ದಾಗ, ದುರ್ವರ್ತನೆ, ಅಲಕ್ಷ್ಯ-ದುರ್ಲಕ್ಷ್ಯ ಮುಂತಾದ ಕಾರಣದಿಂದ ಕರ್ತವ್ಯದಲ್ಲಿ ಚ್ಯುತಿ ಉಂಟಾದರೆ, ಅಂತಹ ಅಧ್ಯಕ್ಷ ಇಲ್ಲವೆ ಉಪಾಧ್ಯಕ್ಷನಿಗೆ ಸರಕಾರವು ಪಕ್ಷ ಮಂಡನೆಗೆ ಆಸ್ಪದ ಮಾಡಿಕೊಟ್ಟು ಅವನನ್ನು ಅಧಿಕಾರ ಪದದಿಂದ ತೆಗೆದು ಹಾಕಬಹುದು. ಹೀಗೆ ತೆಗೆದು ಹಾಕಿದ ಮೇಲೆ ಅವನು ಮುಂದೆ ಮತ್ತೆ ಅದೇ ತಾಲೂಕ ಬೋರ್ಡದ ಸದಸ್ಯನು ಇರುವ ತನಕ ಅಧ್ಯಕ್ಷ ಇಲ್ಲವೆ ಉಪಾಧ್ಯಕ್ಷನೆಂದು ಆರಿಸಲ್ಪಡತಕ್ಕದ್ದಲ್ಲ. ದುರ್ವರ್ತನೆಗಾಗಿ ಅಧಿಕಾರ ಪದ ಕಳೆದುಕೊಂಡವನು ಸದಸ್ಯತ್ವವನ್ನೂ ಕಳೆದುಕೊಳ್ಳುತ್ತಾನೆ.

ರಜೆಯಿಲ್ಲದೆ, ಅಧ್ಯಕ್ಷನಾಗಲೀ ಉಪಾಧ್ಯಕ್ಷನಾಗಲೀ ಕರ್ತವ್ಯ ಮಾಡಲು ಅಶಕ್ಯವಾಗುವ ಹಾಗೆ ಇರುವ ರೀತಿಯಲ್ಲಿ ತಾಲೂಕಿನಿಂದ ೩ ತಿಂಗಳಕಿಂತ ಹೆಚ್ಚು ಕಾಲ ಗೈರಹಾಜರಿಯಾಗಬಾರದು. ಆದರೆ, ಅವನು ಅಧ್ಯಕ್ಷನಾಗಿ ಇಲ್ಲವೆ ಉಪಾಧ್ಯಕ್ಷನಾಗಿ ಉಳಿಯಲಾರನು. ರಜೆಯು ಆರು ತಿಂಗಳಕಿಂತ ಹೆಚ್ಚು ಕೊಡಬಾರದು. ರಜೆಯ ಅವಧಿಯಲ್ಲಿ ಬೇರೆ ಸದಸ್ಯನನ್ನು ರಜೆಯ ಮೇಲೆ ಹೋದವನ ಸ್ಥಳಕ್ಕೆ ಆರಿಸಬೇಕು. ಅಧ್ಯಕ್ಷನು ರಜೆಯ ಮೇಲೆ ಹೋದರೆ, ಉಪಾಧ್ಯಕ್ಷನು ಅಧ್ಯಕ್ಷನ ಕೆಲಸ ನೋಡಿಕೊಳ್ಳುವನು. ಆಗ ಉಪಾಧ್ಯಕ್ಷನನ್ನು ಆರಿಸಬೇಕಾಗುವುದು. ಉಪಾಧ್ಯಕ್ಷನೇ ರಜೆಯ ಮೇಲೆ ಹೋದರೆ ಉಪಾ
ನನ್ನು ಆರಿಸಬೇಕಾಗುವುದು. ಅಂದರೆ ರಜೆಯ ಪ್ರಸಂಗ ಬಂದಾಗ ಉಪಾಧ್ಯಕ್ಷನನ್ನು ಆರಿಸುವ ಪ್ರಸಂಗ ಮಾತ್ರ ಬರುವುದು ಎಂಬುದನ್ನು ತಿಳಿಯಬೇಕು. ಹೀಗೆ ಸ್ಥಾನಕ್ಕೆ ಬಂದವರು ಅಧ್ಯಕ್ಷನ ಉಪಾಧ್ಯಕ್ಷನ ಎಲ್ಲ ಅಧಿಕಾರ-ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

## ಪ್ರಕರಣ : ೭ ವ್ಯವಹಾರ ನಡೆವಳಿಕೆ

### ೧೧೫. ಅಧ್ಯಕ್ಷನ ಅಧಿಕಾರಗಳು ಹಾಗೂ ಕರ್ತವ್ಯಗಳು

ತಾಲೂಕ ಬೋರ್ಡದ ಅಧ್ಯಕ್ಷನು—

(ಅ) ಬೋರ್ಡದ ಮತ್ತು ಅದರ ಎಲ್ಲ ಸ್ಥಾಯಿ ಸಮಿತಿಗಳ ಸಭೆಗಳಲ್ಲಿ ಅಧ್ಯಕ್ಷತೆ ವಹಿಸತಕ್ಕದ್ದು.

(ಬ) ಬೋರ್ಡದ ಆರ್ಥಿಕ ಹಾಗೂ ಕಾರ್ಯಕಾರಿ ಆಡಳಿತದ ಮೇಲೆ ಲಕ್ಷವಿಡತಕ್ಕದ್ದು. ಮತ್ತು ಸಾಮಾನ್ಯ ಮೇಲ್ವಿಚಾರಣೆ ಹಾಗೂ ನಿಯಂತ್ರಣ ಮಾಡತಕ್ಕದ್ದು.

(ಕ) ಬೋರ್ಡದ ಅನುಮತಿ ಬೇಕಾಗುವ ಎಲ್ಲ ಪ್ರಶ್ನೆಗಳನ್ನು ಬೋರ್ಡದ ಪರಿಶೀಲನೆಗೆ ಒಪ್ಪಿಸತಕ್ಕದ್ದು.

**ವಿವೇಚನೆ**

ತಾಲೂಕ ಬೋರ್ಡದಲ್ಲಿ ಅಧ್ಯಕ್ಷನು ಹಿರಿಯ ಅಧಿಕಾರಿ. ಅವನು ತಾಲೂಕ ಬೋರ್ಡದ ಸಭೆಗಳಲ್ಲಿ ಅಧ್ಯಕ್ಷತೆ ವಹಿಸುವ ಅಧಿಕಾರ ಅವನಿಗೆ ಇದೆ. ತಾಲೂಕ ಬೋರ್ಡದ ಎಲ್ಲ ಸ್ಥಾಯಿ ಸಮಿತಿಗಳ ಸಭೆಗಳಲ್ಲಿ ಅವನು ಅಧ್ಯಕ್ಷತೆ ವಹಿಸುವ ಅಧಿಕಾರವುಳ್ಳವನಾಗಿದ್ದಾನೆ. ತಾಲೂಕ ಬೋರ್ಡದ ಆರ್ಥಿಕ ಆಡಳಿತೆ ಮತ್ತು ಕಾರ್ಯಕಾರಿಕ ಆಡಳಿತೆ ಇವುಗಳ ಮೇಲೆ ಕಣ್ಣಿಡುವುದು ಮತ್ತು ಸಾಧಾರಣ ಮೇಲ್ವಿಚಾರಣೆ ಹಾಗೂ ನಿಯಂತ್ರಣ ನಡೆಸುವುದು ಅವನ ಕರ್ತವ್ಯವಾಗಿದೆ. ತಾನು ಮಾಡಬಹುದಾದ ಕೆಲಸದಲ್ಲಿ ಪರವಾನಗಿಗಾಗಿ ಕಾಯುವ ಕಾರಣವಿಲ್ಲ. ಆದರೆ ಯಾವುದಕ್ಕೆ ತಾಲೂಕ ಬೋರ್ಡವ ಅನುಮತಿ ಬೇಕಾಗುವುದೋ ಅಂತಹ ಪ್ರಶ್ನೆಗಳನ್ನು ಬೋರ್ಡಿಗೆ ಸಾದರ ಪಡಿಸಬೇಕು. ಸಾದರ ಪಡಿಸದೆ ತಾನೇ ಕಾರ್ಯ ಮಾಡುವ ಅಧಿಕಾರ ಅವನಿಗೆ ಇಲ್ಲ ಎಂದು ಇದರಿಂದ ಸೂಚಿತ ವಾಗುವುದು.

**೧೧೬. ಉಪಾಧ್ಯಕ್ಷನ ಅಧಿಕಾರ ಹಾಗೂ ಕರ್ತವ್ಯಗಳು**

ತಾಲೂಕ ಬೋರ್ಡವ ಉಪಾಧ್ಯಕ್ಷನು—

(ಅ) ಅಧ್ಯಕ್ಷನ ಗೈರ ಹಾಜರಿಯಲ್ಲಿ ಬೋರ್ಡದ ಸಭೆಗಳಲ್ಲಿ ಅಧ್ಯಕ್ಷತೆ ವಹಿಸತಕ್ಕದ್ದು.

(ಬ) ಅಧ್ಯಕ್ಷನು ಕಾಲ ಕಾಲಕ್ಕೆ ಅವನಿಗೆ ಒಪ್ಪಿಸಿಕೊಡಬಹುದಾದಂತಹ ಅಧ್ಯಕ್ಷನ ಅಧಿಕಾರಗಳನ್ನು ನಿರ್ವಹಿಸತಕ್ಕದ್ದು ಮತ್ತು ಕರ್ತವ್ಯಗಳನ್ನು ಮಾಡತಕ್ಕದ್ದು.

ಮತ್ತು

(ಕ) ಅಧ್ಯಕ್ಷನ ಚುನಾವಣೆ ಆಗುವ ತನಕ ಇಲ್ಲವೆ ಅಧ್ಯಕ್ಷನು ರಜೆಯ ಮೇಲೆ ಹೋದಾಗ ಅವನ ಗೈರ ಹಾಜರಿಯಲ್ಲಿ ಅಧ್ಯಕ್ಷನ ಅಧಿಕಾರಗಳನ್ನು ನಿರ್ವಹಿಸತಕ್ಕದ್ದು ಮತ್ತು ಕರ್ತವ್ಯಗಳನ್ನು ಮಾಡತಕ್ಕದ್ದು.

**ವಿವೇಚನೆ**

ಉಪಾಧ್ಯಕ್ಷನು ಅಧ್ಯಕ್ಷನ ನಂತರದ ಅಧಿಕಾರಿಯು. ಅಧ್ಯಕ್ಷನು ಗೈರ ಹಾಜರಿಯಲ್ಲಿರುವಾಗ ಅಧ್ಯಕ್ಷನ ಸ್ಥಾನದಲ್ಲಿ ನಿಂತು ಎಲ್ಲ ಅಧಿಕಾರಗಳನ್ನು ನಿರ್ವಹಿಸುವ, ಕರ್ತವ್ಯಗಳನ್ನು ಮಾಡುವ ಅಧಿಕಾರ ಅವನಿಗೆ ಇದೆ. ಇದಲ್ಲದೆ ಅಧ್ಯಕ್ಷನು ಒಪ್ಪಿಸಿಕೊಡುವ ಅವನ ಅಧಿಕಾರ- ಕರ್ತವ್ಯಗಳನ್ನು ನೋಡಿಕೊಳ್ಳ ಬೇಕಾದುದು ಅವನ ಕರ್ತವ್ಯ. ಅಧ್ಯಕ್ಷನ ಚುನಾವಣೆಯ ಪ್ರಸಂಗ ಬಂದರೆ, ಅಧ್ಯಕ್ಷನು ರಜೆಯ ಮೇಲೆ ಹೋಗಿದ್ದರೆ ಆಗ ಉಪಾಧ್ಯಕ್ಷನು ಅಧ್ಯಕ್ಷನ ಎಲ್ಲ ಅಧಿಕಾರ ಕರ್ತವ್ಯಗಳನ್ನು ನಡೆಸತಕ್ಕದ್ದು.

**೧೧೭. ತಾಲೂಕ ಬೋರ್ಡುಗಳ ಸಭೆಗಳು**

(೧) ತಾಲೂಕ ಬೋರ್ಡು ವ್ಯವಹಾರ ಸಾಗಿಸುವುದರ ಸಲುವಾಗಿ ತಾಲೂಕ ಬೋರ್ಡದ ಕಚೇರಿಯಲ್ಲಿ ಪ್ರತಿ ಎರಡು ತಿಂಗಳಿಗೆ ಒಮ್ಮೆ ಸಭೆಯನ್ನು (ಈ ಮುಂದೆ ಈ ಕಲಮಿನಲ್ಲಿ ಸಾದಾ ಸಭೆಯೆಂದು ಕರೆಯಲಾಗಿದೆ.) ನಡೆಸತಕ್ಕದ್ದು ಮತ್ತು ಈ ಕೆಳಗಿನ ಉಪಕಲಮುಗಳ ಶರತುಗಳಿಗಂಕಿತವಾಗಿ ಈ ಕಾಯಿದೆಗೆ ಇಲ್ಲವೆ ಅದರನ್ವಯವಾಗಿ ಮಾಡಲಾದ ನಿಯಮಗಳಿಗೆ ವಿಸಂಗತವಾಗದ ಹಾಗೆ, ತನ್ನ ಸಭೆಗಳ ದಿನ, ಗಂಟೆ, ನೋಟೀಸು, ಸಂಚಾಲನ, ಮತ್ತು ಮುಂದೂಡು ವಿಕೆಯ ಸಂಬಂಧವಾಗಿ ಮತ್ತು ಅದರಲ್ಲಿ ನಡೆಯಬೇಕಾದ ವ್ಯವಹಾರದ ಸಂಬಂಧ ವಾಗಿ ಕ್ರಮ-ನಿಯಮಗಳನ್ನು ಮಾಡತಕ್ಕದ್ದು.

(೨) (ಅ) ಮೊದಲು ಸಲ ರಚಿತವಾದ ಇಲ್ಲವೆ ಪುನಾರಚಿತವಾದ ನಂತರದ ಬೋರ್ಡದ ಮೊದಲ ಸಭೆಯ ತಾರೀಖು ಮುಖ್ಯ ಕಾರ್ಯಾಧಿಕಾರಿಯಿಂದ ಗೊತ್ತುಮಾಡಲ್ಪಡತಕ್ಕದ್ದು ಮತ್ತು ಭೂಕಂದಾಯದ ಪ್ರಾಂತದ ಅಧಿಕಾರಿಯಾಗಿ ರುವ ಅಸಿಸ್ಟಂಟ ಕಮಿಶನರನು ಅಂತಹ ಸಭೆಯ ಅಧ್ಯಕ್ಷತೆ ವಹಿಸತಕ್ಕದ್ದು ಮತ್ತು ಮುಂದಿನ ಒಂದೊಂದು ಸಭೆಯ ತಾರೀಖು ಅದರ ಹಿಂದಿನ ಬೋರ್ಡದ ಸಭೆಯ ಲ್ಲಿಯೆ ಗೊತ್ತುಮಾಡಲ್ಪಡತಕ್ಕದ್ದು. ಆದರೆ ಅಧ್ಯಕ್ಷನು, ಸಾಕಷ್ಟು ಸಬಲಕಾರಣ ಗಳಿಗಾಗಿ, ಸಭೆಯ ಆ ತಾರೀಖನ್ನು ಮುಂದಿನ ಯಾವುದೇ ತಾರೀಖಿಗೆ ಬದಲು ಮಾಡಬಹುದು. ತನಗೆ ಯೋಗ್ಯವೆಂದು ಕಂಡಾಗ ವಿಶೇಷ ಸಭೆಯನ್ನು ಕರೆಯ ಬಹುದು ಮತ್ತು ಒಟ್ಟು ಸದಸ್ಯರ ಸಂಖ್ಯೆಯ ಒಂದುನಾಲ್ಕಾಂಶದಕಿಂತ ಕಡಿಮೆ ಇಲ್ಲದಷ್ಟು ಸದಸ್ಯರು ಲಿಖಿತ ವಿನಂತಿಯನ್ನು ಮಾಡಿದಾಗ, ಅಂತಹ ವಿನಂತಿ ಬಂದ ಇಪ್ಪತ್ತೊಂದು ದಿವಸಗಳ ಒಳಗಿನ ತಾರೀಖಿಗೆ, ವಿಶೇಷ ಸಭೆಯನ್ನು ಕರೆಯತಕ್ಕದ್ದು. ಇಂತಹ ವಿನಂತಿಯು ಸಭೆಯನ್ನು ಯಾವ ಉದ್ದೇಶಕ್ಕಾಗಿ ಕರೆಯಬೇಕೆಂದು ಸೂಚಿ ಸಲಾಗಿರುವುದೋ ಅದನ್ನು ನಿರ್ದಿಷ್ಟಪಡಿಸತಕ್ಕದ್ದು.

(ಬ) ಇಂತಹ ಸಭೆಯ ವೇಳೆ ಮತ್ತು ಸಭೆಯು ಸೇರುವ ಸ್ಥಳವನ್ನು ಮತ್ತು ಅದರಲ್ಲಿ ನಡೆಯುವ ವ್ಯವಹಾರ ಇವುಗಳನ್ನು ನಿರ್ದಿಷ್ಟಪಡಿಸಿ ಸಾದಾ ಸಭೆಗಾಗಿ ಹತ್ತು ಪೂರ್ತಿಯಾದ ದಿವಸಗಳ ಮತ್ತು ವಿಶೇಷ ಸಭೆಗಾಗಿ ಏಳು ಪೂರ್ತಿಯಾದ ದಿವಸಗಳ ನೋಟೀಸು ಸದಸ್ಯರಿಗೆ ಮತ್ತು ಆ ಸಭೆಗೆ ಹಾಜರಿರಲು ಬಾಧ್ಯಸ್ಥರಾಗಿ ರುವ ರಾಜ್ಯದ ಶಾಸನ ಸಭೆಯ ಸದಸ್ಯರಿಗೆ ಮತ್ತು ರಾಜ್ಯದ ಶಾಸನ ಪರಿಷತ್ತಿನ ಸದಸ್ಯರಿಗೆ ಕಳಿಸಲ್ಪಡತಕ್ಕದ್ದು ಮತ್ತು ತಾಲೂಕ ಬೋರ್ಡದ ಕಚೇರಿಯಲ್ಲಿ ಅಂಟಿಸಲ್ಪಡತಕ್ಕದ್ದು. ವಿಶೇಷ ಸಭೆಯಾಗಿದ್ದ ಸಂದರ್ಭದಲ್ಲಿ ಇಂತಹ ನೋಟೀಸು ಆ ಸಭೆಗಾಗಿ ಮಾಡಿದ ಲಿಖಿತ ವಿನಂತಿಯಲ್ಲಿ ಕಾಣಿಸಿದ ಯಾವುದೇ ಠರಾವು ಇಲ್ಲವೆ ಸೂಚನೆಯನ್ನು ಒಳಗೊಂಡಿರತಕ್ಕದ್ದು.

(ಕ) ಬೋರ್ಡಿನ ಸಭೆಯ ವ್ಯವಹಾರವನ್ನು ಸಾಗಿಸುವುದಕ್ಕೆ ತಾಲೂಕ ಬೋರ್ಡಿನ ಒಟ್ಟು ಸದಸ್ಯ ಸಂಖ್ಯೆಯ ಒಂದು ಮೂರಾಂಶವು ಕಾರ್ಯಾವಶ್ಯಕ ಸಂಖ್ಯೆ (ಕೋರಂ) ಆಗಿರತಕ್ಕದ್ದು ಸಭೆಯು ಸೇರುವುದಕ್ಕೆ ಗೊತ್ತು ಮಾಡಿದ ವೇಳೆಗೆ, ಇಲ್ಲವೆ ಅನಂತರ ಅರ್ಧ ಗಂಟೆಯಲ್ಲಿ ಕಾರ್ಯಾವಶ್ಯಕ ಸಂಖ್ಯೆಯು ಹಾಜರಿರದಿದ್ದರೆ, ಅಧ್ಯಕ್ಷ ಸ್ಥಾನದಲ್ಲಿದ್ದ ಅಧಿಕಾರಿಯು ಆ ಸಭೆಯನ್ನು ಅವನು ಗೊತ್ತು ಮಾಡಬಹುದಾದ ಮುಂದಿನ ತಾರೀಖಿಗೆ ಅಂತಹ ವೇಳೆಗೆ ಮುಂದುವರೆಸ ತಕ್ಕದ್ದು ಸಭೆಯು ಸೇರಿ ನಡೆವ ಯಾವುದೇ ಕಾಲಕ್ಕೆ ಕಾರ್ಯಾವಶ್ಯಕ ಸಂಖ್ಯೆಯು ಇಲ್ಲವೆಂದು ಅವನ ಲಕ್ಷ್ಯಕ್ಕೆ ತಂದರೆ, ಅವನು ಆ ಸಭೆಯನ್ನು ಅದೇ ಬಗೆಯಾಗಿ ಮುಂದುವರೆಸತಕ್ಕದ್ದು. ಕಾರ್ಯಾವಶ್ಯಕ ಸಂಖ್ಯೆಯಿದ್ದು ಮುಂದು ವರೆವ ಸಭೆಯಲ್ಲಿ ಮೂಲ ಸಭೆಯಲ್ಲಿ ಬರಬಹುದಾಗಿದ್ದ ವಿಷಯ ವ್ಯವಹಾರವೇ ನಡೆಸಲ್ಪಡತಕ್ಕದ್ದು.

(ಡ) ಬೋರ್ಡಿನ ಎದುರು ನಡೆಯುತ್ತಿದ್ದ ಯಾವುದೇ ವಿಚಾರಣೆ ಇಲ್ಲವೆ ಚರ್ಚೆಯು ಏಕಾಂತದಲ್ಲಿ ನಡೆಯುವುದು ಯೋಗ್ಯವೆಂದು ಅಧ್ಯಕ್ಷಸ್ಥಾನದಲ್ಲಿದ್ದ ಅಧಿಕಾರಿಗೆ ಅನ್ನಿಸಿದ ಹೊರತು, ಪ್ರತಿಯೊಂದು ಸಭೆಯು ಸಾರ್ವಜನಿಕರಿಗೆ ಮುಕ್ತ ವಾಗಿರತಕ್ಕದ್ದು. ಮತ್ತು ಆ ಸಭೆಯ ಕಾರ್ಯಕಲಾಪಗಳಿಗೆ ಅಡ್ಡಿಮಾಡುವಂತಹ ಯಾವುದೇ ವ್ಯಕ್ತಿಯನ್ನು ಯಾವುದೇ ಕಾಲಕ್ಕೆ ಆ ಅಧಿಕಾರಿಯು ಹೊರಗೆ ಹಾಕಿಸಬಹುದು.

(ಇ) ಪ್ರತಿಯೊಂದು ಸಭೆಯು ಅಧ್ಯಕ್ಷನಿಂದ ಅಧ್ಯಕ್ಷಸ್ಥಾನ ವಹಿಸಲ್ಪಡ ತಕ್ಕದ್ದು ಇಲ್ಲವೆ ಅವನು ಗೈರಹಾಜರಿಯಾಗಿದ್ದರೆ, ಉಪಾಧ್ಯಕ್ಷನಿಂದ ಅಧ್ಯಕ್ಷತೆ ವಹಿಸಲ್ಪಡತಕ್ಕದ್ದು. ಮತ್ತು ಅಧ್ಯಕ್ಷ ಹಾಗು ಉಪಾಧ್ಯಕ್ಷ ಇಬ್ಬರೂ ಗೈರಹಾಜರಿ ಯಲ್ಲಿದ್ದರೆ ಇಲ್ಲವೆ ಅಧ್ಯಕ್ಷನು ಗೈರಹಾಜರಿ ಇದ್ದಾಗ ಮತ್ತು ಉಪಾಧ್ಯಕ್ಷನು ಇರದೆ ಇರುವಾಗ ಆ ಪ್ರಸಂಗಕ್ಕೆ ಸಭಾಪತಿಯಾಗಿ ಆ ಸಭೆಯು ಆರಿಸಬಹುದಾದಂತಹ ಸದಸ್ಯನಿಂದ ಅಧ್ಯಕ್ಷತೆ ವಹಿಸಲ್ಪಡತಕ್ಕದ್ದು.

(ಫ) ನಿರ್ದಿಷ್ಟವಾಗಿ ಅನುಕೂಲ ಮಾಡಿದ ಹೊರತು, ಎಲ್ಲ ಪ್ರಶ್ನೆಗಳು ಸಭೆಯಲ್ಲಿ ಹಾಜರಿದ್ದ ಹಾಗೂ ಮತದಾನ ಮಾಡುವ ಸದಸ್ಯರಲ್ಲಿಯ ಬಹುಮತ ದಿಂದ ನಿರ್ಣಯಿಸಲ್ಪಡತಕ್ಕದ್ದು. ಅಧ್ಯಕ್ಷ ಉಪಾಧ್ಯಕ್ಷ ಇಲ್ಲವೆ ಸಭಾಪತಿ, ಸಂದರ್ಭಾನುಸಾರವಾಗಿ, ಅವನು ತಾನು ಮತದಾನಮಾಡಬಾರದೆಂದು ಮಾಡಿದ್ದ ಹೊರತು, ಆ ಪ್ರಶ್ನೆಗೆ ಅನುಕೂಲ ಮತ್ತು ಪ್ರತಿಕೂಲ ಮತಗಳು ಎಷ್ಟು ಎಂದು ಸಾರಿಹೇಳುವ ಮೊದಲು, ತನ್ನ ಮತವನ್ನು ಕೊಡತಕ್ಕದ್ದು ಮತ್ತು ಮತಗಳು ಸಮಸಂಖ್ಯೆಯಲ್ಲಿ ಆದರೆ ಅವನು ತನ್ನ ಹೆಚ್ಚಿನ ಮತವನ್ನು ಕೊಡತಕ್ಕದ್ದು.

(ಗ) ಸಾರ್ವಜನಿಕರಿಗೆ ಸಾಮಾನ್ಯವಾಗಿ ಅನ್ವಯಿಸುವುದಲ್ಲದೆ, ಅವನಿಗೆ ಯಾವುದೇ ಪ್ರತ್ಯಕ್ಷ ಇಲ್ಲವೆ ಅಪ್ರತ್ಯಕ್ಷವಾಗಿ ಆರ್ಥಿಕ ಹಿತಾಸಕ್ತಿಇದ್ದರೆ, ಅಂತಹ ಯಾವುದೇ ಪ್ರಶ್ನೆಯು ಬೋರ್ಡದ ಸಭೆಯ ಎದುರು ಯಾವುದೇ ಕಮೀಟಿಯ ಎದುರು ವಿಚಾರಣೆಗೆ ಬಂದಾಗ ತಾಲೂಕಬೋರ್ಡದ ಯಾವುದೇ ಸದಸ್ಯನು ಅವರ ಬಗ್ಗೆ ಮತದಾನ ಮಾಡತಕ್ಕದ್ದಲ್ಲ ಇಲ್ಲವೆ ಚರ್ಚೆಯಲ್ಲಿ ಭಾಗವಹಿಸತಕ್ಕದ್ದಲ್ಲ.

(ಹ) ಸಭೆಯ ಅಧ್ಯಕ್ಷ ಸ್ಥಾನದಲ್ಲಿದ್ದ ಅಧಿಕಾರಿಗೆ ಇಂತಹ ಆರ್ಥಿಕ ಹಿತಾ ಸಕ್ತಿ ಚರ್ಚೆಗೆ ಬಂದ ಯಾವುದೇ ವಿಷಯದಲ್ಲಿ ಇದೆಯೆಂದು ಸಭೆಯಲ್ಲಿ ಹಾಜರಿದ್ದ ಯಾವುದೇ ಸದಸ್ಯನಿಂದ ನಂಬಲ್ಪಟ್ಟಿದ್ದರೆ, ಮತ್ತು ಆ ಬಗ್ಗೆ ಒಂದು ಠರಾವು ಸ್ವೀಕೃತವಾದರೆ, ಅಂತಹ ವಿಷಯದ ಚರ್ಚೆ ನಡೆದಾಗ ಸಭೆಗೆ ಆ ಅಧಿಕಾರಿಯು ಅಧ್ಯಕ್ಷಸ್ಥಾನವಹಿಸತಕ್ಕದ್ದಲ್ಲ, ಇಲ್ಲವೆ ಮತದಾನಮಾಡತಕ್ಕದ್ದಲ್ಲ, ಇಲ್ಲವೆ ಅದರಲ್ಲಿ ಭಾಗವಹಿಸತಕ್ಕದ್ದಲ್ಲ. ಇಂತಹ ಚರ್ಚೆ ನಡೆದಷ್ಟು ಕಾಲ ಸಭೆಯ ಅಧ್ಯಕ್ಷ ಸ್ಥಾನಕ್ಕೆ ಬೋರ್ಡದ ಯಾವುದೇ ಸದಸ್ಯನು ಆರಿಸಲ್ಪಡಬಹುದು.

(ಈ) ಅಂತಹ ಸಭೆಯನ್ನು ಕರೆಯುವ ನೋಟೀಸಿನಲ್ಲಿ ಬರೆದಿದ್ದ ಹೊರತು ಸಾದಾ ಸಭೆಯಲ್ಲಿ ಇಲ್ಲವೆ ವಿಶೇಷ ಸಭೆಯಾಗಿದ್ದ ಸದರ್ಭದಲ್ಲಿ, ಅಂತಹ ಸಭೆಗಾಗಿ ಕೊಡಲಾದ ಲಿಖಿತ ವಿನಂತಿಯಲ್ಲಿ ಬರೆದಿದ್ದ ಹೊರತು, ಅಧ್ಯಕ್ಷ ಸ್ಥಾನದಲ್ಲಿದ್ದ ಅಧಿಕಾರಿಯ ಪರವಾನಗಿ ಇದ್ದ ಹೊರತು,–ಈ ಪರವಾನಗಿಯು ಒಮ್ಮೆ ಪಾಸಾದ ಠರಾವನ್ನು ಪಾಸಾದ ತಾರೀಖಿನಿಂದ ಮೂರು ತಿಂಗಳ ಒಳಗೆ ತಿದ್ದುಪಡಿ ಮಾಡ ಬೇಕೆಂದು ಇಲ್ಲವೆ ರದ್ದತಿ ಮಾಡಬೇಕೆಂದು ಸೂಚನೆಯಾಗಿರುವ ಇಲ್ಲವೆ ಠರಾವು ಆಗಿರುವ ಸಂದರ್ಭದಲ್ಲಿ ಕೊಡಲ್ಪಡತ ಕ್ಕದ್ದಲ್ಲ—ಯಾವುದೇ ವ್ಯವಹಾರ ನಡೆ ಸಲ್ಪಡತಕ್ಕದ್ದಲ್ಲ. ಮತ್ತು ಯಾವುದೇ ಸೂಚನೆಯು ಚರ್ಚಿಸಲ್ಪಡತಕ್ಕದ್ದಲ್ಲ. ಇಂತಹ ಸಭೆಯಲ್ಲಿ ಯಾವುದೇ ವ್ಯವಹಾರ ಇಲ್ಲವೆ ಸೂಚನೆಯು ಯಾವ ಕ್ರಮ ದಲ್ಲಿ ಸಭೆಯ ಎದುರು ಬರಬೇಕೆಂಬುದು ಅಧ್ಯಕ್ಷ ಸ್ಥಾನದಲ್ಲಿದ್ದ ಅಧಿಕಾರಿಯಿಂದ ನಿರ್ಣಯಿಸಲ್ಪಡತಕ್ಕದ್ದು. ಅಂತಹ ವ್ಯವಹಾರದ ಯಾವುದೇ ವಿಶಿಷ್ಟ ವಿಷಯಕ್ಕೆ ಇಲ್ಲವೆ ಯಾವುದೇ ವಿಶಿಷ್ಟ ಸೂಚನೆಗೆ ಪ್ರಾಥಮಿಕತೆಯನ್ನು ಕೊಡಬೇಕೆಂದು ಯಾವುದೇ ಸದಸ್ಯನಿಂದ ಸೂಚಿತವಾದರೆ, ಆ ಸೂಚನೆಯನ್ನು ಸಭೆಯ ಮುಂದೆ ತರತಕ್ಕದ್ದು ಮತ್ತು ಆ ಸೂಚನೆಗೆ ಕೊಡಲ್ಪಟ್ಟ ಅನುಕೂಲ ಇಲ್ಲವೆ ಪ್ರತಿಕೂಲ ಬಹುಮತದಿಂದ ಮಾರ್ಗದರ್ಶನ ಪಡೆಯತಕ್ಕದ್ದು.

(ಜ) ಯಾವುದೇ ಸಾದಾ ಸಭೆಯು, ಹಾಜರಿದ್ದ ಬಹುಸಂಖ್ಯಾಕ ಸದಸ್ಯರ ಸಮ್ಮತಿಯಿಂದ ಕಾಲಕಾಲಕ್ಕೆ ಮುಂದುವರೆಸಲ್ಪಡಬಹುದು, ಆದರೆ ಯಾವುದೇ ಮುಂದುವರೆಸಲ್ಪಟ್ಟ ಸಭೆಯಲ್ಲಿ ಯಾವ ಸಭೆಯಿಂದ ಮುಂದುವರೆಸಲ್ಪಟ್ಟಿತೋ ಆ ಸಭೆಯಲ್ಲಿ ಪೂರ್ತಿಯಾಗದೆ ಉಳಿದಿದ್ದನ್ನಲ್ಲದೆ ಬೇರೆ ಯಾವುದೇ ವ್ಯವಹಾರವು ನಡೆಸಲ್ಪಡತಕ್ಕದ್ದಲ್ಲ.

(ಕಾ) ವಾಕ್ಯಾವಳಿ (ಬ) ದಲ್ಲಿ ಹೇಳಲಾದ ಎಲ್ಲ ಮಾತುಗಳಿಗೆ ಅನುಸಾರವಾಗಿ ಇರುವಂತಹ ನೋಟೀಸನ್ನು ಕೊಟ್ಟು, ಆ ಸಾದಾ ಸಭೆಯಲ್ಲಿ ಇಲ್ಲವೆ ವಿಶೇಷ ಸಭೆಯಲ್ಲಿ ತಿದ್ದುಪಡಿ ಇಲ್ಲವೆ ರದ್ದತಿಮಾಡಬೇಕೆಂದು ಮಾಡಿದ ಠರಾವಿನ ಪ್ರೂರ್ತಿಪಾಠವನ್ನು ಮತ್ತು ಯಾವ ರೀತಿಯಲ್ಲಿ ತಿದ್ದುಪಡಿ ಇಲ್ಲವೆ ರದ್ದತಿಮಾಡಬೇಕೆಂಬುದನ್ನು ಸೂಚಿಸುವ ಠರಾವಿನ ಪ್ರೂರ್ತಿಪಾಠವನ್ನು ಆ ನೋಟೀಸಿನಲ್ಲಿ ಕಾಣಿಸಿ, ಒಟ್ಟು ಸದಸ್ಯರ ಸಂಖ್ಯೆಯ ಅರ್ಧಕಿಂತ ಕಡಿಮೆಯಾಗದಷ್ಟು ಸದಸ್ಯರಿಂದ ಆ ಸಾದಾ ಸಭೆಯಲ್ಲಿ ಇಲ್ಲವೆ ವಿಶೇಷ ಸಭೆಯಲ್ಲಿ ಸ್ವೀಕೃತವಾದ ಹೊರತು ತಾಲೂಕ ಬೋರ್ಡದ ಯಾವುದೇ ಠರಾವು ಅದು ಸ್ವೀಕೃತವಾದ ಆರು ತಿಂಗಳ ಒಳಗೆ ತಿದ್ದುಪಡಿ ಇಲ್ಲವೆ ರದ್ದತಿಮಾಡಲ್ಪಡತಕ್ಕದ್ದಲ್ಲ.

(ಕಿ) ಸಭೆಗೆ ಹಾಜರಿದ್ದ ಸದಸ್ಯರ ಹೆಸರುಗಳು ಮತ್ತು ರಾಜ್ಯ ಶಾಸನ ಸಭೆಯ ಮತ್ತು ರಾಜ್ಯ ಶಾಸನ ಪರಿಷತ್ತಿನ ಸದಸ್ಯರು ಮತ್ತು ಸರಕಾರೀ ಅಧಿಕಾರಿಗಳು ಯಾರಾದರೂ ಹಾಜರಿದ್ದರೆ, ಅವರ ಹೆಸರುಗಳು ಮತ್ತು ಬೋರ್ಡಿನ ಪ್ರತಿಯೊಂದು ಸಭೆಯ ಕಾರ್ಯ ಕಲಾಪಗಳ ದಾಖಲೆ ಇಡಲ್ಪಡತಕ್ಕದ್ದು. ಮತ್ತು ಸಭೆಗೆ ಹಾಜರಿದ್ದ ಯಾವುದೇ ಸದಸ್ಯನು ಹಾಗೆ ಬಯಸಿದರೆ, ಯಾವುದೇ ಠರಾವಿನ ಬಗ್ಗೆ ಅನುಕೂಲ ಇಲ್ಲವೆ ಪ್ರತಿಕೂಲ ಮತಕೊಟ್ಟ ಸದಸ್ಯರ ಹೆಸರುಗಳನ್ನು ಆ ಉದ್ದೇಶಕ್ಕಾಗಿ ಇಟ್ಟ ಪುಸ್ತಕದಲ್ಲಿ ದಾಖಲೆ ಮಾಡತಕ್ಕದ್ದು ಮತ್ತು ಅದು ಅಧ್ಯಕ್ಷ ಇಲ್ಲವೆ ಉಪಾಧ್ಯಕ್ಷ ಇಲ್ಲವೆ ಸಭಾಪತಿಯಿಂದ ಶಕ್ಯವಾದಷ್ಟು ಬೇಗ ಸಹಿ ಮಾಡಲ್ಪಟ್ಟಿದ್ದು ಬೋರ್ಡದ ಯಾವುದೇ ಸದಸ್ಯನಿಗೆ ಇಲ್ಲವೆ ತಾಲೂಕ ಬೋರ್ಡದ ಚುನಾವಣೆಗಳಲ್ಲಿ ಮತ ಹಾಕಲು ಅಧಿಕಾರವಿದ್ದ ಯಾವುದೇ ವ್ಯಕ್ತಿಗೆ ಪರಿಶೀಲನೆಗಾಗಿ ಯೋಗ್ಯ ಸಮಯದಲ್ಲಿ ಮುಕ್ತವಾಗಿರತಕ್ಕದ್ದು.

(ಳ) ಸಭೆಯಲ್ಲಿ ತಾಲೂಕ ಬೋರ್ಡದಿಂದ ಪಾಸಾದ ಪ್ರತಿಯೊಂದು ಠರಾವಿನ ನಕಲನ್ನು, ಸಭೆ ಸೇರಿದ ದಿನದಿಂದ ಹತ್ತು ದಿವಸಗಳ ವಳಗೆ ಡೆಪ್ಯುಟಿ ಕಮಿಶನರರ ಕಡೆಗೆ ಕಳಿಸಲ್ಪಡತಕ್ಕದ್ದು.

(ಱ) ತಾಲೂಕ ಬೋರ್ಡದಲ್ಲಿ ಇಲ್ಲವೆ ಯಾವುದೇ ಕಮಿಟಿಯಲ್ಲಿ ಯಾವುದೇ ಸ್ಥಳವು ತೆರವಾದ ಕಾಲದಲ್ಲಿ ಅಲ್ಲಿ ಉಳಿದ ಸದಸ್ಯರು ಯಾವುದೇ ಸ್ಥಳವು ತೆರವಾಗಿಲ್ಲವೆಂಬಂತೆ ಕಾರ್ಯಮಾಡಬಹುದು.

## ವಿವೇಚನೆ

ತಾಲೂಕ ಬೋರ್ಡದ ಸಭೆಯ ಬಗ್ಗೆ ಈ ಕಲಮು ಇದೆ. ಎರಡು ತಿಂಗಳಿಗೆ ಒಮ್ಮೆಯಾದರೂ ಸಭೆ ಸೇರಬೇಕು. ಹೀಗೆ ನಿಯತಕಾಲಿಕವಾಗಿ ಸೇರುವ ಸಭೆಗಳಿಗೆ ಸಾದಾ ಸಭೆಯೆಂದು ಹೆಸರು. ಮೊದಲನೆಯ ಸಭೆಯ ತಾರೀಖನ್ನು ಮುಖ್ಯ ಕಾರ್ಯಾಧಿಕಾರಿಯು ಗೊತ್ತುಮಾಡುವನು. ಆ ಸಭೆಗೆ ಅಸಿಸ್ಟಂಟ

ಕಮಿಶನರರನು ಅಧ್ಯಕ್ಷತೆ ವಹಿಸುವನು. ಮುಂದಿನ ಸಭೆಗಳ ದಿನಗಳನ್ನು ಹಿಂದಿನ ಸಭೆಯಲ್ಲಿ ನಿರ್ಣಯಿಸತಕ್ಕದ್ದು. ಒಮ್ಮೆ ಸಭೆಯ ದಿನ ಗೊತ್ತುಮಾಡಿದ ಮೇಲೆ ಅಧ್ಯಕ್ಷನಿಗೆ ಅದನ್ನು ಬದಲು ಮಾಡಬೇಕೆಂಬ ಕಾರಣಗಳು ಇದ್ದರೆ ಅವನಿಗೆ ಹಾಗೆ ಬದಲು ಮಾಡಲು ಅಧಿಕಾರವಿದೆ. ಒಟ್ಟು ಸದಸ್ಯರಲ್ಲಿಯ ಒಂದು ನಾಲ್ಕಾಂಶದ ಕಿಂತ ಕಡಿಮೆ ಇಲ್ಲದಷ್ಟು ಜನರು ವಿನಂತಿಸಿದರೆ ಅಧ್ಯಕ್ಷನು ಆ ವಿನಂತಿಯ ತಾರೀಖಿನಿಂದ ೨೧ ದಿವಸಗಳ ಒಳಗೆ ಸಭೆಯನ್ನು ಕರೆಯಕ್ಕದ್ದು. ಈ ಸಭೆಯು ವಿಶೇಷ ಸಭೆಯು. ಈ ಸಭೆಯು ಯಾತಕ್ಕಾಗಿ ಕರೆಯಲಾಗಿದೆಯೆಂಬುದನ್ನು ಆ ವಿನಂತಿ ಪತ್ರದಲ್ಲಿ ಕಾಣಿಸಬೇಕು.

ಸಾದಾ ಸಭೆಗೆ ಹತ್ತು ಪೂರ್ತಿದಿನಗಳ ನೋಟೀಸು; ವಿಶೇಷ ಸಭೆಗೆ ಏಳು ಪೂರ್ತಿ ದಿನಗಳ ನೋಟೀಸು. ನೋಟೀಸಿನಲ್ಲಿ ಸಭೆಯ ವೇಳೆ, ಸ್ಥಳ, ಅಲ್ಲಿ ನಡೆಯಬೇಕಾದ ವ್ಯವಹಾರದ ಪಟ್ಟಿ, ವಿವರಿಸಿರಬೇಕು. ನೋಟೀಸನ್ನು ಎಲ್ಲ ಸದಸ್ಯರಿಗೆ ಕಳಿಸಬೇಕು. ಆ ತಾಲೂಕದ ಪ್ರತಿನಿಧಿಗಳಾಗಿರುವ ರಾಜ್ಯ ಶಾಸನ ಸಭೆಯ ಸದಸ್ಯರು, ರಾಜ್ಯ ಶಾಸನ ಪರಿಷತ್ತಿನ ಸದಸ್ಯರು, ಇವರಿಗೆ ನೋಟೀಸು ಕಳಿಸಿಕೊಡಬೇಕು. ಅಲ್ಲದೆ ನೋಟೀಸನ್ನು ತಾಲೂಕ ಬೋರ್ಡದ ಕಚೇರಿಯಲ್ಲಿಯೂ ಅಂಟಿಸಬೇಕು. ವಿಶೇಷ ಸಭೆಯ ನೋಟೀಸಾಗಿದ್ದರೆ, ಅದರಲ್ಲಿ ಆ ಸಭೆಯಲ್ಲಿ ಚರ್ಚಿಸಲಾಗುವ ಠರಾವು ಕಾಣಿಸಬೇಕು.

ತಾಲೂಕ ಬೋರ್ಡದ ಒಟ್ಟು ಸದಸ್ಯರ ೧/೩ ಸದಸ್ಯರು ಕೋರಂ. ಹೀಗೆ ಒಂದು ಮೂರಾಂಶ ಎಂದು ನಿರ್ದಿಷ್ಟಪಡಿಸುವಾಗ ಸದಸ್ಯರ ಸಂಖ್ಯೆಯನ್ನು ಗಮನಿಸಬೇಕಾಗಿದ್ದಿತು. ತಾಲೂಕ ಬೋರ್ಡದ ಸದಸ್ಯರು ೧೫ ಇಲ್ಲವೆ ೧೯ ಎಂದು; ೧/೩ ಎಂದು ೧೫ ಇದ್ದಾಗ ಸರಿಹೋಗುವುದು; ೧೯ ಇದ್ದಾಗ ೧/೩ ಎಂದರೆ ೬⅓ ಆಗುವುದು. ಹೀಗೆ ನಿರ್ದಿಷ್ಟಪಡಿಸುವಾಗ ಸದಸ್ಯ ಸಂಖ್ಯೆಯು ಎಂತಹದು ಇರುವದೆಂಬುದನ್ನು ತಿಳಿದಿರಬೇಕು. ಇಲ್ಲವೆ ಒಂದು ಮೂರಾಂಶ ಇಲ್ಲವೆ ೫ ಜನ ಎಂದು ನಿರ್ದಿಷ್ಟಪಡಿಸಿದ್ದರೆ ಇಡೀ ಸದಸ್ಯರು ಕೋರಂ ಆಗುವರು. ಇಲ್ಲವಾದರೆ ೬ ೧/೩ ದ ಹಾಗೆ ಸಂಖ್ಯೆ ಬಂದರೆ ಕಾಯಿದೆಯ ಅರ್ಥ ಮಾಡುವುದು ಕಠಿಣವಾಗುವುದು. ಕಾಯಿದೆಯು ಇರುವುದೇ ಸ್ಪಷ್ಟತೆಗಾಗಿ. ಅಲ್ಲಿಯೆ ಸಂದಿಗ್ಧತೆ ಸೇರಿಕೊಂಡು ಬಿಟ್ಟರೆ, ಅರ್ಥ ವಿವರಣೆಗಾಗಿ ಒದ್ದಾಡಬೇಕಾಗುವುದು. ಸಭೆಗೆ ಕೋರಂ ದೊರೆಯುವುದು ಕಠಿಣವೆಂಬುದನ್ನು ಅರಿತು ಸಂಖ್ಯೆಯ ನಿರ್ಣಯ ಮಾಡಬೇಕು. ಈ ಬಗೆಯ ತೊಡಕು ಪಂಚಾಯತದ ಕೋರಂ ನಿರ್ಣಯಿಸುವಾಗಲೂ ಉಂಟಾಗಿದೆ.

ಕೋರಂ ಇಲ್ಲದಿದ್ದರೆ ಸಭೆಯನ್ನು ಮುಂದೂಡಬೇಕು. ಮುಂದೂಡಿದ ಸಭೆಗೂ ಕೋರಂ ಬೇಕೆಂಬುದು ಈ ಕಲಮಿನ ವೈಶಿಷ್ಟ್ಯವಾಗಿದೆ. ಅಂದರೆ

ಕೋರಂ ಇಲ್ಲದೆ ಯಾವ ಸಭೆಯೂ ನಡೆಯುವಂತಿಲ್ಲ. ಮುಂದುವರೆದ ಸಭೆಗೆ ಪ್ರತ್ಯೇಕ ನೋಟೀಸು ಕಾರಣವಿಲ್ಲವೆಂಬುದೇ ಅದರ ಗುಣ. ಇಲ್ಲವಾದರೆ ಅದೂ ಮೂಲ ಸಭೆಯಂತೆಯೇ ಆಗುವುದು. ಮೂಲ ಸಭೆಯಲ್ಲಿಯ ವಿಷಯಗಳು ಮಾತ್ರ ಮುಂದೂಡಿದ ಸಭೆಯಲ್ಲಿ ಚರ್ಚಿಸಲ್ಪಡತಕ್ಕದ್ದು. ಸಭೆ ನಡೆದಾಗ ಯಾವುದೇ ಕಾಲಕ್ಕೆ ಕೋರಂ ಇಲ್ಲದಿದ್ದದನ್ನು ಲಕ್ಷ್ಯಕ್ಕೆ ತಂದರೆ ಆಗ ಕೂಡ ಸಭೆಯು ಮುಂದೂಡಲ್ಪಡಬೇಕು. ಈ ಮಾತುಗಳು ಬಹಳ ಮಹತ್ವದವು.

ತಾಲೂಕ ಬೋರ್ಡದ ಸಭೆಗಳು ಸಾರ್ವಜನಿಕರಿಗೆ ಮುಕ್ತದಾಗಿರತಕ್ಕದ್ದು ಎಂದು ಹೇಳಲಾಗಿದೆ. ಆದರೆ ವಿಷಯವು ಅಂತಹ ಮಹತ್ವದ್ದಿದ್ದರೆ-ಹಾಗೂ ಅಧ್ಯಕ್ಷ ಸ್ಥಾನದಲ್ಲಿದ್ದ ಅಧಿಕಾರಿಗೆ ಹಾಗೆ ಅನ್ನಿಸಿದರೆ, ಅದು ಏಕಾಂತದಲ್ಲಿ ನಡೆಯ ಬಹುದು. ಬಹಿರಂಗವಾಗಿ ನಡೆದಾಗ ಯಾರಾದರೂ ಸಭೆಯ ಕಾರ್ಯ-ಕಲಾಪ ಗಳಿಗೆ ಅಡ್ಡಿಯಾಗದೆ ಅಂತಹರನ್ನು ಹೊರಗೆ ಹಾಕಿಸುವ ಅಧಿಕಾರವು ಅಧ್ಯಕ್ಷ ನಾಗಿದ್ದವನಿಗೆ ಇದೆ.'

ಉಪಕಲಮು (ಇ), (ಫ), (ಗ), (ಹ) ಇವುಗಳಲ್ಲಿಯ ತತ್ವಗಳು ಕಲಮು ೩೭ (ಅ), (ಬ), (ಳ), (ಜ) ರಲ್ಲಿ ಅಡಕವಾಗಿವೆ. ಅಲ್ಲಿಯ ವಿವೇಚನೆಯನ್ನು ನೋಡಬೇಕು. ಉಪಕಲಮು (ಕಾ) ಹಾಗೂ (ಬಿ) ಇವು ಕಲಮು ೩೮ ಹಾಗೂ ೩೯ ಕ್ಕೆ ಸಮಾನವಾದವು. ಆ ಕಲಮುಗಳ ವಿವೇಚನೆಯನ್ನು ನೋಡಬೇಕು.

ತಾಲೂಕ ಬೋರ್ಡದ ಠರಾವುಗಳು ಒಮ್ಮೆ ಪಾಸಾದ ಮೇಲೆ ಅವುಗಳನ್ನು ತಿದ್ದುವುದಾಗಲೀ ರದ್ದತಿ ಮಾಡುವುದಾಗಲೀ ಅವಕ್ಕೆ ಕ್ರಮ-ವಿಧಾನವಿದೆ. ಅದನ್ನು ಅನುಸರಿಸದೆ ತಿದ್ದುಪಡಿ ಇಲ್ಲವೆ ರದ್ದತಿಮಾಡಲು ಬರುವುದಿಲ್ಲ. ಸ್ವೀಕೃತವಾದ ಪ್ರತಿಯೊಂದು ಠರಾವು ಡೆ. ಕಮಿಶನರ ಕಡೆಗೆ ಹತ್ತು ದಿವಸಗಳಲ್ಲಿ ಕಳಿಸಬೇಕು.

ಬೋರ್ಡದಲ್ಲಿ ಇಲ್ಲವೆ ಯಾವುದೇ ಕಮಿಟಿಯಲ್ಲಿ ಯಾವುದೇ ಸದಸ್ಯನ ಸ್ಥಳವು ಖಾಲಿಯಾದರೆ ಅದು ಬೋರ್ಡದ ರಚನೆಗೆ ಇಲ್ಲವೆ ಕಮಿಟಿಯ ರಚನೆಗೆ ಬಾಧೆ ತರುವುದಿಲ್ಲ. ಖಾಲಿಯಾಗದೆ ಇದ್ದ ಹಾಗೆ ಅವರು ಕಾರ್ಯ ನಡೆಸಬೇಕೆಂದು ಹೇಳಿದೆ.

## ೧೧೮. ಠರಾವುಗಳು ಹಾಗೂ ಮಾಹಿತಿ ಪ್ರಶ್ನೆಗಳು

(೧) ಬೋರ್ಡದಿಂದ ಮಾಡಬಹುದಾದಂತಹ ಕ್ರಮನಿಯಮಗಳಂಕಿತ ವಾಗಿ, ತಾಲೂಕ ಬೋರ್ಡದ ಆಡಳಿತದ ವಿಷಯಗಳ ಸಂಬಂಧವಾಗಿ ತಾಲೂಕ ಬೋರ್ಡದ ಸದಸ್ಯನು ಠರಾವುಗಳನ್ನು ಮಂಡಿಸಬಹುದು ಮತ್ತು ಅಧ್ಯಕ್ಷನಿಗೆ ಮಾಹಿತಿ ಪ್ರಶ್ನೆಗಳನ್ನು ಕೇಳಬಹುದು

(೨) ತಾಲೂಕ ಬೋರ್ಡದ ಕೆಲಸ ನಿರ್ವಹಣೆಯಲ್ಲಿಯ ಯಾವುದೇ ಅಲಕ್ಷ್ಯದ ಬಗ್ಗೆ, ತಾಲೂಕ ಬೋರ್ಡದ ಆಸ್ತಿಯ ಯಾವುದೇ ನಾಶದ ಬಗ್ಗೆ ಇಲ್ಲವೆ ಯಾವುದೇ ಸ್ಥಾನಿಕ ಪ್ರದೇಶದ ಆವಶ್ಯಕತೆಗಳ ಬಗ್ಗೆ ಅಧ್ಯಕ್ಷನ ಲಕ್ಷ್ಯವನ್ನು ಕೂಡ ತಾಲೂಕ ಬೋರ್ಡದ ಯಾವುದೇ ಸದಸ್ಯನು ಸೆಳೆಯುಬಹುದು ಮತ್ತು ಇಷ್ಟವಾಗಿ ತೋರುವಂತಹ ಯಾವುದೇ ಸುಧಾರಣೆಗಳನ್ನು ಸೂಚಿಸಬಹುದು.

(೩) ಈ ಸಂಬಂಧದಲ್ಲಿ ಮಾಡಲಾದ ನಿಯಮಗಳಿಂದ ಸರಕಾರದಿಂದ ಹಾಕಲ್ಪಡಬಹುದಾದಂತಹ ನಿರ್ಬಂಧಗಳ ಮತು ಕರಾರುಗಳ ಅಂಕಿತವಾಗಿ, ತಾಲೂಕ ಬೋರ್ಡು ಈ ಕಾಯಿದೆಯ ದೃಷ್ಟಿಯಲ್ಲಿ ಬರುವುದನ್ನು ಬಿಟ್ಟು ಬೇರೆಯಾಗಿ, ತಾಲೂಕದ ಆಡಳಿತದ ಸಂಬಂಧವಾಗಿರುವ ಪ್ರಶ್ನೆಗಳ ಬಗ್ಗೆ ಠರಾವುಗಳನ್ನು ಪಾಸಮಾಡಬಹುದು ಮತ್ತು ಕಮಿಶನರನ ಅವಗಾಹನೆಗಾಗಿ ಸಾದರಪಡಿಸಬಹುದು.

**ವಿವೇಚನೆ**

ಉಪಕಲಮು ೧-೨ ಇವುಗಳ ಬಗ್ಗೆ ಕಲಮು ೪೦ ರ ವಿವೇಚನೆ ನೋಡಿರಿ. ಅಲ್ಲಿ ೨-೧ ಹೀಗೆ ಕ್ರಮವಿದೆ. ಸದಸ್ಯನಿಗೆ ಆಡಳಿತದ ಬಗ್ಗೆ ತಿಳಿದುಕೊಳ್ಳುವ ಅಧಿಕಾರವಿದೆ. ಅವನು ಪ್ರಶ್ನೆ ಕೇಳಬಹುದು; ಸುಧಾರಣೆಗಾಗಿ ಸೂಚನೆ ಮಾಡಬಹುದು. ಎಲ್ಲಿಯಾದರೂ ಅಲಕ್ಷ್ಯವಾಗಿದ್ದರೆ ಅಧಿಕಾರಿಯಾದ ಅಧ್ಯಕ್ಷನ ಲಕ್ಷ್ಯ ಸೆಳೆಯುಬಹುದು.

ತಾಲೂಕ ಬೋರ್ಡದಲ್ಲಿ ಈ ಕಾಯಿದೆಗೆ ಸಂಬಂಧ ಪಡೆದ ಇದ್ದ ವಿಷಯುಗಳ ಬಗ್ಗೆ ಠರಾವು ಪಾಸುಮಾಡಲು ಈ ಕಲಮು ಅಧಿಕಾರ ಕೊಡುತ್ತದೆ. ಈ ಕಾಯಿದೆಯು ಹೇಳದೇ ಇದ್ದರೂ ತಾಲೂಕದ ಆಡಳಿತಕ್ಕೆ ಸಂಬಂಧಪಟ್ಟ ವಿಷಯವಾಗಿದ್ದರೆ ತಾಲೂಕ ಬೋರ್ಡು ಅಂತಹ ಪ್ರಶ್ನೆಯ ಬಗ್ಗೆ ಠರಾವು ಮಾಡಿ ಅದನ್ನು ಕಮಿಶನರನ ಅವಗಾಹನೆಗಾಗಿ ಕಳಿಸಬಹುದು. ಒಟ್ಟಿನಲ್ಲಿ ತಾಲೂಕಿನ ಅಭಿವೃದ್ಧಿಗೆ ಸಂಬಂಧಪಟ್ಟ ವಿಷಯುದ ಬಗ್ಗೆ ವಿಚಾರಮಾಡಲು ತಾಲೂಕ ಬೋರ್ಡಿಗೆ ಅಧಿಕಾರವಿದೆ ಎಂದಹಾಗಾಯಿತು.

## ೧೧೯. ತಾಲೂಕಬೋರ್ಡದ ಮುಖ್ಯ ಕಾರ್ಯಾಧಿಕಾರಿ ಮತ್ತು ಇತರ ಅಧಿಕಾರಿಗಳು

(೧) ಆ ತಾಲೂಕದ ತಹಶೀಲದಾರನು ಆ ತಾಲೂಕಬೋರ್ಡದ ಮುಖ್ಯ ಕಾರ್ಯಾಧಿಕಾರಿಯಾಗಿರತಕ್ಕದ್ದು.

ಆದರೆ, ತಾಲೂಕದಲ್ಲಿ ಅಭಿವೃದ್ಧಿ ಘಟಕವು ಸ್ಥಾಪಿತವಾದಾಗ ಇಂತಹ ಘಟಕದ ಅಭಿವೃದ್ಧಿಯ ಅಧಿಕಾರಿಯು ಆ ತಾಲೂಕದ ತಾಲೂಕಬೋರ್ಡದ ಮುಖ್ಯ ಕಾರ್ಯಾಧಿಕಾರಿಯಾಗತಕ್ಕದ್ದು.

(೨) ಕಲಮು ೨೫ ರ ಶರತುಗಳಿಗಂಕಿತವಾಗಿ, ಪ್ರತಿಯೊಂದು ತಾಲೂಕ ಬೋರ್ಡು ತನ್ನ ಕರ್ತವ್ಯಗಳನ್ನು ನಿರ್ವಹಿಸಲಿಕ್ಕೆ ಆವಶ್ಯಕವಾಗಬಹುದಾದಂತಹ ಅಧಿಕಾರಿಗಳನ್ನು ಮತ್ತು ಸೇವಕರನ್ನು ನೇಮಿಸಿಕೊಳ್ಳಲು ಅಧಿಕಾರವುಳ್ಳದ್ದಾಗಿರ ತಕ್ಕದ್ದು.

(೩) ಉಪಕಲಮು (೨) ರನ್ವಯವಾಗಿ ತಾಲೂಕಬೋರ್ಡದಿಂದ ನೇಮಿಸಿ ಕೊಳ್ಳಲಾದ ಅಧಿಕಾರಿಗಳು ಮತ್ತು ಸೇವಕರು, ಮುಖ್ಯಕಾರ್ಯಾಧಿಕಾರಿಯ ಅಧೀನರಾಗಿರತಕ್ಕದ್ದು. ಮತ್ತು ಅವನ ಶಿಸ್ತಿನ ನಿಯಂತ್ರಣದ ಅಂಕಿತರಾಗಿರ ತಕ್ಕದ್ದು.

(೪) ಸಾಮಾನ್ಯ ಇಲ್ಲವೆ ವಿಶಿಷ್ಟ ಹುಕುಮಿನಿಂದ ಸರಕಾರವು ನಿರ್ದಿಷ್ಟ ಪಡಿಸಬಹುದಾದಂತಹ ಬೇರೆ ಕರ್ತವ್ಯಗಳನ್ನು ಮಾಡಲು, ಮುಖ್ಯಕಾರ್ಯಾಧಿ ಕಾರಿಗೆ ಮತ್ತು ತಾಲೂಕಬೋರ್ಡವ ಇತರ ಅಧಿಕಾರಿಗಳಿಗೆ ಒಪ್ಪಿಸಬಹುದು. ಮತ್ತು ಮುಖ್ಯ ಕಾರ್ಯಾಧಿಕಾರಿಯು ಮತ್ತು ತಾಲೂಕಬೋರ್ಡದ ಇತರ ಅಧಿಕಾರಿಗಳು ಆ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು. ಹೀಗೆ ಒಪ್ಪಿಸಿಕೊಟ್ಟಮೇಲೆ ಬೇರೆ ಕರ್ತವ್ಯಗಳನ್ನು ಒಪ್ಪಿಸಿಕೊಟ್ಟದ್ದಕ್ಕಾಗಿ ಇರುವ ಸಿಬ್ಬಂದಿಯ ಸಂಬಳ ಹಾಗೂ ಭತ್ತೆ ಮೂಲಕವಾದ ವೆಚ್ಚವು ಗೊತ್ತುಮಾಡಲ್ಪಡಬಹುದಾದ ರೀತಿಯಲ್ಲಿ ತಾಲೂಕಬೋರ್ಡ ಮತ್ತು ಸರಕಾರ ಇವರ ನಡುವೆ ಹಂಚಿಹಾಕಲ್ಪಡತಕ್ಕದ್ದು.

## ವಿವೇಚನೆ

ತಾಲೂಕದ ತಹಶೀಲದಾರನೇ ಸಾಮಾನ್ಯವಾಗಿ ಬೋರ್ಡದ ಮುಖ್ಯ ಕಾರ್ಯಾಧಿಕಾರಿ. ಆದರೆ ಯಾವ ಯಾವ ತಾಲೂಕಿನಲ್ಲಿ ಅಭಿವೃದ್ಧಿ ಘಟಕಗಳು ಪ್ರಾರಂಭವಾಗಿರುವುವೋ ಅಲ್ಲಿ ಆ ಘಟಕದ ಅಭಿವೃದ್ಧಿ ಅಧಿಕಾರಿಯು ಮುಖ್ಯ ಕಾರ್ಯಾಧಿಕಾರಿಯಾಗುವನು; ಅಂದರೆ ತಾಲೂಕಬೋರ್ಡದ ಸಂಬಂಧವು ಸರಕಾರದ ಭೂಕಂದಾಯ ಖಾತೆಯೊಡನೆ ಇರತಕ್ಕದ್ದು ಎಂದು ಅರ್ಥ. ತನ್ನ ಕರ್ತವ್ಯ ಗಳನ್ನು ನೆರವೇರಿಸಲು ತಾಲೂಕಬೋರ್ಡು ಅಧಿಕಾರಿಗಳನ್ನು ಸೇವಕರನ್ನು ನೇಮಿಸಿ ಕೊಳ್ಳಲು ಅದಕ್ಕೆ ಅಧಿಕಾರವಿದೆ. ಆದರೆ ಈ ಅಧಿಕಾರವು ಕಲಮು ೨೫ ರ ಅಂಕಿತವಾಗಿರತಕ್ಕದ್ದು. ಕಲಮು ೨೫ ರಲ್ಲಿ ಮೈಸೂರ ಸ್ಥಾನಿಕ ಸರಕಾರದ ಸೇವೆಯ ಬಗ್ಗೆ ಹೇಳಲಾಗಿದೆ, ತಾಲೂಕಬೋರ್ಡು ಹೀಗೆ ನೇಮಿಸಿಕೊಂಡ ಅಧಿಕಾರಿ ಗಳು ಹಾಗೂ ಸೇವಕರು ಮುಖ್ಯಕಾರ್ಯಾಧಿಕಾರಿಯ ಅಧೀನರೂ ಅವನ ಶಿಸ್ತಿನ ನಿಯಂತ್ರಣದ ಅಂತರೂ ಆಗಿರತಕ್ಕದ್ದು. ತಾಲೂಕಬೋರ್ಡದ ಸಿಬ್ಬಂದಿಯು ಮುಖ್ಯಅಧಿಕಾರಿಯ ಅಂಕಿತವಾಗಿರತಕ್ಕದ್ದು. ಮುಖ್ಯಕಾರ್ಯಾಧಿಕಾರಿಗೆ, ಇಲ್ಲವೆ ತಾಲೂಕಬೋರ್ಡದ ಅಧಿಕಾರಿಗಳಿಗೆ ಬೋರ್ಡದ ಕೆಲಸ ಅಲ್ಲದೆ ಸರಕಾರವು

ಒಪ್ಪಿಸಿಕೊಟ್ಟ ಕರ್ತವ್ಯಗಳನ್ನು ಅವರು ಮಾಡತಕ್ಕದ್ದು. ಹೀಗೆ ಬೇರೆ ಕರ್ತವ್ಯಗಳನ್ನು ಒಪ್ಪಿಸಿಕೊಟ್ಟಾಗ ಅದರ ನಿರ್ವಹಣೆಯ ವೆಚ್ಚವನ್ನು ಅಂದರೆ ಸಿಬ್ಬಂದಿಗಳ ಸಂಬಳ ಭತ್ತೆಗಳ ವೆಚ್ಚವನ್ನು ಸರಕಾರ ಹಾಗೂ ತಾಲೂಕ ಬೋರ್ಡ ಇವರ ನಡುವೆ ಕರ್ತವ್ಯಗಳ ಪ್ರಮಾಣದಲ್ಲಿ ಹಂಚಿ ಹಾಕತಕ್ಕದ್ದು ಇದನ್ನು ಹೇಗೆ ಹಂಚಿ ಹಾಕಬೇಕು ಎಂಬ ಬಗ್ಗೆ ನಿಯಮಗಳು ಹೇಳುವುವು.

## ೧೨೦. ಮುಖ್ಯ ಕಾರ್ಯಾಧಿಕಾರಿಯ ಕಾರ್ಯಗಳು

ಕಲಮು ೧೧೫ ರ ವಾಕ್ಯಾವಳಿ (ಬ) ದನ್ವಯವಾಗಿರುವ ಅಧ್ಯಕ್ಷನ ಸಾಧಾರಣ ಅಧಿಕಾರಗಳಂಕಿತವಾಗಿ ಮುಖ್ಯ ಕಾರ್ಯಾಧಿಕಾರಿಯು ಈ ಕೆಳಗಿನ ಕಾರ್ಯಗಳನ್ನು ನೆರವೇರಿಸತಕ್ಕದ್ದು :

(೧) ಸಭೆಗಳನ್ನು ಕರೆಯುವುದು ಮತ್ತು ಅವುಗಳ ಕಾರ್ಯ ಕಲಾಪಗಳನ್ನು ಸುಸ್ಥಿತಿಯಲ್ಲಿಡುವುದು.

(೨) ಬೋರ್ಡದ ಠರಾವುಗಳನ್ನು ಪರಿಣಾಮಕಾರಿಯಾಗಿ ಮಾಡಲು ಬೇಕಾದ ಮುಂದಿನ ಕ್ರಮ ತೆಗೆದುಕೊಳ್ಳುವುದು.

(೩) ಬೋರ್ಡದ ಆಡಳಿತಕ್ಕೆ ಸಂಬಂಧಪಟ್ಟ, ಅಂದಾಜು, ಹೇಳಿಕೆ, ಅಂಕಿ ಸಂಖ್ಯೆ, ಕಾರ್ಯದ ವಿವರ ಇಲ್ಲವೆ ಬೇರೆ ಮಾಹಿತಿಯನ್ನು ತಾಲೂಕ ಬೋರ್ಡಿಗೆ ಸಾದರ ಪಡಿಸುವುದು ಮತ್ತು ತಾಲೂಕ ಬೋರ್ಡ ಹಾಗೆ ಅಪೇಕ್ಷಿಸಿದಾಗ ತನ್ನ ಅಧೀನದಲ್ಲಿದ್ದ ಕಾಗದ ಪತ್ರಗಳ ನಕಲನ್ನು ಮತ್ತು ಅಂತಹ ವಿಷಯಗಳ ಬಗ್ಗೆ ವರದಿಗಳನ್ನು ಸಾದರ ಪಡಿಸಬೇಕು.

(೪) ಕಾರ್ಯಕಾರಿ ಆಡಳಿತದ ವಿಷಯಗಳ ಬಗ್ಗೆ ಮತ್ತು ಬೋರ್ಡದ ಲೆಕ್ಕಪತ್ರಗಳ ಹಾಗೂ ದಾಖಲೆಗಳ ಬಗ್ಗೆ ಬೋರ್ಡದ ಎಲ್ಲ ಅಧಿಕಾರಿಗಳ ಮತ್ತು ಸೇವಕರ ಕಾರ್ಯಗಳ ಮೇಲ್ವಿಚಾರಣೆಯನ್ನು ಮತ್ತು ನಿಯಂತ್ರಣವನ್ನು ಮಾಡುವುದು.

(೫) ಬೋರ್ಡದ ಸಭೆಯಲ್ಲಿ ಸ್ವೀಕೃತವಾದ ಪ್ರತಿಯೊಂದು ಠರಾವಿನ ನಕಲನ್ನು ಕಮಿಶನರನಿಗೆ ಮತ್ತು ಡೆ. ಕಮಿಶನರನಿಗೆ ಸಾದರಪಡಿಸಬೇಕು.

(೬) ಕಮಿಶನರನು ಇಲ್ಲವೆ ಅವನಿಂದ ಈ ಸಂಬಂಧದಲ್ಲಿ ಅಧಿಕರಿಸಲ್ಪಟ್ಟ ಯಾವುದೇ ಅಧಿಕಾರಿಯು ಅಪೇಕ್ಷಿಸಿದಾಗ ಬೋರ್ಡದ ಕಾರ್ಯಕಲಾಪಗಳ ಅವತರಣಿಕೆಗಳನ್ನು ಇಲ್ಲವೆ ಬೋರ್ಡದ ಯಾವುದೇ ಕಮೀಟಿಯ ಕಾರ್ಯಕಲಾಪಗಳ ಅವತರಣಿಕೆಗಳನ್ನು ಇಲ್ಲವೆ ಇತರ ಕಾಗದಪತ್ರಗಳ ಇಲ್ಲವೆ ವಿಷಯಗಳ ಅವತರಣಿಕೆಗಳನ್ನು ಸಾದರಪಡಿಸುವುದು.

(೭) ಅವನಿಂದ ಭರತಿ ಮಾಡಬಹುದಾದಂತಹ ಸ್ಥಳಗಳಿಗೆ, ತಾಲೂಕ ಬೋರ್ಡದ ಅಧೀನವಾಗಿರುವಂತಹ ಸ್ಥಳಗಳಿಗೆ ಈ ಸಂಬಂಧದಲ್ಲಿ ಸರಕಾರವು ಮಾಡಬಹುದಾದ ನಿಯಮಗಳಿಗಂಕಿತವಾಗಿ ಯೋಗ್ಯತಾ ಇದ್ದ ವ್ಯಕ್ತಿಗಳನ್ನು ನೇಮಿಸುವುದು. ಮತ್ತು ಇಂತಹ ಸ್ಥಳದಲ್ಲಿ ಕೆಲಸ ಮಾಡುವಂತಹರಿಗೆ ರಜೆಯನ್ನು ದಯಪಾಲಿಸುವುದು, ಅವರಿಗೆ ದಂಡ ಹಾಕುವುದು, ಹಿಂಬಡತಿ ಮಾಡುವುದು, ಸಸ್ಪೆಂಡ ಮಾಡುವುದು, ಇಲ್ಲವೆ ನೌಕರಿಯಿಂದ ಕಿತ್ತಿಹಾಕುವುದು.

ಆದರೆ, ಅವನು ಹಿಂಬಡತಿ, ಸಸ್ಪೆಂಡ ಇಲ್ಲವೆ ಕಿತ್ತಿಹಾಕುವುದು ಇದರ ಬಗ್ಗೆ ಮಾಡಿದ ಹುಕುಮಿನ ವಿರುದ್ಧ ಡೆಪ್ಯೂಟಿ ಕಮಿಶನರನಿಗೆ ಅಪೀಲು ಮಾಡಿಕೊಳ್ಳುವ ಅನುಕೂಲತೆ ಇರತಕ್ಕದ್ದು.

(೮) ತಾಲೂಕ ಬೋರ್ಡದಿಂದ ಹಾಕಿದ ಖಟ್ಲೆಗಳಲ್ಲಿ ಈ ಕಾಯಿದೆಯ ಶರತುಗಳಿಗಂಕಿತವಾಗಿ ಫಿರ್ಯಾದಿಯನ್ನು ಮಾಡುವುದು ಮತ್ತು ತಾಲೂಕ ಬೋರ್ಡದ ಪರವಾಗಿ ದಿವಾಣಿ ಇಲ್ಲವೆ ಫೌಜದಾರಿ ಪ್ರಕರಣಗಳನ್ನು ಪ್ರಾರಂಭ ಮಾಡುವುದು ಇಲ್ಲವೆ ನಡೆಸುವುದು.

(೯) ಈ ಸಂಬಂಧದಲ್ಲಿ ತಾಲೂಕ ಬೋರ್ಡದಿಂದ ಮಾಡಲ್ಪಟ್ಟ ಕ್ರಮ ನಿಯಮಗಳಿಗಂಕಿತವಾಗಿ ಬೋರ್ಡಿನ ಸಭೆಗಳಲ್ಲಿ ಭಾಗವಹಿಸುವುದು, ಅದರಲ್ಲಿ ಮಾತನಾಡುವುದು ಆದರೆ, ಮತದಾನಮಾಡತಕ್ಕದ್ದಲ್ಲ ಇಲ್ಲವೆ ಯಾವುದೇ ಠರಾವು ಮುಂಡಿಸತಕ್ಕದ್ದಲ್ಲ.

(೧೦) ಈ ಕಾಯಿದೆಯಿಂದ ಇಲ್ಲವೆ ಈ ಕಾಯಿದೆಯನ್ವಯವಾಗಿ ಅಗತ್ಯ ವಾಗಬಹುದಾದ ಇಲ್ಲವೆ ಬೋರ್ಡದಿಂದ ಅವನಿಗೆ ಒಪ್ಪಿಸಲಾದ ಅಂತಹ ಇತರ ಕಾರ್ಯಗಳನ್ನು ಮಾಡುವುದು.

## ವಿವೇಚನೆ

ತಾಲೂಕ ಬೋರ್ಡದ ಮುಖ್ಯ ಕಾರ್ಯಾಧಿಕಾರಿಯು ತಹಶೀಲದಾರ ಇಲ್ಲವೆ ಅಭಿವೃದ್ಧಿ ಅಧಿಕಾರ ಎಂಬುದನ್ನು ನೆನೆದರೆ, ಅವನು ತನ್ನ ಮೂಲ ಸ್ಥಾನದ ಕೆಲಸ ಮಾಡುವುದರ ಜೊತೆಗೆ ತಾಲೂಕ ಬೋರ್ಡದ ಮುಖ್ಯ ಕಾರ್ಯಾಧಿಕಾರಿಯ ಕೆಲಸ ಗಳನ್ನು ನೋಡಿಕೊಳ್ಳುವವನು ಎಂಬುದು ಸ್ಪಷ್ಟವಾಗುವುದು. ಅವನ ಕಾರ್ಯ ಗಳು ಯಾವು ಎಂಬುದರ ವಿವರ ಇಲ್ಲಿ ಕೊಡಲಾಗಿದೆ. ಸಭೆ ಕರೆಯುವುದು, ಕಾರ್ಯಕಲಾಪಗಳನ್ನು ಸುಸ್ಥಿತಿಯಲ್ಲಿಡುವುದು, ಠರಾವುಗಳನ್ನು ಕಾರ್ಯಕಾರಿ ಮಾಡುವುದು, ಬೋರ್ಡು ಬೇಡಿದ ಮಾಹಿತಿ ಒದಗಿಸುವುದು, ಬೋರ್ಡದ ಅಧಿ ಕಾರಿಗಳು, ಸೇವಕರು ಇವರ ಮೇಲೆ ಮೇಲ್ವಿಚಾರಣೆ-ನಿಯಂತ್ರಣ ನಡಸುವುದು. ಲೆಕ್ಕಪತ್ರದ ಮೇಲೆ-ದಾಖಲೆಗಳ ಮೇಲೆ ಲಕ್ಷ್ಯ ಇಡುವುದು. ಡೆ. ಕಮಿಶನರ

ಮತ್ತು ಕಮಿಶನರಿಗೆ ಬೋರ್ಡಿನ ಠರಾವುಗಳನ್ನು ಕಳಿಸುವುದು ನೌಕರರನ್ನು ನೇಮಕ ಮಾಡುವುದು. ಅವರಿಗೆ ರಜೆಕೊಡುವುದು ದಂಡಹಾಕುವುದು; ಸಸ್ಪೆಂಡ ಮಾಡುವುದು, ನೌಕರಿಯಿಂದ ಕಿತ್ತಿಹಾಕುವುದು ತಾಲೂಕ ಬೋರ್ಡದ ಪರವಾಗಿ ದಾವೆ-ಖಟ್ಲೆ ನಡೆಸುವುದು.

ಒಟ್ಟಿನಲ್ಲಿ ತಾಲೂಕ ಬೋರ್ಡದ ಸಂಸ್ಥಾತ್ಮಕ ಪ್ರತಿನಿಧಿಯಾಗಿ, ಬೋರ್ಡಿನ ಮತ್ತು ಸರಕಾರದ ನಡುವಿನ ಅಧಿಕಾರಿಯಾಗಿ, ಬೋರ್ಡಿನ ಕಾರ್ಯಾಂಗದ ಮುಖ್ಯ ಅಧಿಕಾರಿಯಾಗಿ ಕೆಲಸಮಾಡತಕ್ಕದ್ದು.

ಇವನು ನೌಕರರ ಸಂಬಂಧ ಮಾಡಿದ ಹುಕುಮಿನ ಮೇಲೆ ಡೆ. ಕಮಿಶನರನ ಕಡೆಗೆ ಅಪೀಲು ಇದೆ.

ಬೋರ್ಡಿನ ಕೆಲಸಗಳನ್ನು ಅಧಿಕಾರಗಳನ್ನು ಅವನು ನಡೆಸಿದರೂ ಅವನು ಸದಸ್ಯನಲ್ಲ. ಅವನಿಗೆ ಮತದಾನ ಮಾಡುವ ಅಧಿಕಾರವಾಗಲಿ, ಇಲ್ಲವೆ ಠರಾವು ಮುಂಡಿಸುವ ಅಧಿಕಾರವಾಗಲೀ ಇಲ್ಲ. ಆದರೆ ಸಭೆಯಲ್ಲಿ ಮಾತನಾಡಲು ಭಾಗ ವಹಿಸಲು ಅವನಿಗೆ ಅಧಿಕಾರವಿದೆ. ಬೋರ್ಡು ಚುನಾಯಿತ ಸದಸ್ಯರುಳ್ಳ ಸಂಸ್ಥೆ. ಅದಕ್ಕೆ ಇವನಿಗೆ ಮತಾಧಿಕಾರವಿಲ್ಲ. ಬೋರ್ಡಿನ ಕಾರ್ಯ ಕಲಾಪ ಗಳಲ್ಲಿ ಮಾಹಿತಿ ಕೊಡಲು ಬೇಕಾಗುವುದರಿಂದ ಇವನು ಭಾಗ ವಹಿಸಲೂ ಮಾತ ನಾಡಲೂ ಅಧಿಕಾರವಿದೆ.

## ೧೨೧. ಕರಾರು ಮಾಡಿಕೊಳ್ಳುವ ವಿಧಾನ

(೧) ಈ ಕಲಮಿನ ಅನುಸಾರವಾಗಿ ಆ ಕರಾರು ಇಲ್ಲವೆ ಒಪ್ಪಂದವು ಮಾಡಿಕೊಳ್ಳಲ್ಪಟ್ಟಿದ್ದರೆ ಮಾತ್ರ ಬೋರ್ಡದ ಪರವಾಗಿ ಮಾಡಿಕೊಳ್ಳಲಾದ ಪ್ರತಿ ಯೊಂದು ಕರಾರು ಇಲ್ಲವೆ ಒಪ್ಪಂದವು ತಾಲೂಕ ಬೋರ್ಡನ್ನು ಬಾಂಧಾಯಿಸು ವುದು.

(೨) ಈ ಕಾಯಿದೆಯ ಶರತುಗಳನ್ವಯವಾಗಿ ಕಾರ್ಯ ನಡೆಸಲು ಅಧಿ ಕೃತವಾದ ವಿಷಯುಗಳ ಸಂಬಂಧವಾಗಿ, ಯಾವ ಕರಾರು ಇಲ್ಲದೆ ಒಪ್ಪಂದದ ಬೆಲೆಯು ಐದುನೂರು ರೂಪಾಯಿಗಳಷ್ಟು ಮಿಕ್ಕುವುದಿಲ್ಲವೋ ಅಂತಹ ಕರಾರು ಇಲ್ಲವೆ ಒಪ್ಪಂದವನ್ನು ತಾಲೂಕಬೋರ್ಡದ ಪರವಾಗಿ ಮುಖ್ಯ ಕಾರ್ಯಾಧಿಕಾರಿಯು ಮಾಡಿಕೊಳ್ಳಬಹುದು. ಮತ್ತು ಯಾವ ಕರಾರು ಇಲ್ಲವೆ ಒಪ್ಪಂದದ ಬೆಲೆಯು ಐದು ನೂರಕ್ಕಿಂತ ಹೆಚ್ಚಾಗುವುದೋ ಆದರೆ ಎರಡು ಸಾವಿರದಕಿಂತ ಹೆಚ್ಚಾಗುವದಿಲ್ಲವೊ ಅಂತಹ ಕರಾರು ಇಲ್ಲವೆ ಒಪ್ಪಂದವನ್ನು ಅಧ್ಯಕ್ಷನ ಪೂರ್ವ ಸಮ್ಮತಿಯಿಂದ ತಾಲೂಕ ಬೋರ್ಡದ ಪರವಾಗಿ ಅವನು ಮಾಡಿಕೊಳ್ಳಬಹುದು. ಮತ್ತು ಇನ್ನು ಳಿದ ಸಂದರ್ಭಗಳಲ್ಲಿ ತಾಲೂಕ ಬೋರ್ಡದ ಒಪ್ಪಿಗೆ ಇಲ್ಲವೆ ಪರವಾನಗಿಯಿಂದಲೇ ಕರಾರು ಇಲ್ಲವೆ ಒಪ್ಪಂದ ಮಾಡಿಕೊಳ್ಳತಕ್ಕದ್ದು.

(೩) ಉಪಕಲಮು (೨) ರಲ್ಲಿ ಹೇಳಿದುದರ ವಿರುದ್ಧವಾಗಿ ಏನೇ ಹೇಳಲಾಗಿದ್ದರೂ ತಾಲೂಕ ಬೋರ್ಡದ ಸ್ಥಾವರ ಆಸ್ತಿಯ ಖರೀದಿ, ಮಾರಾಟ, ಲಾವಣಿ, ಒತ್ತಿ, ಇಲ್ಲವೆ ಇತರ ಹಸ್ತಾಂತರದ ಸಲುವಾಗಿ, ತಾಲೂಕ ಬೋರ್ಡದ ಒಪ್ಪಿಗೆ ಇಲ್ಲವೆ ಪರವಾನಗಿ ಇದ್ದ ಹೊರತು, ಮುಖ್ಯ ಕಾರ್ಯಾಧಿಕಾರಿಯು ತಾಲೂಕ ಬೋರ್ಡದ ಪರವಾಗಿ ಯಾವುದೇ ಕರಾರು ಇಲ್ಲವೆ ಒಪ್ಪಂದವನ್ನು ಮಾಡಿಕೊಳ್ಳ ತಕ್ಕದ್ದಲ್ಲ.

**ವಿವೇಚನೆ**

ತಾಲೂಕ ಬೋರ್ಡದ ಪರವಾಗಿ ಆಗಬೇಕಾದ ಎಲ್ಲ ಕರಾರುಗಳು ಈ ಕಲಮಿನಲ್ಲಿ ಹೇಳಿದ ಪ್ರಕಾರವಾಗಿಯೇ ಆಗತಕ್ಕದ್ದು. ಕರಾರುಗಳನ್ನು ಮಾಡಿಕೊಳ್ಳುವವನು ಒಪ್ಪಂದಮಾಡಿಕೊಳ್ಳುವವನು ಮುಖ್ಯಕಾರ್ಯಾಧಿಕಾರಿ. ಅವನು ತಾಲೂಕ ಬೋರ್ಡದ ಪರವಾಗಿ ಮಾಡಿಕೊಳ್ಳುವನು. ಈ ಕಲಮಿನಲ್ಲಿ ಹೇಳಿದ ರೀತಿಯಲ್ಲಿ ಅವನು ಮಾಡಿಕೊಂಡರೆ ಮಾತ್ರ ಆ ಕರಾರು-ಇಲ್ಲವೆ ಒಪ್ಪಂದವು ತಾಲೂಕ ಬೋರ್ಡನ್ನು ಬಾಂಧಾಯಿಸುವುದು ಇಲ್ಲವಾದರೆ ಇಲ್ಲ 'ಎಂದು ಸ್ಪಷ್ಟವಾಗಿ ಹೇಳಲಾಗಿದೆ. ಅವನ ಅಧಿಕಾರದ ವ್ಯಾಪ್ತಿ ಎಷ್ಟು ಮತ್ತು ಹೇಗೆ ಎಂಬುವರ ವಿವರ ಇಲ್ಲಿ ಕೊಡಲಾಗಿದೆ.

ಕರಾರು ಇಲ್ಲವೆ ಒಪ್ಪಂದದಬೆಲೆಯು ರೂ.೫೦೦/ರಕಿಂತ ಒಳಗೆ ಇದ್ದರೆ ಹಾಗೂ ಅವನ ಅಧಿಕಾರದಲ್ಲಿಯ ವಿಷಯಗಳ ಸಂಬಂಧವಾಗಿದ್ದರೆ ಮುಖ್ಯಕಾರ್ಯಾಧಿಕಾರಿಯು ತಾನೇ ಸ್ವಂತದ ಜವಾಬುದಾರಿಯ ಮೇಲೆ ತಾಲೂಕ ಬೋರ್ಡದ ಪರವಾಗಿ ಕರಾರು ಇಲ್ಲವೆ ಒಪ್ಪಂದ ಮಾಡಿಕೊಳ್ಳಬಹುದು; ಅದರಬೆಲೆಯು ರೂ.೫೦೦/ರಕಿಂತ ಹೆಚ್ಚು ರೂ. ೨೦೦೦/ದಕಿಂತ ಕಡಿಮೆ ಇದ್ದರೆ ಪ್ರೆಸಿಡೆಂಟನ ಸಮ್ಮತಿ ತೆಗೆದುಕೊಂಡು ಮಾಡಿಕೊಳ್ಳಬಹುದು. ರೂ. ೨೦೦೦/ದಕಿಂತ ಬೆಲೆಯು ಹೆಚ್ಚಾಗುತ್ತಿದ್ದರೆ,ತಾಲೂಕ ಬೋರ್ಡದ ಪರವಾನಗಿ ತೆಗೆದುಕೊಂಡ ಹೊರತು ಮಾಡಿಕೊಳ್ಳಲಿಕ್ಕೆ ಮುಖ್ಯ ಕಾರ್ಯಾಧಿಕಾರಿಗೆ ಅಧಿಕಾರವಿಲ್ಲ.

ಈ ಕ್ರಮವು ಹೀಗೆ ಗೊತ್ತುಮಾಡಲ್ಪಟ್ಟರೂ ತಾಲೂಕ ಬೋರ್ಡದ ಪರವಾಗಿ ಅದರ ಸ್ಥಾವರ ಆಸ್ತಿಯ ಸಂಬಂಧವಾಗಿದ್ದ ಯಾವುದೇ ವ್ಯವಹಾರವನ್ನು ಮಾತ್ರ ಅದರ ಬೆಲೆಯು ಎಷ್ಟೇ ಇರಲಿ, ಆ ವಿಷಯದ ಬಗ್ಗೆ ಮುಖ್ಯ ಕಾರ್ಯಾಧಿಕಾರಿಗೆ ಅಧಿಕಾರವಿರಲಿ, ಅದರ ಬಗ್ಗೆ ಕರಾರು-ಒಪ್ಪಂದ ಮಾಡಿಕೊಳ್ಳುವ ಮೊದಲು ತಾಲೂಕ ಬೋರ್ಡದ ಒಪ್ಪಿಗೆ ಇಲ್ಲವೆ ಪರವಾನಗಿ ಪಡೆಯಲೇಬೇಕು. ಮುಖ್ಯ ಕಾರ್ಯಾಧಿಕಾರಿಗೆ ಅಧಿಕಾರಕೊಟ್ಟರೂ ಅದಕ್ಕೆ ನಿರ್ಬಂಧ ಇದೆ ಎಂಬುದನ್ನು ಮರೆಯಲಾಗದು.

## ೧೨೨. ಮುಖ್ಯ ಕಾರ್ಯಾಧಿಕಾರಿಯು ಮಾಡಿಕೊಂಡ ಕರಾರು ಗಳನ್ನು ವರದಿಮಾಡಬೇಕು

ತಾಲೂಕ ಬೋರ್ಡದ ಪರವಾಗಿ ಮುಖ್ಯ ಕಾರ್ಯಾಧಿಕಾರಿಯು ಕರಾರು ಇಲ್ಲವೆ ಒಪ್ಪಂದ ಮಾಡಿಕೊಂಡಾಗ ಹಾಗೆ ಮಾಡಿಕೊಂಡ ತಾರೀಖಿನಿಂದ ಹದಿನೈದು ದಿವಸಗಳ ಒಳಗೆ ಆ ಬಗ್ಗೆ ತಾಲೂಕ ಬೋರ್ಡಿಗೆ ಅವನು ವರದಿಮಾಡತಕ್ಕದ್ದು.

**ವಿವೇಚನೆ**

ಮುಖ್ಯ ಕಾರ್ಯಾಧಿಕಾರಿಗೆ ಕರಾರು-ಒಪ್ಪಂದ ಮಾಡಿಕೊಳ್ಳುವ ಅಧಿಕಾರ ವಿದ್ದರೂ ಕೆಲವು ನಿರ್ಬಂಧಗಳಿದ್ದುದನ್ನು ಮೇಲಿನ ಕಲಮಿನಲ್ಲಿ ಹೇಳಿದೆ. ಮಾಡಿ ಕೊಂಡ ಕರಾರುಗಳ ಬಗ್ಗೆ ಒಪ್ಪಂದದ ಬಗ್ಗೆ ಹದಿನೈದು ದಿವಸಗಳಲ್ಲಿ ತಾಲೂಕ ಬೋರ್ಡಿಗೆ ಅವನು ವರದಿ ಮಾಡಬೇಕೆಂದು ಹೇಳಿ, ಅವನು ಸ್ವತಂತ್ರವಾಗಿ ತನ್ನ ಅಧಿಕಾರದ ಮೂಲಕ ಮಾಡಿಕೊಂಡಿದ್ದರೂ ಆ ಮಾಹಿತಿಯು ತಾಲೂಕ ಬೋರ್ಡಿಗೆ ಹದಿನೈದು ದಿವಸಗಳ ಒಳಗೆ ತಿಳಿಸಲ್ಪಡಬೇಕು, ಎಂದು ಹೇಳಿದುದರಿಂದ ಬೋರ್ಡಿಗೆ ಬಾಂಧಾಯಿಸುವ ಕರಾರು ಇಲ್ಲವೆ ಒಪ್ಪಂದದ ಅರಿವು ಉಂಟಾಗುವುದು.

## ೧೨೩. ಬೋರ್ಡು ಮಾಡಿದ ವೆಚ್ಚಗಳಿಗಾಗಿ ತಾಲೂಕ ಬೋರ್ಡ ನಿಧಿಯು ಸಾಮಾನ್ಯವಾಗಿ ಹೊಣೆ ವಹಿಸತಕ್ಕದ್ದು

(೧) ಈ ಮುಂದೆ ಬೇರೆಯಾಗಿ ಅನುಕೂಲ ಮಾಡಿದುದನ್ನು ಹೊರತು ಪಡಿಸಿ, ತಾಲೂಕ ಬೋರ್ಡದ ಯಾವುದೇ ಮುಖ್ಯ ಕಾರ್ಯಾಧಿಕಾರಿ ಮತ್ತು ಯಾವುದೇ ಸದಸ್ಯನು ಇಂತಹ ಬೋರ್ಡದಿಂದ ಇಲ್ಲವೆ ಅದರ ಪರವಾಗಿ ಮಾಡಿದ ಯಾವುದೇ ಕರಾರು ಇಲ್ಲವೆ ಒಪ್ಪಂದದ ಯಾವುದೇ ವೆಚ್ಚ ಇವುಗಳ ಸಂಬಂಧವಾಗಿ ವೈಯುಕ್ತಿಕವಾಗಿ ಹೊಣೆಗಾರನಾಗಿರತಕ್ಕದ್ದಲ್ಲ.

(೨) ಇಂತಹ ಯಾವುದೇ ಕರಾರು ಇಲ್ಲವೆ ಒಪ್ಪಂದ ಮತ್ತು ಎಲ್ಲ ಇಂತಹ ವೆಚ್ಚಗಳು ಇವುಗಳ ಸಂಬಂಧವಾಗಿ ಪ್ರತಿ ತಾಲೂಕಬೋರ್ಡದ ಆಧೀನದಲ್ಲಿರುವ ತಾಲೂಕಬೋರ್ಡ ನಿಧಿಯು ಎಲ್ಲ ವೆಚ್ಚಗಳಿಗೆ ಹೊಣೆಗಾರವಾಗಿರತಕ್ಕದ್ದು ಮತ್ತು ಅದರ ಮೇಲೆ ಭಾರವಿರತಕ್ಕದ್ದು.

**ವಿವೇಚನೆ**

ಇಲ್ಲಿ ಎರಡು ಮಾತುಗಳನ್ನು ಹೇಳಿದೆ. ವೈಯುಕ್ತಿಕವಾಗಿ ಯಾವುದೇ ಮುಖ್ಯ ಕಾರ್ಯಾಧಿಕಾರಿಯು ಹಾಗೂ ಸದಸ್ಯನು ತಾಲೂಕಬೋರ್ಡದ ಪರವಾಗಿ ಮಾಡಿದ ಕರಾರುಗಳು, ಒಪ್ಪಂದಗಳು, ಇಲ್ಲವೆ ವೆಚ್ಚದ ಬಗ್ಗೆ ಹೊಣೆಗಾರನೆಂದು ಹಿಡಿಯು ತಕ್ಕದ್ದಲ್ಲ. ಅಂದರೆ ಆವರು ಅಧಿಕಾರ ಪದದ ಮೂಲಕ ಮಾಡಿದ ಹೊಣೆಯು

ಬೋರ್ಡಿನದು. ಬೋರ್ಡಿನ ಪರವಾಗಿ ಮಾಡಿದ ಎಲ್ಲ ವೆಚ್ಚದ ಭಾರವು ಬೋರ್ಡಿನ ನಿಧಿಯ ಮೇಲೆ. ಹೀಗೆ ಹೇಳುವುದರಿಂದ ಅಧಿಕಾರಿಗಳೂ ರಕ್ಷಿತರು ಆಗುವರು. ಮತ್ತು ಸಾರ್ವಜನಿಕರಿಗೂ ವಿಶ್ವಾಸ ಹುಟ್ಟುವುದು.

## ೧೨೪. ತಾಲೂಕಬೋರ್ಡು ಸಮಿತಿಗಳನ್ನು ನೇಮಿಸಬೇಕು

(೧) ಪ್ರತಿಯೊಂದು ತಾಲೂಕಬೋರ್ಡು ಚುನಾವಣೆಯಿಂದ ಈ ಕೆಳಗಿನ ಕಮಿಟಿಗಳನ್ನು ರಚಿಸತಕ್ಕದ್ದು.

(i) ಸ್ಟ್ಯಾಂಡಿಂಗ ಕಮೀಟಿ (ಸ್ಥಾಯಿ ಸಮಿತಿ)

(ii) ಆಡಿಟ ಕಮಿಟಿ (ಲೆಕ್ಕ ತಪಾಸಣೆ ಸಮಿತಿ)

(iii) ಪಬ್ಲಿಕ್ ಹೆಲ್ಥ ಕಮಿಟಿ (ಸಾರ್ವಜನಿಕ ಆರೋಗ್ಯ ಸಮಿತಿ)

(೨) ತಾಲೂಕಬೋರ್ಡದ ಅಧ್ಯಕ್ಷನು ಸ್ಥಾನ ಬಲದ ಮೂಲಕ ಸ್ಥಾಯಿ ಸಮಿತಿಯ ಹಾಗೂ ಲೆಕ್ಕ ತಪಾಸಣೆ ಸಮಿತಿಯ ಸದಸ್ಯನೂ ಮತ್ತು ಚೇರಮನ್ನನೂ ಆಗಿರತಕ್ಕದ್ದು; ಮತ್ತು ತಾಲೂಕಬೋರ್ಡದ ಉಪಾಧ್ಯಕ್ಷನು ತನ್ನ ಸ್ಥಾನಬಲದ ಮೂಲಕ ಸಾರ್ವಜನಿಕ ಆರೋಗ್ಯಸಮಿತಿಯ ಸದಸ್ಯನೂ ಹಾಗೂ ಚೇರಮನ್ನನೂ ಆಗಿರತಕ್ಕದ್ದು. ಸ್ಥಾನಬಲದ ಮೂಲಕ ಆಗಿರುವ ಚೇರಮನ್ನನು ಗೈರಹಾಜರಿಯಾಗಿದ್ದಾಗ ಬೇರೆ ಯಾವುದೇ ಸದಸ್ಯನನ್ನು ಚೇರಮನ್ನನ ಕೆಲಸಮಾಡಲು ಸಮಿತಿಯು ನೇಮಕಮಾಡಬಹುದು.

(೩) ಒಂದೊಂದು ಸಮಿತಿಯ ಒಟ್ಟು ಸದಸ್ಯರ ಸಂಖ್ಯೆಯು ತಾಲೂಕ ಬೋರ್ಡದಿಂದ ಈ ಸಂಬಂಧವಾಗಿ ಮಾಡಲಾದ ಕ್ರಮನಿಯಮಗಳಿಂದ ಗೊತ್ತು ಮಾಡಬಹುದಾದಂತೆ ಇರತಕ್ಕದ್ದು.

ಆದರೆ, ಇಂತಹ ಸಂಖ್ಯೆಯು ಐದರಕಿಂತ ಹೆಚ್ಚು ಆಗಿಯೂ, ಮೂರರಕಿಂತ ಕಡಿಮೆಯಾಗಿಯೂ ಇರತಕ್ಕದ್ದಲ್ಲ.

### ವಿವೇಚನೆ

ಕಾರ್ಯದ ವಿತರಣೆಯ ದೃಷ್ಟಿಯಿಂದ ಸಮಿತಿಗಳನ್ನು ಮಾಡಬೇಕೆಂದು ಮಾಡಲಾಗಿದೆ. ಸ್ಥಾಯಿ ಸಮಿತಿ, ಲೆಕ್ಕತಪಾಸಣೆ ಸಮಿತಿ ಹಾಗೂ ಸಾರ್ವಜನಿಕ ಆರೋಗ್ಯ ಸಮಿತಿಯೆಂದು ಸಮಿತಿಗಳನ್ನು ರೂಪಿಸತಕ್ಕದ್ದು. ಈ ಸಮಿತಿಗಳಲ್ಲಿ ಒಟ್ಟಿನಲ್ಲಿ ೫ ರ ಕಿಂತ ಹೆಚ್ಚು ಆಗದಂತೆ ೩ ರ ಕಿಂತ ಕಡಿಮೆಯಾಗದಂತೆ ಸದಸ್ಯರು ಇರತಕ್ಕದ್ದು. ಅಧ್ಯಕ್ಷನು ಸ್ಥಾಯಿ ಸಮಿತಿಯ ಹಾಗೂ ಲೆಕ್ಕತಪಾಸಣೆ ಸಮಿತಿಯ ಸದಸ್ಯ ಹಾಗೂ ಚೇರಮನ್ನನೆಂದು ತನ್ನ ಸ್ಥಾನ ಬಲದ ಮೂಲಕ ಇರತಕ್ಕದ್ದು. ಅಂದರೆ ಉಳಿದ ಸದಸ್ಯರು ಚುನಾಯಿತರಾಗಬೇಕಾದಂತೆ ಇವನು ಚುನಾಯಿತನಾಗಬೇಕಾಗಿಲ್ಲ. ಸ್ಥಾನ ಬಲದಿಂದ ಸಮಿತಿಗಳಲ್ಲಿ ಬರುವನು. ಅದರಂತೆ

ಉಪಾಧ್ಯಕ್ಷನು ಸಾರ್ವಜನಿಕ ಆರೋಗ್ಯ ಸಮಿತಿಯಲ್ಲಿ ಸ್ಥಾನ ಬಲದಿಂದ ಬರು ವನು. ಎಷ್ಟು ಸದಸ್ಯರು ಇರಬೇಕೆಂಬ ಬಗ್ಗೆ ತಾಲೂಕಬೋರ್ಡು ಈ ಸಂಬಂಧ ದಲ್ಲಿ ಕ್ರಮ ನಿಯಮಗಳನ್ನು ಮಾಡಿ ನಿರ್ದಿಷ್ಟಪಡಿಸುವುದು.

**೧೨೫. ಸಮಿತಿಗಳ ಕಾರ್ಯಗಳು**

(೧) ಬೋರ್ಡದ ಮುಂದೆ ಸಾದರಪಡಿಸುವ ಮೊದಲು, ಸ್ಥಾಯಿ ಸಮಿ ತಿಯು ಮುಂಗಡಪತ್ರವನ್ನು ರಚಿಸತಕ್ಕದ್ದು. ಮತ್ತು ಬೋರ್ಡು ಅನುಸರಿಸಬೇ ಕಾದ ಧೋರಣೆಗಳನ್ನು ರೂಪಿಸತಕ್ಕದ್ದು.

(೨) ಆದಾಯವನ್ನು ಹೆಚ್ಚಿಸುವ ಸೂಚನೆಗಳನ್ನು, ಆಯವ್ಯಯ ಪತ್ರಿಕೆ ಗಳನ್ನು, ಲೆಕ್ಕತಪಾಸಣಿ ಸಮಿತಿಯು ಪರಿಶೀಲಿಸತಕ್ಕದ್ದು. ಆರ್ಥಿಕ ವ್ಯವಸ್ಥೆಗೆ ಬಾಧಿಸುವ ಎಲ್ಲ ಹೊಸ ಸೂಚನೆಗಳನ್ನು ತೂಗಿ ನೋಡತಕ್ಕದ್ದು. ಮತ್ತು ಬೋರ್ಡದ ಆದಾಯ ಮತ್ತು ವೆಚ್ಚಗಳನ್ನು ಸಾಧಾರಣವಾಗಿ ಮೇಲ್ವಿಚಾರಣೆ ಮಾಡತಕ್ಕದ್ದು.

(೩) ಸಾರ್ವಜನಿಕ ಆರೋಗ್ಯ ಮತ್ತು ಸ್ವಚ್ಛತೆಯ ಬಗ್ಗೆ ಬೋರ್ಡದಿಂದ ಒಪ್ಪಿಸಬಹುದಾದಂತಹ ಬೋರ್ಡದ ಅಧಿಕಾರಗಳನ್ನು ಸಾರ್ವಜನಿಕ ಆರೋಗ್ಯ ಸಮಿತಿಯು ನಿರ್ವಹಿಸತಕ್ಕದ್ದು, ಮತ್ತು ಬೋರ್ಡದ ಕರ್ತವ್ಯಗಳನ್ನು ಮಾಡ ತಕ್ಕದ್ದು ಮತ್ತು ಈ ಕಾಯಿದೆಯ ಶರ್ತುಗಳಿಗೆ ಮತ್ತು ಕಾಯಿದೆಯನ್ವಯವಾಗಿ ಮಾಡಿದ ನಿಯಮಗಳನ್ನು ಮತ್ತು ಕ್ರಮ ನಿಯಮಗಳಿಗೆ ಪರಿಣಾಮಕಾರಿಯಾಗು ವಂತೆ ಮಾಡತಕ್ಕದ್ದು ಮತ್ತು ತನ್ನ ಯಾವುದೇ ಅಧಿಕಾರಗಳನ್ನು ಮತ್ತು ಕರ್ತವ್ಯ ಗಳನ್ನು ಬೋರ್ಡದ ಯಾವುದೇ ಸದಸ್ಯನಿಗೆ ಇಲ್ಲವೆ ಅಧಿಕಾರಿಗೆ ಒಪ್ಪಿಸಬಹುದು. ಇಂತಹ ಸದಸ್ಯನು ಇಲ್ಲವೆ ಅಧಿಕಾರಿಯು ಕಾಲಕಾಲಕ್ಕೆ ಬೋರ್ಡದಿಂದ ಕೊಡಲ್ಪಡುವ ಯಾವುದೇ ಆದೇಶಗಳಿಗೆ ಹೊಂದಿಕೊಂಡಿರತಕ್ಕದ್ದು, ಹೀಗೆ ಒಪ್ಪಿಸಲಾದ ಯಾವುದೇ ಅಧಿಕಾರಗಳನ್ನು ಇಲ್ಲವೆ ಕರ್ತವ್ಯಗಳನ್ನು ಯಾವುದೇ ಕಾಲಕ್ಕೆ ಸಮಿತಿಯು ಹಿಂದೆ ತೆಗೆದುಕೊಳ್ಳಬಹುದು.

**ವಿವೇಚನೆ**

ಸಮಿತಿಗಳು ಮೂರು. ಅವುಗಳ ಕಾರ್ಯಗಳು ಬೇರೆ. ಸ್ಥಾಯಿ ಸಮಿ ತಿಯು ಬೋರ್ಡದ ಮುಂದೆ ಇಡುವುದಕ್ಕಾಗಿ ಮುಂಗಡ ಪತ್ರವನ್ನೂ ಬೋರ್ಡು ಅನುಸರಿಸಬೇಕಾದ ಧೋರಣೆಗಳನ್ನೂ ರೂಪಿಸಬೇಕು. ಬೋರ್ಡದ ಕಾರ್ಯಕ್ಕಾಗಿ ಒಂದು ಪರಿಮಿತಿಯನ್ನು ಗೊತ್ತುಮಾಡುವುದು ಸ್ಥಾಯಿಸಮಿತಿಯ ಕಾರ್ಯ. ಈ ಪರಿಮಿತಿಯಲ್ಲಿ ಬೋರ್ಡು ಕೆಲಸಮಾಡಿದರೆ ಹಿತವೆಂದು ಸೂಚನೆ ಮಾಡುವ ಕೆಲಸ ಸ್ಥಾಯಿಸಮಿತಿಯದು.

ಲೆಕ್ಕ ತಪಾಸಣೆ ಸಮಿತಿಯು ವಿವರದಲ್ಲಿ ತಲೆಹಾಕುವುದು. ಆದಾಯವನ್ನು ಹೆಚ್ಚುಮಾಡುವ ಬಗ್ಗೆ ಇದ್ದ ಸೂಚನೆಗಳನ್ನು ಪರೀಶಿಲಿಸುವುದು. ಅವು ವ್ಯಾವ ಹಾರಿಕವಾಗಿರುವುವೊ ಇಲ್ಲವೊ, ಹಿಂದಿನ ಆಯವ್ಯಯಪತ್ರಿಕೆಗಳಿಗೆ ಹೊಂದುವುದೋ ಇಲ್ಲವೋ; ಆಯವ್ಯಯ ಪತ್ರಿಕೆಯು ಸರಿಯಾಗಿದೆಯೋ ಇಲ್ಲವೋ, ಬೋರ್ಡದ ಆರ್ಥಿಕ ವ್ಯವಸ್ಥೆಯ ಬಗ್ಗೆ ಇದ್ದ ಎಲ್ಲ ಹೊಸ ಸೂಚನೆಗಳನ್ನು ತೂಗಿ ನೋಡಿ ಅವು ಹಿತಕಾರಿಯಾಗಿರುವುವೊ ಇಲ್ಲವೊ, ಎಂಬುದನ್ನು ನೋಡುವ ಕೆಲಸ ಈ ಲೆಕ್ಕ ತಪಾಸಣಿ ಸಮಿತಿಯದು. ಒಟ್ಟಿನ ಮೇಲೆ ಲೆಕ್ಕ ನೋಡುವುದಲ್ಲದೆ, ಲೆಕ್ಕ ಹೊಂದಿಸುವುದೂ ಅದರ ಕರ್ತವ್ಯವಾಗಿದೆ.

ಸಾರ್ವಜನಿಕ ಆರೋಗ್ಯ ಸಮಿತಿಯು ಬೋರ್ಡು ಒಪ್ಪಿಸಿಕೊಟ್ಟ ಕರ್ತವ್ಯಗಳನ್ನು ಮಾಡುವುದು. ಅದನ್ನು ಮತ್ತೆ ಆ ಸಮಿತಿಯು ಬೇರೆ ಸದಸ್ಯನಿಗೆ ಇಲ್ಲವೆ ಅಧಿಕಾರಿಗೆ ಒಪ್ಪಿಸಿಕೊಡಬಹುದು. ಬೋರ್ಡು ಕೊಡುವ ಆದೇಶದಲ್ಲಿ ಈ ಕೆಲಸ ನಡೆಯತಕ್ಕದ್ದು.

ಹೀಗೆ ಸಮಿತಿಗಳನ್ನು ಮಾಡುವುದರಿಂದ ಕೆಲಸವು ಹೆಚ್ಚು ಅಸ್ಥೆಯಿಂದ ಆಗುವುದು.

ಪಂಚಾಯತವು ಕೂಡ ತನ್ನ ಕಾರ್ಯಗಳನ್ನು ಕೆಲ ಸಮಿತಿ ಮಾಡಿ ನಡೆಸಬೇಕೆಂದು ಕಲಮು ೫೧ ಹೇಳುವುದು. ಅದರ ವಿವೇಚನೆಯಲ್ಲಿ ಹೇಳಿದ ತತ್ವವನ್ನು ನೋಡಿರಿ.

### ೧೨೬. ಸ್ಥಾಯಿಸಮಿತಿಯ ಅವಸರದ ಅಧಿಕಾರಗಳು

ಯಾವುದೇ ಕೆಲಸದ ನಿರ್ವಹಣೆಗೆ ಇಲ್ಲವೆ ಯಾವುದೇ ಕಾರ್ಯವನ್ನು ಮಾಡುವುದಕ್ಕೆ ಬೋರ್ಡದ ಪರವಾನಗಿ ಬೇಕಾಗಿದ್ದಾಗ ಮತ್ತು ಅದರ ಅಭಿಪ್ರಾಯದಲ್ಲಿ ತತ್‌ಕ್ಷಣ ಕಾರ್ಯಮಾಡುವುದು ಸಾರ್ವಜನಿಕರ ಆರೋಗ್ಯ ಹಾಗೂ ರಕ್ಷಣೆಯ ದೃಷ್ಟಿಯಿಂದ ಅವಶ್ಯವಾಗಿದ್ದಾಗ ಅವಸರದ ಸಂದರ್ಭವಿದ್ದಾಗ ತಾಲೂಕ ಬೋರ್ಡದ ಸ್ಥಾಯಿಸಮಿತಿಯು ಯಾವುದೇ ಕೆಲಸ ನಡೆಯಬೇಕೆಂದು ಇಲ್ಲವೆ ನಿಲ್ಲಬೇಕೆಂದು ನಿರ್ದೇಶಿಸಬಹುದು. ಮತ್ತು ಇಂತಹ ಕೆಲಸ ನಿರ್ವಹಣೆಯು ಇಲ್ಲವೆ ಇಂತಹ ಕಾರ್ಯ ಮಾಡಬೇಕಾಗಿ ಬಂದ ವೆಚ್ಚವು ತಾಲೂಕ ಬೋರ್ಡದಿಂದ ಕೊಡಲ್ಪಡಬೇಕೆಂದು ನಿರ್ದೇಶಿಸಬಹುದು.

ಆದರೆ, (ಅ) ಯಾವುದೇ ವಿಶಿಷ್ಟ ಕೆಲಸವನ್ನು ಇಲ್ಲವೆ ಯಾವುದೇ ವಿಶಿಷ್ಟ ಕಾರ್ಯ ಮಾಡುವುದನ್ನು, ಮುಂದುವರಿಸುವುದನ್ನು ನಿರ್ಬಂಧಿಸಿರುವ ಬೋರ್ಡದ ಯಾವುದೇ ಹುಕುಮಿನ ವಿರುದ್ಧವಾಗಿ ಈ ಕಲಮಿನನ್ವಯವಾಗಿ ಅದು ಕಾರ್ಯ ಮಾಡತಕ್ಕದ್ದಲ್ಲ. ಮತ್ತು

(ಬ) ಈ ಕಲಮಿನನ್ವಯವಾಗಿ ಅದು ತೆಗೆದುಕೊಂಡ ಕ್ರಮವನ್ನು ಮತ್ತು ಹಾಗೆ ಕ್ರಮ ತೆಗೆದುಕೊಂಡುದರ ಕಾರಣಗಳನ್ನು ಕೂಡಲೇ ಬೋರ್ಡಿಗೆ ಅದರ ಸಭೆಯಲ್ಲಿ ವರದಿಮಾಡತಕ್ಕದ್ದು.

**ವಿವೇಚನೆ**

ಸ್ಥಾಯಿ ಸಮಿತಿಯು ಕಡಿಮೆ ಸದಸ್ಯರನ್ನುಳ್ಳದ್ದು. ಬೋರ್ಡು ಸಭೆ ಸೇರ ಬೇಕಾದರೆ ಇರುವ ನೋಟೀಸು ವಿಧಾನಗಳ ಜಂಜಡ ಇದಕ್ಕೆ ಇರುವುದಿಲ್ಲ. ಆದ್ದರಿಂದ ಅವಸರದ ಪ್ರಸಂಗ ಬಂದಾಗ ಬೋರ್ಡಿನ ಅಧಿಕಾರಗಳನ್ನು ನಡೆಸಲು ಕೆಲವೊಂದು ನಿರ್ಬಂಧಗಳನ್ನು ಹಾಕಿ ಈ ಕಲಮಿನ ಮೂಲಕ ಸ್ಥಾಯಿಸಮಿತಿಗೆ ಅಧಿಕಾರ ಕೊಡಲಾಗಿದೆ. ಬೋರ್ಡಿನ ಪರವಾನಗಿ ಅವಶ್ಯವಾಗಿರುವಂತಹ ಪ್ರಸಂಗ ಇರಬೇಕು. ಅದನ್ನು ತೆಗೆದುಕೊಂಡು ಮಾಡುವುದು ತಡವಾಗಿ ಸಾರ್ವಜನಿಕರ ಆರೋಗ್ಯಕ್ಕೆ ಇಲ್ಲವೆ ರಕ್ಷಣೆಗೆ ವ್ಯತ್ಯಯ ಬರುತ್ತದೆಂದು ಸ್ಥಾಯಿ ಸಮಿತಿಯ ಅಭಿಪ್ರಾಯವಾದರೆ ಸ್ಥಾಯಿ ಸಮಿತಿಯು ಬೋರ್ಡದ ಪರವಾನಗಿಗಾಗಿ ಕಾಯಿದೆ ಕೆಲಸಮಾಡುವ ಅಧಿಕಾರ ಇದೆ. ಹೀಗೆ ಮಾಡಬೇಕಾದ ಅವಸರದ ಕಾರ್ಯದ ವೆಚ್ಚವನ್ನು ಬೋರ್ಡದ ನಿಧಿಯು ವಹಿಸಬೇಕೆಂದು ನಿರ್ದೇಶನಮಾಡಲು ಕೂಡ ಸ್ಥಾಯಿಸಮಿತಿಗೆ ಅಧಿಕಾರ ಇದೆ. ಹೀಗೆ ಮಾಡಿದ ಕಾರ್ಯವನ್ನು ಕೂಡಲೆ ಬೋರ್ಡದ ಸಭೆಗೆ ವರದಿ ಮಾಡಬೇಕು. ಆದರೆ, ಬೋರ್ಡದವರು ಯಾವುದೇ ಕೆಲಸ—ಕಾರ್ಯದ ಬಗ್ಗೆ ಈ ಮೊದಲೆ ಒಂದು ಹುಕುಮು ಹೊರಡಿಸಿದ್ದರೆ, ಅದರ ವಿರುದ್ಧವಾಗಿ ಈ ಅವಸರದ ಅಧಿಕಾರದ ಸದರಿನಲ್ಲಿ ಕಾರ್ಯಮಾಡಲು ಸ್ಥಾಯಿ ಸಮಿತಿಗೆ ಅಧಿಕಾರವಿಲ್ಲ. ಅಂದರೆ ಬೋರ್ಡಿನ ಹುಕುಮಿನ ವಿರುದ್ಧ ಕಾರ್ಯಮಾಡಲು ಈ ಕಲಮು ಅಧಿಕಾರ ಕೊಟ್ಟಿಲ್ಲ.

**೧೨೭. ಇತರ ಸಮಿತಿಗಳು**

ಕಲಮು ೧೨೪ ರಲ್ಲಿ ನಿರ್ದಿಷ್ಟಪಡಿಸಿದ ಉದ್ದೇಶಗಳನ್ನು ಬಿಟ್ಟು ಬೇರೆ ಯಾವುದೇ ಉದ್ದೇಶಗಳಿಗಾಗಿ ಅದು ನಿರ್ಣಯಮಾಡಬಹುದಾದಂತೆ ಅಷ್ಟು ಸದಸ್ಯ ರುಳ್ಳ ಸಮಿತಿಗಳನ್ನು ತಾಲೂಕಬೋರ್ಡ ನೇಮಿಸಬಹುದು. ಮತ್ತು ಒಂದೊಂದು ಸಮಿತಿಗೆ ಅದು ಯಾವ ಉದ್ದೇಶಕ್ಕಾಗಿ ನೇಮಿಸಲ್ಪಟ್ಟಿದೆಯೋ ಆ ಉದ್ದೇಶವು ಪೂರೈಸಲ್ಪಡುವುದಕ್ಕೆ ಆವಶ್ಯಕವಾದ ಇಲ್ಲವೆ ಅಗತ್ಯವಾದ ಅಂತಹ ಅಧಿಕಾರ ಗಳನ್ನು ಒಪ್ಪಿಸಿಕೊಡಬಹುದು. ಯಾವ ಉದ್ದೇಶಕ್ಕಾಗಿ ಅಂತಹ ಸಮಿತಿಯು ನೇಮಿಸಲ್ಪಟ್ಟಿರುವುದೋ ಆ ಉದ್ದೇಶವು ಪೂರ್ತಿಯಾದೊಡನೆ ಇಲ್ಲವೆ ಬೋರ್ಡು ನಿರ್ದಿಷ್ಟಪಡಿಸಬಹುದಾದಂತಹ ಕಾಲಕ್ಕೆ ಅಂತಹ ಪ್ರತಿಯೊಂದು ಸಮಿತಿಯು ಅಸ್ತಿತ್ವವನ್ನು ಕಳೆದುಕೊಳ್ಳತಕ್ಕದ್ದು.

**ವಿವೇಚನೆ**

ಕಲಮು ೧೨೪ ರಲ್ಲಿ ಹೇಳಿದ ಮೂರು ಸಮಿತಿಗಳ ಕಾರ್ಯಗಳನ್ನು ಬಿಟ್ಟು ಬೇರೆ ಉದ್ದೇಶಗಳಿಗಾಗಿ ಸಮಿತಿಗಳನ್ನು ಮಾಡಬಹುದು. ಆ ಉದ್ದೇಶಪೂರ್ತಿ ಗಾಗಿ ಅವಶ್ಯವಾದ ಎಲ್ಲ ಅಧಿಕಾರಗಳನ್ನು ಬೋರ್ಡು ಆಯಾ ಸಮಿತಿಗಳಿಗೆ ಕೊಡತಕ್ಕದ್ದು. ಕೆಲಸ ಮುಗಿದ ಕೂಡಲೆ ಇಲ್ಲವೆ ಬೋರ್ಡು ನಿರ್ಧರಿಸಿದ ಕೂಡಲೆ ಈ ಸಮಿತಿಗಳು ಅಸ್ತಿತ್ವ ಕಳೆದುಕೊಳ್ಳತಕ್ಕದ್ದು. ಅಂದರೆ ಇವು ತಾತ್ಪೂರ್ತಿಕ ಕಾರ್ಯ ಇಲ್ಲವೆ ಉದ್ದೇಶಗಳಿಗಾಗಿ ಸಮಿತಿಗಳು ಎಂದು ಅರ್ಥ.

**೧೨೮. ಸಮಿತಿಗಳ ಕಾರ್ಯಪದ್ಧತಿ**

(೧) ಸಮಿತಿಗಳ ಸದಸ್ಯರ ಚುನಾವಣೆ ಇಲ್ಲವೆ ನೇಮಕದ ಸಂಬಂಧವಾಗಿ ಅಲ್ಲಿಯ ವ್ಯವಹಾರದ ನಡೆವಳಿಕೆಯ ಸಂಬಂಧವಾಗಿ, ಮತ್ತು ಅದಕ್ಕೆ ಸಂಬಂಧ ಪಟ್ಟ ಬೇರೆ ವಿಷಯುಗಳ ಸಂಬಂಧವಾಗಿ ತಾಲೂಕ ಬೋರ್ಡು ಕ್ರಮನಿಯಮ ಗಳನ್ನು ರೂಪಿಸಬಹುದು.

(೨) ಕಲಮು ೧೨೪ ಇಲ್ಲವೆ ೧೨೭ ಇದರನ್ವಯವಾಗಿ ರಚಿತವಾದ ಪ್ರತಿ ಯೊಂದು ಸಮಿತಿಯು ತಿಂಗಳಿಗೆ ಒಮ್ಮೆಯಾದರೂ ಸಭೆ ಸೇರತಕ್ಕದ್ದು.

(೩) ಪ್ರತಿಯೊಂದು ಸಮಿತಿಯು ಸಭೆಯಲ್ಲಿ ಮುಖ್ಯ ಕಾರ್ಯಾಧಿಕಾರಿಯು ಹಾಜರಿರತಕ್ಕದ್ದು ಮತ್ತು ಅದರ ಚರ್ಚೆಯಲ್ಲಿ ಭಾಗವಹಿಸಲು ಅವನಿಗೆ ಅಧಿಕಾರ ಇರತಕ್ಕದ್ದು. ಆದರೆ, ಅವನಿಗೆ ಮತದಾನ ಮಾಡಲು ಇಲ್ಲವೆ ಠರಾವು ಮುಂಡಿಸಲು ಅಧಿಕಾರ ಇರತಕ್ಕದ್ದಲ್ಲ.

(೪) ತಾಲೂಕ ಬೋರ್ಡದ ಕೆಲಸಕ್ಕೆ ಸಂಬಂಧವಿದ್ದ ಸರಕಾರದ ಯಾವುದೇ ಅಧಿಕಾರಿಯು ಬೋರ್ಡದ ಸಮ್ಮತಿಯಿಂದ ತಾಲೂಕ ಬೋರ್ಡದ ಯಾವುದೇ ಸಭೆಗೆ ಇಲ್ಲವೆ ಅದರ ಯಾವುದೇ ಸಮಿತಿಯ ಸಭೆಗೆ ಹಾಜರಿರಬಹುದು. ಮತ್ತು ತನ್ನ ಖಾತೆಗೆ ಬಾಧಿಸುವ ಯಾವುದೇ ವಿಷಯುದ ಚರ್ಚೆ ನಡೆದಾಗ ಅಂತಹ ಬೋರ್ಡದ ಸಭೆಯನ್ನು ಇಲ್ಲವೆ ಸಮಿತಿಯ ಸಭೆಯನ್ನು ಉದ್ದೇಶಿಸಿ ಮಾತ ನಾಡಬಹುದು. ಮತ್ತು ಬೋರ್ಡ ಇಲ್ಲವೆ ಸಮಿತಿಯು ಅಪೇಕ್ಷಿಸಿದರೆ, ಇಂತಹ ವಿಷಯುಗಳ ಬಗ್ಗೆ ತನ್ನ ಸಲಹೆಯನ್ನು ಕೊಡತಕ್ಕದ್ದು.

**ವಿವೇಚನೆ**

ತಾಲೂಕ ಬೋರ್ಡು ಕ್ರಮನಿಯಮಗಳನ್ನು ರೂಪಿಸತಕ್ಕದ್ದು. ಅವು ಸಮಿ ತಿಗಳ ಸದಸ್ಯರ ಚುನಾವಣೆ, ಸಭೆಯ ನಡೆವಳಿಕೆ, ಸದಸ್ಯರ ನೇಮಕ ಮುಂತಾದ ವಿಷಯುಗಳ ಬಗ್ಗೆ ವಿವರಿಸಬೇಕು. ಕಲಮು ೧೨೪ ರಲ್ಲಿ ಹೇಳಿದ ನಿತ್ಯ ಸಮಿತಿ ಗಳಾಗಲೀ ಕಲಮು ೧೨೭ ರಲ್ಲಿ ಹೇಳಿದ ನೈಮಿತ್ತಿಕ ಇಲ್ಲವೆ ತಾತ್ಪೂರ್ತಿಕ ಸಮಿತಿ

ಯಾಗಿರಲಿ, ಅದು, ತಿಂಗಳಿಗೆ ಒಮ್ಮೆಯಾದರೂ ಸಭೆ ಸೇರಬೇಕು. ಈ ಸಭೆಗಳಿಗೆ ಹಾಜರಿರಲು ಮುಖ್ಯ ಕಾರ್ಯಾಧಿಕಾರಿಗೆ ಅಧಿರವಿದೆ. ಆ ಸಭೆಯಲ್ಲಿ ಅವನು ಚರ್ಚೆಯಲ್ಲಿಭಾಗವಹಿಸುವುದು.ಆದರೆ ಅವನಿಗೆ ಮತಾಧಿಕಾರವಾಗಲೀ ಠರಾವು ಮಂಡಿಸುವ ಅಧಿಕಾರವಾಗಲೀ ಇಲ್ಲ. ತಾಲೂಕ ಬೋರ್ಡದಲ್ಲಿ ಇಲ್ಲವೆ ಯಾವುದೇ ಸಮಿತಿಯ ಸಭೆಯಲ್ಲಿ ಸರಕಾರದ ಖಾತೆಗೆ ಸಂಬಂಧಪಟ್ಟವಿಷಯಗಳ ಚರ್ಚೆ ನಡೆದರೆ ಆಕಾಲಕ್ಕೆ ಬೋರ್ಡಿನ ಸಮ್ಮತಿಯಿಂದ ಆ ಖಾತೆಗೆ ಸಂಬಂಧಪಟ್ಟ ಅಧಿಕಾರಿಯು ಹಾಜರ ಇರಬಹುದು. ಚರ್ಚೆಯಲ್ಲಿ ಭಾಗವಹಿಸಬಹುದು. ಅಪೇಕ್ಷೆ ಪಟ್ಟಲ್ಲಿ ಸಲಹೆಯನ್ನು ಕೊಡಬಹುದು. ಇದರಿಂದ ಸಂಬಂಧಪಟ್ಟ ಖಾತೆಯ ಕಾರ್ಯಕ್ಕೂ ಬೋರ್ಡಿನ ಕೆಲಸಕ್ಕೂ ಸಂಬಂಧವುಂಟಾಗಿ ಕಾರ್ಯವು ಸುಲಭವೂ ಸರಲವೂ ತ್ವರಿತವೂ ಆಗುವುದು.

## ೧೨೯. ಬೋರ್ಡಿನ ಕಾರ್ಯಗಳು ಕಾಯಿದೆ ಬದ್ಧವಲ್ಲವೆಂದು ಸಾರಲಾಗದು

ತಾಲೂಕ ಬೋರ್ಡದ, ಸಮಿತಿಯ, ಅಧ್ಯಕ್ಷನ, ಉಪಾಧ್ಯಕ್ಷನ ಸಭಾಪತಿಯ ಇಲ್ಲವೆ ಮುಖ್ಯ ಕಾರ್ಯಾಧಿಕಾರಿಯ ಇಲ್ಲವೆ ಸದಸ್ಯನ ನೇಮಕ ಇಲ್ಲವೆ ರಚನೆಯಲ್ಲಿಯ ಯಾವುದೇ ದೋಷದ ಕಾರಣದಿಂದ ಇಲ್ಲವೆ ಅವರು ಇಲ್ಲವೆ ಅವರಲ್ಲಿ ಯಾರೊಬ್ಬರು ಅಂತಹ ಅಧಿಕಾರ ಪದಕ್ಕಾಗಿ, ಅನರ್ಹತೆ ಪಡೆದಿದ್ದಾರೆಂಬ ನಿಮಿತ್ತದಿಂದ, ಇಲ್ಲವೆ ತಾಲೂಕ ಬೋರ್ಡದ ಇಲ್ಲವೆ ಸಮಿತಿಯ ಸಭೆಯನ್ನು ಕರೆಯುವುದರ ಉದ್ದೇಶದಿಂದ ಯೋಗ್ಯವಾದ ರೀತಿಯಲ್ಲಿ ವಿಧಾನಾತ್ಮಕ ನೋಟೀಸು ಕೊಟ್ಟಿಲ್ಲವೆಂಬ ಕಾರಣದಿಂದ ಇಲ್ಲವೆ ಅಧ್ಯಕ್ಷ, ಉಪಾಧ್ಯಕ್ಷ, ಇಲ್ಲವೆ ಮುಖ್ಯ ಕಾರ್ಯಾಧಿಕಾರಿ, ಇಲ್ಲವೆ ಇಂತಹ ಬೋರ್ಡದ ಇಲ್ಲವೆ ಸಮಿತಿಯ ಸದಸ್ಯನ ಸ್ಥಳವು ಖಾಲಿಯಾದ ಕಾಲಾವಧಿಯಲ್ಲಿ ಯಾವುದೇ ಕಾರ್ಯವು ಮಾಡಲ್ಪಟ್ಟಿತೆಂಬ ಕಾರಣದಿಂದ ಇಲ್ಲವೆ ಬೇರೆ ಯಾವುದೇ ವಿಧಾನರಾಹಿತ್ಯದಿಂದ ತಾಲೂಕಬೋರ್ಡದ ಯಾವುದೇ ಕಾರ್ಯವು, ಇಲ್ಲವೆ ಯಾವುದೇ ಸಮಿತಿಯ ಯಾವುದೇ ಕಾರ್ಯವು, ಇಲ್ಲವೆ ಸದಸ್ಯನೆಂದು, ಇಲ್ಲವೆ ಅಧ್ಯಕ್ಷನೆಂದು, ಉಪಾಧ್ಯಕ್ಷನೆಂದು ಇಲ್ಲವೆ ಸಭಾಪತಿ ಎಂದು, ಇಲ್ಲವೆ ಮುಖ್ಯ ಕಾರ್ಯಾಧಿಕಾರಿ ಎಂದು, ಯಾವುದೇ ವ್ಯಕ್ತಿಯು ಮಾಡಿದ ಕಾರ್ಯವು ಕಾಯಿದೆಬದ್ಧವಲ್ಲವೆಂದು ಗಣಿಸಲ್ಪಡತಕ್ಕದ್ದಲ್ಲ.

### ವಿವೇಚನೆ

ಈ ಕಲಮು ೪೧ ನೆಯ ಕಲಮಿನಂತೆ ಇದೆ. ಅಲ್ಲಿಯ ವಿವೇಚನೆಯನ್ನು ನೋಡಬೇಕು.

ಕಾರ್ಯ ಮಾಡುತ್ತಿರುವಾಗ ವಿಧಾನಾರಾಹಿತ್ಯದಿಂದ ಅಲಕ್ಷ್ಯದಿಂದ ಒಮ್ಮೊಮ್ಮೆ ಕ್ರಮದಂತೆ ಕಾರ್ಯ ಆಗುತ್ತಿಲ್ಲ. ಕಾರ್ಯ ಆದ ಮೇಲೆ ಇದು

ಕ್ರಮದಂತೆ ಆಗಿಲ್ಲವೆಂಬ ಕಾರಣಮಾತ್ರದಿಂದ ಆವ ಕಾರ್ಯವು ಕಾಯಿದೆಬದ್ಧವಲ್ಲ ಎಂದು ಯಾರೂ ತಕರಾರು ಮಾಡಬಾರದೆಂದು ಈ ಕಲಮು ಇದೆ. ಕ್ರಮವಾಗಲೀ ಪದ್ಧತಿಯಾಗಲೀ ವಿಧಾನವಾಗಲೀ ಕಾರ್ಯ ನಡೆವ ಮುಂಚೆ ವಿಚಾರಿಸಬೇಕಾದ ಸಂಗತಿ. ಒಮ್ಮೆ ಕಾರ್ಯ ಆಯಿತೆಂದರೆ ಎಲ್ಲವೂ ಕ್ರಮದಂತೆ ನಡೆದಿರಲೇಬೇಕೆಂಬ ಗ್ರಹಿಕೆ ಬರುವುದು. ಹಾಗೆ ನಡೆದಿಲ್ಲವೆಂದು ನಂತರದಲ್ಲಿ ಕಂಡು ಬಂದರೆ, ಆವ ಕಾರ್ಯವು ಕ್ರಮಬದ್ಧವಲ್ಲ ಕಾಯಿದೆಬದ್ಧವಲ್ಲ ಎಂದು ಯಾರೂ ಅನ್ನಲಾಗದು ಎಂದು ಹೇಳಿ ಆದ ಕಾರ್ಯವು ಯಾವಾಗಲೂ ಕಾಯಿದೆಬದ್ಧವಾಗಿಯೇ ಇರುವುದು ಎಂದು ಹೇಳಿದ ಹಾಗೆ ಇಲ್ಲಿ ಸೂಚನೆ ಇದೆ.

## ಪ್ರಕರಣ : ೮ ತಾಲೂಕ ಬೋರ್ಡುಗಳ ಕಾರ್ಯಗಳು

### ೧೪೦. ತಾಲೂಕ ಬೋರ್ಡು ಮಾಡಲೇಬೇಕಾದ ಕಾರ್ಯಗಳು

(೧) ಈ ಸಂಬಂಧದಲ್ಲಿ ಸರಕಾರದಿಂದ ಕಾಲಕಾಲಕ್ಕೆ ಮಾಡಲ್ಪಡಬಹುದಾದ ಇಲ್ಲವೆ ಹಾಕಲ್ಪಡಬಹುದಾದ ಅಂತಹ ಅಪವಾದಗಳು ಮತ್ತು ಕರಾರುಗಳು ಇವುಗಳ ಅಂಕಿತವಾಗಿ ತಾಲೂಕ ಬೋರ್ಡು ತನ್ನ ಅಧಿಕಾರ ಕ್ಷೇತ್ರದ ಪ್ರದೇಶದ ಒಳಗೆ ಯೋಗ್ಯ ಅನುಕೂಲತೆಗಳನ್ನು ಮತ್ತು ಪರಿಣಾಮಕಾರಿಯಾದ ಅನುಕೂಲತೆಗಳನ್ನು ಅಧಿಕಾರ ಕ್ಷೇತ್ರದ ಒಳಗಿನ ಪ್ರದೇಶದಲ್ಲಿ ಮಾಡಲು ಬರದೆ ಇದ್ದಾಗ ಆ ಪ್ರದೇಶದ ಹೊರಗೆ, ಈ ಕೆಳಗಿನ ವಿಷಯಗಳ ಬಗ್ಗೆ ಅನುಕೂಲತೆಗಳನ್ನು ಮಾಡುವುದು ಪ್ರತಿಯೊಂದು ತಾಲೂಕ ಬೋರ್ಡದ ಕರ್ತವ್ಯವಾಗಿರತಕ್ಕದ್ದು.

( i ) ಸರಕಾರದ ಇಲ್ಲವೆ ಬೇರೆ ಯಾವುದೇ ಸ್ಥಾನಿಕ ಅಧಿಕಾರದ ನಿಯಂತ್ರಣಕ್ಕೆ ಒಳಗಾಗದೆ ಇದ್ದ ಸಾರ್ವಜನಿಕ ರಸ್ತೆಗಳ ಮತ್ತು ಬೇರೆ ಸಂಪರ್ಕ ಸಾಧನಗಳ ರಚನೆ ಮಾಡುವುದು, ದುರಸ್ತಿಮಾಡುವುದು ಮತ್ತು ಸುಸ್ಥಿತಿಯಲ್ಲಿಡುವುದು;

(ii) ಸರಕಾರದ ಪ್ರಾಥಮಿಕ ಶಾಲಾಕಟ್ಟಡಗಳ ರಚನೆ ಮಾಡುವುದು, ದುರಸ್ತಿ ಮಾಡುವುದು ಮತ್ತು ಸುಸ್ಥಿತಿಯಲ್ಲಿಡುವುದು;

(iii) ಕಿರಿ ನೀರಾವರಿ ರಚನೆಗಳನ್ನು ಅಂದರೆ, ೧೦ ಎಕರೆಗಳಿಗಿಂತ ಹೆಚ್ಚು ಅಲ್ಲದ ಭೂಮಿಯಿರುವ ಪ್ರದೇಶದ ಸಲುವಾಗಿ, ನೀರಾವರಿ ಸೌಕರ್ಯಗಳನ್ನು ಒದಗಿಸುವ ನೀರಾವರಿ ರಚನೆಗಳನ್ನು ರಚನೆಮಾಡುವುದು, ದುರುಸ್ತಿ ಮಾಡುವುದು ಮತ್ತು ಸುಸ್ಥಿತಿಯಲ್ಲಿಡುವುದು.

(iv) ತನ್ನ ನಿಯಂತ್ರಣದಲ್ಲಿದ್ದ ರಸ್ತೆಗಳ ಬದಿಗೆ ಮತ್ತು ಇತರ ಸಾರ್ವಜನಿಕ ಜಾಗಾದ ಬದಿಗೆ ಗಿಡಗಳನ್ನು ಹಚ್ಚುವುದು ಮತ್ತು ಅವುಗಳ ಪರಿಪಾಲನೆ ಮಾಡುವುದು.

(v) ಆಸ್ಪತ್ರೆಗಳು, ದವಾಖಾನೆಗಳು, ದನದ ಆಸ್ಪತ್ರೆಗಳು, ಮಾರ್ಕೆಟ್ಟು ಗಳು, ಪ್ರವಾಸಿಕರ ಬಂಗಲೆಗಳು, ಮುಸಾಫಿರಖಾನಾಗಳು, ತಂಗುವಮನೆಗಳು, ಮತ್ತು ಇತರ ಸಾರ್ವಜನಿಕ ಸಂಸ್ಥೆಗಳು ಇವುಗಳನ್ನು ಸ್ಥಾಪನೆಮಾಡುವುದು, ಸಂಚಾಲನ ಮಾಡುವುದು, ಸುಸ್ಥಿತಿಯಲ್ಲಿಡುವುದು, ಮತ್ತು ಪರಿಶಿಲನೆಮಾಡುವುದು, ಮತ್ತು ಈ ಸಂಸ್ಥೆಗಳಿಗೆ ಸಂಬಂಧಪಟ್ಟ ಎಲ್ಲ ಕಟ್ಟಡಗಳ ರಚನೆಮಾಡುವುದುಮತ್ತು ದುರಸ್ತಿಮಾಡುವುದು;

(vi) ಸಾರ್ವಜನಿಕ ಬಾವಿಗಳು, ಕೆರೆಗಳು ಮತ್ತು ಒಂದಕ್ಕಿಂತ ಹೆಚ್ಚು ಪಂಚಾಯತಗಳಿಗೆ ಸೇವೆ ಸಲ್ಲಿಸುವ ಜಲಸಂಗ್ರಹಗಳು ಇವುಗಳ ರಚನೆಮಾಡುವುದು ಮತ್ತು ದುರುಸ್ತಿಮಾಡುವುದು, ಅಲ್ಲಿಂದ ಮತ್ತು ಇತರ ಉಗಮಗಳಿಂದ ನೀರನ್ನು ಪೂರೈಸುವುದು, ಕುಡಿಯುವ ಮತ್ತು ಅಡಿಗೆಗಾಗಿ ಬಳಸುವ ನೀರನ್ನು ಅಸ್ವಚ್ಛ ವಾಗದಂತೆ ಕಾದಿಡುವುದು;

(vii) ವೈಲಿ ಚುಚ್ಚುವುದನ್ನು (ಸಿಡುಬು ಹಾಕುವುದನ್ನು) ಪುರಸ್ಕರಿಸುವುದು.

(viii) ಬೇರೆ ಬೇರೆ ಪಂಚಾಯತಗಳ ಗ್ರಾಮಗಳನ್ನು ಬಾಧಿಸುವ ಇತರ ಸ್ಥಾನಿಕ ಸೇವೆ, ಸಾರ್ವಜನಿಕ ಆರೋಗ್ಯ, ಸ್ವಚ್ಛತೆ ಇವುಗಳಿಗೆ ಆವಶ್ಯಕವಾದ ಕ್ರಮಗಳನ್ನು ತೆಗೆದುಕೊಳ್ಳುವುದು ಮತ್ತು ಜಾತ್ರೆಗಳ, ಉತ್ಸವಗಳ, ಸಮಾರಂಭಗಳ ಸಮಯದಲ್ಲಿ ಸಾರ್ವಜನಿಕ ಆರೋಗ್ಯ ಮತ್ತು ಸ್ವಚ್ಛತೆಯನ್ನು ನಿಯಂತ್ರಿಸುವುದು;

(ix) ಇದರ ವಶಕ್ಕೆ ಒಪ್ಪಿಸಲ್ಪಡಬಹುದಾದ ಅಂತಹ ಸಾರ್ವಜನಿಕ ತಾರಿಣಿಗಳ ಸಂಚಾಲನ ಮಾಡುವುದು;

(x) ಈ ಕಾಯಿದೆಯನ್ವಯವಾಗಿ ಬೋರ್ಡದ ಅಂತರ್ಗತವಾಗಿರುವ ಯಾವುದೇ ಕಟ್ಟಡ ಇಲ್ಲವೆ ಇತರ ಆಸ್ತಿಯನ್ನು ಸುಸ್ಥಿತಿಯಲ್ಲಿಡುವುದು;

(xi) ಗ್ರಾಮಾಂತರ ಪ್ರದೇಶಗಳ ಹಿತಕ್ಕಾಗಿ ಸಮ್ಮೇಲನಗಳನ್ನು, ತರಬೇತಿ ಕೇಂದ್ರಗಳನ್ನು, ಕೃಷಿಕ ಹಾಗೂ ಔದ್ಯಮಿಕ ಪ್ರದರ್ಶನಗಳನ್ನು ಸಂಘಟಿಸುವುದು;

(xii) ಗ್ರಾಮಾಂತರ ಪ್ರಸಿದ್ಧಿ ಪ್ರಚಾರವನ್ನು ಸಂಘಟಿಸುವುದು. ಹಾಗೂ ಅದನ್ನು ಪೋಷಿಸುವುದು;

(xiii) ತಾಲೂಕದಲ್ಲಿಯ ಸಾಮಾಜಿಕ ಶಿಕ್ಷಣ ಕಾರ್ಯವನ್ನು ವಿಸ್ತಾರ ಮಾಡುವುದು ಹಾಗೂ ಉತ್ತೇಜನ ಕೊಡುವುದು;

(xiv) ಜಾತ್ರೆ ಮತ್ತು ಉತ್ಸವಗಳನ್ನು ಕ್ರಮಪಡಿಸುವುದು;

(xv) ಸಂತೆಗಳನ್ನು ಸ್ಥಾಪಿಸುವುದು. ಹಾಗೂ ನಿಯಂತ್ರಿಸುವುದು;

(xvi) ಈ ಕಾಯಿದೆಯ ಶರತುಗಳಿಗನುಸಾರವಾಗಿ ಕಟ್ಟಡಗಳ ಮೇಲೆ ವಿಚಾರಣೆ ಹಾಗೂ ನಿಯಂತ್ರಣ ಮಾಡುವುದು;

(xvii) ಕಾಲ ಕಾಲಕ್ಕೆ ಸರಕಾರದವರಿಂದ ತಾಲೂಕ ಬೋರ್ಡಿಗೆ ಒಪ್ಪಿಸಲ್ಪಡುವಂತಹ ಬೇರೆ ವಿಷಯಗಳು

ಆದರೆ, ವಾಕ್ಯ (xvii) ರನ್ವಯವಾಗಿ ಕರ್ತವ್ಯಗಳನ್ನು ತಾಲೂಕ ಬೋರ್ಡಿಗೆ ಒಪ್ಪಿಸಲ್ಪಟ್ಟಾಗ ಆ ಕರ್ತವ್ಯಗಳಿಗಾಗಿ ತಾಲೂಕ ಬೋರ್ಡದ ನಿತ್ಯ ಆದಾಯದಿಂದ ವೆಚ್ಚ ಮಾಡುವುದು ಅಸಾಧ್ಯವೆಂದು ಕಂಡು ಬಂದಾಗ ಸರಕಾರವು ಆವಶ್ಯಕ ಧನವನ್ನು ಕೊಡತಕ್ಕದ್ದು. ಇಲ್ಲವೆ ಸರಕಾರಕ್ಕೆ ಯೋಗ್ಯವೆನಿಸುವ ಹಾಗೆ ಬೋರ್ಡದ ಕಡೆಗೆ ಅಂತಹ ಅಧಿಕಾರಿಗಳ ಸೇವೆಗಳನ್ನು ಕೊಡತಕ್ಕದ್ದು. ಹೀಗೆ ಕೊಡಲಾದ ಧನದ ವಿನಿಯೋಗಕ್ಕಾಗಿ, ಮತ್ತು ಸೇವೆಗಳ ಕರಾರುಗಳನ್ನು ಕ್ರಮಪಡಿಸುವುದಕ್ಕಾಗಿ ಮತ್ತು ಇತರ ಸಂಬಧಪಟ್ಟ ವಿಷಯಗಳಿಗಾಗಿ ಸರಕಾರವು ಕೂಡ ನಿಯಮಗಳನ್ನು ಮಾಡಬಹುದು.

(೨) ಯಾವ ತಾಲೂಕದಲ್ಲಿ ಅಭಿವೃದ್ಧಿ ಘಟಕವು ಸ್ಥಾಪಿಸಲ್ಪಟ್ಟಿರುವುದೋ ಅಂತಹ ಪ್ರತಿಯೊಂದು ತಾಲೂಕದಲ್ಲಿ ಇಂತಹ ಘಟಕದ ಆಡಳಿತಕ್ಕೆ ಸಂಬಧಪಟ್ಟ ಚಟುವಟಿಕೆಗಳನ್ನು ಈ ಸಂಬಂಧದಲ್ಲಿ ಸರಕಾರವು ಮಾಡಿದ ಸಾಧಾರಣ ಇಲ್ಲವೆ ವಿಶಿಷ್ಟ ಹುಕುಮುಗಳ ಅನುಸಾರವಾಗಿ ಮೇಲ್ವಿಚಾರಣೆ ಮಾಡುವುದು ಹಾಗೂ ನಿಯಂತ್ರಣ ಮಾಡುವುದು ತಾಲೂಕ ಬೋರ್ಡದ ಕರ್ತವ್ಯವಾಗಿರತಕ್ಕದ್ದು.

**ವಿವೇಚನೆ**

ಈ ಕಲಮು ೪೨ ನೆಯ ಕಲಮಿನ ರೀತಿಯಲ್ಲಿದೆ. ಅದಕ್ಕಿಂತ ವ್ಯಾಪಕವಾಗಿದೆ. ತಾಲೂಕ ಬೋರ್ಡದ ಕ್ಷೇತ್ರವೂ ದೊಡ್ಡದು, ಅಧಿಕಾರವೂ ಹೆಚ್ಚು.

ಈ ಕಲಮಿನಲ್ಲಿ ವಿವರಿಸಲಾದ ಕಾರ್ಯಗಳನ್ನು ತಾಲೂಕ ಬೋರ್ಡು ಮಾಡಲೇಬೇಕು. ಇದರಲ್ಲಿ ಎರಡು ಭಾಗ. ಮೊದಲನೆಯದರಲ್ಲಿ ತಾಲೂಕ ಬೋರ್ಡು ತನ್ನದೇ ಆದ ಕೆಲಸಗಳನ್ನು ಮಾಡುವುದು; ಎರಡನೆಯದರಲ್ಲಿ ಸರಕಾರವು ತಾಲೂಕ ಬೊರ್ಡಿಗೆ ಒಪ್ಪಿಸಿ ಕೊಟ್ಟ ಕೆಲಸಗಳನ್ನು ಮಾಡುವುದು. ಅವು ಕೂಡ ಮಾಡಲೇಬೇಕಾದ ಕರ್ತವ್ಯಗಳಲ್ಲಿ ಬರುವುವು.

ಹೀಗೆ ಸರಕಾರವು ಒಪ್ಪಿಸಿಕೊಟ್ಟ ಕೆಲಸಗಳ ವೆಚ್ಚದ ಬಾಬತ್ತು ಸರಕಾರವು ಧನವನ್ನಾದರೂ ಕೊಡುವುದು ಇಲ್ಲವೆ ತನಗೆ ಯೋಗ್ಯ ಕಂಡಂತಹ ಅಧಿಕಾರಿ-ಸೇವಕರನ್ನು ಕೆಲಸಕ್ಕಾಗಿ ಬೋರ್ಡಿನ ಕಡೆಗೆ ಕೊಡುವುದು. ಆದರೆ ಮೇಲ್ವಿಚಾರಣೆ-ನಿಯಂತ್ರಣ ಜವಾಬುದಾರಿ ಬೋರ್ಡಿನದು. ಅದರಂತೆ ಆ ತಾಲೂಕದಲ್ಲಿರುವ ಅಭಿವೃದ್ಧಿ ಘಟಕದ ಮೇಲ್ವಿಚಾರಣೆ ಹಾಗೂ ನಿಯಂತ್ರಣವು ತಾಲೂಕ ಬೋರ್ಡಿನ ಕರ್ತವ್ಯ, ಎಂಬುವನ್ನು ನೆನೆದರೆ, ಬೋರ್ಡಿನ ಕೆಲಸ ಹಾಗೂ ಅಭಿವೃದ್ಧಿಯ ಕೆಲಸಗಳನ್ನು ಹೊಂದಿಸಲಾಗಿದ್ದುದು ತಿಳಿದು ಬರುವುದು. ಅಭಿವೃದ್ಧಿ

ಘಟಕ ಇದ್ದಲ್ಲಿ ಅದರ ಅಧಿಕಾರಿಯೇ ಬೋರ್ಡದ ಮುಖ್ಯ ಕಾರ್ಯಾಧಿಕಾರಿಯಾಗುವನೆಂಬ ಮಾತು ಲಕ್ಷದಲ್ಲಿ ಬರಬೇಕು.

## ೧೩೧. ತಾಲೂಕ ಬೋರ್ಡುಗಳು ಮಾಡಬಹುದಾದ ಕಾರ್ಯಗಳು

ತಾಲೂಕ ಬೋರ್ಡು—

(ಎ) (i) ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣವನ್ನು ಕೊಡುತ್ತಿರುವ ಸಂಸ್ಥೆಗಳನ್ನು ಸ್ಥಾಪಿಸುವುದರಲ್ಲಿ ಮತ್ತು ನಡೆಸುವುದರಲ್ಲಿ ಧನಸಹಾಯ ಮಾಡಬಹುದು;

(ii) ತಾಲೂಕದ ಒಳಗೆ ಇಲ್ಲವೆ ತಾಲೂಕ ಮತ್ತು ಇತರ ತಾಲೂಕಗಳ ನಡುವೆ ಸಂಪರ್ಕ ಸಾಧನಗಳನ್ನು ಪ್ರತ್ಯಕ್ಷವಾಗಿ ಸುಧಾರಿಸಬಹುದಾದ ಯಾವುದೇ ಕೆಲಸದ ಮೇಲೆ ವೆಚ್ಚ ಮಾಡಲಾದ ಭಂಡವಾಳದ ಮೇಲೆ ಬಡ್ಡಿಯನ್ನು ತನಗೆ ಯೋಗ್ಯ ಕಂಡಂತೆ, ತಾಲೂಕ ಬೋರ್ಡು ಕಾಲ ಕಾಲಕ್ಕೆ ಸರಕಾರದ ಪರವಾನಗಿಯನ್ನು ಪಡೆದುಕೊಂಡು, ಕೊಡುವುದರ ಬಗ್ಗೆ ಆಶ್ವಾಸನ ಕೊಡಬಹುದು;

(iii) ತಾಲೂಕದಲ್ಲಿ ಸಹಕಾರೀ ಸಂಘಗಳಿಗೆ ಉತ್ತೇಜನ ಕೊಡಬಹುದು ಹಾಗು ಅವುಗಳ ಅಭಿವೃದ್ಧಿ ಮಾಡಬಹುದು;

(iv) ಒಕ್ಕಲುತನ, ಉದ್ಯಮ, ಹಾಗೂ ವಾಣಿಜ್ಯ ದೃಷ್ಟಿಯಿಂದ ವಿಶೇಷ ಆಸಕ್ತಿ ವಹಿಸಿ ಆರ್ಥಿಕ ಪರಿಸ್ಥಿತಿಯನ್ನು ಅಭಿವೃದ್ಧಿ ಮಾಡಬಹುದು;

(v) ಸ್ಥಾನಿಕ ಕಲೆಗಳನ್ನು ಹಾಗೂ ಉದ್ಯಮಗಳನ್ನು ಉತ್ತೇಜನ ಮಾಡಬಹುದು ಮತ್ತು ಈ ಸಂಬಂಧದಲ್ಲಿ ಸರಕಾರವು ಮಾಡಬಹುದಾದಂತಹ ನಿಯಮಗಳ ಅಂಕಿತವಾಗಿ ಈ ಉದ್ದೇಶಗಳಿಗಾಗಿ ಸಾಲಗಳನ್ನು ದಯಪಾಲಿಸಬಹುದು;

(vi) ದನ, ಮೀನುಗಾರಿಕೆ, ಕೋಳಿ ಸಾಕುವಿಕೆಯ ಸುಧಾರಣೆಗಾಗಿ ಕ್ರಮಗಳನ್ನು ತೆಗೆದುಕೊಳ್ಳಬಹುದು;

(vii) ತಾಲೂಕ ಬೋರ್ಡದಿಂದ ನೌಕರಿಯಲ್ಲಿಟ್ಟುಕೊಂಡ ಇಲ್ಲವೆ ಬೋರ್ಡು ನಿಯಮಿತವಾಗಿ ಧನಸಹಾಯ ಮಾಡುತ್ತಿರುವ ಯಾವುದೇ ಸಂಸ್ಥೆಯಲ್ಲಿಯ ಯಾವುದೇ ವರ್ಗದ ಸೇವಕರಿಗಾಗಿ ವಸತಿ ಸೌಕರ್ಯ ಒದಗಿಸಬಹುದು. ಮತ್ತು ಈ ಸಂಬಂಧದಲ್ಲಿ ಸರಕಾರವು ಮಾಡಬಹುದಾದಂತಹ ನಿಯಮಗಳ ಹಾಗೂ ಕರಾರುಗಳ ಅಂಕಿತವಾಗಿ ಇಂತಹ ಸೇವಕರಿಗೆ ಮನೆಗಳನ್ನು ಕಟ್ಟಿಕೊಳ್ಳುವುದಕ್ಕೆ ಸಾಲಗಳನ್ನು ದಯಪಾಲಿಸಬಹುದು;

(viii) ಪರಿಶಿಷ್ಟ ವರ್ಗದವರ ಉನ್ನತಿಗಾಗಿ ಕ್ರಮಗಳನ್ನು ತೆಗೆದುಕೊಳ್ಳಬಹುದು, ಮತ್ತು.

(ಬಿ) ಸರಕಾರದ ಪೂರ್ವ ಸಮ್ಮತಿಯನ್ನು ಪಡೆದು—

(i) ಬರಗಾಲ ಇಲ್ಲವೆ ಕೊರತೆಯ ಕಾಲದಲ್ಲಿ ಪರಿಹಾರ ಮತ್ತು ಪರಿಹಾರ ಕಾಮಗಿರಿಗಳನ್ನು ಮತ್ತು ಆವಶ್ಯಕ ಸಾಮಾನುಗಳ ಪೂರೈಕೆಗಾಗಿ ಅಂಗಡಿ ಇಲ್ಲವೆ ಮಳಿಗೆಗಳನ್ನು ಸಂಘಟಿಸಬಹುದು ಮತ್ತು ಪೋಷಿಸಬಹುದು.

(ii) ತನ್ನ ನಿಯಂತ್ರಣದ ಪ್ರದೇಶದ ಒಳಗೆ ಇಲ್ಲವೆ ಹೊರಗೆ ಮಾನವ ಸಂಕಷ್ಟಗಳ ನಿವಾರಣೆಗಾಗಿ ಎತ್ತಲಾದ ಸಾರ್ವಜನಿಕ ನಿಧಿಗೆ ವಂತಿಗೆಯನ್ನು ಕೊಡಬಹುದು.

(iii) ಸಾರ್ವಜನಿಕರ ಸಾಗಾಟಕ್ಕಾಗಿ ಮೋಟರ ಮತ್ತು ಇತರ ಸಾರಿಗೆಯ ಸೌಕರ್ಯಗಳನ್ನು ಒದಗಿಸಬಹುದು ಇಲ್ಲವೆ ಈ ಉದ್ದೇಶಕ್ಕಾಗಿ ಸರಕಾರದಿಂದ ಇಲ್ಲವೆ ಕಂಪನಿಯಿಂದ ವೆಚ್ಚ ಮಾಡಲಾದ ಬಂಡವಾಳದ ಮೇಲೆ, ತನಗೆ ಯೋಗ್ಯ ವೆಂದು ಕಂಡ ಬಡ್ಡಿಯೆಂದು ರಕಮನ್ನು ತಾಲೂಕ ಬೋರ್ಡ ನಿಧಿಯಿಂದ ಕೊಡುವ ಬಗ್ಗೆ ಆಶ್ವಾಸನ ಕೊಡಬಹುದು ಮತ್ತು ಈ ಉದ್ದೇಶಕ್ಕಾಗಿ ಬಂಡವಾಳ ಒದಗಿಸು ವುದರ ಸಲುವಾಗಿ ಸಾಲಗಳನ್ನು ದಯಪಾಲಿಸಬಹುದು.

(iv) ತಾಲೂಕದಲ್ಲಿ ಔದ್ಯಮಿಕ ಮತ್ತು ವ್ಯಾಪಾರಿಕ ಇಲ್ಲವೆ ವ್ಯಾವಸಾ ಯಿಕ ಸಂಸ್ಥೆಗಳನ್ನು ಸ್ಥಾಪಿಸಬಹುದು ಹಾಗೂ ಪೋಷಿಸಬಹುದು.

(v) ಸಾರ್ವಜನಿಕ ಆರೋಗ್ಯ, ಭದ್ರತೆ, ಇಲ್ಲವೆ ಅನುಕೂಲತೆ ಜನತೆಯ ಭೌತಿಕ ಇಲ್ಲವೆ ನೈತಿಕ ಅಭಿವೃದ್ಧಿ ಪುರಸ್ಕಾರ ಮಾಡುವುದಕ್ಕೆ ಈ ಮೊದಲು ನಿರ್ದಿಷ್ಟವಾಗಿ ಹೆಸರಿಸದೆ ಇದ್ದ ಯಾವುದೇ ಬೇರೆ ಕ್ರಮವನ್ನು ಇಲ್ಲವೆ ಈ ಕಾಯಿದೆಯ ಉದ್ದೇಶಗಳನ್ನು ಪೂರೈಸುವುದಕ್ಕಾಗಿ ಆವಶ್ಯಕವಾದ ಕ್ರಮವನ್ನು ಕೈಕೊಳ್ಳಬಹುದು. ಈ ಬಗ್ಗೆ ಮಾಡಬೇಕಾದ ವೆಚ್ಚವು ತಾಲೂಕ ಬೋರ್ಡದ ನಿಧಿಯ ಮೇಲೆ ಆಧರಿಸಲು ಯೋಗ್ಯವಾಗಿರುವುದೆಂದು ತಾಲೂಕ ಬೋರ್ಡದ ಒಟ್ಟು ಸದಸ್ಯರ ಸಂಖ್ಯೆಯಲ್ಲಿ ಎರಡು ಮೂರಾಂಶದಕಿಂತ ಕಡಿಮೆ ಇಲ್ಲದಷ್ಟು ಮತ ಗಳಿಂದ ತಾಲೂಕ ಬೋರ್ಡು ಠರಾವು ಮಾಡಿರಬೇಕು.

## ವಿವೇಚನೆ

ಬೋರ್ಡು ಮಾಡಬಹುದಾದ ಕಾರ್ಯಗಳಲ್ಲಿ ಎರಡು ಭಾಗ. ಒಂದು ತಾನೇ ತಿಳಿದು ಮಾಡಬಹುದಾದ ಕಾರ್ಯಗಳು, ಇನ್ನೊಂದು ಸರಕಾರದ ಪೂರ್ವಸಮ್ಮತಿ ಪಡೆದು ಮಾಡಬಹುದಾದ ಕಾರ್ಯಗಳು.

ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ ಕಾರ್ಯದಲ್ಲಿ ನೆರವಾಗುವುದು, ಸಹಕಾರೀ ಸಂಘಗಳು ಬೆಳೆಯುವಂತೆ ಉತ್ತೇಜನ ಕೊಡುವುದು, ಸ್ಥಾನಿಕ ಕಲಾ-ಕೈಗಾರಿಕೆಗಳು ಬೆಳೆಯುವಂತೆ ಮಾಡುವುದು, ವನಗಳು, ಮೀನುಗಾರಿಕೆ-ಕೋಳಿ ಸಾಕುವಿಕೆಯಲ್ಲಿ ಸುಧಾರಣೆ ಆಗುವಂತೆ ಮಾಡುವುದು, ವಸತಿ ಸೌಕರ್ಯಗಳನ್ನು

ತನ್ನ ಸೇವಕರಿಗಾಗಿ ಮಾಡಿಕೊಡುವುದು. ಮತ್ತು ಪರಿಶಿಷ್ಟ ವರ್ಗದವರ ಉನ್ನತಿಗಾಗಿ ಶ್ರಮಿಸುವುದು, ಇವೆಲ್ಲ ವಿಷಯಗಳನ್ನು ಆಸ್ಥೆವಹಿಸಿ ತಾಲೂಕ ಬೋರ್ಡು ಕಾರ್ಯ ಮಾಡಿದರೆ, ಅದರ ಆಧಿಕಾರದಲ್ಲಿಯೇ ಮಾಡಿದಂತೆ ಆಗುವುದು.

ಸರಕಾರದ ಪರವಾನಗಿ ಪಡೆದು, ಸಾರಿಗೆ ಸಂಪರ್ಕದಲ್ಲಿ ಹಣತೊಡಗಿಸಿದ ಬಂಡವಾಳಕ್ಕೆ ಬಡ್ಡಿ ಕೊಡಬಹುದು. ಬರಗಾಲ ಪರಿಹಾರಕ ಕಾಮಗಿರಿ, ಇತರ ಸಂಕಷ್ಟ ಪರಿಹಾರದ ಕಾರ್ಯ, ವಾಹನ ಸೌಕರ್ಯ ನೀಡುವುದಕ್ಕೆ ಬಂಡವಾಳ ಒದಗಿಸುವುದು ಇಲ್ಲವೆ ಒದಗಿಸಿದ ಬಂಡವಾಳಕ್ಕೆ ಬಡ್ಡಿ ಕೊಡುವುದು. ತಾಂತ್ರಿಕ ತರಬೇತಿ ಸಂಸ್ಥೆಗಳನ್ನು ಸ್ಥಾಪಿಸುವುದು, ಇನ್ನಿತರ ರೀತಿಯಲ್ಲಿ ಯಾವುದು ಈ ಕಾಯಿದೆಯ ಉದ್ದೇಶಗಳನ್ನು ಪೂರೈಸುವುದು ಅದನ್ನೆಲ್ಲ ಮಾಡಲುಬಹುದು.

ಸರಕಾರದ ಪರವಾನಗಿ ಎರಡು ಕಾರಣಗಳ ಮೂಲಕ; ಸರಕಾರವೂ ಅಂತಹ ಕಾರ್ಯಗಳನ್ನು ಮಾಡುವ ಸಂಭವವಿರುವುದರಿಂದ ಅದರ ಪರವಾನಗಿ ಕೇಳಿದಾಗ ಅದರ ಲಕ್ಷ್ಯಕ್ಕೆ ಬಂದು ಕೂಡಿ ಕೆಲಸ ಮಾಡಬಹುದು. ಅಲ್ಲದೆ ಧನ ವಿನಿಯೋಗವನ್ನೂ ಈ ಮಾಡಬಹುದಾದ ಕಾರ್ಯದಲ್ಲಿ ಮಾಡಬೇಕಾದಾಗ ಸಾರ್ವಜನಿಕ ಹಿತದ ಅಳತೆಯನ್ನು ಮಾಡಿ, ಮಾಡಲೇಬೇಕಾದ ಕರ್ತವ್ಯಗಳನ್ನು ಮೊದಲು ಮಾಡಿದ್ದಾರೊ ಇಲ್ಲವೊ ಎಂಬುದನ್ನು ನೋಡಲಿಕ್ಕೆ ಆಗುವುದು.

ಕಲಮು ೪೩ ಪಂಚಾಯತವು ಮಾಡಬಹುದಾದ ಕಾರ್ಯದ ಬಗ್ಗೆ ಇದೆ. ಅದರ ವಿವೇಚನೆಯನ್ನು ನೋಡಬೇಕು.

## ೧೩೨. ತಾಲೂಕ ಬೋರ್ಡು ಆಸ್ತಿಯನ್ನು ಪಡೆಯುವುದು ಮತ್ತು ಸ್ವಾಧೀನದಲ್ಲಿಟ್ಟುಕೊಳ್ಳುವುದು ಮುಂತಾದವು ನಿಯಮಗಳ ಅಂಕಿತವಾಗಿರತಕ್ಕದ್ದು

ತಾಲೂಕ ಬೋರ್ಡದ ಅಧಿಕಾರವಿರುವ ಪ್ರದೇಶದ ಮಿತಿಯ ಒಳಗೆ ಇಲ್ಲವೆ ಹೊರಗೆ ಇರುವ ಸ್ಥಾವರ ಮತ್ತು ಜಂಗಮ ಆಸ್ತಿಗಳನ್ನು ಪಡೆದುಕೊಳ್ಳಲು ಹಾಗೂ ಸ್ವಾಧೀನದಲ್ಲಿಟ್ಟುಕೊಳ್ಳಲು ತಾಲೂಕ ಬೋರ್ಡದ ಅಧಿಕಾರದ ಅಂತರ್ಗತವಾಗಿದ್ದ ಇಲ್ಲವೆ ತಾಲೂಕ ಬೋರ್ಡು ಪಡೆದ ಯಾವುದೇ ಸ್ಥಾವರ ಇಲ್ಲವೆ ಜಂಗಮ ಆಸ್ತಿಯನ್ನು ಬಾಡಿಗೆ ಕೊಡಲು, ಮಾರಾಟ ಮಾಡಲು, ಇಲ್ಲವೆ ಬೇರೆ ರೀತಿಯಿಂದ ಹಸ್ತಾಂತರಿಸಲು ಮತ್ತು ಒಪ್ಪಂದ ಮಾಡಿಕೊಳ್ಳಲು ಮತ್ತು ಈ ಕಾಯಿದೆಯ ಉದ್ದೇಶಗಳಿಗಾಗಿ ಆವಶ್ಯಕವಾದ ಎಲ್ಲವನ್ನು ಮಾಡಲು, ಪ್ರತಿಯೊಂದು ತಾಲೂಕ ಬೋರ್ಡದ ಅಧಿಕಾರವು ಈ ಸಂಬಂಧದಲ್ಲಿ ಸರಕಾರವು ಮಾಡಿದ ನಿಯಮಗಳಿಗೆ ಅಂಕಿತವಾಗಿರತಕ್ಕದ್ದು.

ಆದರೆ, ಏಳು ವರುಷಕ್ಕಿಂತ ಹೆಚ್ಚಿನ ಕಾಲಾವಧಿಯ ವರೆಗೆ ಕೊಡಲಾದ ಸ್ಥಾವರ ಆಸ್ತಿಯ ಬಾಡಿಗೆಯ ವ್ಯವಹಾರವು ಮತ್ತು ಇಂತಹ ಆಸ್ತಿಯ ಮಾರಾಟ ಇಲ್ಲವೆ ಬೇರೆ ರೀತಿಯ ಹಸ್ತಾಂತರವು ಸರಕಾರದ ಪೂರ್ವ ಸಮ್ಮತಿ ಇದ್ದ ಹೊರತು, ಇಂತಹ ಬಾಡಿಗೆ ವ್ಯವಹಾರ, ಮಾರಾಟ ಇಲ್ಲವೆ, ಬೇರೆ ಹಸ್ತಾಂತರವು ಕಾಯಿದೆ ಬದ್ಧವಾಗದು.

ಆದರೆ, ಕಲಮು ೧೭೦ ರಲ್ಲಿ ಅನುಕೂಲಿಸಲಾದುದನ್ನು ಬಿಟ್ಟು ಮತ್ತು ಸರಕಾರದ ಪೂರ್ವ ಸಮ್ಮತಿಯಿಲ್ಲದೆ, ಇಲ್ಲಿ ಹೇಳಿದ ಯಾವುದೇ ಮಾತು ತಾಲೂಕ ಬೋರ್ಡಿಗೆ ಸಾಲ ಎತ್ತುವ ಅಧಿಕಾರವನ್ನು ಕೊಟ್ಟಿರುವುದಿಲ್ಲ.

**ವಿವೇಚನೆ**

ಕಲಮು ೫೦ ರ ಹಾಗೆ ಇದೆ ಈ ಕಲಮು. ಅಲ್ಲಿಯ ವಿವೇಚನೆಯನ್ನು ನೋಡಿರಿ. ಸ್ಥಾವರ ಆಸ್ತಿಯನ್ನು ಬಾಡಿಗೆಗಾಗಿ ೭ ವರುಷಕ್ಕಿಂತ ಹೆಚ್ಚು ಕಾಲ ಕೊಡಬೇಕಾದರೆ ಸರಕಾರದ ಪರವಾನಗಿ ಬೇಕು. ಸಾಲ ಎತ್ತುವ ಅಧಿಕಾರವು ಕಲಮು ೧೭೦ ರಲ್ಲಿ ಹೇಳಿದಂತೆ. ಅದನ್ನು ಬಿಟ್ಟು ಈ ಕಲಮಿನ ಪ್ರಕಾರ ಸಾಲ ಎತ್ತಲು ಬಾರದು

**೧೩೩. ಜಿಲ್ಲಾ ಬೋರ್ಡಿನ ಕೆಲವೊಂದು ರಸ್ತೆಗಳು ಮತ್ತು ಇತರ ಆಸ್ತಿಯು ಈ ಕಾಯಿದೆಯನ್ವಯವಾಗಿ ರಚಿತವಾದ ತಾಲೂಕ ಬೋರ್ಡದ ಅಂತರ್ಗತವಾಗಿರತಕ್ಕದ್ದು**

ಸಂದರ್ಭಾನುಸಾರವಾಗಿ, ೧೯೫೨ ರ (೧೯೫೨ ರ ಮೈಸೂರ ಕಾಯಿದೆ ನಂ. iv) ಮೈಸೂರ ಗ್ರಾಮಪಂಚಾಯತ ಮತ್ತು ಡಿಸ್ಟ್ರಿಕ್ಟ ಬೋರ್ಡುಗಳ ಕಾಯಿದೆ, ೧೯೨೩ ರ (೧೯೨೩ ರ ಮುಂಬೈ ಕಾಯಿದೆ ನಂ. vi) ಮುಂಬೈ ಲೋಕಲ್ ಬೋರ್ಡುಗಳ ಕಾಯಿದೆ, ೧೯೫೬ ರ (೧೯೫೬ ರ ಹೈದರಾಬಾದ ಕಾಯಿದೆ ನಂ. I) ಹೈದರಾಬಾದ ಡಿಸ್ಟ್ರಿಕ್ಟ ಬೋರ್ಡುಗಳ ಕಾಯಿದೆ, ಇಲ್ಲವೆ ೧೯೨೦ ರ (೧೯೨೦ ರ ಮದ್ರಾಸ ಕಾಯಿದೆ ನಂ. xiv) ಮದ್ರಾಸ ಡಿಸ್ಟ್ರಿಕ್ಟ ಬೋರ್ಡಗಳ ಕಾಯಿದೆ ಇವುಗಳ ಉದ್ದೇಶಕ್ಕಾಗಿ, ಒಂದೊಂದು ಜಿಲ್ಲೆಯಲ್ಲಿ ಡಿಸ್ಟ್ರಿಕ್ಟ ಬೋರ್ಡದ ಅಂತರ್ಗತವಾಗಿದ್ದ ಇಲ್ಲವೆ ನಿಯಂತ್ರಣ ಮತ್ತು ಆಡಳಿತದಲ್ಲಿದ್ದ ಅಂತಹ ರಸ್ತೆಗಳು, ಸೇತುವೆಗಳು, ಕಾಲುವೆಗಳು, ಕಟ್ಟಡಗಳು ಮತ್ತು ಇತರ ಸ್ಥಾವರ ಮತ್ತು ಜಂಗಮ ಆಸ್ತಿಯು ಮತ್ತು ಅವರ ಸಂಚಾಲಕತ್ವದಲ್ಲಿದ್ದ ಅಂತಹ ಸಂಸ್ಥೆಗಳು, ಈ ಕಾಯಿದೆಯಲ್ಲಿ ಬೇರೆಯಾಗಿ ಅನುಕೂಲಿಸಲಾದುದನ್ನು ಬಿಟ್ಟು, ಈ ತಾಲೂಕದಲ್ಲಿ ಇರುವಂತಹವು ಈ ಕಾಯಿದೆಯ ಉದ್ದೇಶಗಳಿಗಾಗಿ, ಇಂತಹ ಆಸ್ತಿ ಮತ್ತು ಸಂಸ್ಥೆಗಳನ್ನು ಬಾಧಿಸು

ವಂತಹ ಯಾವುದಾದರೂ ಹಕ್ಕು ಬಾಧ್ಯತೆಗಳಿದ್ದರೆ ಅವುಗಳ ಅಂಕಿತವಾಗಿ, ಆ ತಾಲೂಕ ಬೋರ್ಡದ ಅಂತರ್ಗತವಾಗಿರತಕ್ಕದ್ದು, ಅದರ ನಿಯಂತ್ರಣ ಆಡಳಿತ ಮತ್ತು ಸಂಚಾಲಕತ್ವದಲ್ಲಿ ಇರತಕ್ಕದ್ದು. ಆದರೆ, ಯಾವ ಆಸ್ತಿಗಳ ಮತ್ತು ಸಂಸ್ಥೆಗಳ ಆಡಳಿತವು ಪಂಚಾಯತದ ಅಧಿಕಾರಕ್ಕೆ ಬರುವುದೋ ಅಂತಹ ಆಸ್ತಿ ಮತ್ತು ಸಂಸ್ಥೆಗಳ ಮೇಲೆ ಅಧಿಕಾರ ನಡೆಸಲು, ಇಲ್ಲಿ ಹೇಳಿದ ಯಾವುದೇ ಮಾತು ತಾಲೂಕ ಬೋರ್ಡಿಗೆ ಅಧಿಕಾರ ಕೊಡುವದಿಲ್ಲ.

**ವಿವೇಚನೆ**

ಈ ಕಾಯಿದೆ ಬರುವುದಕಿಂತ ಮೊದಲು ಇದ್ದ ಲೋಕಲ್ ಬೋರ್ಡದ ಕಾಯಿದೆಗಳ ಪ್ರಕಾರ ಇದ್ದ ಜಿಲ್ಲಾ ಬೋರ್ಡುಗಳ ಅಧಿಕಾರದಲ್ಲಿದ್ದ ರಸ್ತೆ, ಸೇತುವೆ ಕಟ್ಟಡ, ಇತರ ಸಂಸ್ಥೆಗಳು ತಾಲೂಕ ಬೋರ್ಡದ ಅಧಿಕಾರಕ್ಕೆ ಆ ತಾಲೂಕದಲ್ಲಿ ಯವು ಬರುವುವು. ಆದರೆ ಆ ತಾಲೂಕದ ಪ್ರದೇಶದಲ್ಲಿದ್ದರೂ ಅವುಗಳಗೆ ಯಾವುವಾದರೂ ಪಂಚಾಯತದ ಅಧಿಕಾರಕ್ಕೆ ಬರುತ್ತಿದ್ದರೆ, ಅವುಗಳ ಮೇಲೆ ತಾಲೂಕ ಬೋರ್ಡದ ಅಧಿಕಾರ ಇಲ್ಲ. ಅಂದರೆ ಇದಕ್ಕೆ ಮೊದಲು ಜಿಲ್ಲಾ ಬೋರ್ಡದ ಅಧೀನವಾಗಿದ್ದವು ತಾಲೂಕ ಬೋರ್ಡ ಮತ್ತು ಪಂಚಾಯತಗಳ ಅಧಿಕಾರಕ್ಕೆ ಬರುವುವು.

**೧೩೪. ತಾಲೂಕ ಬೋರ್ಡಿನಿಂದ ರಚಿತವಾದ ರಚನೆಗಳು ಅದರ ಅಧಿಕಾರದ ಅಂಕಿತ**

ತಾಲೂಕ ಬೋರ್ಡದ ನಿಧಿಯಿಂದ ತಾಲೂಕ ಬೋರ್ಡದಿಂದ ರಚಿತವಾದ ಪ್ರತಿಯೊಂದು ರಸ್ತೆ, ಕಟ್ಟಡ, ಇಲ್ಲವೆ ಇತರ ಕಾಮಗಿರಿ ಮುನಸಿಪಲ್ ಕಾವುನ್ಸಿಲ್ ಇಲ್ಲವೆ ಪಟ್ಟಣದ ಪ್ರದೇಶ ಸಮಿತಿಯ ಅಧಿಕಾರ ಕ್ಷೇತ್ರದ ಒಳಗೆ ಇರುವಂತಹ ರಸ್ತೆಗಳ ಭಾಗವನ್ನು ಹೊರತು ಪಡಿಸಿ ಇಂತಹ ಬೋರ್ಡದ ಅಂತರ್ಗತವಾಗಿರತಕ್ಕದ್ದು.

**ವಿವೇಚನೆ**

ಬೋರ್ಡಿನ ನಿಧಿಯಿಂದ ರಚಿತವಾದದ್ದು ಬೋರ್ಡಿನ ಆಸ್ತಿಯಾಗಿರತಕ್ಕದ್ದು ಕ್ರಮಪ್ರಾಪ್ತ. ಆದರೆ ಯಾವುದು ಮುನಸಿಪಲ್ ಕಾವುನ್ಸಿಲ ಇಲ್ಲವೆ ಪಟ್ಟಣ ಪ್ರದೇಶ ಸಮಿತಿಯ ಅಧಿಕಾರ ಕ್ಷೇತ್ರದಲ್ಲಿ ಬರುವುದು ಅದಷ್ಟು ಭಾಗ ಬಿಟ್ಟು ಉಳಿದೆಲ್ಲ ರಸ್ತೆ ಮುಂತಾದುವು ತಾಲೂಕ ಬೋರ್ಡಿನದು.

**೧೩೫. ಮಾಲಕರ ಪರವಾನಗಿಯಿಂದ ಕೆಲವೊಂದು ಕಾಮಗಿರಿಗಳನ್ನು ತಾಲೂಕ ಬೋರ್ಡ ವಶಪಡಿಸಿಕೊಂಡು ದುರಸ್ತಿ ಮಾಡಿಸಬಹುದು**

ಯಾವುದೇ ರಸ್ತೆಯಲ್ಲಿಯ ಸೇತುವೆಯಲ್ಲಿಯ, ಕೆರೆಯಲ್ಲಿಯ, ಘಾಟದಲ್ಲಿಯ, ಭಾವಿಯಲ್ಲಿಯ, ಕಾಲುವೆಯಲ್ಲಿಯ, ಇಲ್ಲವೆ ಕಾವಲಿಯಲ್ಲಿಯು ಆಸ್ತಿಯ ಯಾವ

ವ್ಯಕ್ತಿಯ ಅಧಿಕಾರದ ಅಂತರ್ಗತವಾಗಿರುವುದೋ ಅಂತಹ ವ್ಯಕ್ತಿಯೊಡನೆ ಬೋರ್ಡ್ಡು ಆ ಆಸ್ತಿಯನ್ನು ವಶಪಡಿಸಿಕೊಳ್ಳುವ ಬಗ್ಗೆ ಒಪ್ಪಂದಮಾಡಿಕೊಳ್ಳಬಹುದು. ಮತ್ತು ಇಂತಹ ಒಪ್ಪಂದದ ನಂತರ ಆಸ್ತಿಯ ಮೇಲೆ ಇಲ್ಲವೆ ಹತ್ತಿರ ಲಿಖಿತ ನೋಟೀಸಿನಿಂದ ಅಂತಹ ರಸ್ತೆ, ಸೇತುವೆ, ಕೆರೆ, ಭಾವಿ, ಘಾಟು, ಕಾಲುವೆ ಇಲ್ಲವೆ ಕಾವಲಿ ತಾಲೂಕ ಬೋರ್ಡಿಗೆ ಹಸ್ತಾಂತರಿಸಲಾಗಿದೆಯೆಂದು ಪ್ರಕಟಿಸಬಹುದು. ಆ ನಂತರ ಅದರಲ್ಲಿಯ ಆಸ್ತಿಯು ತಾಲೂಕ ಬೋರ್ಡದ ಅಂತರ್ಗತವಾಗುವುದು ಮತ್ತು ಇಂತಹ ರಸ್ತೆ, ಸೇತುವೆ, ಕೆರೆ, ಬಾವಿ, ಘಾಟು, ಕಾಲುವೆ ಇಲ್ಲವೆ ಕಾವಲಿಯು ತಾಲೂಕ ಬೋರ್ಡದ ನಿಧಿಯಿಂದ ಆ ಮುಂದೆ ರಿಪೇರಿಮಾಡತಕ್ಕದ್ದು ಮತ್ತು ಸುಸ್ಥಿತಿಯಲ್ಲಿಡತಕ್ಕದ್ದು.

**ವಿವೇಚನೆ**

ಸಾರ್ವಜನಿಕರಿಗೆ ಉಪಯೋಗ ಬೀಳುವಂತಹ ಆಸ್ತಿಯು ಖಾಸಗಿ ವ್ಯಕ್ತಿಗಳ ಮಾಲಕಿಯಲ್ಲಿದ್ದರೆ, ಅವರೊಡನೆ ಕರಾರು ಒಪ್ಪಂದಮಾಡಿಕೊಂಡು ತಾಲೂಕ ಬೋರ್ಡು ಆ ಆಸ್ತಿಯನ್ನು ವಶಪಡಿಸಿಕೊಳ್ಳಬಹುದು. ಕರಾರು ಮಾಡಿಕೊಳ್ಳಬೇಕು. ಆ ಆಸ್ತಿಯ ಹತ್ತಿರ ಒಂದು ನೋಟೀಸು ಹಚ್ಚಲ್ಪಡಬೇಕು. ಅದರಿಂದ ಸಾರ್ವಜನಿಕರಿಗೆ ಆ ಆಸ್ತಿಯು ಯಾರ ಅಧಿಕಾರಕ್ಕೆ ಬಂದಿತೆಂಬುದು ತಿಳಿವುದು. ಇದಾದ ಮೇಲೆ ಆ ಆಸ್ತಿಯ ರಿಪೇರಿ ಮುಂತಾದುದನ್ನು ತಾಲೂಕ ಬೋರ್ಡು ಮಾಡಬಹುದು. ಇಲ್ಲಿ ಉದ್ದೇಶ ಇಷ್ಟೇ; ಖಾಸಗಿ ಆಸ್ತಿಯಾಗಿದ್ದರೂ ಅದರಿಂದ ಸಾರ್ವಜನಿಕರಿಗೆ ಉಪಯೋಗವುಂಟಾಗುತ್ತಿದ್ದರೆ ಅಂತಹ ಆಸ್ತಿಯನ್ನು ತಾಲೂಕ ಬೋರ್ಡು ಕರಾರು ಮಾಡಿಕೊಂಡು ವಶಪಡಿಸಿಕೊಂಡು ಅದನ್ನು ಸಾರ್ವಜನಿಕರ ಹಿತಕ್ಕಾಗಿ ಸುಸ್ಥಿತಿಯಲ್ಲಿಡಬಹುದು.

**೧೩೬. ರಸ್ತೆಗಳನ್ನು, ಇತರ ಆಸ್ತಿಗಳನ್ನು ಸರಕಾರವು ತಾಲೂಕ ಬೋರ್ಡಿನ ಅಧೀನವಾಗಿಡಬಹುದು**

(೧) ಸರಕಾರದ ಅಧಿಕಾರದ ಅಂತರ್ಗತವಾಗಿದ್ದ ಮತ್ತು ಆ ತಾಲೂಕದ ಪ್ರದೇಶದಲ್ಲಿದ್ದ ಯಾವುದೇ ರಸ್ತೆ, ಸೇತುವೆ, ಕಾಲುವೆ, ಕಟ್ಟಡ ಇಲ್ಲವೆ ಇತರ ಸ್ಥಾವರ ಮತ್ತು ಜಂಗಮ ಆಸ್ತಿಯು ಆ ತಾಲೂಕಿನ ತಾಲೂಕ ಬೋರ್ಡದ ಸಮ್ಮತಿಯಿಂದ ಮತ್ತು ಸರಕಾರವು ಮಾಡಬಹುದಾದ ಮತ್ತು ಹಾಕಬಹುದಾದ ಅಂತಹ ಅಪವಾದಗಳ ಮತ್ತು ಕರಾರುಗಳ ಅಂಕಿತವಾಗಿ ಕಾಲ ಕಾಲಕ್ಕೆ ಸರಕಾರವು ಈ ಕಾಯಿದೆಯ ಉದ್ದೇಶಗಳಿಗಾಗಿ ತಾಲೂಕ ಬೋರ್ಡದ ನಿಯಂತ್ರಣದ ಮತ್ತು ಆಡಳಿತದ ಅಧೀನವಾಗಿ ಇಡಲ್ಪಡಬೇಕೆಂದು ನಿರ್ದೇಶಿಸುವುದು ಕಾಯಿದೆ ಬದ್ಧವಾಗುವುದು, ಮತ್ತು ಆನಂತರ ಅಂತಹ ರಸ್ತೆ, ಸೇತುವೆ, ಕಾಲುವೆ, ಕಟ್ಟಡ

ಇಲ್ಲವೆ ಇತರ ಆಸ್ತಿಯು ಹಾಗೆ ಮಾಡಲಾದ ಮತ್ತು ಹಾಕಲಾದ ಎಲ್ಲ ಅಪವಾದ ಗಳ ಮತ್ತು ಕರಾರುಗಳ ಮತ್ತು ಅದನ್ನು ಬಾಧಿಸುವ ಎಲ್ಲ ಭಾರ ಹಾಗೂ ಹೊಣೆ ಗಾರಿಕೆಗಳ ಅಂಕಿತವಾಗಿ, ಬೋರ್ಡದ ನಿಯಂತ್ರಣ ಮತ್ತು ಆಡಳಿತದ ಅಧೀನ ವಾಗಿರತಕ್ಕದ್ದು.

(೨) ಉಪಕಲಮು (೧) ರನ್ವಯವಾಗಿ ತಾಲೂಕ ಬೋರ್ಡದ ನಿಯಂತ್ರಣದ ಅಧೀನವಾಗಿಡಲ್ಪಟ್ಟಿದ್ದ ಯಾವುದೇ ಆಸ್ತಿಯನ್ನು ಸರಕಾರವು ನಿರ್ಧರಿಸಬಹುದಾದ ಅಂತಹ ಕರಾರುಗಳ ಮೇಲೆ ಪ್ರಕಟನೆ ಹೊರಡಿಸಿ ಪುನಃ ಮರಳಿ ತೆಗೆದುಕೊಳ್ಳಲು ಸರಕಾರಕ್ಕೆ ಸಾಮರ್ಥ್ಯವಿರತಕ್ಕದ್ದು.

**ವಿವೇಚನೆ**

ಸರಕಾರವು ತನ್ನ ಅಧೀನವಾಗಿದ್ದ ಆಸ್ತಿಯ ಆಡಳಿತ ಹಾಗೂ ನಿಯಂತ್ರಣ ವನ್ನು ತಾಲೂಕ ಬೋರ್ಡದ ಅಧೀನವಾಗಿ ಕೊಡಬಹುದು. ಆದರೆ ಆ ಆಸ್ತಿಯು ಆ ತಾಲೂಕದ ಪ್ರದೇಶ ಮಿತಿಯಲ್ಲಿ ಇರಬೇಕು. ಹೀಗೆ ಕೊಡುವ ಮೊದಲು ತಾಲೂಕ ಬೋರ್ಡದ ಸಮ್ಮತಿ ಪಡೆಯಬೇಕು. ಅಂದರೆ ಅದರ ಮೇಲೆ ಆಡಳಿತದ ಹೊಣೆಯನ್ನು ಹೇರಲಾರದು ಎಂದು ಅರ್ಥ. ಮಾಡುವಾಗ ಕರಾರು ಹಾಕಿಕೊಡ ಬೇಕು. ತಿರುಗಿ ಮರಳಿ ತೆಗೆದುಕೊಳ್ಳುವ ಅಧಿಕಾರ ಸರಕಾರದ ಕಡೆಗೆ ಇದೆ.

**೧೩೭. ತಾಲೂಕ ಬೋರ್ಡದ ಸಾಮಾನ್ಯ ಅಧಿಕಾರಗಳು**

ಈ ಕಾಯಿದೆಯ ಮತ್ತು ಅದರನ್ವಯವಾಗಿ ಮಾಡಲಾದ ನಿಯಮಗಳ ಶರತುಗಳಿಗೆ ಮತ್ತು ಆ ಕಾಲಕ್ಕೆ ಜಾರಿಯಲ್ಲಿರುವ ಬೇರೆ ಯಾವುದೇ ಕಾಯಿದೆಯ ಶರತುಗಳಿಗೆ ಅಂಕಿತವಾಗಿ, ಕಲಮು ೧೩೦ ಮತ್ತು ೧೩೧ ರನ್ವಯವಾಗಿ ಒಪ್ಪಿಸ ಲಾದ ಕರ್ತವ್ಯಗಳನ್ನು ನೆರವೇರಿಸುವುದಕ್ಕಾಗಿ ಆವಶ್ಯಕವಾದ ಇಲ್ಲವೆ ಆನುಷಂಗಿಕ ವಾದ ಎಲ್ಲ ಕಾರ್ಯಗಳನ್ನು ಮಾಡಲು ತಾಲೂಕ ಬೋರ್ಡಿಗೆ ಅಧಿಕಾರ ಇರತಕ್ಕದ್ದು.

**ವಿವೇಚನೆ**

ಕಲಮು ೧೩೦– ಮತ್ತು ೧೩೧ ಇವು ತಾಲೂಕ ಬೋರ್ಡ ಮಾಡಲೇಬೇಕಾದ ಮತ್ತು ಮಾಡಬಹುದಾದ ಕರ್ತವ್ಯಗಳನ್ನು ಹೇಳುವುವು. ಈ ಕರ್ತವ್ಯ ನೆರವೇರಿ ಸಲು ಎಲ್ಲ ಅಧಿಕಾರಗಳು ಬೋರ್ಡಿಗೆ ಇವೆ. ಆದರೆ ಈ ಅಧಿಕಾರಗಳು, ಈ ಕಾಯಿದೆಯ ಹಾಗೂ ಅದರ ಪ್ರಕಾರ ಮಾಡಿದ ನಿಯಮಗಳ ಅಂಕಿತವಾಗಿವೆ ಎಂಬುದನ್ನು ಮತ್ತು ಆ ಕಾಲಕ್ಕೆ ಜಾರಿಯಲ್ಲಿರುವ ಬೇರೆ ಕಾಯಿದೆಯ ಶರತು ಗಳಿಗೂ ಅಂಕಿತವಾಗಿರುವುವೆಂಬುದನ್ನು ತಿಳಿಯಬೇಕು. ಬೇರೆ ಕಾಯಿದೆಗಳು ಯಾವು ಎಂಬುದು ಇಲ್ಲಿ ಹೇಳಿಲ್ಲ. ಆದರೆ ಬೋರ್ಡದ ವ್ಯವಹಾರ ವ್ಯಾಪಿಸಿರುವ ವಿಷಯ ಗಳಿಗೆ ಸಂಬಂಧಿಸಿದ ಕಾಯಿದೆಗಳು ಎಂದು ತಿಳಿಯಬೇಕು.

## ೧೩೮. ಸರಕಾರಿ ಕಟ್ಟಡಗಳ ನಿರ್ಮಾಣ, ದುರಸ್ತಿ, ಸುಭದ್ರತೆ ಕಾಯಿದುಕೊಳ್ಳುವುದನ್ನು ತಾಲೂಕ ಬೋರ್ಡ ವಹಿಸಿ ಕೊಳ್ಳಬಹುದು

ಸರಕಾರದ ಆಸ್ತಿಯಾಗಿರುವ ಯಾವುದೇ ಸಾರ್ವಜನಿಕ ಕಟ್ಟಡವ ಇಲ್ಲವೆ ಬೇರೆ ಕಾಮಗಿರಿಯ ರಚನೆ, ದುರಸ್ತಿ ಮತ್ತು ಸುಸ್ಥಿತಿಯಲ್ಲಿಡುವುದು ಈ ಕೆಲಸವನ್ನು ಸರಕಾರದ ಪರವಾಗಿ, ಮತ್ತು ಒಪ್ಪಿತವಾಗಬಹುದಾದ ಕರಾರುಗಳ ಮೇಲೆ, ತಾಲೂಕ ಬೋರ್ಡು ಕೈಕೊಳ್ಳುವುದು ಕಾಯಿದೆಬದ್ಧವಾಗುವುದು.

ಆದರೆ ಇಂತಹ ರಚನೆಯ ದುರಸ್ತಿಯ ಮತ್ತು ಸುಸ್ಥಿಯಲ್ಲಿಡುವುದರ ವೆಚ್ಚವು ಸರಕಾರದಿಂದ ವಹಿಸಲ್ಪಡತಕ್ಕದ್ದು.

### ವಿವೇಚನೆ

ಸರಕಾರದ ಪರವಾಗಿ ಸಾರ್ವಜನಿಕ ಕಟ್ಟಡ ಇಲ್ಲವೆ ಇತರ ಕಾಮಗಿರಿ ಗಳನ್ನು ತಾಲೂಕ ಬೋರ್ಡು ಮಾಡಬಹುದು. ಮತ್ತು ಸುಸ್ಥಿತಿ ಯಲ್ಲಿಡುವ ಕೆಲಸವನ್ನು ಮಾಡಬಹುದು. ಹೀಗೆ ಮಾಡುವಾಗ ಸರಕಾರ ದೊಡನೆ ಕರಾರು ಮಾಡಿಕೊಳ್ಳಬೇಕು. ಸರಕಾರವು ಆ ಕೆಲಸದ ವೆಚ್ಚವನ್ನು ವಹಿಸಬೇಕು. ಅಂದರೆ ತಾಲೂಕ ಬೋರ್ಡು ಅಂತಹ ಕೆಲಸವನ್ನು ವಹಿಸಿಕೊಂಡರೆ ಅದು ಕಾಯಿದೆಬದ್ಧವಾದ ವ್ಯವಹಾರವಾಗುವುದು.

## ೧೩೯. ತಾಲೂಕ ಬೋರ್ಡುಗಳು ಮತ್ತು ಪಂಚಾಯತಗಳು ಕಾರ್ಯಕಾರಿಯಾಗುವುದನ್ನು ಮೇಲ್ವಿಚಾರಣೆ ಮಾಡಬೇಕು ಮತ್ತು ಅವುಗಳಿಗೆ ನೆರವನ್ನು ಕೊಡಬೇಕು

ಈ ಕಾಯಿದೆಯ ಮತ್ತು ಕಾಯಿದೆಯನ್ವಯವಾಗಿ ಮಾಡಲಾದ ಶರತುಗಳ ಅನುಸಾರವಾಗಿ ಪ್ರತಿಯೊಂದು ತಾಲೂಕ ಬೋರ್ಡು ಪಂಚಾಯತಗಳ ಕಾರ್ಯದ ಮೇಲೆ ಸಾಮಾನ್ಯವಾದ ಮೇಲ್ವಿಚಾರಣೆಯನ್ನು ಮಾಡತಕ್ಕದ್ದು, ಮತ್ತು ತನ್ನ ತಾಲೂಕದಲ್ಲಿ ಇರುವ ಪಂಚಾಯತಗಳು ಅಪೇಕ್ಷಿಸಲಾದ ಕಾಲದಲ್ಲಿ ತನ್ನಲ್ಲಿ ದೊರೆಯಬಹುದಾದ ತಾಂತ್ರಿಕ ಸಹಾಯವನ್ನು ಉಚಿತವಾಗಿ ಸಲ್ಲಿಸತಕ್ಕದ್ದು. ಯಾವ ಯೋಜನೆಯು ಆ ಪಂಚಾಯತಗಳ ಅಧಿಕಾರದ ಆಚೆಯಿರುವುದೋ ತಾಲೂಕ ಪಂಚಾಯತವು ಕೈಕೊಂಡ ಅಂತಹ ಯೋಜನೆಗಳನ್ನು ತಾನು ವಹಿಸಿ ಕೊಂಡು ಆ ಅಭಿವೃದ್ಧಿ ಕಾಮಗಿರಿಗೆ ಜೋಡಣೆ ಮಾಡುವುದು ತಾಲೂಕ ಬೋರ್ಡಿಗೆ ಕಾಯಿದೆಬದ್ಧವಾದುದು.

**ವಿವೇಚನೆ**

ಪಂಚಾಯತಗಳ ಮೇಲೆ ಮೇಲ್ವಿಚಾರಣೆ ನಡಸುವುದು ತಾಲೂಕ ಬೋರ್ಡದ ಕರ್ತವ್ಯವಾಗಿದೆ. ಅದರಂತೆಯೆ ಪಂಚಾಯತಗಳು ಏನಾದರೂ ತಾಂತ್ರಿಕ ಮಾಹಿತಿ ಕೇಳಿದರೆ, ಅದನ್ನು ಉಚಿತವಾಗಿ ಒದಗಿಸುವುದೂ ತಾಲೂಕ ಬೋರ್ಡದ ಕರ್ತವ್ಯವಾಗಿದೆ. ಪಂಚಾಯತಗಳು ಮಾಡಬೇಕೆಂದು ಮಾಡಿದ ಯೋಜನೆಗಳಿಗೆ ಸಹಾಯ ಮಾಡಿ ಜೋಡಿಸುವುದು ತಾಲೂಕ ಬೋರ್ಡದ ಕಾರ್ಯ. ಅಂದರೆ ತಾಲೂಕ ಬೋರ್ಡು ಮತ್ತು ಪಂಚಾಯತಗಳು ಈ ಎರಡೂ ಸಂಸ್ಥೆಗಳು ಕೂಡಿ ಆ ತಾಲೂಕದಲ್ಲಿಯ ಸಾರ್ವಜನಿಕರ ಹಿತ ನೋಡುವುದು; ಪ್ರದೇಶದ ಅಭಿವೃದ್ಧಿ ಮಾಡುವುದು ಕರ್ತವ್ಯ.

**೧೪೦. ರಸ್ತೆಗಳ ದಾರಿ ಬದಲಿಸುವ, ತಿರುಗಿಸುವ, ಬಂದುಮಾಡುವ ಇಲ್ಲವೆ ನಿರ್ಬಂಧಿಸುವ ಅಧಿಕಾರ**

ಯಾವ ರಸ್ತೆಯು ತಾಲೂಕ ಬೋರ್ಡದ ನಿಯಂತ್ರಣ ಮತ್ತು ಆಡಳಿತದ ಅಧೀನವಾಗಿದೆಯೋ ಇಲ್ಲವೆ ತಾಲೂಕ ಬೋರ್ಡದ ಅಧಿಕಾರದ ಅಂತರ್ಗತವಾಗಿದೆಯೋ ಅಂತಹ ರಸ್ತೆಯ ದಾರಿ ಬದಲಿಸುವುದನ್ನು, ತಿರುಗಿಸುವುದನ್ನು, ನಿರ್ಬಂಧಿಸುವುದನ್ನು ಇಲ್ಲವೆ ಶಾಶ್ವತವಾಗಿ ಬಂದುಮಾಡುವುದನ್ನು ಡೆಪ್ಯೂಟಿ ಕಮಿಶನರರ ಪರವಾನಗಿಯಿಂದ ತಾಲೂಕ ಬೋರ್ಡು ಮಾಡಬಹುದು.

**ವಿವೇಚನೆ**

ತಾಲೂಕ ಬೋರ್ಡದ ಅಧೀನವಾಗಿರುವ ರಸ್ತೆಗಳ ಬಗ್ಗೆ ಇಲ್ಲಿ ಹೇಳಿದೆ. ಡೆಪ್ಯೂಟಿ ಕಮಿಶನರರ ಪರವಾನಗಿ ತೆಗೆದುಕೊಂಡು ತಾಲೂಕ ಬೋರ್ಡು ಯಾವುದೇ ರಸ್ತೆಯ ದಾರಿ ಬದಲಿಸುವುದು, ತಿರುಗಿಸುವುದು, ನಿರ್ಬಂಧಿಸುವುದು ಇಲ್ಲವೆ ಶಾಶ್ವತವಾಗಿ ಬಂದ ಮಾಡಲೂಬಹುದು. ಅಂದರೆ ಅದಕ್ಕಿದ್ದ ಉಪಯೋಗದಲ್ಲಿ ಸ್ಥಿತ್ಯಂತರ ಮಾಡುವ ಅಧಿಕಾರ ತಾಲೂಕ ಬೋರ್ಡಿಗೆ ಇದೆ ಎಂದ ಹಾಗಾಯಿತು. ಆದರೆ ಈ ಬಗೆಯಾಗಿ ಮಾಡುವ ಮೊದಲು ಡೆ. ಕಮಿಶನರ ಪರವಾನಗಿ ಪಡೆದುಕೊಳ್ಳಬೇಕು.

**೧೪೧. ಮಿತಿ ಮೀರಿದ ವಾಹನ ಸಂಚಾರದ ನಿಯಂತ್ರಣ**

ಈ ಸಂದರ್ಭದಲ್ಲಿ ಸರಕಾರದಿಂದ ಗೊತ್ತು ಮಾಡಲ್ಪಡಬಹುದಾದ ಅಂತಹ ನಿಯಮಗಳ ಮತ್ತು ತಾಲೂಕ ಬೋರ್ಡದಿಂದ ರೂಪಿಸಲಾದ ಕ್ರಮ ನಿಯಮಗಳ ಅಂಕಿತವಾಗಿ ತನ್ನ ಅಧಿಕಾರಾಂತರ್ಗತವಾಗಿರುವ ಯಾವುದೇ ರಸ್ತೆಯು, ಇಂತಹ ಆಕಾರ, ರಚನೆ, ತೂಕ ಇಲ್ಲವೆ ಗಾತ್ರ ಇರುವ ಇಲ್ಲವೆ ಇಂತಹ ಯಂತ್ರಗಳನ್ನು ಇಲ್ಲವೆ ಇತರ ಅವಾಧವ್ಯ ವಸ್ತುಗಳನ್ನು ಹೇರಿಕೊಂಡ, ರಸ್ತೆಗೆ ಇಲ್ಲವೆ ಅದರ

ಮೇಲಿನ ಯಾವುದೇ ರಚನೆಗೆ ಅಪಾಯ ಸಂಭವಿಸಬಹುದಾದಂತಹ, ಇಲ್ಲವೆ ಇತರ ವಾಹನಗಳಿಗೆ ಇಲ್ಲವೆ ಪಾದಯಾತ್ರಿಗಳಿಗೆ ಗಂಡಾಂತರ ಇಲ್ಲವೆ ಅಡ್ಡಿಯಾಗುವಂತಹ ವಾಹನಗಳಿಂದ ಮುಖ್ಯ ಕಾರ್ಯಾಧಿಕಾರಿಯಿಂದ ಕೊಡಲ್ಪಟ್ಟ ಲಾಯಸೆನ್ಸದ ಅಧೀನವಾಗಿಯಲ್ಲದೆ ಮತ್ತು ಕಾಲ ಕಾಲಕ್ಕೆ ಸರಕಾರದಿಂದ, ವೇಗ, ವೇಳೆ, ಫೀ, ಗತಿವಿಧಾನ, ಇಲ್ಲವೆ ಯಂತ್ರಸಾಧನ, ರಸ್ತೆಯ ಸಂರಕ್ಷಣೆಯ ಸಲುವಾಗಿ ಉಪಕರಣಗಳ ಉಪಯೋಗ, ದೀಪಗಳ ಸಂಖ್ಯೆ, ಸಹಾಯಕರ ಸಂಖ್ಯೆ ಮತ್ತು ಇತರ ಮುಂಜಾಗ್ರತೆಗಳ ಸಂಬಂಧವಾಗಿ, ರೂಪಿಸಲಾದ ನಿಯಮಗಳ ಅನುಸಾರವಾಗಿ ಅಲ್ಲದೆ, ಉಪಯೋಗಿಸಲ್ಪಡಬಾರದೆಂದು ಪ್ರಕಟನೆ ಹೊರಡಿಸುವುದು ತಾಲೂಕ ಬೋರ್ಡಿಗೆ ಕಾಯಿದೆಬದ್ಧವಾಗಿರುವುದು.

**ವಿವೇಚನೆ**

ರಸ್ತೆಗಳು ಎಲ್ಲವೂ ಒಂದೇ ತರಹದವು ಇರುವುದಿಲ್ಲ. ವಾಹನಗಳೂ ಎಲ್ಲವೂ ಒಂದೇ ಬಗೆಯಾಗಿ ಇರುವುದಿಲ್ಲ. ಕೆಲವೊಂದು ರಸ್ತೆಗಳು, ಕೆಲವೊಂದು ವೇಳೆಯಲ್ಲಿ ಕೆಲವೊಂದು ಮಾದರಿಯ ವಾಹನಗಳಿಗೆ ಭದ್ರವಾಗಿರುವುದಿಲ್ಲ. ಆದ್ದರಿಂದ ಸರಕಾರವು ಮಾಡುವ ನಿಯಮಗಳ ಅನುಸಾರವಾಗಿ ಕೆಲವೊಂದು ರಸ್ತೆಗಳು ಕೆಲವೊಂದು ಮಾದರಿಯ ವಾಹನಗಳ ಉಪಯೋಗಕ್ಕೆ ನಿರ್ಬಂಧಿಸಲಾಗಿವೆ ಯೆಂದು ಪ್ರಕಟನೆ ಹೊರಡಿಸುವುದು ತಾಲೂಕ ಬೋರ್ಡದ ಅಧಿಕಾರದ ಒಳಗಿನ ವಿಷಯ. ಎಂತಹ ವಾಹನ ಎಂಬುದೂ ನಿರ್ದಿಷ್ಟಪಡಿಸಲಾಗುವುದು. ನಿಯಮಗಳು ವಾಹನಗಳ ವೇಗ, ವೇಳೆ, ಯಂತ್ರ-ದೀಪ ಮುಂತಾದವುಗಳ ಬಗೆಗೆ ಇರುವುವು. ಈ ನಿರ್ಬಂಧವು ರಸ್ತೆಯನ್ನು, ಅಲ್ಲಿಯ ಕಟ್ಟಡಗಳನ್ನು, ಇತರ ವಾಹನಗಳನ್ನು, ಪಾದಯಾತ್ರಿಗಳನ್ನು ಸಂರಕ್ಷಿಸುವ ಉದ್ದೇಶದಿಂದ ಇದೆ. ಅಂದರೆ ಕೆಲವೊಂದು ಕಾಲದಲ್ಲಿ ಕೆಲವೊಂದು ರಸ್ತೆಯಲ್ಲಿ ಕೆಲವೊಂದು ಮಾದರಿಯ ವಾಹನಗಳು ಓಡಾಡುವುದು ಗಂಡಾಂತರಕಾರಿಯಾಗುವುದು.

**೧೪೨. ಮಾರ್ಕೆಟ ಮುಂತಾದವುಗಳ ಸ್ಥಾಪನೆ**

(೧) ಸರಕಾರದಿಂದ ಈ ಸಂಬಂಧದಲ್ಲಿ ಅಧಿಕರಿಸಲ್ಪಟ್ಟ ಅಧಿಕಾರಿಗಳಿಂದ ಸಂಚಾಲಿತವಾದವುಗಳನ್ನು ಹೊರತುಪಡಿಸಿ ಯಾವುದೇ ಹೊಸ ಮಾರ್ಕೆಟು ಹೊಸ ಜಾತ್ರೆಗಳು, ಉತ್ಸವಗಳು, ಸಮಾರಂಭಗಳು ಮತ್ತು 'ಕೃಷಿಕ ಮತ್ತು ದನಗಳ ದರ್ಶನ-ಪ್ರದರ್ಶನಗಳು ತಾಲೂಕ ಬೋರ್ಡದ ಅಧಿಕಾರದ ಅಧೀನವಾಗಿರುವ ಯಾವುದೇ ಪ್ರದೇಶದಲ್ಲಿ ಸರಕಾರದ ಪೂರ್ವ ಸಮ್ಮತಿಯಿಲ್ಲದೆ ಸ್ಥಾಪಿಸಲ್ಪಡತಕ್ಕದ್ದಲ್ಲ.

(೨) ಉಪಕಲಮು (೧) ರನ್ವಯವಾಗಿರುವ ಪರವಾನಗಿಯ ದಯಪಾಲಿಸಲ್ಪಡುವಿಕೆಯು ಸರಕಾರವು ಹಾಕಬಹುದಾದ ಅಂತಹ ಕರಾರುಗಳು ಮತ್ತು ನಿರ್ಬಂಧಗಳ ಅಂಕಿತವಾಗಿರತಕ್ಕದ್ದು.

(೩) ಉಪಕಲಮು (೧) ರ ಶರತುಗಳ ಇಲ್ಲವೆ ಉಪಕಲಮು (೨) ರನ್ವಯ ವಾಗಿ ಹಾಕಲಾದ ಯಾವುದೇ ಕರಾರು ಇಲ್ಲವೆ ನಿರ್ಬಂಧದ ವಿರುದ್ಧವಾಗಿ ಯಾರಾದರೂ ವರ್ತಿಸಿದರೆ ಅಪರಾಧವು ಸಾಬೀತಾದರೆ ಅವನು ಐದು ನೂರು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಶಿಕ್ಷಿತನಾಗತಕ್ಕದ್ದು;

(೪) ಯಾವುದೇ ಸ್ಥಳವು ಸಾರ್ವಜನಿಕ ಮಾರ್ಕೆಟು ಅಹುದೋ ಅಲ್ಲವೋ ಎಂಬ ಬಗ್ಗೆ ಯಾವುದೇ ಪ್ರಶ್ನೆಯು ಉಂಟಾದಾಗ ಸಂಬಂಧ ಪಟ್ಟ ತಾಲೂಕ ಬೋರ್ಡು ಆ ಪ್ರಶ್ನೆಯನ್ನು ಸರಕಾರಕ್ಕೆ ಸಾದರಪಡಿಸತಕ್ಕದ್ದು. ಮತ್ತು ಅದರ ಮೇಲಿನ ಸರಕಾರದ ನಿರ್ಣಯವು ಕೊನೆಯದಾಗಿರತಕ್ಕದ್ದು.

**ವಿವೇಚನೆ**

ಕಂಡಕಂಡಲ್ಲಿ ಬೇಕಾದವರು ಜಾತ್ರೆ-ಉತ್ಸವ-ಮಾರ್ಕೆಟು ಮುಂತಾದವು ಗಳನ್ನು ಸ್ಥಾಪಿಸಬಾರದೆಂಬುದಕ್ಕೆ ಈ ಕಲಮು ಇದೆ. ಸರಕಾರದಿಂದ ಅಧಿಕರಿಸಲ್ಪಟ್ಟ ಅಧಿಕಾರಿಗಳೇ ಮಾರ್ಕೆಟು, ಜಾತ್ರೆ ಮುಂತಾದವುಗಳನ್ನು ಸೇರಿಸತಕ್ಕದ್ದು. ಅವರನ್ನು ಬಿಟ್ಟು ಬೇರೆ ಯಾರಾದರೂ ಮಾರ್ಕೆಟು-ಜಾತ್ರೆ-ಪ್ರದರ್ಶನ ನಡೆಸ ಬೇಕಾಗಿದ್ದರೆ ಸರಕಾರದ ಪರವಾನಗಿ ಪಡೆಯಬೇಕು. ಸರಕಾರವು ಪರವಾನಗಿ ಕೊಡುವಾಗ ಕೆಲವು ಕರಾರು-ನಿರ್ಬಂಧಗಳನ್ನು ಹಾಕುತ್ತದೆ. ಯಾರಾದರೂ ಪರ ವಾನಗಿ ಇಲ್ಲದೆ, ಕೊಟ್ಟ ಪರವಾನಗಿಯ ಕರಾರು ಭಂಗಮಾಡಿದರೆ, ಅವರು ಶಿಕ್ಷೆಗೆ ಪಾತ್ರರಾಗುತ್ತಾರೆ. ಶಿಕ್ಷೆಯು ದಂಡದ ಶಿಕ್ಷೆ; ಅದು ೫೦೦/-ರೂಪಾಯಿಗಳ ವರೆಗೆ ಆಗಬಹುದು. ಯಾವುದೇ ಸ್ಥಳವು ಸಾರ್ವಜನಿಕ ಮಾರ್ಕೆಟು ಅಹುದೋ ಅಲ್ಲವೊ ಎಂದು ಸಂಶಯ ಬಂದಾಗ ಅದನ್ನು ನಿರ್ಣಯಕ್ಕಾಗಿ ಸರಕಾರಕ್ಕೆ ಬಿಡ ಬೇಕು. ಸರಕಾರವು ಕೊಟ್ಟ ನಿರ್ಣಯವು ಕೊನೆಯದು. ಸಾರ್ವಜನಿಕರಿಗೆ ಬಾಧಿಸುವಂತಹ ಮಾರ್ಕೆಟು, ಜಾತ್ರೆ,ಉತ್ಸವ ಇವು ಸರಕಾರದ ಲಕ್ಷ್ಯಕ್ಕೆ ಬಾರದೆ, ಬೇಕಾದಲ್ಲಿ ನಡೆಯಬಾರದು ಎಂಬುದೇ ಇದರ ಉದ್ದೇಶ. ಈ ಮಾತುಗಳು ಹೊಸದಾಗಿ ಸ್ಥಾಪಿಸಬೇಕೆಂದಿರುವ ಉತ್ಸವ, ಜಾತ್ರೆ, ಮಾರ್ಕೆಟಿಗೆ ಸಂಬಂಧ ಪಟ್ಟವು. ಈಗಾಗಲೇ ಅಸ್ತಿತ್ವದಲ್ಲಿದ್ದವುಗಳಿಗೆ ಸಂಬಂಧ ಪಟ್ಟ ಮಾತುಗಳಲ್ಲ, ಎಂಬುದನ್ನು ಗಮನಿಸಬೇಕು.

**೧೪೩. ಕೆಲವೊಂದು ವ್ಯಾಪಾರಗಳನ್ನು ಕ್ರಮವಾಗಿಸುವಿಕೆ**

ತನ್ನ ಅಧಿಕಾರದ ಅಧೀನವಾಗಿರುವ ಪ್ರದೇಶದಲ್ಲಿ, ಅಂತಹ ಪ್ರಕಟನೆಯ ತಾರೀಖಿನಿಂದ ಅರುವತ್ತು ದಿವಸಗಳ ನಂತರ, ಯಾವುದೇ ಸ್ಥಳವು ಮುಖ್ಯ ಕಾರ್ಯಾಧಿಕಾರಿಯಿಂದ ಲಾಯಸೆನ್ಸ ಪಡೆದ ಹೊರತು ಮತ್ತು ಅದರಲ್ಲಿ ನಿರ್ದಿಷ್ಟ ಪಡಿಸಲಾದ ಕರಾರುಗಳ ಅನುಸಾರವಾಗಿದ್ದ ಹೊರತು, ಕೋಷ್ಟಕ II ರಲ್ಲಿ ನಿರ್ದಿಷ್ಟಪಡಿಸಿದ ಯಾವುದೊಂದು ಇಲ್ಲವೆ ಹೆಚ್ಚು ಉದ್ದೇಶಗಳಿಗಾಗಿ ಉಪಯೋಗಿ

ಸಲ್ಪಡಬಾರದೆಂದು ಕಲಮು ೫೬, ೫೭ ಮತ್ತು ೫೮ ರ ಶರತುಗಳಿಗಂಕಿತವಾಗಿ ತಾಲೂಕ ಬೋರ್ಡು ಪ್ರಕಟನೆ ಹೊರಡಿಸುವುದು ಕಾಯಿದೆಬದ್ಧವಾಗಿರತಕ್ಕದ್ದು.

**ವಿವೇಚನೆ**

ಕೆಲವೊಂದು ವ್ಯಾಪಾರಗಳಿಗಾಗಿ ನಿರ್ಬಂಧವು ಅವಶ್ಯವಾಗಿದೆ. ವ್ಯಾಪಾರ ಮಾಡುವವನಿಗೆ ಲಾಭದಾಯಕವಿದ್ದರೂ ಅದರಿಂದ ಸಾರ್ವಜನಿಕರಿಗೆ ಅವರ ಆರೋಗ್ಯಕ್ಕೆ ವ್ಯತ್ಯಯ ಉಂಟಾಗುವ ಸಂಭವ ಇರುತ್ತದೆ. ಆದ್ದರಿಂದ ಅವುಗಳಿಗೆ ಲಾಯಸೆನ್ಸು ಪರವಾನಗಿ ಬೇಕಾಗುತ್ತದೆ. ಯಾವ ವ್ಯಾಪಾರಗಳು ಲಾಯಿಸೆನ್ಸು ಪಡೆಯಬೇಕಾದುವು ? ಪರವಾನಗಿ-ಲಾಯಸೆನ್ಸು ಬಗ್ಗೆ ಕಲಮು ೫೬, ೫೭ ಮತ್ತು ೫೮ ರಲ್ಲಿ ಹೇಳಿದೆ. ಇವುಗಳಿಗೆ ಅಂಕಿತವಾಗಿ ತಾಲೂಕ ಬೋರ್ಡು ಪ್ರಕಟನೆ ಹೊರಡಿಸಬಹುದು. ಪ್ರಕಟನೆಯ ತಾರೀಖಿನ ಅರುವತ್ತು ದಿನಗಳ ನಂತರ ಯಾರೂ ತಾಲೂಕಿನ ಪ್ರದೇಶದಲ್ಲಿ ಪರವಾನಗಿ, ಲಾಯಿಸೆನ್ಸು ಇಲ್ಲದೆ, ಕೆಲವು ವ್ಯಾಪಾರಗಳಿಗಾಗಿ ಯಾವ ಸ್ಥಳವನ್ನೂ ಉಪಯೋಗಿಸತಕ್ಕದ್ದಲ್ಲ. ಆ ವ್ಯಾಪಾರಗಳು ಯಾವು ಎಂಬುದನ್ನು ಕೋಷ್ಟಕ II ವಿವರಿಸಲಾಗಿದೆ. ನಿಯಂತ್ರಣ ಅಗತ್ಯವಾಗಿರುವ ವ್ಯಾಪಾರಗಳು ಅವು ಎಂಬುದು ಕೋಷ್ಟಕ ನೋಡಿದಾಗ ತಿಳಿವುದು.

## ೧೪೪. ಲಾಯಸೆನ್ಸ ದಯಪಾಲಿಸುವಿಕೆ

(೧) ತಾಲೂಕ ಬೋರ್ಡದಿಂದ ದಯಪಾಲಿಸಲ್ಪಡಬಹುದಾದ ಲಾಯಸೆನ್ಸಗಳಿಗಾಗಿರುವ ಎಲ್ಲ ಅರ್ಜಿಗಳನ್ನು ತಾಲೂಕ ಬೋರ್ಡದ ಮುಖ್ಯ ಕಾರ್ಯಾಧಿಕಾರಿಯು ನಿಕಾಲಿ ಮಾಡಬಹುದು, ಆ ಲಾಯಸೆನ್ಸದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಕರಾರು ಮುರಿದದ್ದಕ್ಕಾಗಿ ಎಂದು ದಯಪಾಲಿಸಲಾದ ಲಾಯಸೆನ್ಸನ್ನು ಅವನು ಸಸ್ಪೆಂಡ ಮಾಡಬಹುದು, ಇಲ್ಲವೆ ರದ್ದು ಮಾಡಬಹುದು. ಮುಖ್ಯ ಕಾರ್ಯಾಧಿಕಾರಿಯಿಂದ ಲಾಯಸೆನ್ಸು ಕೊಡಲ್ಪಟ್ಟಾಗ, ನಿರಾಕರಿಸಲ್ಪಟ್ಟಾಗ, ಸಸ್ಪೆಂಡ ಮಾಡಲ್ಪಟ್ಟಾಗ ಇಲ್ಲವೆ ರದ್ದು ಮಾಡಲ್ಪಟ್ಟಾಗ ಅವನ ಹುಕುಮಿನಿಂದ ಯಾವುದೇ ವ್ಯಕ್ತಿಯು ಬಾಧಿತನಾಗಿದ್ದರೆ, ಅಂತಹ ಹುಕುಮಿನ ತಾರೀಖಿನಿಂದ ಮೂರು ತಿಂಗಳ ಒಳಗೆ ಬೋರ್ಡಿಗೆ ಅಪೀಲು ಮಾಡಿಕೊಳ್ಳಲು ಅವನಿಗೆ ಅಧಿಕಾರವಿದೆ.

(೨) ಉಪಕಲಮು (೧) ರಲ್ಲಿ ಹೇಳಲಾದ ಲಾಯಸೆನ್ಸು ಗೊತ್ತು ಮಾಡಬಹುದಾದಂತಹ ಫೀಗಳನ್ನು ಮುಂಗಡವಾಗಿ ಪಡೆದು ದಯಪಾಲಿಸಲ್ಪಡಬಹುದು.

(೩) ಯಾವ ಉದ್ದೇಶಗಳಿಗಾಗಿ ಲಾಯಸೆನ್ಸು ಅಗತ್ಯವಾಗಿದೆಯೊ ಅಂತಹ ಯಾವುದೇ ಸ್ಥಳವನ್ನು ಲಾಯಸೆನ್ಸು ಇಲ್ಲದೆ, ಇಲ್ಲವೆ ಲಾಯಸೆನ್ಸದಲ್ಲಿಯ ಕರಾರು

ಗಳಲ್ಲಿಯ ಯಾವುದರ ವಿರುದ್ಧವಾಗಿ ಇಲ್ಲವೆ ಲಾಯಸೆನ್ಸು ಸಸ್ಪೆಂಡ ಆದಾಗ ಇಲ್ಲವೆ ರದ್ದು ಆದಾಗ ಚಾಲೂ ಇಟ್ಟರೆ, ಇಲ್ಲವೆ ಉಪಯೋಗಿಸಿದರೆ, ಈ ಕಾಯಿದೆಯ ಬೇರೆ ಯಾವುದೇ ಕಲಮಿನ ಪ್ರಕಾರ ಶಿಕ್ಷೆಗೆ ಪಾತ್ರನಾಗದಿದ್ದರೆ, ಅಪರಾಧವು ಸಾಬೀತಾದರೆ, ಒಂದು ನೂರು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಅವನು ಶಿಕ್ಷಿತನಾಗತಕ್ಕದ್ದು. ಶಿಕ್ಷೆಯಾದ ತಾರೀಖಿನಿಂದ ಇಲ್ಲವೆ ಮಾಜಿಸ್ಟ್ರೇಟನಿಂದ ಗೊತ್ತುಮಾಡಲ್ಪಡಬಹುದಾಗ ಯಾವುದೇ ಮುಂದಿನ ತಾರೀಖಿನಿಂದ ಅಂತಹ ಕಾರ್ಯವು ಮುಂದುವರೆದ ಪ್ರತಿದಿವಸಕ್ಕೆ ಇಪ್ಪತ್ತೈದು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ಹೆಚ್ಚಿನ ದಂಡದಿಂದಲೂ ಅವನು ಶಿಕ್ಷಿತನಾಗತಕ್ಕದ್ದು.

**ವಿವೇಚನೆ**

ಲಾಯಸೆನ್ಸಿಗಾಗಿ ಬಂದ ಅರ್ಜಿಗಳ ವಿಚಾರಣೆ ಮಾಡುವ ಅಧಿಕಾರ ತಾಲೂಕ ಬೋರ್ಡದ ಮುಖ್ಯ ಕಾರ್ಯಾಧಿಕಾರಿಯದು. ಅವನು ಲಾಯಸೆನ್ಸು ಕೊಡಬಹುದು, ಸಸ್ಪೆಂಡ ಮಾಡಬಹುದು, ಇಲ್ಲವೆ ರದ್ದು ಮಾಡಬಹುದು. ಅವನ ಆಜ್ಞೆಯಿಂದ ಬಾಧಿತನಾದವನು ಅಪೀಲು ಮಾಡಿಕೊಳ್ಳಬಹುನು. ಅಪೀಲು ತಾಲೂಕ ಬೋರ್ಡಿಗೆ ಇದ್ದು ಅದು ಆ ಆಜ್ಞೆಯ ತಾರೀಖಿನಿಂದ ಮೂರು ತಿಂಗಳ ಒಳಗೆ ಮಾಡಿಕೊಳ್ಳತಕ್ಕದ್ದು. ಈ ಲಾಯಸೆನ್ಸು ಕೊಡುವ ಮುಂಚೆ ಅದಕ್ಕೆ ಗೊತ್ತುಮಾಡಿದ ಫೀಯನ್ನು ಮುಂಗಡವಾಗಿ ಪಡೆಯತಕ್ಕದ್ದು. ಲಾಯಸೆನ್ಸು ಇಲ್ಲದೆ, ಇಲ್ಲವೆ ಅದರಲ್ಲಿಯ ಕರಾರು ಮುರಿದು ಯಾರಾದರೂ ಲಾಯಸೆನ್ಸು ಅಗತ್ಯವಾಗಿರುವ ಸ್ಥಳವನ್ನು ಉಪಯೋಗ ಮಾಡಿದರೆ ಅದಕ್ಕೆ ದಂಡ; ಒಂದು ನೂರು ರೂಪಾಯಿಗಳ ವರೆಗೆ ದಂಡ. ಅಪರಾಧಕಾರ್ಯ ಹಾಗೆಯೆ ಮುಂದರಿದರೆ, ಶಿಕ್ಷೆಯ ತಾರೀಖಿನಿಂದ ಇಲ್ಲವೆ ಮ್ಯಾಜಿಸ್ಟ್ರೇಟರು ಗೊತ್ತುಮಾಡುವ ತಾರೀಖಿನಿಂದ ಪ್ರತಿನಿತ್ಯಕ್ಕೆ ೨೫/— ರೂಪಾಯಿಗಳವರೆಗೆ ಹೆಚ್ಚಿನ ದಂಡಕ್ಕೂ ಅವನು ಪಾತ್ರನಾಗುತ್ತಾನೆ. ಲಾಯಿಸೆನ್ಸ ಇಲ್ಲದೆ ಕಾರ್ಯಮಾಡುವುದು ಅಪರಾಧ. ಈ ಕಲಮು ವ್ಯಾಪಕವಾಗಿದೆ; ಬೇರೆ ಕಲಮಿನಲ್ಲಿ ಶಿಕ್ಷೆ ಹೇಳದಿದ್ದರೆ ಈ ಕಲಮು ಹತ್ತುವುದು.

**೧೪೫. ಕಟ್ಟಡ ಮುಂತಾದವುಗಳನ್ನು ಪ್ರವೇಶಿಸಲು ಮತ್ತು ಪರೀಕ್ಷಿಸಲು ಅಧಿಕಾರ**

ಮುಖ್ಯ ಕಾರ್ಯಾಧಿಕಾರಿಯು ಇಲ್ಲವೆ ಈ ಸಂಬಂಧದಲ್ಲಿ ತಾಲೂಕ ಬೋರ್ಡದಿಂದ ಅಧಿಕರಿಸಲ್ಪಟ್ಟ ಯಾವುದೇ ವ್ಯಕ್ತಿಯು, ಈ ಮುಂದೆ ಅನುಕೂಲಿಸಲಾದ ರೀತಿಯಲ್ಲಿ ನೋಟೀಸು ಕೊಟ್ಟು, ಸೂರ್ಯೋದಯದಿಂದ ಸೂರ್ಯಾಸ್ತದ ವರೆಗಿನ ಯಾವುದೇ ವೇಳೆಗೆ ಎಲ್ಲ ಕಟ್ಟಡಗಳನ್ನು ಮತ್ತು ಭೂಮಿಗಳನ್ನು ಪ್ರವೇಶಿಸಬಹುದು.

ಮತ್ತು ಪರೀಕ್ಷಿಸಬಹುದು, ಮತ್ತು ಲಿಖಿತ ನೋಟೀಸಿನ ಮೂಲಕ ಆ ಕಟ್ಟಡವ ಇಲ್ಲವೆ ಭೂಮಿಯು ಎಲ್ಲ ಇಲ್ಲವೆ ಯಾವುದೇ ಭಾಗವು ಸ್ವಚ್ಛತೆಯ ಕಾರಣಗಳಿಗಾಗಿ, ಸ್ವಚ್ಛ ಮಾಡಿಸಬೇಕೆಂದು, ಆತಂಕ ನಿರ್ಮೂಲನ ಮಾಡಬೇಕೆಂದು ಇಲ್ಲವೆ ಬೇರೆ ರೀತಿಯಲ್ಲಿ ಸರಿಯಾಗಿಡಬೇಕೆಂದು ನಿರ್ದೇಶಿಸಬಹುದು.

**ವಿವೇಚನೆ**

ಕಲಮು ೬೭ರಂತೆ ಇವೆ ಈ ಕಲಮು. ಅದಕ್ಕಾಗಿ ಅಲ್ಲಿಯ ವಿವೇಚನೆಯನ್ನು ನೋಡಬೇಕು;

ಈ ಪ್ರವೇಶದ ಅಧಿಕಾರಕ್ಕೆ ಕಾರಣವಿದೆ. ಕಟ್ಟಡಗಳು, ಭೂಮಿಗಳು, ಖಾಸಗಿ ಮಾಲಕಿಯವಾದರೂ ಅಲ್ಲಿ ಅಸ್ವಚ್ಛತೆ ಉಂಟಾದರೆ ಉಳಿದ ಜನರಿಗೆ ಸಾರ್ವಜನಿಕರಿಗೆ ಬಾಧೆಯಾಗುವುದು. ಆದ್ದರಿಂದ ಆ ಬಗ್ಗೆ ತಾಲೂಕ ಬೋರ್ಡಿಗೆ ಪ್ರವೇಶದ-ಪರೀಕ್ಷೆ ಮಾಡುವ ಅಧಿಕಾರ ಅವಶ್ಯಕವಾಗುವುದು. ಇಷ್ಟೇ, ಪ್ರವೇಶದ ಮೊದಲು ನೋಟೀಸು ಕೊಡಬೇಕು ಮತ್ತು ಸೂರ್ಯೋದಯದಿಂದ ಸೂರ್ಯಾಸ್ತದ ವರೆಗೆ ಮಾತ್ರ ಈ ಪ್ರವೇಶದ ಅಧಿಕಾರ ಇದೆ. ಇದು ಮರ್ಯಾದಿತವಾದ ಅಧಿಕಾರ.

**೧೪೬. ಅಸ್ವಚ್ಛ ಕಟ್ಟಡಗಳು ಮುಂತಾದುವು–**

ಯಾವುದೇ ಕಟ್ಟಡದ ಇಲ್ಲವೆ ಭೂಮಿಯು, ಅದು ಬಾಡಿಗೆದಾರ ಯೋಗ್ಯವಾಗಿರಲಿ ಇಲ್ಲದಿರಲಿ, ಮಾಲಕನು ಇಲ್ಲವೆ ಸ್ವಾಧೀನದಲ್ಲಿಟ್ಟುಕೊಂಡವನು ಆಗಿದ್ದು ಆ ಕಟ್ಟಡವು ಇಲ್ಲವೆ ಭೂಮಿಯು ಹೊಲಸುಮಯ ಇಲ್ಲವೆ ಅನಾರೋಗ್ಯಕರ ಸ್ಥಿತಿಯಲ್ಲಿ ಉಳಿಯುವಂತೆ ಮಾಡಿದರೆ, ಇಲ್ಲವೆ ತಾಲೂಕ ಬೋರ್ಡದ ಅಭಿಪ್ರಾಯದಲ್ಲಿ ನೆರೆಹೊರೆಯಲ್ಲಿ ವಾಸಿಸುವ ಜನರಿಗೆ ಕಂಟಕಪ್ರಾಯವಾಗಿದ್ದರೆ, ಇಲ್ಲವೆ ಮುಳ್ಳುಗಳ್ಳಿಯಿಂದ ಬೆಳೆದುದಾಗಿದ್ದರೆ ಇಲ್ಲವೆ, ಉಗ್ರಗಂಧ ಮತ್ತು ದುರ್ಗಂಧ ಗಿಡಬಳ್ಳಿಗಳು ಬೆಳೆದುದಾಗಿದ್ದರೆ, ಈ ಸಂಬಂಧದಲ್ಲಿ ತಾಲೂಕ ಬೋರ್ಡದಿಂದ ಅಧಿಕರಿಸಲ್ಪಟ್ಟ ಯಾವುದೇ ವ್ಯಕ್ತಿಯಿಂದ ಲಿಖಿತ ನೋಟೀಸು ಕೊಡಲ್ಪಟ್ಟ ಮೇಲೆ ಯೋಗ್ಯ ಕಾಲಾವಧಿಯಲ್ಲಿ ಅವನು ಸ್ವಚ್ಛಮಾಡಿಸದಿದ್ದರೆ, ಆತಂಕ ನಿರ್ಮೂಲನ ಮಾಡಿಸದಿದ್ದರೆ, ಇಲ್ಲವೆ ಅದನ್ನು ಸರಿಯಾದ ಸ್ಥಿತಿಯಲ್ಲಿ ಬರುವಂತೆ ಮಾಡದಿದ್ದರೆ, ನೋಟೀಸಿನಲ್ಲಿ ಹೇಳಿದಂತೆ ವಿನಂತಿ ಮಾನ್ಯಮಾಡದಿದ್ದರೆ, ಅಪರಾಧವು ಸಾಬೀತಾದರೆ, ಇಪ್ಪತ್ತೈದು ರೂಪಾಯಿಗಳವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಶಿಕ್ಷಿತನಾಗತಕ್ಕದ್ದು ಮತ್ತು ಆ ಅಪರಾಧವು ಮುಂದುವರೆವಂತಹದು ಆಗಿದ್ದರೆ, ಮೊದಲ ಶಿಕ್ಷೆಯ ತಾರೀಖಿನಿಂದ ಮುಂದೆ ಎಷ್ಟು ದಿವಸ ಆ ಅಪರಾಧವು ಮುಂದರಿಯುವದೋ ಅಂತಹ ಪ್ರತಿ ಒಂದು ದಿವಸಕ್ಕೆ ಐದು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ಹೆಚ್ಚಿನ ದಂಡದಿಂದಲೂ ಶಿಕ್ಷಿತನಾಗತಕ್ಕದ್ದು.

**ವಿವೇಚನೆ**

ಕಟ್ಟಡ ಇಲ್ಲವೆ ಜಾಗಾದಲ್ಲಿ ಹೊಲಸು, ಕಂಟಿ, ಮುಳ್ಳುಗಳ್ಳಿ, ದುರ್ಗಂಧವುಳ ಗಿಡಬಳ್ಳಿ ಬೆಳೆದು ಅದರಿಂದ ನೆರೆಹೊರೆಯರಿಗೆ ಅನಾರೋಗ್ಯಕರವಾಗುವಂತೆ ಇಲ್ಲವೆ ತೊಂದರೆಯಾಗುವಂತೆ ಯಾರಾದರೂ ಮಾಡಿದರೆ, ಇಲ್ಲವೆ ಆಗುವುದನ್ನು ಸರಿಪಡಿಸದೆ ಇದ್ದರೆ, ನೋಟೀಸು ಕೊಡಬೇಕು. ತಾಲೂಕ ಬೋರ್ಡ ಇಲ್ಲವೆ ಅದರಿಂದ ಅಧಿಕರಿಸಲ್ಪಟ್ಟ ಅಧಿಕಾರಿಯು ಲಿಖಿತ ನೋಟೀಸು ಕೊಟ್ಟನಂತರವೂ ಯೋಗ್ಯ ಕಾಲಾವಧಿಯಲ್ಲಿ ಆ ಮಾಲಕನು ಇಲ್ಲವೆ ಸ್ವಾಧೀನದಲ್ಲಿಟ್ಟುಕೊಂಡವನು ಉಪಾಯ ಕೈಕೊಳ್ಳದಿದ್ದರೆ ಅದು ಅಪರಾಧವಾಗುವುದು. ಅಪರಾಧವು ಸಾಬೀತಾದರೆ ೨೫/= ರೂಪಾಯಿಗಳ ವರೆಗೆ ದಂಡ; ಅಪರಾಧವು ಮುಂದುವರೆದರೆ, ಮೊದಲ ಶಿಕ್ಷೆಯನಂತರ ಪ್ರತಿ ದಿನಕ್ಕೆ ೫ ರೂಪಾಯಿಗಳ ವರೆಗೆ ಹೆಚ್ಚಿನ ದಂಡ. ಒಮ್ಮೆ ಅಪರಾಧವೆಂದು ಸಾಬೀತಾದರೆ ಅದು ಅಲ್ಲಿ ಉಳಿವ ತನಕ ಅಪರಾಧವೇ. ಉಳಿಸಿದವನು ಅಪರಾಧಿ. ಆದಕ್ಕೆ ಅದು ತೆಗೆಯಲ್ಪಡುವ ತನಕ ದಂಡ ಕೊಡಬೇಕಾಗುವುದು.

**೧೪೭. ನೀರಿನ ಪೂರೈಕೆಯ ಉಗಮಗಳ ಸಂಬಂಧವಾಗಿ ಅಧಿಕಾರಗಳು ಹಾಗೂ ಕರ್ತವ್ಯಗಳು**

ಮುಖ್ಯ ಕಾರ್ಯಾಧಿಕಾರಿಯು ಇಲ್ಲವೆ ಈ ಸಂಬಂಧದಲ್ಲಿ ತಾಲೂಕ ಬೋರ್ಡು ಅಧಿಕರಿಸಿದ ಯಾವುದೇ ವ್ಯಕ್ತಿಯು ಯಾವುದೇ ಕಾಲಕ್ಕೆ ಲಿಖಿತ ನೋಟೀಸದಿಂದ ಯಾವುದೇ ಬಾವಿ, ಜಲಪ್ರವಾಹ, ಕಾಲುವೆ, ಕೆರೆ ಇಲ್ಲವೆ ನೀರಿನ ಇತರ ಉಗಮವು, ಅದು ಖಾಸಗೀ ಆಸ್ತಿಯಾಗಿರಲಿ, ಬಿಡಲಿ, ಅದರ ಮೇಲೆ ನಿಯಂತ್ರಣವಿರುವ ಯಾವುದೇ ವ್ಯಕ್ತಿ ಇಲ್ಲವೆ ಮಾಲಕನು—

(ಅ) ಆ ನೀರು ಕುಡಿಯುವುದಕ್ಕೆ ಉಪಯೋಗಿಸಲ್ಪಡುತ್ತಿದ್ದರೆ—

(i) ಜಲಪ್ರವಾಹವಲ್ಲದ ಇಂತಹ ನೀರಿನ ಪೂರೈಕೆಯ ಯಾವುದೇ ಉಗಮವನ್ನು ಒಳ್ಳೆಯ ದುರಸ್ತಿಯಲ್ಲಿ ಮತ್ತು ಸುಸ್ಥಿತಿಯಲ್ಲಿ ಇಡುವಂತೆ ಮಾಡಬಹುದು; ಇಲ್ಲವೆ

(ii) ನೋಟೀಸಿನಲ್ಲಿ ನಿರ್ದಿಷ್ಟಪಡಿಸಲಾದ ಯೋಗ್ಯ ಕಾಲಾವಧಿಯಲ್ಲಿ ನೀರಿನ ಪೂರೈಕೆಯ ಯಾವುದೇ ಉಗಮವನ್ನು ರೇವೆಯ ಹೊಲಸು ಮತ್ತು ಕೊಳೆಯ ಗಿಡಬಳ್ಳಿಗಳನ್ನು ತೆಗೆದು ಸ್ವಚ್ಛ ಮಾಡಿಸುವಂತೆ ಮಾಡಬಹುದು; ಇಲ್ಲವೆ

(iii) ಬೋರ್ಡು ನಿರ್ದೇಶಿಸುವಂತಹ ರೀತಿಯಲ್ಲಿ ನೆಲದ ಸಮುಪಾತಳಿ ಕಾವಲಿಗಳಿಂದ ಅಂತಹ ನೀರಿನ ಪೂರೈಕೆಯ ಯಾವುದೇ ಉಗಮನ್ನು ಕೊಳೆಯಾಗದಂತೆ ಸಂರಕ್ಷಿಸುವಂತೆ ಮಾಡಬಹುದು; ಇಲ್ಲವೆ

(iv) ನೈಸರ್ಗಿಕವಾಗಿ ಹರಿಯುತ್ತಿರುವ ಜಲಪ್ರವಾಹವಾಗಿರದೇ ಇದ್ದ ನೀರಿನ ಪೂರೈಕೆಯು ಇಂತಹ ಯಾವುದೇ ಉಗಮವು ಬೋರ್ಡಿನ ಅಭಿಪ್ರಾಯದಲ್ಲಿ ಕುಡಿಯಲಿಕ್ಕೆ ಅನಾರೋಗ್ಯವಾಗಿದೆಯೆಂದರೆ, ಕುಡಿಯುವ ಉದ್ದೇಶಕ್ಕಾಗಿ ಉಪಯೋಗಿಸುವುದನ್ನು ಮತ್ತು ಇತರರು ಉಪಯೋಗ ಮಾಡುವುದನ್ನು ತಡೆಯುವಂತೆ ಮಾಡಬಹುದು; ಇಲ್ಲವೆ

(v) ವಾಕ್ಯ (iv) ರನ್ವಯವಾಗಿರುವ ಅಂತಹ ಯಾವುದೇ ನೋಟೀಸು ಕೊಡಲಾಗಿದ್ದರೂ ಇಂತಹ ಉಪಯೋಗವು ಮುಂದುವರೆದರೆ ಮತ್ತು ಬೋರ್ಡಿನ ಅಭಿಪ್ರಾಯದಲ್ಲಿ ಬೇರೆ ರೀತಿಯಲ್ಲಿ ತಡೆಯುವುದು ಆಗದಿದ್ದರೆ, ಉಗಮವನ್ನು ತಾತ್ಪೂರ್ತಿಕವಾಗಿ ಇಲ್ಲವೆ ಶಾಶ್ವತವಾಗಿ ಬಂದು ಮಾಡಬಹುದು, ಇಲ್ಲವೆ ಅದನ್ನು ತುಂಬಿಸಬಹುದು, ಇಲ್ಲವೆ ಅದರ ಉಪಯೋಗವನ್ನು ತಡೆಯುವುದಕ್ಕೆ ಬೋರ್ಡಿಗೆ ಯೋಗ್ಯವೆನ್ನಿಸುವ ರೀತಿಯಲ್ಲಿ ಅದರ ಸುತ್ತಲು ಆವಾರ ಇಲ್ಲವೆ ಬೇಲಿ ಹಾಕಿಸಬಹುದು; ಇಲ್ಲವೆ

(vi) ಇಂತಹ ನೀರಿನ ಯಾವುದೇ ಉಗಮವನ್ನು ಇಲ್ಲವೆ ಅದರ ಹತ್ತಿರ ಇರುವ ಇಲ್ಲವೆ ಅದಕ್ಕೆ ಹೊಂದಿಕೊಂಡಿರುವ ಯಾವುದೇ ಜಾಗಾದಲ್ಲಿಯು ಇಲ್ಲವೆ ಆವಾರದಲ್ಲಿಯು ಇಲ್ಲವೆ ಸಂಗ್ರಹದಲ್ಲಿಯು ಇಲ್ಲವೆ ರಿಜರ್ವಾಯರದಲ್ಲಿಯು ಆರೋಗ್ಯಕ್ಕೆ ಅಪಾಯಕರವೆಂದು ಇಲ್ಲವೆ ನೆರೆಹೊರೆಯವರಿಗೆ ಕ್ಲೇಶಕಾರಕವೆಂದು ಬೋರ್ಡಿಗೆ ತಿಳಿದಿರುವ ಯಾವುದೇ ನಿಂತ ನೀರನ್ನು ಹರಿಯಿಸಿ ತೆಗೆಸಬಹುದು ಇಲ್ಲವೆ ಬೇರೆ ರೀತಿಯಿಂದ ತೆಗೆಯಿಸಬಹುದು.

(ಬ) ಸಾಕಷ್ಟು ಸರಿಯಾದ ದುರಸ್ತಿ ಇಲ್ಲದೆ, ರಕ್ಷಣೆ ಇಲ್ಲದೆ, ಇಲ್ಲವೆ ಆವಾರ ಇಲ್ಲದೆ, ಇಂತಹ ನೀರಿನ ಪೂರೈಕೆಯು ಉಗಮವು ಬೋರ್ಡಿನ ಅಭಿಪ್ರಾಯದಲ್ಲಿ ಸಾರ್ವಜನಿಕರ ಆರೋಗ್ಯಕ್ಕೆ ಇಲ್ಲವೆ ಸುರಕ್ಷಿತತೆಗೆ ಇಲ್ಲವೆ ಅದರ ಉಪಯೋಗ ಮಾಡುವ ಇಲ್ಲವೆ ಅದರ ಹತ್ತಿರ ಹಾಯುವ ಇಲ್ಲವೆ ಅದರ ಸಮೀಪ ಬರುವ ಪ್ರಸಂಗ ಇರುವ ಯಾವುದೇ ವ್ಯಕ್ತಿಗಳ ಆರೋಗ್ಯಕ್ಕೆ ಇಲ್ಲವೆ ಸುರಕ್ಷಿತತೆಗೆ ಗಂಡಾಂತರಕಾರಿಯಾಗಿದೆಯೆಂದು ಆಗಿದ್ದರೆ, ಅಂತಹ ನೀರಿನ ಪೂರೈಕೆಯು ಯಾವುದೇ ಉಗಮವು ಅದು ಕುಡಿಯಲಿಕ್ಕೆ ಉಪಯೋಗಿಸಲಿ ಬಿಡಲಿ, ಅದು ನೈಸರ್ಗಿಕವಾಗಿ ಹರಿಯುವ ಜಲಪ್ರವಾಹವಾಗಿರದೆ ಇದ್ದರೆ ಬೋರ್ಡು ನಿರ್ದೇಶಿಸಬಹುದಾದಂತಹ ಇಲ್ಲವೆ ಒಪ್ಪಬಹುದಾದಂತಹ ರೀತಿಯಲ್ಲಿ ಅಂತಹ ನೋಟೀಸಿನ ನಂತರ ಇಪ್ಪತ್ನಾಲ್ಕು ಗಂಟೆಗಳಲ್ಲಿ ದುರುಸ್ತಿ, ಸಂರಕ್ಷಣೆ ಇಲ್ಲವೆ ಆವಾರ ಮಾಡಿಸುವಂತೆ ಮಾಡಬಹುದು.

## ವಿವೇಚನೆ

ಕೆರೆ, ಬಾವಿ, ಹಳ್ಳ, ಹೊಳೆ, ಕಾಲುವೆ ಮುಂತಾದ ಉಗಮದಿಂದ ನೀರು, ಪೂರೈಸಲಾಗುತ್ತದೆ. ಈ ಉಗಮಗಳು ಸಾರ್ವಜನಿಕ ಆಸ್ತಿಯಾಗಿರಬಹುದು ಇಲ್ಲವೆ ಖಾಸಗಿ ಆಸ್ತಿಯಾಗಿರಬಹುದು. ಸಾರ್ವಜನಿಕ ಆಸ್ತಿಯಾಗಿದ್ದ ಸಂದರ್ಭದಲ್ಲಿ ಅದರ ಮೇಲೆ ಸಾರ್ವಜನಿಕ ಆಡಳಿತೆಯ ನಿಯಂತ್ರಣ ಇರುವುದು. ಖಾಸಗಿ ಆಸ್ತಿಯಾಗಿದ್ದರೂ ಅದರ ಮಹತ್ವ ಸಾರ್ವಜನಿಕವಾಗಿರುವುದು. ನೀರು ಎಂದ ಮೇಲೆ ಅದು ಕುಡಿಯಲಿಕ್ಕೆ ಉಪಯೋಗವಾಗುವುದು. ಯಾವುದಕ್ಕೂ ಉಪಯೋಗವಾಗದಿದ್ದರೆ ಅದು ಬೇನೆ ಬೇಸರಿಕೆಗಳ ಉಗಮವೂ ಆಗುವುದು. ಆದುದರಿಂದ ನೀರಿನ ಪೂರೈಕೆಯ ಉಗಮಗಳ ಮೇಲೆ ತಾಲೂಕ ಬೋರ್ಡದ ನಿಯಂತ್ರಣ ಇರಬೇಕಾಗುವುದು. ಆ ಸಂಬಂಧದಲ್ಲಿ ಬೋರ್ಡದ ಅಧಿಕಾರಗಳು ಯಾವು ಅದು ಮಾಡಬೇಕಾದ ಕರ್ತವ್ಯಗಳು ಯಾವು ಎಂಬುದನ್ನು ಈ ಕಲಮು ಹೇಳುತ್ತದೆ.

ಯಾರ ಒಡೆತನದ್ದೇ ಏಕೆ ಆಗಿರಲೊಲ್ಲದು, ನೀರಿನ ಪೂರೈಕೆಯ ಉಗಮಗಳು ಸ್ವಚ್ಛವಾಗಿಡಲ್ಪಡಬೇಕು. ಹಾಗೆ ಇಡುವಂತೆ ಮಾಡಿಸುವ ಕರ್ತವ್ಯ ಬೋರ್ಡಿನದು, ಹಾಗೆ ಮಾಡಿಸುವ ಅಧಿಕಾರ ಅದಕ್ಕೆ ಇದೆ. ಖಾಸಗೀ ಆಸ್ತಿಯಾಗಿದ್ದ ಪಕ್ಷದಲ್ಲಿ ಆ ಮಾಲಕ ವ್ಯಕ್ತಿಗೆ ನೋಟೀಸು ಕೊಟ್ಟು,ಕೆಲಸಮಾಡಿಸಬೇಕು, ಎಂದು ಹೇಳಿ ಖಾಸಗೀ ವ್ಯಕ್ತಿಗಳ ಅಧಿಕಾರವನ್ನು ಮನ್ನಿಸಲಾಗಿದೆ. ಅವನು ನೋಟೀಸಿನ ಪ್ರಕಾರ ಕೆಲಸಮಾಡಿದರೆ ಒಳಿತಾಯಿತು. ಮಾಡದಿದ್ದರೆ, ಅದನ್ನು ಮಾಡಿಸುವ ಅಧಿಕಾರ ಬೋರ್ಡಿಗೆ ಇದೆ.

## ೧೪೮. ಕೊಟ್ಟ ನಿರ್ದೇಶನಗಳ ಉಲ್ಲಂಘನೆಗೆ ಉಪಾಯ

ಕಲಮು ೧೪೭ ರ ಶರತುಗಳನ್ವಯವಾಗಿ ಹೇಳಲಾದ ಕಾಲಾವಧಿಯಲ್ಲಿ ಮಾಡಿದಂತಹ ಯಾವುದೇ ವಿನಂತಿಯಪ್ರಕಾರ, ಮೇಲೆ ಹೇಳಿದ ಮಾಲಕನು ಇಲ್ಲವೆ ಆ ಆಸ್ತಿಯ ನಿಯಂತ್ರಣವಿದ್ದವನು ಮಾಡಲು ತಪ್ಪಿದರೆ ಇಲ್ಲವೆ ಅಲಕ್ಷ್ಯ ಮಾಡಿದರೆ ಆ ನೋಟೀಸಿನಲ್ಲಿ ಹೇಳಿದಂತಹ ಕೆಲಸವನ್ನು ತಾಲೂಕ ಬೋರ್ಡು ಮಾಡಿಸಲು ತೊಡಗಬಹುದು. ಮತ್ತು ಮುಖ್ಯ ಕಾರ್ಯಾಧಿಕಾರಿಯ ಅಭಿಪ್ರಾದಲ್ಲಿ ಯಾವುದೇ ವ್ಯಕ್ತಿಯ ಆರೋಗ್ಯ ಇಲ್ಲವೆ ಸುರಕ್ಷಿತತೆಯನ್ನು ಸಂರಕ್ಷಿಸುವುದಕ್ಕೆ ಆವಶ್ಯಕವಾದ ತಾತ್ಕಾಲಿಕವಾದ ಕಾರ್ಯವನ್ನು ಮಾಡಲೇಬೇಕೆಂದಾದರೆ ತಾಲೂಕ ಬೋರ್ಡು ಆ ನೋಟೀಸಿನಲ್ಲಿ ಹೇಳಿದಂತಹ ಕೆಲಸವನ್ನು ಮಾಡಿಸಲು ತೊಡಗತಕ್ಕದ್ದು. ಮತ್ತು ಆ ಬಗ್ಗೆ ಹತ್ತಿದ ಎಲ್ಲ ವೆಚ್ಚ ಮಾಲಕನಿಂದ ಇಲ್ಲವೆ ನೀರಿನ ಪೂರೈಕೆಯಮೇಲೆ ನಿಯಂತ್ರಣವಿದ್ದ ವ್ಯಕ್ತಿಯಿಂದ ಕೊಡಲ್ಪಡತಕ್ಕದ್ದು. ಮತ್ತು ಆ ವೆಚ್ಚವು ಪ್ರಕರಣ ೯: ರನ್ವಯವಾಗಿ ವಸೂಲ ಮಾಡಲ್ಪಡಬಹುದಾದ

ಯಾವುದೇ ಕರದ ಬಾಬತ್ತು ಹಣ ವಸೂಲ ಮಾಡುವಂತಹ ರೀತಿಯಲ್ಲಿ ವಸೂಲು ಮಾಡಲು ಯೋಗ್ಯವಾಗುವುದು.

ಆದರೆ, ಯಾವುದೇ ಬಾವಿಯು, ಇಲ್ಲವೆ ಖಾಸಗಿ ಜಲಪ್ರವಾಹ, ಇಲ್ಲವೆ ಖಾಸಗೀ ಕಾಲುವೆಯು, ಕೆರೆ, ಇಲ್ಲವೆ ನೀರಿನ ಪೂರೈಕೆಯ ಇತರ ಉಗಮವು ಯಾವುದರ ನೀರು ಸಾರ್ವಜನಿಕರಿಂದ ಇಲ್ಲವೆ ಸಾರ್ವಜನಿಕರ ಯಾವುದೇ ವರ್ಗದವರಿಂದ ಹಕ್ಕಿನಿಂದ ಉಪಯೋಗಿಸಲ್ಪಡುತ್ತಿದ್ದರೆ ಇಂತಹ ಮಾಲಕನಿಂದ ಇಲ್ಲವೆ ಅದರ ಮೇಲೆ ನಿಯಂತ್ರಣವಿದ್ದ ವ್ಯಕ್ತಿಯಿಂದ ಮಾಡಲ್ಪಟ್ಟ ವೆಚ್ಚವು ತಾಲೂಕ ಬೋರ್ಡ್ ಹಾಗೆ ನಿರ್ದೇಶಿಸಿದರೆ ತಾಲೂಕ ಬೋರ್ಡದ ನಿಧಿಯ ಭಾಗದೊಳಗಿಂದ ಕೊಡಲ್ಪಡಬಹುದು.

## ವಿವೇಚನೆ

ಕಲಮು ೧೪೭ ಕ್ಕೆ ಸಂಬಂಧಪಟ್ಟ ವಿಷಯಗಳು ಈ ಕಲಮಿನಲ್ಲಿವೆ; ಅಲ್ಲಿ ಹೇಳಿದಂತೆ ಕೊಟ್ಟ ನೋಟೀಸಿನ ಪ್ರಕಾರ ಸಂಬಂಧಪಟ್ಟ ವ್ಯಕ್ತಿಯು ಕೆಲಸ ಮಾಡಲು ತಪ್ಪಿದರೆ ಇಲ್ಲವೆ ದುರ್ಲಕ್ಷಿಸಿದರೆ, ಬೋರ್ಡು ಆ ಕೆಲಸವನ್ನು ಮಾಡಿಸಿ ಅದರ ವೆಚ್ಚವನ್ನು ಆ ವ್ಯಕ್ತಿಯಿಂದ ವಸೂಲ ಮಾಡುವ ಅಧಿಕಾರ ಈ ಕಲಮು ಕೊಡುತ್ತದೆ. ಇನ್ನು ಒಡೆತನ ವ್ಯಕ್ತಿಯದಾಗಿದ್ದರೂ ಆ ನೀರು ಸಾರ್ವಜನಿಕರ ಇಲ್ಲವೆ ಅದರ ಯಾವುದೇ ವರ್ಗದವರು ತಮ್ಮ ಹಕ್ಕಿನಿಂದ ಉಪಯೋಗಿಸುತ್ತಿದ್ದರೆ, ಆ ವೆಚ್ಚವನ್ನು ವ್ಯಕ್ತಿಯು ಮಾಡಿದರೂ ಅದನ್ನು ತಾಲೂಕ ಬೋರ್ಡದ ನಿಧಿಯಿಂದ ಬೋರ್ಡು ಕೊಡಬಹುದೆಂಬ ಬಗ್ಗೆಯೂ ಹೇಳಲಾಗಿದೆ. ಅಂದರೆ ಒಡೆತನ ಮುಖ್ಯವಲ್ಲ; ನೀರಿನ ಉಪಯೋಗ ಯಾರು ಮಾಡುವರೋ ಅವರು ಅದರ ವೆಚ್ಚವನ್ನು ವಹಿಸಬೇಕು. ಹಕ್ಕಿನಿಂದ ಸಾರ್ವಜನಿಕರು ಉಪಯೋಗಿಸುತ್ತಿದ್ದರೆ, ಸಾರ್ವಜನಿಕರು ವೆಚ್ಚವನ್ನು ಬೋರ್ಡು ಕೊಟ್ಟ ಹಾಗೆಯೇ. ಅದಕ್ಕೆ ಬೋರ್ಡು ಕೊಡಬೇಕೆಂದು ಹೇಳಿಯದೆ.

## ೧೪೯. ಸಾರ್ವಜನಿಕ ಬುಗ್ಗೆಗಳನ್ನು ತೊರೆಗಳನ್ನು ಕೆಲವೊಂದು ಉದ್ದೇಶಗಳಿಗಾಗಿ ಪ್ರತ್ಯೇಕವಾಗಿಡುವ ಅಧಿಕಾರ

ರಹಿವಾಸಿಗಳ ಆರೋಗ್ಯ, ಸ್ವಚ್ಛತೆ, ನೆಮ್ಮದಿ, ಇಲ್ಲವೆ ಅನುಕೂಲತೆಯನ್ನು ಹೆಚ್ಚಿಸುವುದಕ್ಕಾಗಿ, ಕುಡಿಯುವ ಉದ್ದೇಶಗಳಿಗಾಗಿ, ಇಲ್ಲವೆ ಸ್ನಾನಕ್ಕಾಗಿ ಇಲ್ಲವೆ ಅರಿವೆ ಇಲ್ಲವೆ ಪ್ರಾಣಿಗಳನ್ನು ತೊಳೆಯುವುದಕ್ಕಾಗಿ, ಇಲ್ಲವೆ ಬೇರೆ ಯಾವುದೇ ಉದ್ದೇಶಕ್ಕಾಗಿ, ಸಾರ್ವಜನಿಕ ಬುಗ್ಗೆಗಳನ್ನು, ಕೆರೆಗಳನ್ನು, ಬಾವಿಗಳನ್ನು ಮತ್ತು ಇತರ ಸಾರ್ವಜನಿಕ ಜಲಪ್ರವಾಹಗಳ ಭಾಗಗಳನ್ನು ಇಲ್ಲವೆ ಸ್ಥಳಗಳನ್ನು ತಾಲೂಕ ಬೋರ್ಡು, ಆ ಬುಗ್ಗೆ, ಕೆರೆ, ಬಾವಿ, ಇಲ್ಲವೆ ಸಂಬಂಧಪಟ್ಟ ಬೇರೆ ಸ್ಥಳಗಳ

ಹತ್ತಿರ ನೋಟೀಸನ್ನು ಹಾಕಿ, ಮತ್ತು ಈ ಕಾಯಿದೆಯಿಂದ ಹೇಳಿದ ಬೇರೆ ರೀತಿಯಲ್ಲಿ ಅವುಗಳನ್ನು ಪ್ರತ್ಯೇಕವಾಗಿಡಬಹುದು. ಮೇಲೆ ಹೇಳಿದ ಉದ್ದೇಶಗಳಿಗಾಗಿ, ಮಾಲಕರ ಸಮ್ಮತಿಯಿಂದ ಖಾಸಗಿ ಬುಗ್ಗೆಗಳು, ಕೆರೆಗಳು, ಬಾವಿಗಳು ಇಲ್ಲವೆ ಇತರ ಸ್ಥಳಗಳು ಕೂಡ ಪ್ರತ್ಯೇಕವಾಗಿ ಇಡಲ್ಪಡಬಹುದು.

**ವಿವೇಚನೆ**

ನೀರಿನ ಸಂಗ್ರಹದ ಸ್ವರೂಪವೂ ಅನೇಕ ವಿಧ. ನೀರಿನ ಉಪಯೋಗವೂ ಹಲವಾರು ವಿಧ. ಸಾರ್ವಜನಿಕ ನೀರಿನ ಸಂಗ್ರಹಗಳನ್ನು, ನೋಟೀಸು ಆ ಸಂಗ್ರಹದ ಸಮೀಪ ಪ್ರಕಟಿಸಿ, ಬೇರೆ ಬೇರೆ ಉಪಯೋಗಗಳಿಗಾಗಿ ಬೇರೆ ಬೇರೆ ತರಹದ ನೀರಿನ ಸಂಗ್ರಹಗಳನ್ನು ಪ್ರತ್ಯೇಕವಾಗಿರಿಸುವ ಅಧಿಕಾರವು ಬೋರ್ಡಿಗೆ ಇದೆ. ಖಾಸಗಿ ಒಡೆತನವಲ್ಲಿದ್ದ ಕೆರೆ ಬಾವಿಗಳೂ ಕೂಡ ಆ ಮಾಲಕರು ಒಪ್ಪಿದರೆ ಬೇರೆ ಬೇರೆ ಉದ್ದೇಶಗಳಿಗಾಗಿ ಪ್ರತ್ಯೇಕವಾಗಿಡಲ್ಪಡಬಹುದು. ಅಂದರೆ ಕುಡಿಯುವ ನೀರಿಗಾಗಿ ಬೇರೆ, ಒಗೆಯಲಿಕ್ಕೆ ಬೇರೆ, ದನ ತೊಳೆಯಲಿಕ್ಕೆ ಹೀಗೆ ಬೇರೆ ಬೇರೆ ಕೆರೆ, ಬಾವಿ, ತೊರೆ, ಬುಗ್ಗೆಗಳನ್ನು ಬೇರೆ ಬೇರೆ ಉದ್ದೇಶಗಳಿಗಾಗಿ ಪ್ರತ್ಯೇಕವಾಗಿಡುವುದರಿಂದ ಸ್ವಚ್ಛತೆ ಕಾಯಿದುಕೊಳ್ಳಲಿಕ್ಕೆ ಅನುಕೂಲವಾಗುವುದು.

## ೧೫೦. ಕೆಲವೊಂದು ಉಗಮುಗಳಿಂದ ಬಂದ ನೀರನ್ನು ಉಪಯೋಗಿಸಲು ನಿರ್ಬಂಧ ಮಾಡುವ ಅಧಿಕಾರ

ರೋಗಾದಿಗಳ ಕಾಲದಲ್ಲಿ, ಬೋರ್ಡದ ನೌಕರಿಯಲ್ಲಿರುವ ಯಾವುದೇ ವೈದ್ಯಕೀಯ ಅಧಿಕಾರಿಯಿಂದ ಇಲ್ಲವೆ ಸರಕಾರದಿಂದ ಇಂತಹ ಕಾರ್ಯವು ಆವಶ್ಯಕವಾಗಿ ಮಾಡುವುದು ಹಿತಕಾರಿ ಎಂದು ಸರ್ಟಿಫಿಕೇಟು ಸ್ವೀಕೃತವಾದ ಮೇಲೆ ತಾಲೂಕ ಬೋರ್ಡು ಹೆಚ್ಚು ವಿಚಾರ ಮಾಡದೆ, ನೋಟೀಸಿನಿಂದ ಸಾರ್ವಜನಿಕರಿಗೆ ಆಸ್ಪದವಿರುವ ಯಾವುದೇ ಉಗಮುದ ನೀರಿನ ಉಪಯೋಗವನ್ನು ನಿರ್ಬಂಧಿಸಬಹುದು. ಇಂತಹ ನೋಟೀಸನ್ನು ಆ ನೀರಿನ ಪೂರೈಕೆಯ ಉಗಮುದ ಹತ್ತಿರ ಅಂಟಿಸಿ, ಇಲ್ಲವೆ ಡಂಗುರ ಹೊಡಿಸಿ, ಎಷ್ಟು ದಿನಗಳ ವರೆಗೆ ಆ ನಿರ್ಬಂಧವು ಜಾರಿಯಲ್ಲಿರುವುದೆಂಬುದನ್ನು ತಿಳಿಸಬೇಕು. ಮುಂದೆ ಮತ್ತೆ ಸರ್ಟಿಫಿಕೇಟಿನ ಆವಶ್ಯಕತೆಯಿಲ್ಲದೆ, ತಾಲೂಕ ಬೋರ್ಡು ನಿರ್ಬಂಧದ ಕಾಲಾವಧಿಯನ್ನು ವಿಸ್ತರಿಸಬಹುದು ಇಲ್ಲವೆ ತಿದ್ದುಪಡಿ ಮಾಡಬಹುದು.

**ವಿವೇಚನೆ**

ರೋಗಾದಿಗಳ ಕಾಲ ಇರಬೇಕು. ತನ್ನ ವೈದ್ಯಕೀಯ ಅಧಿಕಾರಿ ಇಲ್ಲವೆ ಸರಕಾರೀ ವೈದ್ಯಕೀಯ ಅಧಿಕಾರಿಯು ಹಾಗೆ ಅದು ರೋಗಾದಿಗಳ ಕಾಲ ಎಂದು ಸರ್ಟಿಫಿಕೇಟು ಕೊಡಬೇಕು. ಮತ್ತು ನೀರಿನ ಉಗಮುಗಳ ಉಪಯೋಗವನ್ನು

ನಿರ್ಬಂಧಿಸುವುದು ಹಿತಕಾರಿ ಎಂದು ಸೂಚಿಸಿರಬೇಕು. ಆಗ ಬೋರ್ಡು ನೋಟೀಸನ್ನು ಆ ನೀರಿನ ಉಗಮದ ಹತ್ತರ ಅಂಟಿಸಿ, ಇಲ್ಲವೆ ಡಂಗುರ ಸಾರಿಸಿ, ಉಪಯೋಗವನ್ನು ನಿರ್ಬಂಧಿಸಬಹುದು. ನಿರ್ಬಂಧವು ಎಷ್ಟು ದಿವಸಗಳ ವರೆಗೆ ಎಂಬುದು ನೋಟೀಸಿನಲ್ಲಿ ಇಲ್ಲವೆ ಡಂಗುರದಲ್ಲಿ ಹೇಳಬೇಕು. ಈ ನಿರ್ಬಂಧದ ಅವಧಿಯನ್ನು ಹೆಚ್ಚಿಸಬಹುದು ತಿದ್ದುಪಡಿ ಮಾಡಬಹುದು. ಆದಕ್ಕೆ ಮತ್ತೆ ಪ್ರತ್ಯೇಕ್ಷ ಸರ್ಟಿಫಿಕೇಟು ಕಾರಣವಿಲ್ಲ.

## ೧೫೧. ಕೆಲವೊಂದು ಉದ್ದೇಶಗಳಿಗಾಗಿ ನೀರು ಉಪಯೋಗಿಸಿದರೆ ದಂಡನೆ

ಯಾರಾದರೂ—

(ಅ) ಬೋರ್ಡಿನಿಂದ ಇಲ್ಲವೆ ಖಾಸಗಿ ಆಸ್ತಿ ಇದ್ದ ಸಂದರ್ಭದಲ್ಲಿ ಅದರ ಮಾಲಕನಿಂದ, ಕುಡಿಯುವ ಉದ್ದೇಶಗಳಿಗಾಗಿ ಪ್ರತ್ಯೇಕವಾಗಿರಿಸಲ್ಪಟ್ಟ ಯಾವುದೇ ಸ್ಥಳವಲ್ಲಿಯ ನೀರಿನಲ್ಲಿ ಸ್ನಾನ ಮಾಡಿದರೆ ಇಲ್ಲವೆ ನೀರನ್ನು ಹೊಲಸು ಮಾಡಿದರೆ, ಇಲ್ಲವೆ

(ಬ) ಮೇಲೆ ಹೇಳಿದಂತೆ ಕುಡಿಯುವ ಉದ್ದೇಶಗಳಿಗಾಗಿ ಪ್ರತ್ಯೇಕವಾಗಿರಿಸಲಾದ ಯಾವುದೇ ಸ್ಥಳದ ಒಳಗಿದ್ದ ಪಾತ್ರದಲ್ಲಿ ಯಾವುದೇ ಕ್ಲೇಶಕಾರಕ ಇಲ್ಲವೆ ವಿನಾಶಕ ದ್ರವ್ಯವನ್ನು ಇಟ್ಟರೆ, ಇಲ್ಲವೆ,

(ಕ) ಮೇಲೆ ಹೇಳಿದಂತೆ ಕುಡಿಯುವದಕ್ಕೆ ಇಲ್ಲವೆ ಸ್ನಾನಕ್ಕೆಂದು ಪ್ರತ್ಯೇಕವಾಗಿರಿಸಿದ ಯಾವುದೇ ಸ್ಥಳದಲ್ಲಿ ಅರಿವೆ ತೊಳೆದರೆ, ಇಲ್ಲವೆ,

(ಡ) ಮೇಲೆ ಹೇಳಿದಂತೆ, ಕುಡಿಯುವ ಉದ್ದೇಶಕ್ಕಾಗಿ, ಇಲ್ಲವೆ ಸ್ನಾನಕ್ಕಾಗಿ, ಇಲ್ಲವೆ ಅರಿವೆ ತೊಳೆಯುವುದಕ್ಕಾಗಿ, ಪ್ರತ್ಯೇಕವಾಗಿರಿಸಿದ ಯಾವುದೇ ಸ್ಥಳದಲ್ಲಿ ಯಾವುದೇ ಪ್ರಾಣಿಯನ್ನು ತೊಳೆದರೆ, ಇಲ್ಲವೆ ಯಾವುದೇ ಅಡಿಗೆಯ ಪಾತ್ರೆಗಳನ್ನು ತೊಳೆದರೆ, ಇಲ್ಲವೆ ಕಟ್ಟಿಗೆ, ತೊಗಲು ಇಲ್ಲವೆ ಯಾವುದೇ ಬೇರೆ ಕೆಟ್ಟ ಇಲ್ಲವೆ ಕ್ಲೇಶಕಾರಕ ವಸ್ತುವನ್ನು ತೊಳೆದರೆ, ಇಲ್ಲವೆ ಯಾವುದೇ ಕ್ಲೇಶಕಾರಕ ಇಲ್ಲವೆ ವಿನಾಶಕ ದ್ರವ್ಯವನ್ನು ಇಟ್ಟರೆ-ಇಲ್ಲವೆ

(ಇ) ಮೇಲೆ ಹೇಳಿದಂತೆ ಕುಡಿಯುವ ಉದ್ದೇಶಗಳಿಗಾಗಿ, ಇಲ್ಲವೆ ಸ್ನಾನಕ್ಕಾಗಿ, ಇಲ್ಲವೆ ಅರಿವೆ ತೊಳೆಯುವುದಕ್ಕಾಗಿ, ಪ್ರತ್ಯೇಕವಾಗಿರಿಸಿದ ಯಾವುದೇ ಸ್ಥಳದಲ್ಲಿ ಡೋಣಿಯ ನೀರು, ಗಟಾರದ ನೀರು, ಕಾವಲಿಯ ನೀರು, ಎಂಜಿನದ ನೀರು ಇಲ್ಲವೆ ಬಾಯಿಲರದ ನೀರು, ಇಲ್ಲವೆ ಆವನ ಮಾಲಕಿಯಲ್ಲಿದ್ದ ಇಲ್ಲವೆ ಅವನ ಒಡೆತನದಲ್ಲಿದ್ದ ಇಲ್ಲವೆ ಸ್ವಾಧೀನದಲ್ಲಿದ್ದ ಯಾವುದೇ ಕಟ್ಟಡದಿಂದ ಇಲ್ಲವೆ ಜಾಗಾದಿಂದ ಬೇರೆ ಯಾವುದೇ ಕ್ಲೇಶಕಾರಕ ದ್ರವ್ಯವನ್ನು ಹರಿಯ ಬಿಟ್ಟರೆ, ಇಲ್ಲವೆ,

(ಫ) ಕಲಮು ೧೫೦ ರ ಶರತುಗಳ ವಿರುದ್ಧವಾಗಿ ಯಾವುದೇ ಉಗಮು ದಿಂದ ನೀರನ್ನು ಉಪಯೋಗಿಸಿದರೆ,

ಅವನ ಅಪರಾಧವು ಸಾಬೀತಾಗಿದ್ದರೆ, ಐವತ್ತು ರೂಪಾಯಿಗಳ ವರೆಗೆ ವ್ಯಾಪಿಸ ಬಹುದಾದಷ್ಟು ದಂಡದಿಂದ ಅವನು ಶಿಕ್ಷಿತನಾಗತಕ್ಕದ್ದು ಮತ್ತು ಆ ಅಪರಾಧವು ಮುಂದುವರೆಯುವಂತಹದು ಇದ್ದರೆ, ಮೊದಲ ಶಿಕ್ಷೆಯ ತಾರೀಖಿನಿಂದ ಮುಂದೆ ಆ ಅಪರಾಧವು ಎಷ್ಟು ದಿನಗಳ ವರೆಗೆ ಮುಂದುವರೆಯಿತೋ ಅಷ್ಟು ದಿನಗಳಿಗೆ, ಪ್ರತಿ ಒಂದು ದಿನಕ್ಕೆ ಹತ್ತು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ಹೆಚ್ಚಿನ ದಂಡದಿಂದ ಶಿಕ್ಷಿತನಾಗತಕ್ಕದ್ದು.

**ವಿವೇಚನೆ**

ನೀರಿನ ಉಪಯೋಗ ಹಲವು ಇದ್ದರೂ ಒಂದೇ ನೀರಿನಲ್ಲಿ ಎಲ್ಲ ತರದ ಉಪ ಯೋಗ ಮಾಡಿಧರೆ, ಅದು ಅನಾರೋಗ್ಯವನ್ನುಂಟು ಮಾಡುವುದು. ಆದ್ದರಿಂದ ಕುಡಿಯುವುದಕ್ಕೆಂದು ಬೇರೆಯಾಗಿರಿಸಿದ ನೀರಿನಲ್ಲಿ ಸ್ನಾನ ಮಾಡುವುದು; ಸ್ನಾನ ಕ್ಕಾಗಿ ಇದ್ದ ನೀರಿನಲ್ಲಿ ಅರಿವೆ ತೊಳೆವುದು; ಹೀಗೆ ಹೇಳಿದ ಉಪಯೋಗ ಬಿಟ್ಟು ಬೇರೊಂದು ಮಾಡಿದರೆ ಅದು ಅಪರಾಧ. ಆದಕ್ಕೆ ದಂಡ ೫೦/- ರೂಪಾಯಿಯ ವರೆಗೆ. ಆ ಅಪರಾಧವು ಮುಂದುವರೆವ ಸ್ವರೂಪದ್ದು ಇದ್ದರೆ ಮುಂದೆ ದಿನಕ್ಕೆ ೧೦ ರೂಪಾಯಿಯಂತೆ ಹೆಚ್ಚಿನ ದಂಡ. ಈ ನಿರ್ಬಂಧ-ಶಿಕ್ಷೆಯ ಉದ್ದೇಶ ಆರೋಗ್ಯ ರಕ್ಷಣೆಯೆ ಹೊರತು ಬೇರೆ ಏನೂ ಅಲ್ಲ.

**೧೫೨. ಮಲಿತ ನೀರಿನಿಂದ ಆಗುವ ಕಂಟಕ ನಿವಾರಣೆ**

ಯಾವುದೇ ಹೊಂಡ, ತೆಗ್ಗು, ಕೆರೆ, ಹೌದು, ಬಾವಿ, ತೋಡು, ಇಲ್ಲವೆ ಯಾವುದೇ ಹಾಳು ಇಲ್ಲವೆ ನಿಂತ ನೀರು ಇಲ್ಲವೆ ಕಾಲುವೆ ಇಲ್ಲವೆ ಕೆಟ್ಟ ನೀರಿನ ಇಲ್ಲವೆ ಬೇರೆ ಕ್ಲೇಶಕಾರಕ ಇಲ್ಲವೆ ಅಪಾಯಕಾರಕ ದ್ರವ್ಯದ ಪಾತ್ರವು, ಅದು ಯಾವುದೇ ಖಾಸಗಿ ಆವಾರದಲ್ಲಿರಲೀ ಬಿಡಲಿ, ಮುಖ್ಯ ಕಾರ್ಯಾಧಿಕಾರಿಗೆ ಅದು ನೆರೆಹೊರೆಯವರಿಗೆ ಕ್ಲೇಶಕಾರಕ ಇಲ್ಲವೆ ರಹಿವಾಸಿಗಳ ಆರೋಗ್ಯಕ್ಕೆ ಅಪಾಯ ಕಾರಕವಾಗುವ ಸಂಭವವಿದೆಯೆಂದು ಅನ್ನಿಸಿದರೆ, ಆ ಸ್ಥಳದ ಮಾಲಕನಿಗೆ ಲಿಖಿತ ನೋಟೀಸು ಕೊಟ್ಟು, ಅದನ್ನು ಸ್ವಚ್ಛಮಾಡಿಸಲು, ತುಂಬಿಸಲು, ಹರಿಯಿಸಲು, ಇಲ್ಲವೆ ತೆಗೆಯಿಸಲು ಹಚ್ಚಬಹುದು ಇಲ್ಲವೆ, ಆ ಕಂಟಕದ ನಿವಾರಣೆಗಾಗಿ ಇಲ್ಲವೆ ತೆಗೆದು ಹಾಕುವುದಕ್ಕಾಗಿ ಅವನ ಅಭಿಪ್ರಾಯದಲ್ಲಿ ಆವಶ್ಯಕವಾಗಬಹುದಾದಂತಹ ಕ್ರಮಗಳನ್ನು ತೆಗೆದುಕೊಳ್ಳಲು ಹಚ್ಚಬಹುದು.

**ವಿವೇಚನೆ**

ಯಾವುದೇ ಆವಾರದಲ್ಲಿ-ಅದು ಖಾಸಗಿಯಾಗಿರಲಿ, ಬಿಡಲಿ, ಕಂಟಕದ ಸ್ವರೂಪದಲ್ಲಿದ್ದಂತಹ, ಇಲ್ಲವೆ ಆರೋಗ್ಯಕ್ಕೆ ಅಪಾಯಕಾರಕವಾಗಿರುವಂತಹ

ಹೊಲಸು ನೀರು ಮುಂತಾದ್ದು ಇದ್ದರೆ ಅದನ್ನು ಮುಖ್ಯ ಕಾರ್ಯಾಧಿಕಾರಿಯು ಸಂಬಂಧಪಟ್ಟ ವ್ಯಕ್ತಿಗೆ ನೋಟೀಸು ಕೊಟ್ಟು ತೆಗೆಯಿಸಲು ಹಚ್ಚಬಹುದು. ಆ ಅಧಿಕಾರ ಈ ಕಲಮಿನ ಮೂಲಕ ಕೊಡಲಾಗಿದೆ.

## ೧೫೩. ಮಸಣ ಭೂಮಿಯ ಉಪಯೋಗವನ್ನು ನಿಲ್ಲಿಸುವಿಕೆ

(೧) ಸ್ಮಶಾನ ಭೂಮಿಯಾಗಿ ಉಪಯೋಗಿಸಲಾಗುತ್ತಿರುವ ಯಾವುದೇ ಸ್ಥಳವು ಆರೋಗ್ಯಕ್ಕೆ ಅಪಾಯಕಾರಕವಾಗುವಂತೆ ಇದೆ ಇಲ್ಲವೆ ಆಗುವ ಸಂಭವ ವಿದೆಯೆಂದು ಬೋರ್ಡು ಅಭಿಪ್ರಾಯ ಪಟ್ಟರೆ, ಅದಕ್ಕಾಗಿರುವ ತನ್ನ ಕಾರಣಗಳ ಸಹಿತವಾಗಿ ತನ್ನ ಅಭಿಪ್ರಾಯವನ್ನು ಡೆಪ್ಯೂಟಿ ಕಮಿಶನರರ ಕಡೆಗೆ ಕಳಿಸ ಬಹುದು. ನಂತರ ಡೆಪ್ಯೂಟಿ ಕಮಿಶನರರು ತನಗೆ ಯೋಗ್ಯ ಕಂಡಂತಹ ಹೆಚ್ಚಿನ ವಿಚಾರಣೆಯನ್ನು ಮಾಡಿಸಿ, ಪ್ರಕಟನೆಯ ಮುಖಾಂತರ ಆ ಪ್ರಕಟನೆ ಯಲ್ಲಿ ಕಾಣಿಸಲಾದ ತಾರೀಖಿನಿಂದ ಆ ಸ್ಥಳದಲ್ಲಿ ಆ ಉದ್ದೇಶಕ್ಕಾಗಿ ಉಪಯೋ ಗಿಸಲ್ಪಡುವುದು ನಿಲ್ಲಿಸಲ್ಪಡಬೇಕೆಂದು ನಿರ್ದೇಶಿಸಬಹುದು.

(೨) ಆ ಪ್ರಕಟನೆಯ ನಕಲನ್ನು ಸ್ಥಳೀಯ ವೃತ್ತಪತ್ರಿಕೆಗಳು, ಯಾವು ವಾದರೂ ಇದ್ದರೆ, ಅವುಗಳಲ್ಲಿ ಪ್ರಕಟಿಸಲ್ಪಡತಕ್ಕದ್ದು. ಮತ್ತು ತಾಲೂಕ ಬೋರ್ಡದ ಕಚೇರಿಯಲ್ಲಿ ಅಂಟಿಸಲ್ಪಡತಕ್ಕದ್ದು. ಮತ್ತು ಯಾವ ಸ್ಥಳಕ್ಕೆ ಸಂಬಂಧಪಟ್ಟಿರುವುದೋ ಆ ಸ್ಥಳದ ಮೇಲಿನ ಇಲ್ಲವೆ ಹತ್ತಿರದಲ್ಲಿಯ ಎದ್ದು ಕಾಣು ವಂತಹ ಒಂದು ಇಲ್ಲವೆ ಹೆಚ್ಚು ಸ್ಥಳಗಳಲ್ಲಿ ಅಂಟಿಸಲ್ಪಡತಕ್ಕದ್ದು.

(೩) ಅದನ್ನು ಬಂದು ಮಾಡಲಾಗಿದೆಯೆಂದು ಹೊರಟ ಪ್ರಕಟನೆಯಲ್ಲಿ ನಿರ್ದಿಷ್ಟಪಡಿಸಿದ ತಾರೀಖಿನ ನಂತರ ಅಂತಹ ಸ್ಥಳದಲ್ಲಿ ಯಾವುದೇ ವ್ಯಕ್ತಿಯು ಯಾವುದೇ ಹೆಣವನ್ನು ಹುಗಿದರೆ ಇಲ್ಲವೆ ಬೇರೆ ರೀತಿ ಹೆಣದ ಸಂಸ್ಕಾರ ಮಾಡಿದರೆ, ಇಲ್ಲವೆ ಸರಕಾರದ ಒಡೆತನವಿದ್ದ, ಯಾರ ಸ್ವಾಧೀನದಲ್ಲಿ ಇರವೇ ಇದ್ದ, ಜಾರಿ ಯಲ್ಲಿದ್ದ ಯಾವುದೇ ಕಾಯಿದೆಯ ಶರತುಗಳನ್ವಯವಾಗಿ ಇಲ್ಲವೆ ಸ್ಥಾಪಿತವಾದ ರೂಢಿಯಿಂದ ಹೆಣ ಹುಗಿಯಲಿಕ್ಕೆಂದು ಪ್ರತ್ಯೇಕವಾಗಿರಿಸವೇ ಇದ್ದ, ಭೂಮಿಯಲ್ಲಿ ಯಾವುದೇ ಹೆಣವನ್ನು ಹುಗಿದರೆ, ಅವನ ಅಪರಾಧವು ಸಾಬೀತಾದರೆ, ಒಂದು ನೂರು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಶಿಕ್ಷಿತ ನಾಗತಕ್ಕದ್ದು.

### ವಿವೇಚನೆ

ಸ್ಮಶಾನ ಭೂಮಿ ಎಂಬುದು ಪ್ರತ್ಯೇಕವಾಗಿರಿಸಿದ ಸ್ಥಳವು. ಊರು ಮೊದ ಲಿದ್ದ ಸ್ಥಿತಿಯಲ್ಲಿ ಉಳಿಯದೆ ಬೆಳೆಯುವುದು ಸಂಭವನೀಯ. ಆದುದರಿಂದ ಒಂದು ಕಾಲಕ್ಕೆ ಊರ ಹೊರಗೆ ಇದ್ದ ಸ್ಮಶಾನ ಭೂಮಿಯು ಊರು ಬೆಳೆದ ಕಾರಣದಿಂದ

ಅದರ ಹತ್ತಿರ ಬಂದಂತಾಗುವುದು. ಆಗ ಅಂತಹ ಸ್ಮಶಾನ ಭೂಮಿಯು ಸಾರ್ವಜನಿಕರ ಆರೋಗ್ಯಕ್ಕೆ ವ್ಯತ್ಯಯ ಬರುವಂತಹದಾಗುವುದು. ಹೀಗೆ ತಾಲೂಕ ಬೋರ್ಡದ ಅಭಿಪ್ರಾಯವಾದರೆ ಕಾರಣ ಸಹಿತವಾಗಿ ಆ ವಿಷಯವನ್ನು ಡೆಪ್ಯೂಟಿ ಕಮಿಶನರರ ಕಡೆಗೆ ತಿಳಿಸಬೇಕು. ಅವನು ಪ್ರಕಟನೆ ಹೊರಡಿಸಿ ಆ ಸ್ಮಶಾನ ಭೂಮಿಯನ್ನು ಸ್ಮಶಾನ ಎಂದು ಉಪಯೋಗಿಸುವುದನ್ನು ಬಂದು ಮಾಡತಕ್ಕದ್ದು. ತನಗೆ ಯೋಗ್ಯವೆನಿಸಿದ ವಿಚಾರಣೆ ಮಾಡಿಕೊಳ್ಳಬಹುದು. ಹೀಗೆ ಬಂದು ಮಾಡಲಾದ ವಿಷಯ ಪ್ರಕಟವಾದ ಪರಿಪತ್ರವನ್ನು ಸ್ಥಳೀಯ ಪತ್ರಿಕೆಗಳಲ್ಲಿ ಆ ಸ್ಥಳದ ಹತ್ತಿರ, ತಾಲೂಕ ಬೋರ್ಡದ ಕಚೇರಿಯಲ್ಲಿ ಪ್ರಕಟಿಸಬೇಕು. ಅಂದರೆ ಸಾರ್ವಜನಿಕರಿಗೆ ತಿಳಿವಳಿಕೆಯುಂಟಾಗಬೇಕೆಂಬುದಕ್ಕೆ. ಒಮ್ಮೆ ಪ್ರಕಟನೆ ಹೊರಟು ಬಂದು ಮಾಡಿದ ನಂತರ ಆ ಸ್ಥಳದಲ್ಲಿ ಹೆಣ ಹುಗಿವುದು ಇಲ್ಲವೆ ಸಂಸ್ಕಾರ ಮಾಡುವುದು ಅಪರಾಧ. ಅಪರಾಧ ಸಾಬೀತಾದರೆ ೧೦೦/- ರೂಪಾಯಿ ವರೆಗೆ ದಂಡ.

## ೧೫೪. ಸಾಂಕ್ರಾಮಿಕ ರೋಗಗಳು ಇದ್ದ ಕಟ್ಟಡಗಳು ಮುಂತಾದವುಗಳಲ್ಲಿ ಪ್ರವೇಶದ ಅಧಿಕಾರ

ಯಾವ ಕಟ್ಟಡದಲ್ಲಿ ಇಲ್ಲವೆ ಆವಾರದಲ್ಲಿ ಯಾವುದೇ ಸಾಂಕ್ರಾಮಿಕ ರೋಗ ಇದೆಯೆಂದು ಇಲ್ಲವೆ ಇರುವ ಸಂಶಯದ ಬಗ್ಗೆ ವರದಿಯಾಗಿದೆಯೋ ಅಂತಹ ಯಾವುದೇ ಕಟ್ಟಡದಲ್ಲಿ ಇಲ್ಲವೆ ಆವಾರದಲ್ಲಿ ಯೋಗ್ಯ ನೋಟೀಸು ಕೊಟ್ಟ ನಂತರ ಯಾವುದೇ ಕಾಲಕ್ಕೆ ಇಂತಹ ಕಟ್ಟಡವನ್ನು ಇಲ್ಲವೆ ಆವಾರವನ್ನು ಪರೀಕ್ಷಿಸುವುದಕ್ಕೆ ಮುಖ್ಯ ಕಾರ್ಯಾಧಿಕಾರಿಯು ಇಲ್ಲವೆ ಈ ಸಂಬಂಧದಲ್ಲಿ ಬೋರ್ಡದಿಂದ ಅಧಿಕರಿಸಲ್ಪಟ್ಟ ಯಾವುದೇ ವ್ಯಕ್ತಿಯು ಪ್ರವೇಶಿಸಬಹುದು. ಇಂತಹ ಯಾವುದೇ ಪರೀಕ್ಷಣವು ಸೂರ್ಯೋದಯದಿಂದ ಸೂರ್ಯಾಸ್ತದ ವರೆಗಿನ ನಡುವಿನ ಸಮಯವಲ್ಲದೆ ಬೇರೆ ಕಾಲಕ್ಕೆ ಮಾಡತಕ್ಕದ್ದಲ್ಲ.

### ವಿವೇಚನೆ

ಸಾಂಕ್ರಾಮಿಕ ರೋಗವು ಇದೆಯೆಂದು ಇಲ್ಲವೆ ಇರಬಹುದೆಂದು ಯಾವುದೇ ಕಟ್ಟಡ ಇಲ್ಲವೆ ಆವಾರದ ಬಗ್ಗೆ ವರದಿಯಾದರೆ ಆ ಕಟ್ಟಡವನ್ನು ಇಲ್ಲವೆ ಆವಾರವನ್ನು ಪರೀಕ್ಷಣ ಮಾಡುವುದಿದೆಯೆಂದು ಯೋಗ್ಯ ನೋಟೀಸು ಕೊಟ್ಟು ಮುಖ್ಯ ಕಾರ್ಯಾಧಿಕಾರಿಯು ಇಲ್ಲವೆ ಬೋರ್ಡ ಅಧಿಕರಿಸಿದ ಬೇರೆ ವ್ಯಕ್ತಿಯು ಪ್ರವೇಶ ಮಾಡಿ ಆ ಕಟ್ಟಡವನ್ನು ಆ ರೋಗದ ಸಂಬಂಧವಾಗಿ ಪರೀಕ್ಷಿಸಬಹುದು. ಆದರೆ ಈ ಪ್ರವೇಶದ ಅಧಿಕಾರವು ಸೂರ್ಯೋದಯದಿಂದ ಸೂರ್ಯಾಸ್ತದ ನಡುವಿನ ವೇಳೆಯಲ್ಲಿ ಮಾತ್ರ ಎಂಬುದನ್ನು ಲಕ್ಷದಲ್ಲಿಡಬೇಕು.

## ೧೫೫. ಕಟ್ಟಡಗಳನ್ನು ರೋಗನಾಶಕಗಳಿಂದ ಸ್ವಚ್ಛ ಮಾಡುವುದು

ಕಟ್ಟಡವನ್ನು ಇಲ್ಲವೆ ಆವಾರವನ್ನು ಇಲ್ಲವೆ ಅದರ ಭಾಗವನ್ನು ಇಲ್ಲವೆ ಅದರ ಲ್ಲಿಯ ಸಾಂಕ್ರಾಮಿಕತೆಯನ್ನು ಉಳಿಸಿಕೊಳ್ಳುವ ಸಂಭವವಿರುವ ಯಾವುದೇ ವಸ್ತು ವನ್ನು, ಸ್ವಚ್ಛಮಾಡುವುದರಿಂದ, ಕ್ರಿಮಿನಾಶಕ ಉಪಯೋಗಿಸುವುದರಿಂದ ಯಾವುದೇ ಸಾಂಕ್ರಾಮಿಕ ರೋಗವು ಹಬ್ಬುವುದನ್ನು ತಡೆಯುವುದೆಂದು ಇಲ್ಲವೆ ನಿಯಂತ್ರಿಸುವು ದೆಂದು ಮುಖ್ಯ ಕಾರ್ಯಾಧಿಕಾರಿಯ ಅಭಿಪ್ರಾಯವಾದರೆ, ಅವನು ನೋಟೀಸು ಕೊಟ್ಟು ಆ ಕಟ್ಟಡದ ಇಲ್ಲವೆ ಆವಾರದ ಮಾಲಕನಿಂದ ಇಲ್ಲವೆ ಸ್ವಾಧೀನದಲ್ಲಿಟ್ಟು ಕೊಂಡವನಿಂದ ಅಂತಹ ನೋಟೀಸಿನಲ್ಲಿ ನಿರ್ದಿಷ್ಟಪಡಿಸಲಾದ ಕಾಲಾವಧಿಯಲ್ಲಿ ಸ್ವಚ್ಛಮಾಡಿಸಲು, ಇಲ್ಲವೆ ಕ್ರಿಮಿನಾಶಕದಿಂದ ತೊಳೆಯಿಸಲು ಹೆಚ್ಚಬಹುದು.

ಆದರೆ, ತಾತ್ಕಾಲಿಕವಾಗಿ ಕ್ರಮತೆಗೆದುಕೊಳ್ಳುವುದು ಆವಶ್ಯಕವೆಂದು ಇಲ್ಲವೆ ಮಾಲಕನು ಇಲ್ಲವೆ ಸ್ವಾಧೀನದಲ್ಲಿಟ್ಟುಕೊಂಡವನು ಬಡತನ ಇಲ್ಲವೆ ಬೇರೆ ಕಾರಣ ಗಳ ಮೂಲಕ ನೋಟೀಸಿನಲ್ಲಿ ಹೇಳಿದಂತೆ ಪರಿಣಾಮಕಾರಿಯಾಗುವಂತೆ ಮಾಡಲು ಅಸಮರ್ಥನಾಗಿರುವನೆಂದು ಮುಖ್ಯ ಕಾರ್ಯಾಧಿಕಾರಿಯು ತಿಳಿದರೆ, ಅವನೇ ಇಂತಹ ಕಟ್ಟಡವನ್ನು ಇಲ್ಲವೆ ಆವಾರವನ್ನು ಇಲ್ಲವೆ ವಸ್ತುವನ್ನು ಸ್ವಚ್ಛಮಾಡಿಸು ವಂತೆ, ಇಲ್ಲವೆ ಕ್ರಿಮಿನಾಶವಾಗುವಂತೆ, ಮಾಡಿಸಬಹುದು ಮತ್ತು ಈ ಉದ್ದೇಶ ಗಳಿಗಾಗಿ ಅಂತಹ ವಸ್ತುಗಳನ್ನು ಅಂತಹ ಕಟ್ಟಡ ಇಲ್ಲವೆ ಆವಾರದಿಂದ ದೂರ ಸಾಗಿಸುವಂತೆ ಮಾಡಬಹುದು; ಮತ್ತು ಈ ಕಲಮಿನನ್ವಯವಾಗಿ ಮಾಡ ಬೇಕಾದ ವೆಚ್ಚವು ಆ ಮಾಲಕನಿಂದ ಇಲ್ಲವೆ ಸ್ವಾಧೀನದಲ್ಲಿಟ್ಟುಕೊಂಡವನಿಂದ ಅವನು ಬಡತನದ ಮೂಲಕವಾಗಿ ಹೇಳಿದಂತೆ ಮಾಡಿಸಲು ಅಸಮರ್ಥನಾಗಿದ್ದ ಹೊರತು, ವಸೂಲಿ ಮಾಡಲು ಯೋಗ್ಯವಾಗಿರತಕ್ಕದ್ದು.

### ವಿವೇಚನೆ

ಸಾಂಕ್ರಾಮಿಕ ರೋಗಗಳನ್ನು ತಡೆಯುವುದು ಬೋರ್ಡಿನ ಕರ್ತವ್ಯ. ಆ ದೃಷ್ಟಿಯಿಂದ ಹಿಂದಿನ ಕಲಮಿನಲ್ಲಿ ಪ್ರವೇಶದ-ಪರೀಕ್ಷಣದ ಅಧಿಕಾರ ಕೊಡ ಲಾಗಿದೆ. ಈ ಕಲಮಿನ ಮೂಲಕ ಆ ಕಟ್ಟಡ ಇಲ್ಲವೆ ಆವಾರವನ್ನು ಸ್ವಚ್ಛಮಾಡಿಸುವ ಅಧಿಕಾರ ಕೊಡಲಾಗಿದೆ. ಮುಖ್ಯ ಕಾರ್ಯಾಧಿಕಾರಿಯು ಸಂಬಂಧಪಟ್ಟ ಕಟ್ಟಡದ ಮಾಲಕನಿಗೆ ಇಲ್ಲವೆ ಸ್ವಾಧೀನದಲ್ಲಿಟ್ಟುಕೊಂಡವನಿಗೆ ಸ್ವಚ್ಛ ಮಾಡಿಸಲು ಇಲ್ಲವೆ ಕ್ರಿಮಿನಾಶ ಮಾಡಿಸಲು ನೋಟೀಸು ಕೊಡಬೇಕು. ಆ ಸಂಬಂಧಪಟ್ಟ ಮಾಲಕನು ಬಡತನದ ಮೂಲಕ ಇಲ್ಲವೆ ಬೇರೆ ಕಾರಣಗಳ ಮೂಲಕ ತಾತ್ಕಾಲಿಕವಾಗಿ ಸ್ವಚ್ಛಮಾಡಿಸಲು ಶಕ್ಯವಾಗದೆಂದು ಕಂಡು ಬಂದರೆ ಮತ್ತು ಸ್ವಚ್ಛಮಾಡಿಸುವುದು ತೀರ ಅಗತ್ಯವೆಂದು ಕಂಡುಬಂದರೆ, ಮುಖ್ಯ ಕಾರ್ಯಾಧಿಕಾರಿಯು ತಾನೇ ಸ್ವಚ್ಛ

ಮಾಡಿಸತಕ್ಕದ್ದು. ಬಡತನವೇ ಮಾಲಕನ ಅಸಮರ್ಥತೆಯ ಕಾರಣವಾಗಿದ್ದ ಹೊರತು ವೆಚ್ಚ ಅವನಿಂದ ವಸೂಲ ಮಾಡತಕ್ಕದ್ದು.

**೧೫೩. ಕ್ರಿಮಿ ಕೂಡುವ ಹಾಗೆ ಇದ್ದ ವಸ್ತುಗಳು**

(೧) ಮೈಮೇಲಿನ ಅರಿವೆಗಳು ಇಲ್ಲವೆ ಹಾಸಿಗೆಗಳು ಇಲ್ಲವೆ ಇತರ ವಸ್ತುಗಳು ಯಾವುದೇ ಅಪಾಯಕಾರಕ ಸಾಂಕ್ರಾಮಿಕ ಬೇನೆಯು ಸಂಪರ್ಕಕ್ಕೆ ಸಿಲುಕಿವೆಯೆಂದು ಆಗಿರುವಂತಹ ವಸ್ತುಗಳನ್ನು ಎಲ್ಲಿ ತೊಳೆಯಬೇಕು ಇಲ್ಲವೆ ಕ್ರಿಮಿನಾಶ ಮಾಡಬೇಕು ಎಂಬ ಸ್ಥಳದ ಬಗ್ಗೆ ಕಾಲಕಾಲಕ್ಕೆ ಮುಖ್ಯ ಕಾರ್ಯಾಧಿಕಾರಿಯು ಪ್ರಕಟಿಸತಕ್ಕದ್ದು.

(೨) ಇಂತಹ ಸಾಂಕ್ರಾಮಿಕತೆಯನ್ನು ಉಳಿಸಿಕೊಳ್ಳುವ ಸಂಭವವಿರುವ ಅರಿವೆಗಳನ್ನು, ಹಾಸಿಗೆಯನ್ನು ಇಲ್ಲವೆ ಇತರ ವಸ್ತುಗಳನ್ನು ನಾಶಮಾಡುವಂತೆ ನಿರ್ದೇಶಿಸಬಹುದು.

(೩) ಉಪಕಲಮು (೧) ರನ್ವಯವಾಗಿ ಅಂತಹ ಉದ್ದೇಶಗಳಿಗಾಗಿ ಪ್ರತ್ಯೇಕವಾಗಿರಿಸಿದ ಸ್ಥಳಗಳನ್ನು ಬಿಟ್ಟು ಬೇರೆ ಸ್ಥಳಗಳಲ್ಲಿ ಯಾರಾದರೂ ಅಂತಹ ಅರಿವೆಗಳನ್ನು ಇಲ್ಲವೆ, ಹಾಸಿಗೆಯನ್ನು ಇಲ್ಲವೆ ವಸ್ತುಗಳನ್ನು ತೊಳೆದರೆ, ಅವನ ಅಪರಾಧವು ಸಾಬೀತಾದರೆ ಐವತ್ತು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಅವನು ಶಿಕ್ಷಿತನಾಗತಕ್ಕದ್ದು.

**ವಿವೇಚನೆ**

ಸಾಂಕ್ರಾಮಿಕ ಬೇನೆಗರ ಅರಿವೆ-ಹಾಸಿಗೆ-ವಸ್ತುಗಳು ಕೂಡ ಕ್ರಿಮಿಗಳನ್ನು ಹಿಡಿದು ಕೊಂಡಿರುವುವು. ಆ ಕ್ರಿಮಿಗಳ ನಾಶವನ್ನು ಸರಿಯಾಗಿ ಮಾಡದಿದ್ದರೆ ಬೇನೆಗಳು ಹಬ್ಬುವುವು ಆದ್ದರಿಂದ ಇಂತಹ ವಸ್ತುಗಳನ್ನು ತೊಳೆಯಲು ಪ್ರತ್ಯೇಕ ವ್ಯವಸ್ಥೆ ಮಾಡಲಾಗಿರುವುದು. ಅಲ್ಲಿಯೇ ಅವುಗಳನ್ನು ತೊಳೆಯಬೇಕು. ಅದರ ವಿರುದ್ಧವಾಗಿ ವರ್ತಿಸಿದವರಿಗೆ ೫೦ ರೂಪಾಯಿಗಳ ವರೆಗೆ ದಂಡ.

ತೊಳೆದರೂ ಸ್ವಚ್ಛವಾಗುವುದಿಲ್ಲ, ಕ್ರಿಮಿ ನಾಶ ವಾಗುವುದಿಲ್ಲವೆಂದು ಕಂಡು ಬಂದ ಅರಿವೆ, ಹಾಸಿಗೆ, ವಸ್ತುಗಳನ್ನು ನಾಶಮಾಡುವಂತೆ ಆದೇಶಕೊಡಲು ಕೂಡ ಈ ಕಲಮು ಅಧಿಕಾರ ಕೊಡುತ್ತದೆ.

**೧೫೪. ಸಾರ್ವಜನಿಕ ರಸ್ತೆ, ಭೂಮಿ ಇಲ್ಲವೆ ಕಟ್ಟಡಗಳ ಮೇಲೆ ಅತಿಕ್ರಮಣ ಮತ್ತು ಆತಂಕ**

(೧) ಸಾರ್ವಜನಿಕ ರಸ್ತೆ, ಭೂಮಿ, ಇಲ್ಲವೆ ಕಟ್ಟಡವು ತಾಲೂಕ ಬೋರ್ಡದಲ್ಲಿ ಅಂತರ್ಗತವಾದ ನಂತರ, ಇಲ್ಲವೆ ತಾಲೂಕ ಬೋರ್ಡದ ಆಸ್ತಿಯಾದ ನಂತರ, ಆ ರಸ್ತೆಯ, ಭೂಮಿಯ ಇಲ್ಲವೆ ಕಟ್ಟಡದ ಯಾವುದೇ ಭಾಗದಲ್ಲಿ ಗೋಡೆ, ಇಲ್ಲವೆ

ಯಾವುದೇ ಬೇಲಿ, ಹಳಿ, ಕಂಬ, ಮಳಿಗೆ, ಕಟ್ಟೆ, ವರಾಂಡಾ, ಪಾಯಾ, ಪಾವುಟ ಣಿಗೆ ಇಲ್ಲವೆ ಮುಂದೆ ಹಾಯುವ ಯಾವುದೇ ರಚನೆ-ಇಲ್ಲವೆ ವಸ್ತು ಇಲ್ಲವೆ ಇತರ ಅತಿಕ್ರಮಣ ಇಲ್ಲವೆ ಆತಂಕ ಕಟ್ಟಿದರೆ ಇಲ್ಲವೆ ಇಟ್ಟರೆ ಇಲ್ಲವೆ ಇಂತಹ ರಸ್ತೆಯ, ಭೂಮಿಯ ಇಲ್ಲವೆ ಕಟ್ಟಡದ ಯಾವುದೇ ಭಾಗದ ಮೇಲೆ ಇಲ್ಲವೆ ಇಂತಹ ರಸ್ತೆಯ-ಲ್ಲಿಯ, ಭೂಮಿಯಲ್ಲಿಯ ಇಲ್ಲವೆ ಕಟ್ಟಡದಲ್ಲಿಯ, ಯಾವುದೇ ಬಯಲು ಕಾವಲಿ, ಗಟಾರು, ಹರಿ ಇಲ್ಲವೆ ಕೊಳಾಯಿಯಲ್ಲಿ ಇಲ್ಲವೆ ಮೇಲೆ ಯಾವುದೇ ಡಬ್ಬಿ, ಗಂಟು, ಪೆಟ್ಟಿಗೆ ಇಲ್ಲವೆ ಸರಕು ಇಟ್ಟರೆ, ಇಲ್ಲವೆ ಇಡಿಸಲ್ಪಟ್ಟರೆ, ಅವನ ಅಪರಾಧವು ಸಾಬೀತಾದರೆ, ಇಪ್ಪತ್ತೈದು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಅವನು ಶಿಕ್ಷಿತನಾಗತಕ್ಕದ್ದು.

(೨) ಇಂತಹ ಯಾವುದೇ ಅತಿಕ್ರಮಣ ಇಲ್ಲವೆ ಆತಂಕವನ್ನು ತೆಗೆಯಿಸುವ ಅಧಿಕಾರವು ಮುಖ್ಯ ಕಾರ್ಯಾಧಿಕಾರಿಗೆ ಇರತಕ್ಕದ್ದು ಮತ್ತು ಮೇಲೆ ಹೇಳಿದ ಅತಿ-ಕ್ರಮಣ ಇಲ್ಲವೆ ಆತಂಕಕ್ಕೆ ಕಾರಣನಾದ ವ್ಯಕ್ತಿಯಿಂದ ಅದನ್ನು ತೆಗೆದುಹಾಕಿಸು-ವುದರ ವೆಚ್ಚ ಕೊಡಲ್ಪಡತಕ್ಕದ್ದು. ಮತ್ತು ಪ್ರಕರಣ ೯ ರನ್ವಯವಾಗಿ ವಸೂಲಿಗೆ ಪಾತ್ರವಾದ ಯಾವುದೇ ಕರವನ್ನು ಮಾಗಣಿ ಮಾಡಿದ ಹಣದಂತೆಯೆ ವಸೂಲಿ ಮಾಡಲ್ಪಡತಕ್ಕದ್ದು.

ಆದರೆ, ಇಂತಹ ಅತಿಕ್ರಮಣ ಇಲ್ಲವೆ ಆತಂಕವನ್ನು ತೆಗೆಸುವುದಕ್ಕೆ ಮೊದಲು ಮುಖ್ಯ ಕಾರ್ಯಾಧಿಕಾರಿಯು ಅಂತಹ ಅತಿಕ್ರಮಣ ಇಲ್ಲವೆ ಆತಂಕಕ್ಕೆ ಕಾರಣನಾದ ವ್ಯಕ್ತಿಗೆ ಲಿಖಿತ ನೋಟೀಸಿನ ಮೂಲಕ ಯೋಗ್ಯ ಕಾಲಾವಧಿಯಲ್ಲಿ ಆ ಅತಿಕ್ರಮಣ ವನ್ನು ಇಲ್ಲವೆ ಆತಂಕವನ್ನು ತೆಗೆಯಿಸಲು ಹೇಳಬೇಕು ಇಲ್ಲವೆ ಅದನ್ನು ಏಕೆ ತೆಗೆ ಯಿಸಬಾರದೆಂಬುದಕ್ಕೆ ಕಾರಣ ತೋರಿಸಲು ಹೇಳಬೇಕು.

(೩) ಉತ್ಸವ ಮತ್ತು ಸಮಾರಂಭಗಳ ಪ್ರಸಂಗದಲ್ಲಿ ತಾಲೂಕ ಬೋರ್ಡಿನ ಅಂತರ್ಗತವಾಗಿದ್ದ ಇಲ್ಲವೆ ಅದರ ಆಸ್ತಿಯಾಗಿದ್ದ ಯಾವುದೇ ಸಾರ್ವಜನಿಕ ರಸ್ತೆಯ ಮೇಲೆ, ಯಾವುದೇ ತಾತ್ಪೂರ್ತಿಕ ಸ್ವಾಧೀನದಲ್ಲಿಟ್ಟುಕೊಳ್ಳುವುದನ್ನು ಇಲ್ಲವೆ ರಚನೆ ಯನ್ನು ಇಲ್ಲವೆ ಇಂತಹ ರಸ್ತೆಯ ಯಾವುದೇ ಭಾಗದಲ್ಲಿ ಹದಿನೈದು ದಿವಸಗಳಕಿಂತ ಹೆಚ್ಚಿಗೆ ಆಗದಷ್ಟು ಕಾಲ ಮತ್ತು ಯಾವುದೇ ವ್ಯಕ್ತಿಗೆ ಇಲ್ಲವೆ ಸಾರ್ವಜನಿಕರಿಗೆ ಅನನುಕೂಲವಾಗದ ರೀತಿಯಲ್ಲಿ ಉರುವಲ ಕಟ್ಟಿಗೆ ಒಟ್ಟಿಕೊಳ್ಳುವದನ್ನು ತಾಲೂಕ ಬೋರ್ಡು ಪರವಾನಗಿ ಕೊಡುವುದನ್ನು ಈ ಕಲಮಿನಲ್ಲಿ ಹೇಳಿದ ಯಾವ ಮಾತೂ ನಿರ್ಬಂಧಿಸುವುದಿಲ್ಲ.

(೪) ಸಾರ್ವಜನಿಕ ರಸ್ತೆಯ ಭಾಗವಾಗಿರುವ ಆ ಭೂಮಿಯು ಸಾರ್ವ ಜನಿಕ ರಸ್ತೆ ಎಂದು ಇಲ್ಲವೆ ತಾಲೂಕಬೋರ್ಡಿನ ಬೇರೆ ಯಾವುದೇ ಉದ್ದೇಶಗಳಿಗಾಗಿ

ಬೇಕಾಗಿಲ್ಲವೆಂದು ತಾಲೂಕ ಬೋರ್ಡದ ಅಭಿಪ್ರಾಯವಾದರೆ,ಅಂತಹ ಸಾರ್ವಜನಿಕ ರಸ್ತೆಯ ಭಾಗವನ್ನು ಕಲಮು ೧೩೨ ರಲ್ಲಿ ಹೇಳಿದ ಮಾತು ಏನೇ ಇದ್ದರೂ ಏಳು ವರುಷಗಳಕಿಂತ ಹೆಚ್ಚಿಗೆ ಆಗದಷ್ಟು ಕಾಲಾವಧಿಯ ವರೆಗೆ ತಾತ್ಪೂರ್ತಿಕವಾಗಿ ಉಪಯೋಗಿಸಲು ಪರವಾನಗಿ ಇಲ್ಲವೆ ಬಾಡಿಗೆ ಕೊಡಲು ತಾಲೂಕ ಬೋರ್ಡಿಗೆ ಸಾಮರ್ಥ್ಯವಿರತಕ್ಕದ್ದು.

ಆದರೆ, ಆ ಬಾಡಿಗೆ ಇಲ್ಲವೆ ಪರವಾನಗಿಯು ಒಂದು ವರುಷದ ಅವಧಿಯ ಕಿಂತ ಹೆಚ್ಚು ಆಗದಿದ್ದರೆ ಡೆಪ್ಯೂಟಿ ಕಮಿಶನರರ ಪೂರ್ವ ಸಮ್ಮತಿಯನ್ನು ಮತ್ತು ಆ ಬಾಡಿಗೆ ಇಲ್ಲವೆ ಪರವಾನಗಿಯು ಒಂದು ವರುಷದಕಿಂತ ಹೆಚ್ಚು ಹಾಗೂ ಏಳು ವರುಷಗಳಕಿಂತ ಕಡಿಮೆ ಇದ್ದರೆ ಕಮಿಶನರರ ಪೂರ್ವ ಸಮ್ಮತಿಯನ್ನು ಇಂತಹ ಬಾಡಿಗೆಗಾಗಿ ಇಲ್ಲವೆ ಪರವಾನಗಿಗಾಗಿ ಪಡೆದುಕೊಂಡಿರತಕ್ಕದ್ದು.

## ವಿವೇಚನೆ

ಅತಿಕ್ರಮಣ-ಆತಂಕಗಳನ್ನು ಮಾಡಿದರೆ ಅದಕ್ಕೆ ದಂಡ ಎಂದು ಹೇಳ ಲಾಗಿದೆ. ಏನು ಮಾಡಿದರೆ ಅತಿಕ್ರಮಣ–ಇಲ್ಲವೆ ಆತಂಕವಾಗುವುದು ಎಂಬುದರ ವಿವರ ಇಲ್ಲಿ ಹೇಳಲಾಗಿದೆ. ತಾಲೂಕ ಬೋರ್ಡದ ಅಧಿಕಾರದಲ್ಲಿ ಇರುವ ಸಾರ್ವ ಜನಿಕ ರಸ್ತೆ, ಭೂಮಿ, ಇಲ್ಲವೆ ಕಟ್ಟಡದ ಉಪಯೋಗಕ್ಕೆ ವ್ಯತ್ಯಯ ಬರುವ ಹಾಗೆ, ಯಾರಾದರೂ ಗೋಡೆ, ಕಂಟಿ, ಬೇಲಿ, ಕಂಬ, ಹಳಿ, ಮುಂತಾದ್ದನ್ನು ಹಾಕಿದರೆ ಇಲ್ಲವೆ ಗಂಟು, ಡಬ್ಬಿ, ಪೆಟ್ಟಿಗೆ, ಸರಕು ಮುಂತಾದುವನ್ನು ಆ ಕಟ್ಟಡ ಜಾಗಾದಲ್ಲಿ ಇರುವ ಗಟಾರು, ಕಾಲುವೆಯ ಮೇಲೆ ಇಟ್ಟರೆ, ಅದು ಅತಿಕ್ರಮಣ ಇಲ್ಲವೆ ಆತಂಕ ಆಗುವುದು. ಅದು ಅಪರಾಧವಾಗುವುದು. ೨೫/- ರೂಪಾಯಿ ವರೆಗೆ ದಂಡ.

ಅತಿಕ್ರಮಣವನ್ನು ಇಲ್ಲವೆ ಆತಂಕವನ್ನು ತೆಗೆಯಿಸುವ ಅಧಿಕಾರ ಮುಖ್ಯ ಕಾರ್ಯಾಧಿಕಾರಿಗೆ ಇದೆ. ತೆಗೆಸಿದ ವೆಚ್ಚವನ್ನು ಕರ ವಸೂಲಿಯಂತೆ ಮಾಡ ಲಾಗುವುದು. ಅತಿಕ್ರಮಣ-ಆತಂಕ ತೆಗೆಸುವ ಮೊದಲು ಲಿಖಿತ ನೋಟೀಸು ಕೊಡಬೇಕು. ತೆಗೆಸಬೇಕೆಂದು ಇಲ್ಲವೆ ಯಾಕೆ ತೆಗೆಸಬಾರದು ಎಂಬುದಕ್ಕೆ ಕಾರಣ ತೋರಿಸಲು ಹೇಳಿದ ನೋಟೀಸು ಅದು.

ಅತಿಕ್ರಮಣ-ಆತಂಕ ಇವು ಪರವಾನಗಿ ಇಲ್ಲದೆ ಮಾಡಿದ ಕಾರ್ಯಗಳು. ಪರವಾನಗಿ ಇದ್ದರೆ, ಅದು ಅತಿಕ್ರಮಣವೂ ಅಲ್ಲ; ಆತಂಕವೂ ಅಲ್ಲ. ತಾತ್ಪೂ ರ್ತಿಕವಾಗಿ ಸಾರ್ವಜನಿಕ ರಸ್ತೆಯನ್ನು ಉಪಯೋಗಿಸಲು ಬೋರ್ಡು ಪರವಾನಗಿ ಕೊಡುವುದು, ಕಟ್ಟೆಗೆ ಒಟ್ಟಿಕೊಳ್ಳಲಿಕ್ಕೆ ಪರವಾನಗಿ ಕೊಡುವುದು ಪರವಾನಗಿ ಇದ್ದಷ್ಟು ಕಾಲ ಅದು ಅತಿಕ್ರಮಣ ಇಲ್ಲವೆ ಆತಂಕ ಅಲ್ಲ. ಆದ್ದರಿಂದ ಅದು ಅಪರಾಧ ಅಲ್ಲ.

೧೩೨ ನೆಯ ಕಲಮು ಸ್ಥಾವರ ಆಸ್ತಿಯ ಬಾಡಿಗೆ ಕೊಡುವ ಬಗ್ಗೆ ಇದೆ. ಅಲ್ಲಿ ನಿರ್ಬಂಧಗಳು ಇದ್ದರೂ ಈ ೧೫೭ ನೆಯ ಕಲಮಿನ ಪ್ರಕಾರ ಬೋರ್ಡು ತಾತ್ಪೂರ್ತಿಕವಾಗಿ ಸಾರ್ವಜನಿಕ ಜಾಗಾವನ್ನು ಅದು ರಸ್ತೆಯೆಂದು ಉಪಯೋಗ ವಾಗದಿದ್ದರೆ, ಬೋರ್ಡಿಗೆ ಬೇರೆ ಯಾವುದಕ್ಕೂ ಬೇಕಾಗದಿದ್ದರೆ ಬಾಡಿಗೆ ಕೊಡ ಬಹುದು. ೧ ವರುಷದ ವರೆಗೆ ಇದ್ದರೆ ಡೆ. ಕಮಿಶನರರ ಪರವಾನಗಿ ಬೇಕು. ೧ ವರುಷದಕಿಂತ ಹೆಚ್ಚು ೭ ವರುಷದಕಿಂತ ಕಡಿಮೆ ಇದ್ದರೆ ಕಮಿಶನರರ ಪರ ವಾನಗಿ ಬೇಕು.

## ೧೫೮. ಬೇರೆ ಯಾವುದೇ ಕಲಮಿನ ಪ್ರಕಾರ ದಂಡನೆ ಮಾಡಲಾಗದ ನೋಟೀಸು ಹುಕುಮುಗಳ ಉಲ್ಲಂಘನೆಗಾಗಿ ಶಿಕ್ಷೆ

ಈ ಪ್ರಕರಣದ ಮೂಲಕ ಕೊಡಮಾಡಿದ ಯಾವುದೇ ಅಧಿಕಾರವನ್ನನುಸರಿಸಿ ತಾಲೂಕ ಬೋರ್ಡದಿಂದ ಇಲ್ಲವೆ ಅದರ ಪರವಾಗಿ ಕೊಡಲಾದ ಯಾವುದೇ ಲಿಖಿತ ನೋಟೀಸು ಹೇಳುವ ಯಾವುದೇ ಕಾಯಿದೇಶೀರ ನಿರ್ದೇಶನವನ್ನು ಯಾರಾದರೂ ಕಾರ್ಯಕಾರಿ ಮಾಡಲು ತಪ್ಪಿದರೆ ಇಲ್ಲವೆ ಅದಕ್ಕೆ ಅವಿಧೇಯನಾದರೆ, ಇಲ್ಲವೆ ಹಾಗೆ ಕೊಡಮಾಡಿದ ಯಾವುದೇ ಅಧಿಕಾರವನ್ನನುಸರಿಸಿ ತಾಲೂಕ ಬೋರ್ಡದಿಂದ ಅವನಿಗೆ ಯಾವ ಕರಾರುಗಳ ಅಂಕಿತವಾಗಿ ಆ ಪರವಾನಗಿಯನ್ನು ಕೊಡಲಾಗಿ ದೆಯೋ ಆ ಕರಾರುಗಳ ಪ್ರಕಾರ ನಡೆಯಲು ಯಾರಾದರೂ ತಪ್ಪಿದರೆ, ಆ ಅಪರಾ ಧವು ಸಾಬೀತಾದರೆ. ಆ ಅವಿಧೇಯತನವು ಇಲ್ಲವೆ ತಪ್ಪು ಬೇರೆ ಯಾವುದೇ ಕಲ ಮಿನ ಪ್ರಕಾರ ಶಿಕ್ಷಾರ್ಹವಾದ ಅಪರಾಧವಾಗಿರದೆ ಇದ್ದರೆ, ಅವನು ಐವತ್ತು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಶಿಕ್ಷಿತನಾಗತಕ್ಕದ್ದು. ಮತ್ತು ಇಂತಹ ಅವಿಧೇಯತನ ಇಲ್ಲವೆ ತಪ್ಪು ಮೊದಲ ಶಿಕ್ಷೆಯ ನಂತರ ಮುಂದು ವರದವಷ್ಟು ಕಾಲ ಪ್ರತಿದಿನಕ್ಕೆ ಐದು ರೂಪಾಯಿಗಳ ವರೆಗೆ ವ್ಯಾಪಿಸಬಹುದಾ ದಷ್ಟು ಹೆಚ್ಚಿನ ದಂಡದಿಂದ ಶಿಕ್ಷಿತನಾಗತಕ್ಕದ್ದು.

ಆದರೆ, ಯಾವುದೊಂದು ಕಾರ್ಯವು ಮಾಡಲ್ಪಡಬೇಕೆಂದು ಹೇಳುವ ನೋಟೀಸು ಎಷ್ಟು ಕಾಲಾವಧಿಯಲ್ಲಿ ಆ ಕಾರ್ಯವು ಆಗಬೇಕೆಂದು ಗೊತ್ತುಮಾಡಿ ದ್ದರೆ ಮತ್ತು ಈ ಕಾಯಿದೆಯಲ್ಲಿ ಕಾಲಾವಧಿಯು ನಿರ್ದಿಷ್ಟ ಪಡಿಸದೆ ಇದ್ದರೆ, ಹಾಗೆ ಗೊತ್ತುಮಾಡಲಾದ ಕಾಲಾವಧಿಯು ಈ ಕಾಯಿದೆಯ ಅರ್ಥದಲ್ಲಿ ಯೋಗ್ಯ ಕಾಲಾ ವಧಿ ಆಹುದೋ ಅಲ್ಲವೋ ಎಂಬುದನ್ನು ನಿರ್ಧರಿಸುವುದು ಮ್ಯಾಜಿಸ್ಟ್ರೇಟನಿಗೆ ಕೂಡಿದ್ದುದು ಆಗಿರತಕ್ಕದ್ದು.

**ವಿವೇಚನೆ**

ತಾಲೂಕ ಬೋರ್ಡು ಕೊಟ್ಟ ನೋಟೀಸು ಇಲ್ಲವೆ ಅದರ ಮೂಲಕವಾಗಿರುವ ಆದೇಶವನ್ನು ಯಾರಾದರೂ ಉಲ್ಲಂಘನೆ ಮಾಡಿದರೆ ಇಲ್ಲವೆ ಹೇಳಿದುದನ್ನು

ಮಾಡಲು ತಪ್ಪಿದರೆ ಅದು ಅಪರಾಧವಾಗುವುದು. ಅದಕ್ಕೆ ೫೦/- ರೂಪಾಯಿ ವರೆಗೆ ದಂಡ. ಮುಂದರಿದ ಅಪರಾಧಕ್ಕೆ, ಮೊದಲ ಶಿಕ್ಷೆಯ ದಿನದಿಂದ ದಿನಕ್ಕೆ ೫ ರೂಪಾಯಿ ವರೆಗೆ ಹೆಚ್ಚಿನ ದಂಡ. ನೋಟೀಸು ಕೊಡುವಾಗ ಇಂತಿಷ್ಟು ದಿವಸಗಳಲ್ಲಿ ಯಾವುದೇ ಕಾರ್ಯ ಮಾಡಲ್ಪಡಬೇಕು ಎಂದು ಆದೇಶವಿತ್ತಾಗ ಮತ್ತು ಆ ಕಾರ್ಯಕ್ಕಾಗಿ ಈ ಕಾಯಿದೆಯಲ್ಲಿ ಕಾಲಾವಧಿ ನಿರ್ದಿಷ್ಟಪಡಿಸದೆ ಇದ್ದರೆ ಅದು ಯೋಗ್ಯ ಕಾಲಾವಧಿಯಾಗಿರುವುದೇ ಇಲ್ಲವೆ ಎಂಬುವನ್ನು ನಿರ್ಣಯ ಮಾಡುವ ಕೆಲಸ ಮ್ಯಾಜಿಸ್ಟ್ರೇಟರದು. ಅಂದರೆ ಅಪರಾಧವು ಸಾಬೀತಾಗುವಾಗ ನಿರ್ಣಯಿಸುವ ವಿಷಯ ಇದು.

**೧೫೯. ಮಾಲಕರ ದುರ್ಲಕ್ಷ್ಯದಿಂದ ಉಂಟಾದ ಪರಿಸ್ಥಿತಿಯಲ್ಲಿ ತಾಲೂಕ ಬೋರ್ಡು ಕೆಲಸ ನಡೆಸಬಹುದು ಮತ್ತು ವೆಚ್ಚವನ್ನು ವಸೂಲ ಮಾಡಬಹುದು**

(೧) ಈ ಕಾಯಿದೆಯ ಶರತುಗಳನ್ವಯವಾಗಿ ಯಾವುದೇ ಕಾಮಗಿರಿಯು ಯಾವುದೇ ಕಟ್ಟಡದ ಮಾಲಕ ಇಲ್ಲವೆ ಸ್ವಾಧೀನದಲ್ಲಿಟ್ಟುಕೊಂಡವನಿಂದ ನಿರ್ವಹಿಸಲ್ಪಡುವುದು ಅಗತ್ಯವಾಗಿದ್ದರೆ ಮತ್ತು ಇಂತಹ ಕಾರ್ಯದ ನಿರ್ವಹಣೆಯಲ್ಲಿ ದುರ್ಲಕ್ಷ್ಯವಾಗಿದ್ದರೆ ಇಂತಹ ದುರ್ಲಕ್ಷ್ಯಕ್ಕೆ ಯಾವುದೇ ಶಿಕ್ಷೆಯು ಹೇಳಲ್ಪಟ್ಟಿರಲಿ ಬಿಡಲಿ, ತಾಲೂಕ ಬೋರ್ಡು ಅಂತಹ ಕಾಮಗಿರಿಯನ್ನು ನಿರ್ವಹಿಸಲ್ಪಡುವಂತೆ ಮಾಡಿಸತಕ್ಕದ್ದು; ಆ ಸಂಬಂಧದಲ್ಲಿ ಉಂಟಾದ ವೆಚ್ಚವು, ಈ ಕಾಯಿದೆಯಲ್ಲಿ ಬೇರೆಯಾಗಿ ನಿರ್ದಿಷ್ಟವಾಗಿ ಹೇಳಲಾಗದೆ ಇದ್ದರೆ, ಯಾರಿಂದ ಆ ಕಾಮಗಿರಿಯು ಮಾಡಿಸಲ್ಪಡಬೇಕಾಗಿದ್ದಿತೋ ಆ ವ್ಯಕ್ತಿಯಿಂದ ಕೊಡಲ್ಪಡತಕ್ಕದ್ದು. ಮತ್ತು ಪ್ರಕರಣ ೯ ರನ್ವಯವಾಗಿ ವಸೂಲ ಮಾಡಲ್ಪಡುವ ಯಾವುದೇ ಕರದ ಬಾಬತ್ತು ಹಣದ ಮಾಗಣಿ ಮಾಡಿದ ರೀತಿಯಲ್ಲಿ ಒಂದೇ ಗಂಟಿನಲ್ಲಿ ಇಲ್ಲವೆ ತಾಲೂಕ ಬೋರ್ಡಿಗೆ ಯೋಗ್ಯವೆನಿಸಿದರೆ ಕಂತಿನಿಂದ ವಸೂಲ ಮಾಡಲ್ಪಡತಕ್ಕದ್ದು.

(೨) ಆ ತಪ್ಪಿತಸ್ಥನು ಆ ಕಟ್ಟಡದ ಇಲ್ಲವೆ ಭೂಮಿಯ ಮಾಲಕನು ಆಗಿದ್ದರೆ, ಇಂತಹ ಮಾಲಕನ ವಿರುದ್ಧ ದಾವೆ ಇಲ್ಲವೆ ಪ್ರಕರಣವು ತರಲ್ಪಟ್ಟಿರಲಿ, ಇಲ್ಲವೆ ಮಾಡಲ್ಪಟ್ಟಿರಲಿ, ಬಿಡಲಿ, ಹೆಚ್ಚಿನ ಉಪಾಯವೆಂದು ತಾಲೂಕ ಬೋರ್ಡು ಉಪಕಲಮು (೩) ರ ಶರತುಗಳಿಗಂಕಿತವಾಗಿ, ಆ ಕಾಲಕ್ಕೆ ಇರುವ ಮಾಲಕನಿಂದ ಕೊಡಲ್ಪಡಬೇಕಾದ ಎಲ್ಲ ವೆಚ್ಚ ಇಲ್ಲವೆ ಅದರ ಯಾವುದೇ ಭಾಗವು ಇಂತಹ ಮಾಲಕನನ್ವಯವಾಗಿ ಆಗ ಇಲ್ಲವೆ ಅನಂತರ ಆ ಕಟ್ಟಡವನ್ನು ಇಲ್ಲವೆ ಭೂಮಿಯನ್ನು ಸ್ವಾಧೀನದಲ್ಲಿಟ್ಟುಕೊಂಡಿರುವ ವ್ಯಕ್ತಿಯಿಂದ ಕೊಡಲ್ಪಡುವಂತೆ ಮಾಡಬಹುದು; ಇಂತಹ ಸ್ವಾಧೀನದಲ್ಲಿಟ್ಟುಕೊಂಡವನಿಂದ ಹಣವು ಬೇಡಿದಾಗ್ಗೆ ಸಂದಾಯವಾಗದಿದ್ದರೆ, ಅದನ್ನು ಅವನಿಂದ ಎತ್ತುವಳಿ ಮಾಡಬಹುದು; ಹೀಗೆ ಎತ್ತುವಳಿ ಮಾಡಲು ಯೋಗ್ಯವಾದ ಪ್ರತಿಯೊಂದು ರಕಮು ಪ್ರಕರಣ ೯ ರನ್ವಯವಾಗಿ

ವಸೂಲ ಮಾಡಲ್ಪಡುವ ಯಾವುದೇ ಕರದ ಬಾಬಿತ್ತಿನ ಹಣದ ಮಾಗಣಿ ಮಾಡಿದ ರೀತಿಯಲ್ಲಿ ವಸೂಲ ಮಾಡಲ್ಪಡತಕ್ಕದ್ದು. ಇಂತಹ ಸ್ವಾಧೀನದಲ್ಲಿಟ್ಟುಕೊಂಡವನು ಅವನಿಂದ ಕೊಡಲ್ಪಟ್ಟ ಇಲ್ಲವೆ ವಸೂಲು ಮಾಡಲ್ಪಟ್ಟ ಯಾವುದೇ ವೆಚ್ಚವನ್ನು ತಾನು ಮಾಲಕರಿಗೆ ಕೊಡಬೇಕಾದ ಬಾಡಿಗೆ ರಕಮಿನಲ್ಲಿ ಮುರಿದುಕೊಳ್ಳಲು ಬಾಧ್ಯಸ್ಥನಾಗಿರತಕ್ಕದ್ದು.

(೩) ತಾಲೂಕ ಬೋರ್ಡದಿಂದ ಆ ಉದ್ದೇಶಕ್ಕಾಗಿ ವಿನಂತಿ ಮಾಡಿಕೊಳ್ಳಲ್ಪಟ್ಟಾಗ, ಬಾಡಿಗೆಯ ಹಣವು ಎಷ್ಟಿದೆಯೆಂಬುದನ್ನು ಸತ್ಯವಾಗಿ ಹೊರಗೆಡವಲು, ಮತ್ತು ಇಂತಹ ಬಾಡಿಗೆಯ ಹಣವು ಯಾರಿಗೆ ಸಲ್ಲಬೇಕಾಗಿರುವುದು ಆ ವ್ಯಕ್ತಿಯ ಹೆಸರು ಮತ್ತು ವಿಳಾಸವನ್ನು ಹೊರಗೆಡವಲು ಅಲಕ್ಷಿಸಿದ ಇಲ್ಲವೆ ನಿರಾಕರಿಸಿದ ಹೊರತು, ಆ ಕಟ್ಟಡದ ಸಂಬಂಧವಾಗಿ ಹಾಕಲಾದ ಯಾವುದೇ ವೆಚ್ಚದ ಸಂಬಂಧವಾಗಿ, ಯಾವ ಕಟ್ಟಡದ ಇಲ್ಲವೆ ಭೂಮಿಯ ಸಂಬಂಧವಾಗಿ ಕೊಡಬೇಕಾಗಿರುವ ಇಂತಹ ವೆಚ್ಚವು ಬೇಡಲ್ಪಟ್ಟ ಕಾಲದಲ್ಲಿ ಆ ಕಟ್ಟಡಕ್ಕಾಗಿ ಇರುವ ಬಾಡಿಗೆಯ ಬಾಬತ್ತು ಬಾಕಿ ಇರುವ ಹಣದ ಪ್ರಮಾಣದಕಿಂತ ಹೆಚ್ಚಿಗೆ ಹಣವನ್ನು ಇಲ್ಲವೆ ನಂತರ ಅದನ್ನು ಮಾಲಕನಿಗೆ ಕೊಡಬಾರದೆಂದು ನೋಟೀಸು ಮಾಡಿದ ನಂತರ ಮಾಲಕನಿಗೆ ಕೊಡಬೇಕೆಂದು ಉಳಿದಿರುವ ಹಣದಕಿಂತ ಹೆಚ್ಚಿನ ಹಣವನ್ನು ಕೊಡಲು ಯಾವುದೇ ಕಟ್ಟಡದ ಇಲ್ಲವೆ ಭೂಮಿಯ ಸ್ವಾಧೀನದಲ್ಲಿಟ್ಟುಕೊಂಡವನು ಹೊಣೆಗಾರನಾಗತಕ್ಕದ್ದಲ್ಲ; ಆದರೆ ಆ ಸ್ವಾಧೀನದಲ್ಲಿಟ್ಟುಕೊಂಡವನಿಂದ ಬೇಡಲಾದ ಹಣವು ಅವನಿಂದ ಬಾಡಿಗೆ ಬಾಕಿ ಉಳಿದಿರುವುದರಕಿಂತ ಇಲ್ಲವೆ ಬೇಡಿದ ತಾರೀಖಿನಿಂದ ಕೂಡಿಬಿದ್ದ ಬಾಡಿಗೆ ಹಣದಕಿಂತ ಹೆಚ್ಚಿಗೆ ಇದೆಯೆಂಬುದನ್ನು ಸಿದ್ಧಮಾಡಿಕೊಡುವ ಹೊಣೆಯು ಆ ಸ್ವಾಧೀನದಲ್ಲಿಟ್ಟುಕೊಂಡನ ಮೇಲೆ ಇರತಕ್ಕದ್ದು.

ಆದರೆ, ಮೇಲೆ ಹೇಳಿದ ಯಾವುದೇ ಕಾಮಗಿರಿಗಳ ವೆಚ್ಚವನ್ನು ಕೊಡುವುದರ ಸಂಬಂಧವಾಗಿ, ಮಾಲಕ ಮತ್ತು ಇಂತಹ ಯಾವುದೇ ಸ್ವಾಧೀನದಲ್ಲಿಟ್ಟುಕೊಂಡವ ಇವರ ನಡುವೆ ಮಾಡಲಾದ ಯಾವುದೇ ವಿಶಿಷ್ಟ ಕರಾರು ಒಪ್ಪಂದವನ್ನು ಇಲ್ಲಿ ಹೇಳಿದ ಯಾವುದೇ ಬಾಧಿಸುವುದೆಂದು ಗಣಿಸಲ್ಪಡತಕ್ಕದ್ದಲ್ಲ.

## ವಿವೇಚನೆ

ಕಟ್ಟಡದ ಇಲ್ಲವೆ ಭೂಮಿಯ ಮಾಲಕನಿಂದ ಇಲ್ಲವೆ ಸ್ವಾಧೀನದಲ್ಲಿಟ್ಟುಕೊಂಡವನಿಂದ ಒಂದು ಕಾಮಗಿರಿ ಮಾಡಿಸಲ್ಪಡುವಂತಹ ಪ್ರಸಂಗ ಇರಬೇಕು. ಅವನು ಮಾಡಿಸಲು ತಪ್ಪಿರಬೇಕು. ಆಗ ಉಳಿದ ದಂಡ ಹಾಕುವ ಭಾಗ ಪ್ರ
ವಾಗಿ ಉಳಿದರೂ ತಾಲೂಕ ಬೋರ್ಡು ಆ ಕಾಮಗಿರಿಯನ್ನು ಮಾಡಿಸತಕ್ಕದ್ದು.

ಅದಕ್ಕೆ ಹತ್ತಿದ ವೆಚ್ಚದ ಬಗ್ಗೆ ಈ ಕಾಯಿದೆಯಲ್ಲಿ ಬೇರೆ ಯಾವುದೇ ರೀತಿಯಲ್ಲಿ ಅನುಕೂಲಿಸದೆ ಇದ್ದರೆ ಆ ಮಾಲಕನಿಂದ ವೆಚ್ಚವು ವಸೂಲವಾಡಲ್ಪಡಬೇಕು. ವಸೂಲ ಮಾಡುವ ರೀತಿಯು ಪ್ರಕರಣ ೯ ದಲ್ಲಿ ಹೇಳಿದ ರೀತಿಯಂತೆ. ಒಟ್ಟು ಗಂಟಿನಲ್ಲಿ ಪಡೆಯಬಹುದು ಇಲ್ಲವೆ ಕಂತಿನಂತೆ; ಮಾಲಕನು ಸಿಗದಿದ್ದರೆ ಆ ವೆಚ್ಚವು ಆ ಕಟ್ಟಡದ ಸ್ವಾಧೀನದಲ್ಲಿಟ್ಟುಕೊಂಡವನಿಂದ ವಸೂಲ ಮಾಡಲ್ಪಡಬೇಕು. ಅವನು ಕೊಡಲು ತಪ್ಪಿದರೆ, ಪ್ರಕರಣ ೯ ರ ರೀತಿಯಲ್ಲಿ ವಸೂಲ ಮಾಡಬಹುದು. ಸ್ವಾಧೀನ ದಲ್ಲಿಟ್ಟುಕೊಂಡವನು ಮಾಲಕನಿಗಾಗಿ ವೆಚ್ಚದ ಹಣ ಕೊಟ್ಟರೆ, ಅವನು ಮಾಲಕ ರಿಗೆ ಬಾಡಿಗೆ ಕೊಡುವುದರಲ್ಲಿ ಮುರಿದುಕೊಳ್ಳುವ ಅಧಿಕಾರ ಅವನಿಗೆ ಇದೆ. ಆದರೆ ವೆಚ್ಚದ ಹಣವು ಬಾಡಿಗೆ ಹಣದ ಬಾಕಿಯುಕಿಂತ ಹೆಚ್ಚಿಗೆ ಆದರೆ ಬಾಡಿಗೆ ಹಣದ ಬಾಕಿಯುಕಿಂತ ಹೆಚ್ಚಿಗೆ ಕೊಡಲು ಅವನು ಹೊಣೆಗಾರನಲ್ಲ ಆದರೆ, ಹೀಗೆ ಅವ ನಿಗೆ ಆಶ್ರಯ ದೊರೆಯಬೇಕಾದರೆ, ಬಾಡಿಗೆ ಹಣ ಎಷ್ಟು, ಮಾಲಕನು ಯಾರು, ಅವನ ಹೆಸರು–ವಿಳಾಸ ತಿಳಿಸಬೇಕಾಗುತ್ತದೆ. ಮತ್ತು ಬಾಡಿಗೆ ಬಾಕಿಯ ಹಣವು ಬೇಡಿದ ವೆಚ್ಚದ ಹಣದಕಿಂತ ಕಡಿಮೆ ಇದೆಯೆಂಬುವದನ್ನು ಸಿದ್ಧಮಾಡಿ ಕೊಡು ವುದೂ ಅವನ ಹೊಣೆಗಾರಿಕೆ. ಈ ಯಾವ ಮಾತೂ ಆ ವ್ಯಕ್ತಿ ಹಾಗೂ ಮಾಲಕನ ನಡುವೆ ಈ ವೆಚ್ಚದ ಹಣದ ಸಂಬಂಧವಾಗಿ ವಿಶಿಷ್ಟವಾಗಿ ಮಾಡಿಕೊಂಡ ಕರಾರು ಒಪ್ಪಂದವನ್ನು ಬಾಧಿಸುದಿಲ್ಲ. ಅಂದರೆ ಬೇರೆ ಕರಾರು ಇದ್ದರೆ ಈ ಕಲಮು ಆ ಕರಾರು ಭಂಗಮಾಡುವುದಿಲ್ಲ. ಕರಾರಿನ ಆಶ್ರಯವು ದೊರೆಯುತ್ತದೆ.

## ೧೩೦. ವೆಚ್ಚವನ್ನು ಹೇಗೆ ನಿರ್ದಿಷ್ಟಪಡಿಸಬೇಕು ಹಾಗು ವಸೂಲ ಮಾಡಬೇಕು

ಈ ಪ್ರಕರಣದ ಮೂಲಕ ಕೊಡಬೇಕೆಂದು ನಿರ್ದಿಷ್ಟಪಡಿಸಲಾದ ಯಾವುದೇ ವೆಚ್ಚದ ಇಲ್ಲವೆ ಖರ್ಚಿನ ಸಂಬಂಧವಾಗಿ ತಕರಾರು ಉಂಟಾದರೆ, ಈ ಕಾಯಿದೆ ಯಲ್ಲಿ ನಿರ್ದಿಷ್ಟವಾಗಿ ಅನುಕೂಲಿಸಲಾದುದನ್ನು ಬಿಟ್ಟು, ಆ ಹಣವು ಇಲ್ಲವೆ ಆವ ಶ್ಯಕವಿದ್ದರೆ ಅದರಲ್ಲಿ ಪ್ರಮಾಣಿತ ಭಾಗವು ಎಷ್ಟು ಇದೆಯೆಂಬುದನ್ನು ತಾಲೂಕ ಬೋರ್ಡು ನಿರ್ಣಯಿಸತಕ್ಕದ್ದು, ಹಾಗೂ ನಿರ್ಧರಿಸತಕ್ಕದ್ದು ಮತ್ತು ಪ್ರಕರಣ ೯ ರಲ್ಲಿಯ ಕರದ ಬಾಬತ್ತು ವಸೂಲಿ ಮಾಡಲ್ಪಡುವ ರೀತಿಯಲ್ಲಿ-ಮಾಗಣಿಮಾಡಿದ ಹಣವೆಂದು ವಸೂಲವಾಡತಕ್ಕದ್ದು.

### ವಿವೇಚನೆ

ವೆಚ್ಚವನ್ನು ಮಾಡಿದ ನಂತರ ವೆಚ್ಚ ಎಷ್ಟು, ಅದರಲ್ಲಿ ಯಾರು ಎಷ್ಟು ಭಾಗ ವಹಿಸಬೇಕು ಎಂಬ ಬಗ್ಗೆ ತಂಟೆ ಉಂಟಾದರೆ, ಅದರ ಬಗ್ಗೆ ಈ ಕಾಯಿದೆ ಬೇರೆ ಹೇಳಿದ್ದರೆ ಅದನ್ನು ನೋಡಬೇಕು. ಹೇಳದಿದ್ದರೆ, ತಾಲೂಕ ಬೋರ್ಡಿನ

ನಿರ್ಣಯಿಸಿ ನಿರ್ಧರಿಸಬೇಕು. ನಿರ್ಧರಿಸಲಾದ ನಂತರ ಆ ಹಣವು ಕರದ ಬಾಬತ್ತಿನ ಹಣದಂತೆ ವಸೂಲ ಮಾಡಬೇಕು. ಹೇಗೆ ಎಂಬುದು ಪ್ರಕರಣ ೯ ರಲ್ಲಿ ಹೇಳಿದೆ.

## ಪ್ರಕರಣ : ೯ ಆಸ್ತಿ ಮತ್ತು ಆರ್ಥಿಕ ವ್ಯವಸ್ಥೆ

### ೧೬೧. ತಾಲೂಕ ಬೋರ್ಡದ ನಿಧಿ; ಅದರ ಸ್ವಾಧೀನ ಹಾಗೂ ತೊಡಗಿಸುವಿಕೆ

(೧) ತಾಲೂಕ ಬೋರ್ಡ ನಿಧಿ ಎಂದು ಕರೆಯಲ್ಪಡುವ ಒಂದು ನಿಧಿಯು ಪ್ರತಿ ಒಂದು ತಾಲೂಕಿಗೆ ಇರತಕ್ಕದ್ದು; ಅದು ಆ ತಾಲೂಕದ ತಾಲೂಕ ಬೋರ್ಡ ದಿಂದ ಆಡಳಿತ ನಡೆಸಲ್ಪಡತಕ್ಕದ್ದು.

(೨) ತಾಲೂಕ ಬೋರ್ಡ ನಿಧಿಯಲ್ಲಿ ಜಮೆಯಾದ ಹಣವು ತಾಲೂಕ ದಲ್ಲಿಯ ಸರಕಾರದ ಟ್ರೆಜರಿಯಲ್ಲಿ ಇಡಲ್ಪಡತಕ್ಕದ್ದು.

(೩) ದಿನ ನಿತ್ಯದ ಬಳಕೆಗೆ ಆಗತ್ಯವಾಗಿರುವುದಕ್ಕಿಂತ ಹೆಚ್ಚಾಗಿ ಹಣವು ಅದರ ಹತ್ತಿರ ಉಳಿದರೆ, ಅದನ್ನು ಸರಕಾರದ ಸೇವಿಂಗ್ಸ ಬ್ಯಾಂಕಿನಲ್ಲಿ ಇಲ್ಲವೆ ಸರಕಾರದ ಪರವಾನಗಿಯಿಂದ ಬೇರೆ ಯಾವುದೇ ಶೆಡ್ಯೂಲ್ಡ ಬ್ಯಾಂಕಿನಲ್ಲಿ ಇಲ್ಲವೆ ಸಹಕಾರೀ ಬ್ಯಾಂಕಿನಲ್ಲಿ ಬಡ್ಡಿಗಾಗಿ ಠೇವಾಗಿ ಇಡುವುದು ಮತ್ತು ಅಂತಹ ಪರವಾ ನಗಿಯಿಂದ ಭಾರತ ಸರಕಾರದ ಇಲ್ಲವೆ ಮೈಸೂರ ಸರಕಾರದ ಭದ್ರತಾ ಠೇವಿನಲ್ಲಿ ಇಲ್ಲವೆ ಈ ಸಂಬಂಧದಲ್ಲಿ ಕಾಲ ಕಾಲಕ್ಕೆ ಸರಕಾರವು ಒಪ್ಪಬಹುದಾದ ಇತರ ಭದ್ರತಾ ಠೇವಿನಲ್ಲಿ ಹಣ ತೊಡಗಿಸುವುದು ಮತ್ತು ಇಂತಹ ತೊಡಗಿಸುವಿಕೆಯನ್ನು ಬದಲು ಮಾಡುವುದು ಇಲ್ಲವೆ ಅಂತಹ ಪರವಾನಗಿಯಿಂದ ಅಂತಹ ಭದ್ರತಾ ಠೇವು ಗಳನ್ನು ವಿಲೇವಾಟ ಮಾಡುವುದು ತಾಲೂಕ ಬೋರ್ಡಿಗೆ ಕಾಯಿದೆಬದ್ಧ ವಾಗಿರುವುದು.

### ವಿವೇಚನೆ

ತಾಲೂಕ ಬೋರ್ಡದಲ್ಲಿ ತಾಲೂಕ ಬೋರ್ಡ ನಿಧಿ ಎಂದು ಒಂದು ನಿಧಿಯು ಇರತಕ್ಕದ್ದು. ಅದರ ಹತ್ತಿರ ಜಮಾ ಆದ ಎಲ್ಲ ಹಣವೂ ಈ ನಿಧಿಗೆ ಜಮಾ ಮಾಡತಕ್ಕದ್ದು. ಈ ನಿಧಿಯ ಹಣವು ಆ ತಾಲೂಕದ ಸರಕಾರದ ಟ್ರೆಜರಿಯಲ್ಲಿ ಇಡಲ್ಪಡತಕ್ಕದ್ದು. ಬಳಕೆಗೆ ಆಗತ್ಯವಾಗಿರದೆ ಹೆಚ್ಚಿಗೆ ಉಳಿದ ಹಣವನ್ನು ಲಾಭ ದಾಯಕ ರೀತಿಯಲ್ಲಿ ತೊಡಗಿಸಬಹುದು. ಸರಕಾರದ ಬ್ಯಾಂಕಿನಲ್ಲಿ ಬಡ್ಡಿಗೆ ಇಡ ಬಹುದು. ಬೇರೆ ಬ್ಯಾಂಕಿನಲ್ಲಿ ಬಡ್ಡಿಗೆ ಇಡಬೇಕಾದರೆ ಸರಕಾರದ ಪರವಾನಗಿ ಬೇಕು. ಹಣವನ್ನು ಭದ್ರತಾ ಠೇವಿನಲ್ಲಿ ತೊಡಗಿಸಬೇಕಾದರೆ, ಬದಲಿಸಬೇಕಾದರೆ,

ವಿಲೇವಾಟ ಮಾಡಬೇಕಾದರೆ ಸರಕಾರದ ಪರವಾನಗಿ ಅಗತ್ಯವಾಗಿದೆ. ಸಾರ್ವಜನಿಕ ಹಣದ ಭದ್ರತೆಗಾಗಿ ಈ ಏರ್ಪಾಟು ಮಾಡಲಾಗಿರುವುದರಿಂದ ಈ ನಿರ್ಬಂಧವು ಪವಿತ್ರವಾದ ನಿರ್ಬಂಧವೆಂದು ತಿಳಿಯಬೇಕು.

## ೧೬೨. ತಾಲೂಕ ಬೋರ್ಡ ನಿಧಿಯ ರಚನೆ

ಈ ಕೆಳಗೆ ಕಾಣಿಸಿದುವು ತಾಲೂಕ ಬೋರ್ಡ ನಿಧಿಯ ಭಾಗವಾಗಿರತಕ್ಕದ್ದು. ಇಲ್ಲವೆ ನಿಧಿಯಲ್ಲಿ ಜಮಾ ಮಾಡಲ್ಪಡತಕ್ಕದ್ದು; ಯಾವುದೆಂದರೆ—

(i) ಜಿಲ್ಲೆಯ ಡಿಸ್ಟ್ರಿಕ್ಟ ಬೋರ್ಡದ ಫಂಡದಲ್ಲಿ ಶಿಲ್ಕು ಉಳಿದ ಹಣದ ಭಾಗವು ಸರಕಾರವು ಸಂಬಂಧಪಟ್ಟ ತಾಲೂಕ ಬೋರ್ಡಿಗೆ ಹಂಚಿಕೊಟ್ಟದ್ದು;

(ii) ಈ ಕಾಯಿದೆಯನ್ವಯವಾಗಿ ತಾಲೂಕ ಬೋರ್ಡದಿಂದ ಇಲ್ಲವೆ ಅದರ ಪರವಾಗಿ ಹಾಕಲ್ಪಟ್ಟ, ಕರ, ತೆರಿಗೆ, ಫೀ, ಸೆಸ್ಸು ಮತ್ತು ತಾಲೂಕ ಬೋರ್ಡಿಗೆ ಕೊಡಲ್ಪಟ್ಟ ದಂಡ ಮತ್ತು ಈ ಕಾಯಿದೆಯನ್ವಯವಾಗಿ ಇಲ್ಲವೆ ಅದರನ್ವಯವಾಗಿ ರೂಪಿಸಲಾದ ಕ್ರಮ ನಿಯಮಗಳನ್ವಯವಾಗಿ ಮ್ಯಾಜಿಸ್ಟ್ರೇಟ ನಿಂದ ಹಾಕಲ್ಪಟ್ಟ ಎಲ್ಲ ದಂಡಗಳು;

(iii) ತಾಲೂಕ ಬೋರ್ಡದ ಭೂಮಿಗಳ ಇಲ್ಲವೆ ಇತರ ಆಸ್ತಿಯ ಬಾಡಿಗೆಗಳು.

(iv) ಎಲ್ಲ ಬಡ್ಡಿ, ಲಾಭಗಳು, ಸರಕಾರದಿಂದ ಇಲ್ಲವೆ ಖಾಸಗಿ ವ್ಯಕ್ತಿಗಳಿಂದ ಇಲ್ಲವೆ ಬೇರೆಯಾಗಿ ಬಂದ ದಾನ, ಸಹಾಯ ನಿಧಿ, ಒಪ್ಪಿಸಿ ಕೊಡುವುದು, ಇಲ್ಲವೆ ಹಸ್ತಾಂತರ ಇದರಿಂದ ಬರುವ ಹಣ;

(v) ತಾಲೂಕ ಬೋರ್ಡದ ಆಡಳಿತ ಮತ್ತು ನಿಯಂತ್ರಣದ ಅಧೀನವಾಗಿರುವ ಯಾವ ಖಾಸಗಿ ವ್ಯಕ್ತಿಗಳ ಅಧಿಕಾರದಲ್ಲಿ ಇರದೇ ಇರುವ, ರಸ್ತೆಯ ಬದಿಯಲ್ಲಿಯ ಮತ್ತು ಇತರ ಸಾರ್ವಜನಿಕ ಜಾಗಾದಲ್ಲಿಯ, ಹುಲ್ಲು ಮತ್ತು ಗಿಡದ ಉತ್ಪತ್ತಿ ಮತ್ತು ಬಿದ್ದ ಇಲ್ಲವೆ ಬೀಳಿಸಿದ ಮರಕಟ್ಟಿಗೆಗಳ ಮಾರಾಟದ ಬೆಲೆಯನ್ನು ಒಳಗೊಂಡು, ತಾಲೂಕ ಬೋರ್ಡದಿಂದ ಮಾರಾಟ ಮಾಡಲ್ಪಟ್ಟ ಭೂಮಿ ಇಲ್ಲವೆ ಇತರ ಆಸ್ತಿಯಿಂದ ಬಂದ ಮಾರಾಟದ ಹಣ; ಮತ್ತು

(vi) ಈ ಕಾಯಿದೆಯ ಇಲ್ಲವೆ ಬೇರೆ ಯಾವುದೇ ಕಾಯಿದೆಯ ಸತ್ವದಿಂದ ತಾಲೂಕ ಬೋರ್ಡದಿಂದ ಇಲ್ಲವೆ ಅದರ ಪರವಾಗಿ ಸ್ವೀಕರಿಸಲಾದ ಎಲ್ಲ ಹಣ.

### ವಿವೇಚನೆ

ಇಲ್ಲಿ ಕೊಡಲಾದ ವಿವರಗಳನ್ನು ನೋಡಿದರೆ, ಯಾವುದೇ ಸ್ವರೂಪದಲ್ಲಿ ಹಣ ಬಂದಿರಲಿ ಅದು ತಾಲೂಕ ಬೋರ್ಡದ ಲೆಕ್ಕಕ್ಕೆ ಬಂದಿದ್ದರೆ ಅದು ನಿಧಿಯಲ್ಲಿ

ಸಮಾವೇಶವಾಗುವುದು. ಕರ, ತೆರಿಗೆ, ಫೀ, ದಂಡ, ಬಾಡಿಗೆ, ಮಾರಾಟದ ಹಣ, ದಾನದ ಹಣ, ಸರಕಾರ ಕೊಟ್ಟಿದ್ದು ಇಲ್ಲವೆ ಸಾರ್ವಜನಿಕರು ದಾನಕೊಟ್ಟದ್ದು; ಒಟ್ಟಿನಲ್ಲಿ ಈ ಕಾಯಿದೆಯ ಮೂಲಕ ಇಲ್ಲವೆ ಬೇರೆ ಕಾಯಿದೆಯ ಮೂಲಕ ತಾಲೂಕ ಬೋರ್ಡದ ಅಧಿಕಾರಕ್ಕೆ ಬಂದ ಎಲ್ಲ ಹಣವೂ ಬೋರ್ಡದ ನಿಧಿಯಾಗುವುದು. ಅದರ ಲಕ್ಷಣ ಇಷ್ಟೆ; ಆ ಹಣದ ವಿನಿಯೋಗಕ್ಕೆ ಬೋರ್ಡಿಗೆ ಈ ಕಾಯಿದೆಯ ಪ್ರಕಾರ ಅಧಿಕಾರ ಬಂದಂತಹದು ಇದ್ದರೆ ಅದನ್ನು ನಿಧಿಗೆ ಜಮಾ ಮಾಡಬೇಕು. ಅಂತಹ ಹಣದಿಂದ ನಿಧಿಯ ರಚನೆಯಾಗಿರುವುದು ಎಂದು ಈ ಕಲಮು ಹೇಳುವುದು.

### ೧೬೩. ಸ್ಥಾನಿಕ ಸೆಸ್ಸಿನ ಎತ್ತುವಳಿ

(೧) ಭೂಕಂದಾಯದ ಎಲ್ಲ ಆಕರಣೆಯ ವಿಷಯಗಳ ಮೇಲೆ ಒಂದು ರೂಪಾಯಿಗೆ ಹನ್ನೆರಡು ನಯೆ ಪೈಸೆಯಂತೆ ದರದಲ್ಲಿ ಸ್ಥಾನಿಕ ಸೆಸ್ಸನ್ನು ಸರಕಾರವು ಎತ್ತುವಳಿ ಮಾಡತಕ್ಕದ್ದು.

(೨) ಆ ಕಾಲಕ್ಕೆ ಜಾರಿಯಲ್ಲಿರುವ ಯಾವುದೇ ಕಾಯಿದೆಯಿಂದ ಎತ್ತುವಳಿ ಮಾಡಲ್ಪಡಬಹುದಾದ ನೀರಿನ ತೆರಿಗೆಯ ಮೇಲೆ ಒಂದು ರೂಪಾಯಿಗೆ ಹನ್ನೆರಡು ನಯೆ ಪೈಸೆಗಳಿಕಿಂತ ಹೆಚ್ಚಾಗದಷ್ಟು ಸ್ಥಾನಿಕ ಸೆಸ್ಸನ್ನು ಸರಕಾರವು ಎತ್ತುವಳಿ ಮಾಡಬಹುದು.

(೩) ಉಪಕಲಮು (೧) ಮತ್ತು (೨) ರನ್ವಯವಾಗಿರುವ ಸ್ಥಾನಿಕ ಸೆಸ್ಸು ಎತ್ತುವಳಿ ಹಾಗೂ ವಸೂಲಿಯು ಗೊತ್ತುಮಾಡಲ್ಪಡಬಹುದಾದಂತಹ ರೀತಿಯಲ್ಲಿ ಮಾಡಲ್ಪಡತಕ್ಕದ್ದು.

### ವಿವೇಚನೆ

ಇಲ್ಲಿ ಎರಡು ಮಾತುಗಳಿವೆ. ಭೂಕಂದಾಯದ ಎಲ್ಲ ಸ್ವರೂಪಗಳ ಮೇಲೆ ಸ್ಥಾನಿಕ ಸೆಸ್ಸನ್ನು ಹಾಕತಕ್ಕದ್ದು. ಅದರ ದರ ಒಂದು ರೂಪಾಯಿಗೆ ೧೨ ನಯೆ ಪೈಸೆಗಳಂತೆ, ಎಂದು ನಿರ್ದಿಷ್ಟಪಡಿಸಲಾಗಿದೆ ಎಂಬುದು ಒಂದು. ನೀರಿನ ತೆರಿಗೆಯ ಮೇಲೆ ಸ್ಥಾನಿಕ ಸೆಸ್ಸನ್ನು ಹಾಕಬಹುದು. ಮತ್ತು ಅದರ ದರ ಒಂದು ರೂಪಾಯಿಗೆ ಹನ್ನೆರಡು ನಯೆ ಪೈಸೆಕಿಂತ ಹೆಚ್ಚಾಗತಕ್ಕದ್ದಲ್ಲ ಎಂದು ಮೇಲ್ಮಿತಿ ಹಾಕಲಾಗಿದೆ. ಮೊದಲನೆಯದು ನಿಶ್ಚಿತ ಹಾಗೂ ನಿತ್ಯವಾದದ್ದು. ಎರಡನೆಯದು ಹಾಕಬಹುದಾದ ಮತ್ತು ಹೆಚ್ಚುಕಡಿಮೆಯಾಗಬಹುದಾದ ಸೆಸ್ಸು. ಇವುಗಳ ಬಗ್ಗೆ ವಸೂಲಿಯ ಬಗ್ಗೆ ನಿಯಮಗಳಲ್ಲಿ ಹೇಳಲಾಗುವುದು.

### ೧೬೪. ಕರ ಆಕರಣೆ

(೧) ಈ ಸಂಬಂಧದಲ್ಲಿ ಸರಕಾರದಿಂದ ಮಾಡಲ್ಪಡಬಹುದಾದ ಯಾವುದೇ ಸಾಧಾರಣ ಇಲ್ಲವೆ ವಿಶಿಷ್ಟ ಹುಕುಮುಗಳ ಅಂಕಿತವಾಗಿ, ಪ್ರತಿಯೊಂದು ತಾಲೂಕ

ಬೋರ್ಡು ಈ ಕಲಮಿನಲ್ಲಿ ನಿರ್ದಿಷ್ಟ ಪಡಿಸಿದ ವಿಧಾನವನ್ನು ಅನುಸರಿಸಿದ ನಂತರ ಮತ್ತು ಕಮಿಶನರರ ಸಮ್ಮತಿ ಪಡೆದು-

(ಅ) ಹೆಚ್ಚಿನ ಸ್ಟ್ಯಾಂಪ ಡ್ಯೂಟಿಯ ಸ್ವರೂಪದಲ್ಲಿ ಸ್ಥಾವರ ಆಸ್ತಿಯ ಹಸ್ತಾಂತರದ ಮೇಲೆ ಕರವನ್ನು ಹಾಕಬಹುದು.

(ಬ) ತಾಲೂಕ ಬೋರ್ಡದ ಅಧಿಕಾರ ಕ್ಷೇತ್ರದ ಒಳಗೆ ಯಾವುದೇ ಪ್ರದೇಶ ದಲ್ಲಿ ಸ್ಥಾಪಿತವಾದ ಮಾರ್ಕೆಟುಗಳಲ್ಲಿ ಮಾರಾಟಕ್ಕಾಗಿ ತಂದ ಪ್ರಾಣಿಗಳ ಮೇಲೆ ಒಂದು ಪ್ರಾಣಿಗೆ ಇಪ್ಪತ್ತೈದು ನಯೆಪೈಸೆಗಳಿಗಿಂತ ಹೆಚ್ಚಾಗದಷ್ಟು ಕರ ವನ್ನು ಹಾಕಬಹುದು.

(೨) ಯಾವುದೇ ಕರವನ್ನು ಹಾಕುವ ಮೊದಲು ಪ್ರತಿಯೊಂದು ತಾಲೂಕ ಬೋರ್ಡು ತನ್ನ ಬೋರ್ಡದ ಸಭೆಯಲ್ಲಿ ಠರಾವು ಸ್ವೀಕರಿಸಿ ಆರಿಸತಕ್ಕದ್ದು. ಮತ್ತು (i) ತಾಲೂಕ ಬೋರ್ಡು ಯಾರನ್ನು ಹೊಣೆಗಾರ ಮಾಡಬೇಕೆಂದು ಮಾಡಿರುವುದೋ ಅಂತಹ ವ್ಯಕ್ತಿಗಳ ಇಲ್ಲವೆ ಆಸ್ತಿಯ ಇಲ್ಲವೆ ಎರಡೂ ಇವುಗಳ ವರ್ಗ ಇಲ್ಲವೆ ವರ್ಗಗಳು (ii) ಅದು ಮಾಡಬಯಸುವ ಯಾವುದೇ ವಿನಾಯತಿ ಗಳು (iii) ಇಂತಹ ವರ್ಗಗಳನ್ನು ಯಾವ ರಕಮಿಗಾಗಿ ಇಲ್ಲವೆ ದರದಿಂದ ಹೊಣೆ ಗಾರರನ್ನು ಮಾಡಬೇಕೆಂದಿರುವ ಹಣ ಇಲ್ಲವೆ ದರಗಳು ಮತ್ತು (iv) ಸರಕಾರವು ಹಾಗೆ ನಿರ್ದಿಷ್ಟಪಡಿಸಬೇಕೆಂದು ಹೇಳಿದ ಇನ್ನಿತರ ಎಲ್ಲ ವಿಷಯಗಳು ಇವುಗಳನ್ನು ನಿರ್ದಿಷ್ಟಪಡಿಸುವ ನಿಯಮಗಳು ಒಪ್ಪಲ್ಪಡತಕ್ಕದ್ದು.

(೩) ಇಂತಹ ಠರಾವು ಪಾಸಾದ ಮೇಲೆ ತಾಲೂಕ ಬೋರ್ಡು ಆ ನಿಯಮ ಗಳನ್ನು ಕೋಷ್ಟಕ III ರಲ್ಲಿ ನಿರ್ದಿಷ್ಟಪಡಿಸಿದ ನಮೂನೆಯಲ್ಲಿರುವ ನೋಟೀಸಿನ ಜತೆಗೆ ಪ್ರಸಿದ್ಧ ಮಾಡತಕ್ಕದ್ದು.

(೪) ಮೇಲೆ ಹೇಳಿದಂತೆ ಹಾಕಲಾದ ಕರದ ಬಗ್ಗೆ ಇಲ್ಲವೆ ಸೂಚಿಸಲಾದ ರಕಮು ಇಲ್ಲವೆ ದರದ ಬಗ್ಗೆ ಇಲ್ಲವೆ ಹೊಣೆಗಾರ ಮಾಡಲ್ಪಟ್ಟ ವ್ಯಕ್ತಿಗಳ ಇಲ್ಲವೆ ಆಸ್ತಿಯ ವರ್ಗಗಳ ಬಗ್ಗೆ ಇಲ್ಲವೆ ಸೂಚಿಸಲಾದ ಯಾವುದೇ ವಿನಾಯತಿಗಳ ಬಗ್ಗೆ ತಾಲೂಕದ ಯಾವುದೇ ರಹಿವಾಸಿಯು ತಕರಾರು ಮಾಡುವುದಿದ್ದರೆ, ಆ ನೋಟೀಸು ಪ್ರಸಿದ್ಧವಾದ ಒಂದು ತಿಂಗಳ ಒಳಗೆ, ತಾಲೂಕ ಬೋರ್ಡಿಗೆ ತನ್ನ ಲಿಖಿತ ತಕರಾ ರನ್ನು ಕಳಿಸತಕ್ಕದ್ದು, ಮತ್ತು ಬೋರ್ಡು ಇಂತಹ ಎಲ್ಲ ತಕರಾರುಗಳನ್ನು ಲಕ್ಷ್ಯಕ್ಕೆ ತಂದುಕೊಳ್ಳತಕ್ಕದ್ದು, ಮತ್ತು ಇಂತಹ ತಕರಾರಿನ ಅನುಸಾರವಾಗಿ ಆ ಸೂಚಿತ ಕರವನ್ನು ಹಾಕುವುದನ್ನು ಬಿಟ್ಟು ಬಿಡಬೇಕೆಂದು ಬೋರ್ಡು ನಿರ್ಣಯ ತೆಗೆದು ಕೊಂಡ ಹೊರತು, ಆ ತಕರಾರುಗಳನ್ನು, ಅದರ ಬಗ್ಗೆ ತನ್ನ ಅಭಿಪ್ರಾಯವನ್ನು ಮತ್ತು ಆ ತಕರಾರುಗಳ ಮೂಲಕವಾಗಿ ಸೂಚಿಸಲಾದ ಯಾವುದೇ ತಿದ್ದುಪಡಿ

ಗಳನ್ನು, ನೋಟೀಸು ಮತ್ತು ನಿಯಮಗಳೊಂದಿಗೆ ಕಮಿಶನರನ ಕಡೆಗೆ ಕಳಿಸತಕ್ಕದ್ದು.

(೫) ಅವನಿಗೆ ಸಾದರ ಪಡಿಸಲಾದ ನಿಯಮಗಳನ್ನು ಕಮಿಶನರರು ಪರವಾನಗಿ ಕೊಡದೆ ನಿರಾಕರಿಸಬಹುದು, ಇಲ್ಲವೆ ಹೆಚ್ಚಿನ ವಿಚಾರಣೆ ಮಾಡುವುದರ ಸಲುವಾಗಿ ಅವುಗಳನ್ನು ತಾಲೂಕ ಬೋರ್ಡಿಗೆ ಮರಳಿ ಕಳಿಸಬಹುದು. ಇಲ್ಲವೆ, ಸೂಚಿತ ಕರದ ಬಗ್ಗೆ ಸಾಕಷ್ಟು ಸಬಲವಾದ ತಕರಾರು, ಅವನ ಅಭಿಪ್ರಾಯದಲ್ಲಿ ಮಾಡಿಲ್ಲವೆಂದಾದರೆ, ಅವನು ಆ ನಿಯಮಗಳಿಗೆ (ಅ) ಯಾವ ತಿದ್ದುಪಡಿಯಿಲ್ಲದೆ, ಇಲ್ಲವೆ (ಬ) ಹಾಕಬೇಕೆಂದಿರುವ ರಕಮಿನಲ್ಲಿ ಹೆಚ್ಚು ಆಗದ ಹಾಗೆ ತನಗೆ ಯೋಗ್ಯ ಕಂಡಂತಹ ತಿದ್ದುಪಡಿಗಳೊಂದಿಗೆ, ಒಪ್ಪಿಗೆ ಕೊಡಬಹುದು.

(೬) ಯಾವುದರ ಅಂಕಿತವಾಗಿ ಒಪ್ಪಿಗೆಯನ್ನು ಕೊಡಲಾಗಿದೆಯೋ ಅಂತಹ ತಿದ್ದುಪಡಿಗಳೊಂದಿಗೆ, ಉಪಕಲಮು (೫) ರನ್ವಯವಾಗಿ ಒಪ್ಪಿಗೆ ಕೊಡಲ್ಪಟ್ಟ ಎಲ್ಲ ನಿಯಮಗಳು ಯಾವ ತಾಲೂಕಿಗಾಗಿ ಮಾಡಲ್ಪಟ್ಟಿರುವುವೊ ಆ ತಾಲೂಕದ ತಾಲೂಕ ಬೋರ್ಡಿನಿಂದ, ಒಪ್ಪಿಗೆ ಕೊಡಲ್ಪಟ್ಟ ಬಗ್ಗೆ ಸೂಚನೆ ಕೊಡುವ ನೋಟೀಸಿನೊಂದಿಗೆ, ಅದರ ತಾರೀಖು ಮತ್ತು ಕ್ರಮಾಂಕದೊಂದಿಗೆ, ಪ್ರಸಿದ್ಧಿಸಲ್ಪಡತಕ್ಕದ್ದು ಮತ್ತು ಹಾಗೆ ಪ್ರಸಿದ್ಧಿಸಲಾದ ನಿಯಮಗಳಲ್ಲಿ ವರ್ಣಿಸಲಾದ ಕರವು ಆ ನೋಟೀಸಿನಲ್ಲಿ ನಿರ್ದಿಷ್ಟಪಡಿಸಲಾದಂತಹ ತಾರೀಖಿನಿಂದ-ನುತ್ತು ಆ ತಾರೀಖು ಇಂತಹ ನೋಟೀಸು ಪ್ರಸಿದ್ಧಿಸಲ್ಪಟ್ಟ ತಾರೀಖಿನಿಂದ ಒಂದು ತಿಂಗಳಕಿಂತ ಒಳಗೆ ಇರತಕ್ಕದ್ದಲ್ಲ-ಆ ಪ್ರಕಾರವಾಗಿ ಹಾಕಲ್ಪಡತಕ್ಕದ್ದು.

(೭) ತಾಲೂಕ ಬೋರ್ಡದ ಪ್ರಾದೇಶಿಕ ಮಿತಿಯಲ್ಲಿ ಇರುವ ಸ್ಥಾವರ ಆಸ್ತಿಯ ಮಾರಾಟ, ಬಕ್ಷೀಸು, ಒತ್ತಿ, ವಿನಿಮಯ, ಮತ್ತು, ನಿರಂತರ ಬಾಡಿಗೆಯ ದಾಖಲೆಪತ್ರದ ಮೇಲೆ ೧೯೫೭ ರ ಮೈಸೂರ ಸ್ಟ್ಯಾಂಪ ಆ್ಯಕ್ಟದಿಂದ ಹಾಕಲಾದ ಕರದ ಮೇಲೆ ಸಂದರ್ಭಾನುಸಾರವಾಗಿ, ಖರೀದಿಯ ವಿಷಯವಿದ್ದರೆ ಅದರ ಖರೀದಿ ರಕಮಿನ ಮೇಲೆ, ಬಕ್ಷೀಸು ಇದ್ದರೆ, ಆಸ್ತಿಯ ಬೆಲೆಯ ರಕಮಿನ ಮೇಲೆ, ಇಲ್ಲವೆ ಒತ್ತಿ ಇದ್ದರೆ, ಆಧಾರವಾಗಿರುವ ರಕಮಿನ ಮೇಲೆ, ವಿನಿಮಯದ ಸಂದರ್ಭವಿದ್ದರೆ ಹೆಚ್ಚಿನ ಬೆಲೆಯ ಆಸ್ತಿಯ ಬೆಲೆಯ ರಕಮಿನ ಮೇಲೆ, ಇಲ್ಲವೆ ಭಾಡಿಗೆಯ ಪ್ರಸಂಗದಲ್ಲಿ ಮೊದಲಿನ ಹತ್ತು ವರುಷದ ಬಾಡಿಗೆಯ ರಕಮಿನ ಮೇಲೆ, ಆ ದಾಖಲೆಪತ್ರದಲ್ಲಿ ಕಾಣಿಸಿದುದರ ಆಧಾರದ ಮೇಲೆ ನೂರಕ್ಕೆ ಮೂರರಕಿಂತ ಹೆಚ್ಚು ಆಗದಷ್ಟು ಸರಚಾರ್ಜ ಹಾಕಲ್ಪಡುವ ರೂಪದಲ್ಲಿ ಸ್ಥಾವರ ಆಸ್ತಿಯ ಹಸ್ತಾಂತರ (ಈ ಕಲಮಿನಲ್ಲಿ ಈ ಮುಂದೆ ಹಸ್ತಾಂತರ ಕರ ಎಂದು ಕರೆಯಲಾಗಿದೆ.) ಕರವು ಹಾಕಲ್ಪಡತಕ್ಕದ್ದು.

ಆದರೆ, ಒತ್ತಿಯ ಪ್ರಸಂಗವಿದ್ದಾಗ ಮತ್ತು ಒತ್ತಿಯ ಆಧಾರವಾಗಿರುವ ಹಣವು ಎರಡು ಸಾವಿರದ ರೂಪಾಯಿಗಿಂತ ಹೆಚ್ಚು ಆಗಿರದಿದ್ದರೆ, ಇಂತಹ ಕರವು ಒತ್ತಿಯ ಬಗ್ಗೆ ಹಾಕಲ್ಪಡತಕ್ಕದ್ದಲ್ಲ.

(೮) ಈ ಹಸ್ತಾಂತರ ಕರವು ಪ್ರಾರಂಭಿಸಲ್ಪಟ್ಟ ಮೇಲೆ—

(ಅ) ತಾಲೂಕ ಬೋರ್ಡದ ಅಧಿಕಾರ ಕ್ಷೇತ್ರದ ಅಧೀನವಾಗಿರುವ ಪ್ರದೇಶದ ಒಳಗೆ ಇಲ್ಲವೆ ಹೊರಗೆ ಆಸ್ತಿಯು ಇರುವ ಬಗ್ಗೆ ಪ್ರತ್ಯೇಕವಾಗಿ ಆ ಆಸ್ತಿಯ ಸಂಬಂಧವಾಗಿ ವಿವರಣೆಯನ್ನು ಕೊಡುವುದು ನಿರ್ದಿಷ್ಟವಾಗಿ ಹೇಳಲಾಗಿದೆಯೆಂಬ ಹಾಗೆ ೧೯೫೭ ರ ಮೈಸೂರ ಸ್ಟಾಂಪ ಆ್ಯಕ್ಟದ ಕಲಮು ೨೮ ರಲ್ಲಿ ಹೇಳಿದುದನ್ನು ಅರ್ಥಮಾಡತಕ್ಕದ್ದು.

(ಬ) ಅದೇ ಕಾಯಿದೆಯ ಕಲಮು ೬೧ ರಲ್ಲಿ ಸರಕಾರಕ್ಕೆ ಸಂಬಂಧಪಟ್ಟದ್ದನ್ನು ತಾಲೂಕ ಬೋರ್ಡಿಗೂ ಸಂಬಂಧಪಟ್ಟಿರುವ ಹಾಗೆ ಅರ್ಥ ಮಾಡತಕ್ಕದ್ದು

(೯) ಈ ಹಸ್ತಾಂತರ ಕರವನ್ನು ವಸೂಲ ಮಾಡುವ ಬಗ್ಗೆ ಕ್ರಮ ಪಡಿಸುವುದರ ಸಲುವಾಗಿ, ಅದನ್ನು ತಾಲೂಕ ಬೋರ್ಡಿಗೆ ಸಲ್ಲಿಸಬೇಕೆಂಬುದರ ಸಲುವಾಗಿ ಮತ್ತು ಅದರ ವಸೂಲಿ ಮಾಡಿದ್ದರ ಬಗ್ಗೆ ಸರಕಾರದಿಂದ ಮಾಡಲಾದ ಯಾವುದೇ ವೆಚ್ಚವನ್ನು ಕಡಿದುಕೊಳ್ಳುವುದರ ಸಲುವಾಗಿ ಸರಕಾರವು ನಿಯಮಗಳನ್ನು ಮಾಡಬಹುದು.

(೧೦) ಹಸ್ತಾಂತರ ಕರವು—

(i) ಈ ವಿನಾಯತಿ ಇರದಿದ್ದರೆ, ಸರಕಾರವು ಉಪಕಲಮು (೭) ರನ್ವಯವಾಗಿ ಹಸ್ತಾಂತರ ಕರವನ್ನು ಕೊಡಲು ಪಾತ್ರವಾಗುತ್ತಿದ್ದಿತೋ ಅಂತಹ ದಾಖಲೆ ಪತ್ರದ ಸಂಬಂಧವಾಗಿ ಸರಕಾರದಿಂದ ಇಲ್ಲವೆ ಸರಕಾರದ ಪರವಾಗಿ ಇಲ್ಲವೆ ಸರಕಾರದ ಹಿತಕ್ಕಾಗಿ ಮಾಡಲ್ಪಟ್ಟ ಯಾವುದೇ ದಾಖಲೆ ಪತ್ರದ ಸಂಬಂಧವಾಗಿ ಹಾಕಲ್ಪಡತಕ್ಕದ್ದಲ್ಲ; ಇಲ್ಲವೆ

(ii) ೧೯೫೭ ರ ಮೈಸೂರ ಸ್ಟಾಂಪ ಆ್ಯಕ್ಟದನ್ವಯವಾಗಿ ವಿನಾಯತಿ ಪಡೆದ ಯಾವುದೇ ದಾಖಲೆ ಪತ್ರದ ಸಂಬಂಧವಾಗಿ ಹಾಕಲ್ಪಡತಕ್ಕದ್ದಲ್ಲ.

## ವಿವೇಚನೆ

ತಾಲೂಕ ಬೋರ್ಡು ಕರಗಳನ್ನು ಹಾಕಬಹುದು, ಆದರೆ ಹಾಕುವ ಮೊದಲು ಕೆಲವೊಂದು ವಿಧಾನಗಳನ್ನು ಅನುಸರಿಸತಕ್ಕದ್ದು. ಆ ವಿಧಾನವನ್ನು ಈ ಕಲಮಿನಲ್ಲಿ ನಿರ್ದಿಷ್ಟಪಡಿಸಲಾಗಿದೆ. ಅದರ ನಂತರ ಕಮಿಶನರನ ಪರವಾನಗಿ ಪಡೆಯತಕ್ಕದ್ದು. ಇವುಗಳ ಬಗ್ಗೆ ಸರಕಾರವು ಹುಕುಮುಗಳನ್ನು ಹೊರಡಿಸುವುದು. ಅವುಗಳ ಅಂಕಿತವಾಗಿ ಕಾರ್ಯ ನಡೆಯತಕ್ಕದ್ದು.

ಸ್ಥಾವರ ಆಸ್ತಿಯು ಹಸ್ತಾಂತರ ಆದದ್ದರ ಕರಹಾಕಬಹುದು. ಈ ಕರವು ಈಗ ಕೊಡುತ್ತಿರುವ ಸ್ಟಾಂಪ ಕರದ ಮೇಲಿನ ಹೆಚ್ಚಿನ ಕರವು. ಮಾರ್ಕೆಟಿಗೆ ಮಾರಾಟಕ್ಕೆ ಬಂದ ಪ್ರಾಣಿಗಳ ಮೇಲೆ ಕರ ಹಾಕಬಹುದು. ಇದಕ್ಕೆ ಮಿತಿ ಹಾಕಲಾಗಿದೆ.. ಒಂದು ಪ್ರಾಣಿಗೆ ೨೫ ನಯೆ ಪೈಸೆಗಳಕಿಂತ ಹೆಚ್ಚಿಗೆ ಕರ ಹಾಕ ತಕ್ಕದ್ದಲ್ಲ.

ಕರವನ್ನು ಹಾಕುವ ಮೊದಲು ಯಾವ ಕರವನ್ನು ಹಾಕತಕ್ಕದ್ದು ಎಂಬು ದನ್ನು ಆರಿಸತಕ್ಕದ್ದು. ಆನಂತರ ಆ ಬಗ್ಗೆ ನಿಯಮಗಳನ್ನು ಒಪ್ಪತಕ್ಕದ್ದು. ಈ ಎರಡೂ ಮಾತುಗಳ ಠರಾವುಗಳ ಮೂಲಕ ಸ್ವೀಕರಿಸಲ್ಪಡತಕ್ಕದ್ದು. ನಿಯಮ ಗಳಲ್ಲಿ ಕರಪಾತ್ರವಾದ ವ್ಯಕ್ತಿಗಳ ವರ್ಗ, ಆಸ್ತಿಗಳ ವರ್ಗ, ದರ, ರಕಮು, ವಿನಾ ಯತಿ, ಯಾವ ವರ್ಗಕ್ಕೆ ಎಷ್ಟು ದರ, ಮುಂತಾದ ಎಲ್ಲ ವಿಷಯಗಳು ಬರತಕ್ಕದ್ದು. ಈ ವಿಷಯಗಳನ್ನು ಒಳಗೊಂಡ ನಿಯಮಗಳುಳ್ಳ ಠರಾವು ಪಾಸಾದ ಮೇಲೆ ಆ ನಿಯಮಗಳು ಪ್ರಸಿದ್ಧಿಸಲ್ಪಡತಕ್ಕದ್ದು. ಅದರ ಜತೆಗೆ ಕೋಷ್ಟಕ ೩ ರಲ್ಲಿ ಹೇಳಿದ ನೋಟೀಸು ಪ್ರಸಿದ್ಧವಾಗತಕ್ಕದ್ದು. ನಿಯಮಗಳಿಗೆ ಇಲ್ಲವೆ ದರಗಳಿಗೆ ಯಾರಾ ದರೂ ತಕರಾರು ಮಾಡುವದಿದ್ದರೆ, ಮಾಡಿರಿ ಎಂದು ಹೇಳುವುದು ಆ ನೋಟೀಸು. ಹೀಗೆ ತಕರಾರು ಮಾಡುವ ಅಧಿಕಾರ ಆ ತಾಲೂಕದ ರಹಿವಾಸಿಗೆ ಇದೆ. ಅವನು ನೋಟೀಸು ಪ್ರಕಟವಾದ ಒಂದು ತಿಂಗಳ ಒಳಗೆ ತಕರಾರನ್ನು ಲಿಖಿತ ರೂಪದಲ್ಲಿ ಕೊಡತಕ್ಕದ್ದು.

ತಾಲೂಕ ಬೋರ್ಡಿಗೆ ಹೀಗೆ ಬಂದ ತಕರಾರುಗಳನ್ನು ಅದು ವಿಚಾರಿಸ ತಕ್ಕದ್ದು. ತಾಲೂಕ ಬೋರ್ಡಿಗೆ ಬಂದ ತಕರಾರುಗಳ ಬಗ್ಗೆ ಬೋರ್ಡು ಎರಡು ರೀತಿಯಿಂದ ಪ್ರತಿಕ್ರಿಯೆ ತೋರಿಸಬಹುದು. ತಕರಾರು ಒಪ್ಪಿಕೊಂಡು ಆ ಕರವನ್ನು ಹಾಕುವುದು ಬಿಟ್ಟುಬಿಡಬೇಕಾಗುವುದು. ಬಿಡುವ ಅಧಿಕಾರ ತಾಲೂಕ ಬೋರ್ಡಿಗೆ ಇದೆ. ಸೂಚಿತ ಕರಗಳಲ್ಲಿ ಆ ತಕರಾರಿನ ಮೂಲಕ ತಿದ್ದುಪಡಿ ಮಾಡಬೇಕೆನಿಸಿದರೆ, ಇಲ್ಲವೆ ಕರವನ್ನು ಇದ್ದಂತೆ ಇಡಬೇಕೆನ್ನಿಸಿದರೆ, ತನ್ನ ಇಭಿಪ್ರಾಯದ ಕಾರಣ ಗಳನ್ನು, ಬಂದ ತಕರಾರುಗಳನ್ನು, ನೋಟೀಸನ್ನು, ನಿಯಮಗಳನ್ನು ಎಲ್ಲವನ್ನು ಕಮಿಶನರನ ಕಡೆಗೆ ತಾಲೂಕ ಬೋರ್ಡು ಕಳಿಸತಕ್ಕದ್ದು.

ಕಮಿಶನರನು ಆ ನಿಯಮಗಳನ್ನು ಒಪ್ಪುವುದನ್ನು ನಿರಾಕರಿಸಬಹುದು ಇಲ್ಲವೆ ಕೆಲವೊಂದು ತಿದ್ದುಪಡಿ ಮಾಡಲು ಸೂಚನೆ ಮಾಡಿ ಪುನಃ ವಿಚಾರಮಾಡಲು ಹೇಳಿ ತಾಲೂಕ ಬೋರ್ಡಿಗೆ ತಿರುಗಿ ಕಳಿಸಬಹುದು. ಇಲ್ಲವೆ ಯಾವ ತಿದ್ದುಪಡಿ ಯಿಲ್ಲದೆ ಒಪ್ಪಬಹುದು. ತಿದ್ದುಪಡಿ ಮಾಡಿದರೆ ತಾಲೂಕ ಬೋರ್ಡು ಹಾಕಿದ ಹಣದಕಿಂತ ಹೆಚ್ಚಿಗೆ ಮಾಡಲು ಅವನಿಗೆ ಅಧಿಕಾರವಿಲ್ಲ, ಚುನಾಯಿತ ಸಂಸ್ಥೆಯು

ಹಾಕಿದ ಮೇಲ್ಮಿತಿಯು ಕಾಯಿದೆ ಪ್ರಕಾರ ಇರುವುದು. ಅದನ್ನು ಹೆಚ್ಚಿಸುವ ಅಧಿಕಾರ ಕಮಿಶನರನಿಗೆ ಇಲ್ಲ.

ಹೀಗೆ ಒಪ್ಪಿತವಾದ ಎಲ್ಲ ನಿಯಮಗಳು ಪ್ರಸಿದ್ಧಿಸಲ್ಪಡತಕ್ಕದ್ದು. ಈ ಪ್ರಸಿದ್ಧಿಯು ನೋಟೀಸು ಕೊಟ್ಟ ಒಂದು ತಿಂಗಳಕಿಂತ ಮೊದಲು ಆಗತಕ್ಕದ್ದಲ್ಲ.

ಕರಗಳ ಆಕರಣೆಯಲ್ಲಿ ಸ್ಟಾಂಪಡ್ಯೂಟಿಯ ಸರಚಾರ್ಜ ರೀತಿಯಲ್ಲಿ ಸ್ಥಾವರ ಆಸ್ತಿಗಳ ಹಸ್ತಾಂತರ ಕರವೆಂದು ಹಾಕಲು ಈ ಕಲಮು ಅಧಿಕಾರ ಕೊಡುತ್ತದೆ. ಯಾವುದೇ ಸ್ಥಾವರ ಆಸ್ತಿಯ ಹಸ್ತಾಂತರವು ದಾಖಲೆ ಪತ್ರದ ಮುಖಾಂತರ ನೋಂದಣಿ ಸಹಿತವಾಗಿ ಆಗಬೇಕಾಗಿರುವುದು. ಆ ದಾಖಲೆ ಪತ್ರದ ಬೆಲೆಯ ಮೇಲೆ ಸ್ಟಾಂಪುಡ್ಯೂಟಿ ಕೊಡಬೇಕಾಗುವುದು ಕೊಡಲ್ಪಟ್ಟ ಸ್ಟಾಂಪು ಡ್ಯೂಟಿಯ ಮೇಲೆ ಸರಚಾರ್ಜು ಹಾಕಿ ಅದನ್ನು ತಾಲೂಕ ಬೋರ್ಡಿಗೆ ಕೊಡಲ್ಪಡುವ ಏರ್ಪಾಡು ಈ ಕಲಮಿನ ಮೂಲಕ ಆಗುವುದು. ಇದು ದಾಖಲೆ ಪತ್ರದ ಬೆಲೆಯ ಮೇಲೆ ನೂರಕ್ಕೆ ಮೂರರಕಿಂತ ಹೆಚ್ಚಾಗಬಾರದು. ಆದರೆ ಇಂತಹ ಸರಚಾರ್ಜ ಯಾವುದೇ ಒತ್ತಿ ವ್ಯವಹಾರದ ದಾಖಲೆ ಪತ್ರದ ಬೆಲೆಯು ೨೦೦೦/- ದಕಿಂತ ಕಡಿಮೆ ಇದ್ದರೆ ಹಾಕತಕ್ಕದ್ದಲ್ಲ. ಈ ವ್ಯವಹಾರಗಳು ಆ ತಾಲೂಕದಲ್ಲಿ ಆಗಿದ್ದರೆ ಮಾತ್ರ ಸರಚಾರ್ಜು. ಯಾವ ತಾಲೂಕಗಳಲ್ಲಿ ಆಗಿರುವುದೋ ಆ ತಾಲೂಕ ಬೋರ್ಡಿಗೆ ಆ ಹಣವು ಸಲ್ಲತಕ್ಕದ್ದು.

ಹೀಗೆ ಹಾಕಿದ ಸರಚಾರ್ಜದ ಮೂಲಕ ಸ್ಟಾಂಪ ಆ್ಯಕ್ಟ ಅರ್ಥವಿವರಣೆ ಮಾಡಲ್ಪಡಬೇಕಾಗುವುದು. ಸ್ಟಾಂಪು ಆ್ಯಕ್ಟಿನ ಕಲಮು ೨೮ ಮತ್ತು ೬೧ ಲಕ್ಷಿಸಬೇಕು. ಆಸ್ತಿಯ ವಿವರಣೆ ಮಾಡಬೇಕಾದರೆ ಅದು ಯಾವ ತಾಲೂಕ ಬೋರ್ಡದ ಅಧಿಕಾರ ಕ್ಷೇತ್ರದಲ್ಲಿ ಬರುವುದು ಅದನ್ನು ಹೇಳಬೇಕಾಗುವುದು. ಕಲಮು ೬೧ ರಲ್ಲಿ ಸರಕಾರ ಎಂಬ ಶಬ್ದಕ್ಕೆ ಸರಕಾರ ಮತ್ತು ತಾಲೂಕ ಬೋರ್ಡ ಎಂದು ಅರ್ಥ ಮಾಡಬೇಕಾಗುವುದು ಎಂದು ಸೂಚಿಸಲಾಗಿದೆ.

ಈ ಸರಚಾರ್ಜನ್ನು ಹೇಗೆ ವಸೂಲ ಮಾಡಬೇಕೆಂಬ ಬಗ್ಗೆ ನಿಯಮಗಳು ಮಾಡಲ್ಪಡುವುವು. ಆಗ ತಾಲೂಕ ಬೋರ್ಡದ ಪರವಾಗಿ ಸರಕಾರವು ವಸೂಲಿ ವೆಚ್ಚವನ್ನು ಕಡಿದುಕೊಳ್ಳಲು ಈ ಕಲಮಿನಲ್ಲಿ ಅಧಿಕಾರ ಕೊಡಲಾಗಿದೆ.

ಸರಕಾರವೂ ಆಸ್ತಿ ಹಸ್ತಾಂತರ ಮಾಡುವುದು. ಆದರೆ ಆದಕ್ಕೆ ಹಸ್ತಾಂತರ ಕರದ ವಿನಾಯತಿ ಇರಬೇಕೆಂದು ಈ ಕಲಮು ಸೂಚಿಸಿದೆ. ಅಲ್ಲದೆ ಸ್ಟಾಂಪ ಆ್ಯಕ್ಟಿನಲ್ಲಿ ಕೊಡಲಾದ ವಿನಾಯತಿಯನ್ನು ಈ ಸರಚಾರ್ಜು ಬಾಧಿಸುವುದಿಲ್ಲ.

ಈ ಸರಚಾರ್ಜು ಹೊಸದಾಗಿ ತಾಲೂಕ ಬೋರ್ಡದ ನಿಧಿಗಾಗಿ ಹಾಕಲಾದ ಕರವೆಂಬುದನ್ನು ಲಕ್ಷಿಸಬೇಕು.

## ೧೬೫. ಕೆಲವೊಂದು ಕಂದಾಯಗಳನ್ನು ಸರಕಾರವು ತಾಲೂಕ ಬೋರ್ಡಿಗೆ ಒಪ್ಪಿಸುವುದು

(೧) ಆ ತಾಲೂಕದಲ್ಲಿಯ ಭೂಕಂದಾಯದ ವಸೂಲಿಯ ನೂರಕ್ಕೆ ಇಪ್ಪತ್ತರ ಸಮವಾಗುವಷ್ಟು ಹಣವನ್ನು ಪ್ರತಿಯೊಂದು ತಾಲೂಕ ಬೋರ್ಡಿಗೆ ವಾರ್ಷಿಕವಾಗಿ ಸರಕಾರವು ಸಹಾಯಧನವೆಂದು ಕೊಡತಕ್ಕದ್ದು.

(೨) ರಾಜ್ಯದಲ್ಲಿಯ ಭೂಕಂದಾಯದ ವಸೂಲಿಯ ನೂರಕ್ಕೆ ಐದರ ಸಮವಾಗುವಷ್ಟು ಹಣವನ್ನು ತಾಲೂಕ ಬೋರ್ಡಗಳಿಗೆ ಸರಕಾರವು ಒಪ್ಪಿಸಿಕೊಡತಕ್ಕದ್ದು. ಹೀಗೆ ಯಾವುದೇ ತಾಲೂಕ ಬೋರ್ಡಿಗೆ ಒಪ್ಪಿಸಿ ಕೊಡಲಾದ ಹಣವು ಕಾಲಕಾಲಕ್ಕೆ ಸರಕಾರವು ನಿರ್ದೇಶಿಸಬಹುದಾದಂತಹ ಉದ್ದೇಶಗಳಿಗಾಗಿ ಕಾಲಕಾಲಕ್ಕೆ ನಿರ್ಧರಿಸಬಹುದಾದಂತಹವಕ್ಕೆ ವೆಚ್ಚ ಮಾಡಲ್ಪಡತಕ್ಕದ್ದು.

(೩) ಉಪಕಲಮು (೧) ಮತ್ತು (೨) ರ ಉದ್ದೇಶಗಳಿಗಾಗಿ ತಾಲೂಕದ ಹಾಗೂ ರಾಜ್ಯದ ಭೂಕಂದಾಯದ ವಸೂಲಿಯನ್ನು ನಿರ್ದಿಷ್ಟಪಡಿಸುವುದರ ಸಲುವಾಗಿ ತಾಲೂಕದ ಸಂಬಂಧವಾಗಿ ಡೆಪ್ಯೂಟಿ ಕಮಿಶನರನು ಮತ್ತು ರಾಜ್ಯದ ಸಂಬಂಧವಾಗಿ ಸರಕಾರವು ನಿರ್ದಿಷ್ಟಪಡಿಸಲಾದ ತಾರೀಖಿನಿಂದ ಹಿಂದೆ ಐದು ವರುಷಗಳ ಕಾಲಾವಧಿಯಲ್ಲಿ ಆದ ವಸೂಲಿಯ ತಳಹದಿಯ ಮೇಲೆ, ಪ್ರತಿ ನಾಲ್ಕು ವರುಷಕ್ಕೆ ಒಮ್ಮೆ ಭೂಕಂದಾಯದ ಸರಾಸರಿ ವಸೂಲಿ ಎಷ್ಟು ಆಗುವುದೆಂಬುದನ್ನು ನಿರ್ದಿಷ್ಟ ಪಡಿಸತಕ್ಕದ್ದು ಮತ್ತು ನಿರ್ದಿಷ್ಟ ಪಡಿಸಿದ ತಾರೀಖಿನಿಂದ ಮುಂದೆ ನಾಲ್ಕು ವರುಷಗಳ ವರೆಗೆ ಸರಾಸರಿ ಭೂಕಂದಾಯವು ಸಂದರ್ಭಾನುಸಾರವಾಗಿ ಧನ ಸಹಾಯ ಕೊಡುವದಕ್ಕೆ ಇಲ್ಲವೆ ಒಪ್ಪಿಸಿ ಕೊಡುವುದಕ್ಕೆ ಭೂಕಂದಾಯದ ವಸೂಲಿ ಎಂದು ಗಣಿಸಲ್ಪಡತಕ್ಕದ್ದು.

(೪) ತಾಲೂಕ ಬೋರ್ಡದ ಅಧಿಕಾರ ಕ್ಷೇತ್ರವಲ್ಲಿಯ ಪ್ರದೇಶದಲ್ಲಿ ವಸೂಲ ಮಾಡಲಾದ ಭೂಕಂದಾಯದ ಮತ್ತು ನೀರಿನ ಕರದ ಮೇಲಿನ ಸ್ಥಾನಿಕ ಸೆಸ್ಸನ್ನೂ ಪ್ರತಿಯೊಂದು ತಾಲೂಕ ಬೋರ್ಡಿಗೆ ಸರಕಾರವು ಒಪ್ಪಿಸಿ ಕೊಡತಕ್ಕದ್ದು.

(೫) ಉಪಕಲಮು (೧), (೨), ಮತ್ತು (೪) ರನ್ವಯವಾಗಿ ತಾಲೂಕ ಬೋರ್ಡಿಗೆ ಕೊಟ್ಟ ಮತ್ತು ಒಪ್ಪಿಸಿಕೊಟ್ಟ ರಕಮುಗಳು ಗೊತ್ತುಮಾಡಬಹುದಾದಂತಹ ರೀತಿಯಲ್ಲಿ, ಮತ್ತು ಕಾಲಕ್ಕೆ ತಾಲೂಕ ಬೋರ್ಡದ ನಿಧಿಯಲ್ಲಿ ಜಮಾ ಮಾಡಲ್ಪಡತಕ್ಕದ್ದು.

**ವಿವೇಚನೆ**

ಕಲಮು ೭೪ ರ ಹಾಗೆ ಇದೆ ಈ ಕಲಮು. ನಿತ್ಯವಾಗಿ ವಾರ್ಷಿಕವಾಗಿ ಸಹಾಯಧನವೆಂದು ಭೂಕಂದಾಯದ ಆ ತಾಲೂಕಿನಲ್ಲಿ ವಸೂಲಾಗುವ ಹಣದ

ನೂರಕ್ಕೆ ೨೦ ರಷ್ಟು ಸರಕಾರವು ತಾಲೂಕ ಬೋರ್ಡಿಗೆ ಕೊಡತಕ್ಕದ್ದು. ಸರಕಾವು ಬೇರೆ ಬೇರೆ ಉದ್ದೇಗಳಿಗಾಗಿ ವೆಚ್ಚಮಾಡಲು ತಾಲೂಕ ಬೋರ್ಡಿಗೆ ಹೇಳಿರುವುದರ ವೆಚ್ಚದ ದೆಸೆಯಿಂದ ರಾಜ್ಯದಲ್ಲಿಯ ಭೂಕಂದಾಯದ ವಸೂಲಿಯಲ್ಲಿಯ ಬೇರೆ ಯಾಗಿರಿಸಿದ ಪ್ರತಿಶತ ೫ ರಂತೆ ಇರುವ ಹಣವನ್ನು ಆಯಾ ಉದ್ದೇಶಗಳಿಗಾಗಿ ಆಯಾ ತಾಲೂಕಕ್ಕೆ ಒಪ್ಪಿಸಿ ಕೊಡತಕ್ಕದ್ದು. ಇದೂ ವಾರ್ಷಿಕವಾಗಿ ಎಂಬುದು ಸೂಚಿತವಾದಂತೆ. ಭೂಕಂದಾಯವು ವರುಷಕ್ಕೆ ಎಷ್ಟು ಆಯಿತು ಎಂಬುದನ್ನು ತಿಳಿಯುಲು ಒಂದು ಕ್ರಮ ಸೂಚಿಸಲಾಗಿದೆ. ಒಂದು ತಾರೀಖು ಗೊತ್ತುಮಾಡಲ್ಪಡುವುದು. ಅದರ ಹಿಂದೆ ಐದು ವರುಷಗಳಲ್ಲಿ ಎಷ್ಟು ಭೂಕಂದಾಯ ವಸೂಲಾಯಿತೋ ಅದು ತಳಹದಿ. ಆ ತಳಹದಿಯ ಮೇಲೆ ಸರಾಸರಿ ತೆಗೆಯುಬೇಕು. ಅದು ಮುಂದಿನ ನಾಲ್ಕು ವರುಷಗಳಿಗಾಗಿ ವಾರ್ಷಿಕ ಭೂಕಂದಾಯದ ವಸೂಲಿ. ತಾಲೂಕಿಗೆ ಸಂಬಂಧಪಟ್ಟಿದ್ದನ್ನು ಡೆ. ಕಮಿಶನರನು ರಾಜ್ಯಕ್ಕೆ ಸಂಬಂಧಪಟ್ಟಿದ್ದನ್ನು ಸರಕಾರವು ಸರಾಸರಿ ಭೂಕಂದಾಯವನ್ನು ನಿರ್ಧರಿಸತಕ್ಕದ್ದು. ಭೂಕಂದಾಯವ ಮೇಲೆ ಹಾಗೂ ನೀರಿನ ಕರದ ಮೇಲೆ ಹಾಕಲಾದ ಸ್ಥಾನಿಕ ಸೆಸ್ಸು ಕೂಡ ತಾಲೂಕ ಬೋರ್ಡದ ನಿಧಿಗೆ ಜಮಾ ಮಾಡಲ್ಪಡತಕ್ಕದ್ದು. ಈ ಎಲ್ಲ ರಕಮುಗಳನ್ನು ಹೇಗೆ ಮತ್ತು ಯಾವ ಕಾಲಕ್ಕೆ ಜಮಾ ಮಾಡಬೇಕು ಎಂಬುದಕ್ಕೆ ನಿಯಮಗಳು ಮಾಡಲ್ಪಟ್ಟಿರುವುವು.

## ೧೬೬. ತಾಲೂಕ ಬೋರ್ಡದ ನಿಧಿಯ ಹಾಗೂ ಆಸ್ತಿಯ ವಿನಿಯೋಗ

(೧) ತಾಲೂಕ ಬೋರ್ಡದ ನಿಧಿಯು ಮತ್ತು ಈ ಕಾಯಿದೆಯನ್ವಯವಾಗಿ ತಾಲೂಕ ಬೋರ್ಡು ಧಾರಣ ಮಾಡಿದ ಇಲ್ಲವೆ ಅದರ ಅಂತರರ್ಗತವಾಗಿದ್ದ ಎಲ್ಲ ಆಸ್ತಿಯು ಈ ಕಾಯಿದೆಯ ಶರತುಗಳ ಅಂಕಿತವಾಗಿ ಈ ಕೆಳಗೆ ಸೂಚಿಸಿದಂತೆ ಹಣ ಕೊಡಲಿಕ್ಕೆ ವಿನಿಯೋಗಿಸಲ್ಪಡತಕ್ಕದ್ದು.

(ಅ) ಸರಕಾರದವರಿಂದ ಈ ಸಂಬಂಧದಲ್ಲಿ ಮಾಡಲ್ಪಡಬಹುದಾದಂತಹ ನಿಯಮಗಳ ಅಂಕಿತವಾಗಿ, ಅಧ್ಯಕ್ಷನಿಗೆ ಗೌರವಧನ ಮತ್ತು ಅಧ್ಯಕ್ಷನಿಗೆ ಮತ್ತು ತಾಲೂಕ ಬೋರ್ಡದ ಸದಸ್ಯರಿಗೆ, ಇಲ್ಲವೆ ಅದರ ಯಾವುದೇ ಸಮಿತಿಯ ಸದಸ್ಯರಿಗೆ ಮತ್ತು ತಾಲೂಕದಲ್ಲಿ ವಾಸವಾಗಿದ್ದ ಜಿಲ್ಲಾ ಅಭಿವೃದ್ಧಿ ಮಂಡಳದ ಸದಸ್ಯರಿಗೆ ದೈನಿಕ ಭತ್ತೆ ಮತ್ತು ಪ್ರವಾಸ ಭತ್ತೆಗಳನ್ನು ಕೊಡುವುದಕ್ಕೆ ವಿನಿಯೋಗಿಸಲ್ಪಡತಕ್ಕದ್ದು.

(ಬ) ಅದರ ಅಧಿಕಾರಿಗಳ ಮತ್ತು ಸೇವಕರ ಸಂಬಳ, ಭತ್ತೆ, ಪೆನಶನು ಮತ್ತು ಗ್ರಾಚುಟಿಗಳನ್ನು ಕೊಡಲಿಕ್ಕೆ ವಿನಿಯೋಗಿಸಲ್ಪಡತಕ್ಕದ್ದು.

(ಕ) ಬೋರ್ಡದಿಂದ ಕರಾರು ಮಾಡಿಕೊಂಡ ಯಾವುದೇ ಸಾಲಗಳ ಬಗ್ಗೆ ಕೊಡಬೇಕಾದ ಹಣವನ್ನು ಕೊಡಲು ವಿನಿಯೋಗಿಸಲ್ಪಡತಕ್ಕದ್ದು.

(ಡ) ಈ ಸಂಬಂಧದಲ್ಲಿ

(i) ಈ ಕಾಯಿದೆಯನ್ವಯವಾಗಿ ನಡೆಸಬೇಕಾದ ತಾಲೂಕ ಬೋರ್ಡದ ಚುನಾವಣೆಗಳ ವೆಚ್ಚ;

(ii) ಈ ಕಾಯಿದೆಯಲ್ಲಿ ನಿರ್ದಿಷ್ಟಪಡಿಸಲಾದ ವೆಚ್ಚ ಮತ್ತು

(iii) ಈ ಕಾಯಿದೆಯನ್ವಯವಾಗಿ ಇಲ್ಲವೆ ಈ ಕಾಯಿದೆಯಿಂದ ಇಲ್ಲವೆ ಅದರನ್ವಯವಾಗಿ ಮಾಡಲಾದ ನಿಯಮಗಳ ಇಲ್ಲವೆ ಕ್ರಮನಿಯಮಗಳನ್ವಯವಾಗಿ ಇಲ್ಲವೆ ಆ ಕಾಲಕ್ಕೆ ಜಾರಿಯಲ್ಲಿರುವ ಬೇರೆ ಯಾವುದೇ ಕಾಯಿದೆಯನ್ವಯವಾಗಿ ತಾಲೂಕ ಬೋರ್ಡಿಗೆ ದಯಪಾಲಿಸಲಾದ ಅಧಿಕಾರದ ಇಲ್ಲವೆ ಹಾಕಲಾದ ಕರ್ತವ್ಯಗಳ ಎಲ್ಲ ಉದ್ದೇಶಗಳಿಗಾಗಿರುವ ವೆಚ್ಚ; ಮತ್ತು

(iv) ಸಾರ್ವಜನಿಕ ಹಿತದ ಸಲುವಾಗಿ ಇಂತಹ ಆಸ್ತಿಯ ಇಲ್ಲವೆ ನಿಧಿಯ ವಿನಿಯೋಗವು ಅವಶ್ಯಕವೆಂದು ಕಂಡುಬಂದ ಉದ್ದೇಶಗಳಿಗಾಗಿ ಸರಕಾರದ ಪೂರ್ವ ಸಮ್ಮತಿಯಿಂದ ಮಾಡಬೇಕಾದ ವೆಚ್ಚ ಕೊಡಲು ವಿನಿಯೋಗಿಸಲ್ಪಡತಕ್ಕದ್ದು.

ಆದರೆ, ಸರಕಾರದಿಂದ ಇಲ್ಲವೆ ಯಾವುದೇ ವ್ಯಕ್ತಿಯಿಂದ ಇಲ್ಲವೆ ಯಾವುದೇ ಸ್ಥಾನಿಕ ಅಧಿಕಾರದಿಂದ ಯಾವುದೇ ನಿರ್ದಿಷ್ಟ ಕಾಮಗಿರಿ ಇಲ್ಲವೆ ಉದ್ದೇಶಕ್ಕಾಗಿ ತಾಲೂಕ ಬೋರ್ಡಿಗೆ ಕೊಡಲ್ಪಟ್ಟ ಯಾವುದೇ ನಿಧಿಯು ಅಂತಹ ಕಾಮಗಿರಿ ಇಲ್ಲವೆ ಉದ್ದೇಶಕ್ಕಾಗಿ ಪ್ರತ್ಯೇಕವಾಗಿ ಈ ಸಂಬಂಧವಾಗಿ ಸರಕಾರವು ಸಾಧಾರಣವಾಗಿ ಇಲ್ಲವೆ ನಿರ್ದಿಷ್ಟವಾಗಿ ಹಾಕಿಕೊಡಬಹುದಾದ ಆದೇಶಗಳ ಅನುಸಾರವಾಗಿ ವಿನಿಯೋಗಿಸಲ್ಪಡತಕ್ಕದ್ದು.

(೨) ಈ ಕಾಯಿದೆಯು ಪ್ರಾರಂಭವಾಗುವುದಕ್ಕಿಂತ ಮುಂಚೆ ಜಿಲ್ಲೆಯ ಡಿಸ್ಟ್ರಿಕ್ಟ ಬೋರ್ಡು ತನ್ನ ನಿಧಿಯೊಳಗಿಂದ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳಿಗಾಗಿ ಇಲ್ಲವೆ ಅವುಗಳನ್ನು ಸುಸ್ಥಿಯಲ್ಲಿಡುವುದರ ಸಲುವಾಗಿ ಯಾವುದೇ ವೆಚ್ಚವನ್ನು ಮಾಡುತ್ತಿದ್ದರೆ, ಅಂತಹ ಜಿಲ್ಲೆಯ ತಾಲೂಕ ಬೋರ್ಡುಗಳು ಸ್ಕೂಲ ಬೋರ್ಡಿಗೆ ಇಲ್ಲವೆ ಇಂತಹ ಶಾಲೆಗಳನ್ನು ಸಂಚಾಲನ ಮಾಡುವುದರ ಸಲುವಾಗಿ ರೂಪಿಸಲಾದ ಬೇರೆ ಅಧಿಕಾರಕ್ಕೆ ಸರಕಾರವು ಕಾಲಕಾಲಕ್ಕೆ ಗೊತ್ತುಮಾಡಬಹುದಾದಂತಹ ರಕಮನ್ನು ವಾರ್ಷಿಕವಾಗಿ ಕೊಡತಕ್ಕದ್ದು.

**ವಿವೇಚನೆ**

ತಾಲೂಕ ಬೋರ್ಡದ ನಿಧಿಯು ಮತ್ತು ಆಸ್ತಿಯು ಹೇಗೆ ವಿನಿಯೋಗಿಸಲ್ಪಡಬೇಕು ಎಂಬುದನ್ನು ಇಲ್ಲಿ ಹೇಳಲಾಗಿದೆ. ತಾಲೂಕ ಬೋರ್ಡದ ಅಧ್ಯಕ್ಷನ ಗೌರವಧನ, ಇತರ ಸದ್ಯಸರ ಹಾಗೂ ಅಧ್ಯಕ್ಷನ ದೈನಿಕಭತ್ತೆ-ಪ್ರವಾಸಭತ್ತೆ

ಕೊಡುವುದಕ್ಕೆ ಉಪಯೋಗಿಸತಕ್ಕದ್ದು. ಇವರು ಸಾರ್ವಜನಿಕ ಸೇವೆ ಮಾಡುವವರಾದ್ದರಿಂದ ಅವರು ಕೈಯಿಂದ ವೆಚ್ಚಮಾಡಿಕೊಂಡು ಸೇವೆ ಸಲ್ಲಿಸುವ ಕಾರಣವಿಲ್ಲ. ಆ ತಾಲೂಕದಲ್ಲಿ ವಾಸವಾಗಿರುವ ಜಿಲ್ಲಾ ಅಭಿವೃದ್ಧಿ ಮಂಡಳದ ಸದಸ್ಯರಿಗೂ ಈ ಭತ್ತೆ ಕೊಡಬೇಕಾಗುವುದು. ತಾಲೂಕ ಬೋರ್ಡದ ಅಧಿಕಾರಿಗಳ ಮತ್ತು ಸೇವಕರ ಸಂಭಳ-ಭತ್ತೆಗಳು, ಬೋರ್ಡ ಮಾಡಿದ ಸಾಲ ಮರಳಿಸುವ ಹಣ ಇವು ಈ ನಿಧಿಯಿಂದಲೇ ಕೊಡಲ್ಪಡತಕ್ಕದ್ದು.

ತಾಲೂಕ ಬೋರ್ಡದ ಚುನಾವಣೆಯ ವೆಚ್ಚ; ಅಲ್ಲಿದೆ ಈ ಕಾಯಿದೆಯು ನ್ವಯವಾಗಿ ಮಾಡಬೇಕಾದ ಕರ್ತವ್ಯಗಳ ವೆಚ್ಚ, ಸರಕಾರದ ಸಮ್ಮತಿಯಿಂದ ಸಾರ್ವಜನಿಕ ಹಿತದ ಸಲುವಾಗಿ ಮಾಡಬೇಕಾದ ವೆಚ್ಚ. ಇವು ಈ ನಿಧಿಯಿಂದ ಕೊಡಲ್ಪಡತಕ್ಕದ್ದು. ಸರಕಾರವಾಗಲೀ ಸಾರ್ವಜನಿಕರಾಗಲೀ ಯಾವುದೊಂದು ವಿಶಿಷ್ಟ ಉದ್ದೇಶಕ್ಕಾಗಿ ಧನ ಕೊಟ್ಟಿದ್ದರೆ, ಆ ಉದ್ದೇಶಕ್ಕಾಗಿಯೇ ಅದನ್ನು ಉಪಯೋಗಿಸತಕ್ಕದ್ದು

ಈ ಕಾಯಿದೆಯು ಪ್ರಾರಂಭವಾಗುವುದಕ್ಕಿಂತ ಮುಂಚೆ ಜಿಲ್ಲೆಯಲ್ಲಿಯ ಡಿಸ್ಟ್ರಿಕ್ಟಬೋರ್ಡು ತನ್ನ ನಿಧಿಯಿಂದ ಕೊಡುತ್ತಿದ್ದ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳಿಗೆ ಧನಸಹಾಯ ಮಾಡಬೇಕು.

ಅಂದರೆ ಹಣದ ಯಾವ ವಿನಿಯೋಗವು ಕಾಯಿದೆ ಸಮ್ಮತವು ಎಂಬ ಪ್ರಶ್ನೆ ಬಂದರೆ ಈ ಕಲಮಿನ ಚೌಕಟ್ಟಿನಲ್ಲಿ ಬಂದರೆ ಅದು ಕಾಯಿದೆ ಸಮ್ಮತವು ಎಂದು ಅರ್ಥವಾಗುವುದು. ಸಾರ್ವಜನಿಕ ನಿಧಿಯು ಸದುದ್ದೇಶಕ್ಕಾಗಿ ಕಾಯಿದೆಬದ್ಧ ಉದ್ದೇಶಕ್ಕಾಗಿ ಮಾತ್ರ ವಿನಿಯೋಗವಾಗಬೇಕು ಎಂಬುದಕ್ಕೆ ಈ ಮಾತುಗಳನ್ನು ಹೇಳಲಾಗಿದೆ.

### ೧೬೭. ಬಾಡಿಗೆಗಳು ಮತ್ತು ಫೀ

ಈ ಕಾಯಿದೆಯಲ್ಲಿ ಬೇರೆಯಾಗಿ ಅನುಕೂಲಿಸಲಾದುದನ್ನು ಬಿಟ್ಟು ಮತ್ತು ಈ ಸಂಬಂಧದಲ್ಲಿ ಮಾಡಲಾದ ಕ್ರಮ ನಿಯಮಗಳ ಅಂಕಿತವಾಗಿ ತಾಲೂಕ ಬೋರ್ಡು ಈ ಕಾಯಿದೆಯನ್ವಯವಾಗಿ ಕೊಡಲಾದ ಯಾವುದೇ ಲಾಯಸೆನ್ಸಿಗೆ ಇಲ್ಲವೆ ಪರವಾನಿಗೆಗೆ ಫೀಯನ್ನು ಹಾಕಬಹುದು. ಮತ್ತು ತಾಲೂಕ ಬೋರ್ಡದ ನಿಯಂತ್ರಣದಲ್ಲಿದ್ದ ಇಲ್ಲವೆ ಅದರ ಅಂತರ್ಗತವಾಗಿದ್ದ ಇಲ್ಲವೆ ತಾಲೂಕ ಬೋರ್ಡ ನಿಧಿಯೊಳಗಿಂದ ಪೋಷಿತವಾದ ಯಾವುದೇ ಭೂಮಿ ಇಲ್ಲವೆ ಇತರ ಆಸ್ತಿಯ ಉಪಯೋಗಕ್ಕಾಗಿ ಇಲ್ಲವೆ ಸ್ವಾಧೀನದಲ್ಲಿಟ್ಟುಕೊಳ್ಳುವುದಕ್ಕಾಗಿ ಬಾಡಿಗೆಗಳನ್ನು ಮತ್ತು ಫೀಗಳನ್ನು ಹಾಕಬಹುದು.

### ವಿವೇಚನೆ

ಈ ಕಾಯಿದೆಯಲ್ಲಿ ಬೇರೆ ಕಡೆಗೆ ಬಾಡಿಗೆ ಮತ್ತು ಫೀ ಹಾಕುವ ಬಗ್ಗೆ ಹೇಳಿದ್ದನ್ನು ಬಿಟ್ಟು, ಈ ಕಲಮು ಅಧಿಕಾರ ಕೊಡುತ್ತಿದೆ. ಇದು ಸಾಮಾನ್ಯವಾದ

ಅಧಿಕಾರ. ಬೋರ್ಡಿನ ಅಧೀನದಲ್ಲಿರುವ ಆಸ್ತಿಯ ಉಪಯೋಗದ ಮೇಲೆ ಬಾಡಿಗೆ ಇಲ್ಲವೆ ಫೀ ವಸೂಲ ಮಾಡಲು ಇದು ಅಧಿಕಾರ ಕೊಡುತ್ತದೆ. ಅದರಂತೆ ಕೊಡಲಾದ ಲಾಯಸೆನ್ಸ ಮತ್ತು ಪರವಾನಗಿಗಾಗಿ ಫೀ ವಸೂಲ ಮಾಡಲು ಅಧಿಕಾರ ಕೊಡುತ್ತದೆ.

## ೧೬೮. ವಸೂಲಿಯ ವ್ಯವಸ್ಥೆ

ಸರಕಾರದ ಸಮ್ಮತಿಯಿಂದ ಈ ಸಂಬಂಧದಲ್ಲಿ ತಾಲೂಕ ಬೋರ್ಡು ನೇಮಕ ಮಾಡುವಂತಹ ಸಿಬ್ಬಂದಿಯಿಂದ ತಾಲೂಕ ಬೋರ್ಡದ ಎಲ್ಲ ಆದಾಯದ ವಿಷಯ ಗಳ ವಸೂಲು ಮಾಡಲ್ಪಡತಕ್ಕದ್ದು, ಆದರೆ ಗೊತ್ತು ಮಾಡಲ್ಪಟ್ಟ ನಿಯಮಗಳ ಅಂಕಿತವಾಗಿ ಈ ಕಾಯಿದೆಯನ್ವಯವಾಗಿ ಹಾಕಬಹುದಾದ ಯಾವುದೇ ಫೀಯ ವಸೂಲಿ ಹಕ್ಕನ್ನು ಸಾರ್ವಜನಿಕ ಲಿಲಾವಿನಿಂದ ಬಾಡಿಗೆ ಕೊಡಲು ತಾಲೂಕ ಬೋರ್ಡಿಗೆ ಕಾಯಿದೇಶೀರ ಅಧಿಕಾರ ಇರತಕ್ಕದ್ದು. ಮತ್ತು ಹೀಗೆ ಕೊಡಲಾದ ಬಾಡಿಗೆಯ ಹಣದ ಬಾಬತ್ತು ಬಾಕಿಯಾಗುವ ಹಣವು ಈ ಪ್ರಕರಣದಲ್ಲಿ ಗೊತ್ತು ಮಾಡಿದ ರೀತಿಯಲ್ಲಿ ವಸೂಲು ಮಾಡಲ್ಪಡತಕ್ಕದ್ದು.

## ವಿವೇಚನೆ

ತಾಲೂಕ ಬೋರ್ಡು ತಾನು ಹಾಕಿದ ಫೀ ಮುಂತಾದ್ದನ್ನು ವಸೂಲ ಮಾಡಿ ಸಲು ಸರಕಾರದ ಪರವಾನಗಿಯಿಂದ ಸಿಬ್ಬಂದಿಯನ್ನು ನೇಮಕ ಮಾಡಿಕೊಳ್ಳ ಬಹುದು. ಆದರೆ ಒಂದು ವೇಳೆ ಈ ವಸೂಲಿ ಅಧಿಕಾರವನ್ನು ಬಾಡಿಗೆ (ಲಾವಣಿ) ಕೊಡಬೇಕೆಂದು ಮನಸಾದರೆ ತಾಲೂಕ ಬೋರ್ಡು ನಿಯಮಗಳಿಗೆ ಅಂಕಿತವಾಗಿ ಸಾರ್ವಜನಿಕ ಲಿಲಾವು ಮಾಡಿ ಆ ಅಧಿಕಾರವನ್ನು ಲಾವಣಿ ಕೊಡಬಹುದು. ಆ ಲಾವಣಿ ಹಣವನ್ನು ಈ ಪ್ರಕರಣದಲ್ಲಿ ಹೇಳಿದ ರೀತಿಯಲ್ಲಿ ವಸೂಲ ಮಾಡ ತಕ್ಕದ್ದು.

## ೧೬೯. ಫೀ ಕೊಡದೆ ಇದ್ದವರನ್ನು ಹೊರಗೆ ಹಾಕುವ ಅಧಿಕಾರ

ಕಲಮು ೧೬೭ ರನ್ವಯವಾಗಿ ಇಲ್ಲವೆ ಬೇರೆ ಯಾವುದೇ ಶರತುಗಳನ್ವಯ ವಾಗಿ ಯಾವುದೇ ಫೀ ಹಾಕಲ್ಪಟ್ಟಾಗ, ಇಲ್ಲವೆ ಕಲಮು ೧೬೮ ರನ್ವಯವಾಗಿ ವಸೂಲಿಯ ಅಧಿಕಾರವು ಲಾವಣಿ ಕೊಡಲ್ಪಟ್ಟಾಗ ತಾಲೂಕ ಬೋರ್ಡದಿಂದ ನೇಮಕವಾದ ಇಲ್ಲವೆ ಲಾವಣಿದಾರನಿಂದ ನೇಮಕವಾದ ಯಾವುದೇ ವ್ಯಕ್ತಿಯು ಲಾವಣಿ ಕರಾರುಗಳ ಅಂಕಿತವಾಗಿ ಫೀ ವಸೂಲಿ ಮಾಡಬಹುದು ಇಲ್ಲವೆ ಯಾವ ಸ್ಥಳದ ಉಪಯೋಗದ ಬಗ್ಗೆ ಫೀ ಆಕರಣೆ ಮಾಡಲ್ಪಟ್ಟಿರುವುದೋ ಅಂತಹ ಸ್ಥಳದಿಂದ ಯಾವುದೇ ಫೀಯನ್ನು ಕೊಡಲು ಪಾತ್ರವಾಗಿದ್ದ ಆದರೆ ನಿರಾಕರಿದ ವ್ಯಕ್ತಿಯನ್ನು ಹೊರಗೆ ಹಾಕಬಹುದು.

**ವಿವೇಚನೆ**

ಯಾವ ಸ್ಥಳದ ಉಪಯೋಗಕ್ಕಾಗಿ ಫೀ ಕೊಡಬೇಕಾಗಿದೆಯೋ ಆ ಫೀ ಕೊಡಲು ಪಾತ್ರನಾಗಿದ್ದ ವ್ಯಕ್ತಿಯು ಫೀ ಕೊಡಲು ನಿರಾಕರಿಸಿದರೆ, ಅವನನ್ನು ಆ ಸ್ಥಳದಿಂದ ಹೊರಗೆ ಹಾಕಲು ಅಧಿಕಾರವಿದೆ. ಈ ಅಧಿಕಾರವು ಬೋರ್ಡಿಗೆ ಇದೆ. ಬೋರ್ಡಿನ ಅಧಿಕಾರದ ಮೂಲಕ ನೇಮಕವಾದ ವ್ಯಕ್ತಿಗೂ ಲಾವಣಿ ಕರಾರಿನ ಮೂಲಕ ಬೋರ್ಡದಿಂದ ಈ ಅಧಿಕಾರವು ಲಾವಣಿದಾರನಿಗೆ ಬಂದು ಅವ ನಿಂದ ನೇಮಕವಾದ ವ್ಯಕ್ತಿಗೂ ಬರುವುದು. ಆದರೆ ಈ ವ್ಯಕ್ತಿಯು ಲಾವಣಿ ಕರಾರಿನ ಅಂಕಿತವಾಗಿ ಕೆಲಸಮಾಡತಕ್ಕದ್ದು.

**೧೭೦. ತಾಲೂಕ ಬೋರ್ಡು ಸಾಲ ಎತ್ತಬಹುದು ಮತ್ತು ಋಣ ಪರಿಹಾರ ನಿಧಿಯನ್ನು ನಿರ್ಮಿಸಬಹುದು.**

ಯಾವುದೇ ಕಾಮಗಿರಿಯನ್ನು ಮಾಡುವುದರ ಸಲುವಾಗಿ ಇಲ್ಲವೆ ಕಾಯಿದೆಯ ಯಾವುದೇ ಶರತುಗಳನ್ನು ಕಾರ್ಯಕಾರಿ ಮಾಡುವುದರ ಉದ್ದೇಶದಿಂದ ತಾಲೂಕ ಬೋರ್ಡು ಸರಕಾರದ ಪೂರ್ವ ಸಮ್ಮತಿಯಿಂದ ಮತ್ತು ಕಾಲಕಾಲಕ್ಕೆ ಅದು ಹಾಕುವ ಕರಾರುಗಳಿಗೆ ಅಂಕಿತವಾಗಿ ಸಾಲಗಳನ್ನು ಎತ್ತಬಹುದು. ಮತ್ತು ಇಂತಹ ಸಾಲಗಳನ್ನು ಮರಳಿ ಕೊಡುವುದಕ್ಕಾಗಿ ಋಣ ಪರಿಹಾರ ನಿಧಿಯನ್ನು ನಿರ್ಮಿಸಬಹುದು.

**ವಿವೇಚನೆ**

ತಾಲೂಕ ಬೋರ್ಡು ಸಾಲ ಎತ್ತಬಹುದು; ಆದರೆ ಅದಕ್ಕೆ ಸರಕಾರದ ಪರವಾನಗಿ ಬೇಕು. ಸರಕಾರವು ಕಾಲಕಾಲಕ್ಕೆ ಕರಾರು ಹಾಕಬಹುದು. ಈ ಕರಾರುಗಳ ಅಂಕಿತವಾಗಿ ಸಾಲ ಎತ್ತಬೇಕು. ಈ ಸಾಲವು ತಾಲೂಕ ಬೋರ್ಡದ ಕೆಲಸಗಳಿಗಾಗಿ ಈ ಕಾಯಿದೆಯ ಉದ್ದೇಶಗಳನ್ನು ಕಾರ್ಯಕಾರಿ ಮಾಡುವುದಕ್ಕಾಗಿ. ಈ ಸಾಲವನ್ನು ತೀರಿಸಲು ವ್ಯವಸ್ಥೆಯೆಂದು ಕ್ರಮಕ್ರಮವಾಗಿ ಬೇರೆಯಾಗಿ ಹಣ ತೆಗೆದಿಡಲು ಒಂದು ಋಣ ಪರಿಹಾರ ನಿಧಿಯನ್ನು ನಿರ್ಮಿಸಬಹುದು. ಇದರಿಂದ ಸಾಲವು ಭಾರನ್ನಿಸದೆ ಭಾರವು ಕ್ರಮೇಣ ಇಳಿಯುತ್ತ ಹೋಗುತ್ತದೆ.

**೧೭೧. ಸಹಾಯ ಧನ ಕೊಡುವ ಅಧಿಕಾರ**

ತನ್ನ ಅಧಿಕಾರದ ಒಳಗೆ ಇಲ್ಲವೆ ಹೊರಗೆ ಇರುವ, ಅದು ಖಾಸಗಿ ಇಲ್ಲವೆ ಸಾರ್ವಜನಿಕ ಸಂಚಾಲನದಲ್ಲಿರಲಿ, ಅಂತಹ ಯಾವುದೇ ವೈದ್ಯಕೀಯ ಶೈಕ್ಷಣಿಕ, ಇಲ್ಲವೆ ಧರ್ಮಾರ್ಥ ಸಂಸ್ಥೆಗೆ, ಇಲ್ಲವೆ ಬೇರೆ ಯಾವುದೇ ಸಾರ್ವಜನಿಕ ಉಪಯುಕ್ತತೆ ಯುಳ್ಳ ಸಂಸ್ಥೆಗೆ, ತಾಲೂಕ ಬೋರ್ಡು ಕಮಿಶನರರ ಪೂರ್ವ ಸಮ್ಮತಿಯಂಕಿತವಾಗಿ ಸಹಾಯಧನವನ್ನು ಕೊಡಬಹುದು.

**ವಿವೇಚನೆ**

ತಾಲೂಕ ಬೋರ್ಡು ಸಹಾಯ ಧನವನ್ನು ಕೊಡಬಹುದು. ಯಾರಿಗೆ? ಸಾರ್ವಜನಿಕ ಉಪಯುಕ್ತತೆಯುಳ್ಳ ಸಂಸ್ಥೆಗಳಿಗೆ; ಅವು ತಾಲೂಕದ ಒಳಗೆ ಇರಲಿ, ಹೊರಗೆ ಇರಲಿ, ಅವುಗಳು ಖಾಸಗಿಯಾಗಿ ಸಂಚಾಲಿತವಾಗಿರಲಿ,ಸಾರ್ವಜನಿಕವಾಗಿ ಸಂಚಾಲಿತವಾಗಿರಲಿ, ಅವುಗಳ ಉಪಯೋಗವು ಸಾರ್ವಜನಿಕರಿಗೆ ಆಗತಕ್ಕದ್ದು. ಅಂತಹ ವೈದ್ಯಕೀಯ ಶೈಕ್ಷಣಿಕ, ಇಲ್ಲವೆ ಧರ್ಮಾರ್ಥ ಸಂಸ್ಥೆಗಳಿಗೆ ಸಹಾಯಧನ ಕೊಡಬಹುದು. ಇದನ್ನು ಕೊಡುವಾಗ ಕಮಿಶನರರ ಪೂರ್ವ ಸಮ್ಮತಿಬೇಕು. ಕೊಡುವಾಗ ಅವನು ಹಾಕಿದ ಕರಾರುಗಳಿಗೆ ಅಂಕಿತವಾಗಿ ಕೊಡತಕ್ಕದ್ದು.

**೧೭೨. ವರುಷಗಳ ಕಾಲಾವಧಿಯ ವರೆಗೆ ಇಲ್ಲವೆ ಶಾಶ್ವತವಾಗಿ ಬಂಧನಕಾರಕವಾಗುವಂತೆ ವ್ಯವಸ್ಥೆ**

ತಾಲೂಕ ಬೋರ್ಡದ ನಿಧಿಯಿಂದ ಇಲ್ಲವೆ ಅದರ ಆಸ್ತಿಯಿಂದ ವಾರ್ಷಿಕ ವಾಗಿ ವಂತಿಗೆಯನ್ನು ಯಾವುದೇ ಸಂಸ್ಥೆಗೆ ಕೆಲವು ವರುಷಗಳ ಕಾಲಾವಧಿಯ ವರೆಗೆ ಇಲ್ಲವೆ ಅನಿಯಮಿತ ಕಾಲಾವಧಿಯ ವರೆಗೆ ಕೊಡುವುದೆಂದು ಬಂಧನಕಾರಕ ವಾಗಿರುವಂತೆ ಯಾವುದೇ ವಚನಕೊಟ್ಟಿದ್ದರೆ ಇಲ್ಲವೆ ಯಾವುದೇ ವ್ಯವಸ್ಥೆಗೆ ಒಳಪಟ್ಟಿದ್ದರೆ, ತಾಲೂಕ ಬೋರ್ಡು ಸರಕಾರದ ಪೂರ್ವ ಸಮ್ಮತಿಯಿಂದ, ಇಂತಹ ವ್ಯವಸ್ಥೆಯನ್ನು ರದ್ದುಗೊಳಿಸಲು, ಇಲ್ಲವೆ ವಚನವನ್ನು ರದ್ದುಗೊಳಿಸಲು ಇಲ್ಲವೆ ಇಂತಹ ವಂತಿಗೆಯನ್ನು ನಿಲ್ಲಿಸಲು ಇಲ್ಲವೆ ಕಡಿಮೆ ಮಾಡಲು ತಾಲೂಕ ಬೋರ್ಡಿಗೆ ಕಾಯಿದೇಶೀರ ಅಧಿಕಾರ ಇರತಕ್ಕದ್ದು. ಆದರೆ ಅಂತಹ ಸಂಸ್ಥೆಯ ಸಂಚಾಲಕ ಇಲ್ಲವೆ ಸಂಚಾಕರಿಗೆ ತಾನು ಹಾಗೆ ಮಾಡುವ ಉದ್ದೇಶವಿದೆಯೆಂಬದ ಬಗ್ಗೆ ಕನಿಷ್ಠ ಒಂದು ವರುಷದ ನೋಟೀಸು ಕೊಡಲ್ಪಟ್ಟಿರಬೇಕು.

**ವಿವೇಚನೆ**

ಯಾವುದೇ ಸಂಸ್ಥೆಗೆ ಸಹಾಯಧನ ಇಲ್ಲವೆ ವಂತಿಗೆಯನ್ನು ಕೊಡುವುದಾಗಿ ವಚನವನ್ನು ತಾಲೂಕ ಬೋರ್ಡ ಕೊಟ್ಟಿರಬೇಕು. ಅದು ನಿಶ್ಚಿತಕಾಲಾವಧಿಯ ವರೆಗೆ ಇಲ್ಲವೆ ಅನಿಯಮಿತ ಕಾಲಾವಧಿಯ ವರೆಗೆ ಬಂಧನಕಾರಕವಾಗುವಂತೆ ಇರ ಬೇಕು. ಆ ವ್ಯವಸ್ಥೆಯಲ್ಲಿ ಇಲ್ಲವೆ ವಚನದಲ್ಲಿ ಬದಲಾವಣೆ ಮಾಡಬೇಕೆಂದು ತಾಲೂಕ ಬೋರ್ಡಿಗೆ ಅನ್ನಿಸಿರಬೇಕು. ಆಗ ಸರಕಾರದ ಪೂರ್ವಸಮ್ಮತಿ ಪಡೆದು, ಆ ವ್ಯವಸ್ಥೆಯನ್ನು ರದ್ದುಮಾಡಬಹುದು, ವಚನ ಹಿಂದೆ ತೆಗೆದುಕೊಳ್ಳಬಹುದು, ವಂತಿಗೆ ಕೊಡುವುದನ್ನು ನಿಲ್ಲಿಸಬಹುದು ಇಲ್ಲವೆ ಕಡಿಮೆ ಮಾಡಬಹುದು. ಆದರೆ ಈ ಬಗೆಯಾಗಿ ಮಾಡುವುದಿದೆಯೆಂಬ ಬಗ್ಗೆ ಸಂಬಂಧಪಟ್ಟ ಸಂಸ್ಥೆಯ ಸಂಚಾಲಕ ರಿಗೆ ಕನಿಷ್ಟ ಒಂದು ವರುಷದ ನೋಟೀಸು ಕೊಡಲ್ಪಡಬೇಕು. ಅಂದರೆ ಆ ಸಂಸ್ಥೆ ಯವರು ತಮ್ಮ ಬೇರೆ ವ್ಯವಸ್ಥೆ ಮಾಡಿಕೊಳ್ಳಲು ಆಸ್ಪದ ಉಂಟಾಗುವುದು.

## ೧೭೩. ಮುಂಗಡ ಪತ್ರದಲ್ಲಿ ಕಾಣಿಸಿಲಾಗದೆ ಇದ್ದ ವೆಚ್ಚಕ್ಕೆ ನಿರ್ಬಂಧ

ಈ ಮುಂದೆ ಅನುಕೂಲಿಸಲಾದುದನ್ನು ಹೊರತು ಪಡಿಸಿ ಈ ಕೆಳಗೆ ಹೇಳಿದ ಸಂದರ್ಭಗಳನ್ನು ಬಿಟ್ಟು, ಆ ವೆಚ್ಚವು ಮುಂಗಡ ಪತ್ರದಲ್ಲಿ ದಯಪಾಲಿಸಿದ ಧನದಲ್ಲಿ ಸಮಾವೇಶವಾಗಿದ್ದ ಹೊರತು, ತಾಲೂಕ ಬೋರ್ಡದ ನಿಧಿಯೊಳಗಿಂದ ಯಾವುದೇ ರಕಮು ಯಾವುದಕ್ಕಾದರೂ ಹಣಕೊಡಲು ಉಪಯೋಗಿಸತಕ್ಕದ್ದಲ್ಲ.

ಅವು ಯಾವುವೆಂದರೆ—

(ಅ) ಈ ಕಾಯಿದೆಯನ್ವಯವಾಗಿ ಇಲ್ಲವೆ ಅದರನ್ವಯವಾಗಿ ಮಾಡಲಾದ ನಿಯಮಗಳ ಇಲ್ಲವೆ ಕ್ರಮ ನಿಯಮಗಳ ಅನ್ವಯವಾಗಿ ತಾಲೂಕ ಬೋರ್ಡು ತಿರುಗಿ ಕೊಡಲು ಅಧಿಕರಿಸಲ್ಪಟ್ಟ ಕರಗಳ ರಿಫಂಡ ಹಣ ಮತ್ತು ಇತರ ರಕಮುಗಳು;

(ಬ) ಠೇವಾಗಿ ಇಟ್ಟುಕೊಳ್ಳಲ್ಪಟ್ಟ ಕಂತ್ರಾಟದಾರನ ಇಲ್ಲವೆ ಇತರ ವ್ಯಕ್ತಿಗಳ ಒಡೆತನವಿದ್ದ ಹಣವನ್ನು ಮತ್ತು ಕೈತಪ್ಪಿನಿಂದ ತಾಲೂಕ ಬೋರ್ಡದ ನಿಧಿಗೆ ಜಮೆ ಮಾಡಿದ ಹಣವನ್ನು ತಿರುಗಿ ಕೊಡುವುದಕ್ಕಾಗಿರುವ ರಕಮುಗಳು;

(ಕ) ಈ ಕಾಯಿದೆಯು ಹೇಳಿದ ಇಲ್ಲವೆ ಅಧಿಕಾರ ಕೊಟ್ಟ ತಾಲೂಕ ಬೋರ್ಡಿನಿಂದ ಲುಕಸಾನ ಭರಪಾಯಿ ತರೀಖ ಕೊಡಬೇಕಾದ ರಕಮುಗಳು;

(ಡ) ಪ್ರತಿಯೊಂದು ರಕಮು

(i) ಈ ಕಾಯಿದೆಯನ್ವಯವಾಗಿ ಡೆಪ್ಯೂಟಿ ಕಮಿಶನರನ ಇಲ್ಲವೆ ಕಮಿಶನರನ ಇಲ್ಲವೆ ಸರಕಾರದ ಆಜ್ಞೆಯಿಂದ,

(ii) ದಿವಾಣಿ ನ್ಯಾಯಾಲಯದ ಹುಕುಂನಾಮೆಯ ಇಲ್ಲವೆ ಹುಕುಮಿನ ಅನ್ವಯವಾಗಿ; ಮತ್ತು

(iii) ಯಾವುದೇ ದಾವೆಯ ಇಲ್ಲವೆ ಇತರ ಕಾಯಿದೇಶೀರ ಪ್ರಕರಣಗಳ ಇಲ್ಲವೆ ಮಾಗಣಿಯ ರಾಜೀ ಕರಾರಿನನ್ವಯವಾಗಿ

ಕೊಡಬೇಕಾದುದು;

(ಇ) ತಾಲೂಕ ಬೋರ್ಡದ ಪರವಾಗಿ ಇಲ್ಲವೆ ಬೇರೆ ಯಾವುದೇ ಸ್ಥಾನಿಕ ಅಧಿಕಾರ ಇಲ್ಲದ ಅಧಿಕಾರಗಳ ಪರವಾಗಿ ಸರಕಾರದಿಂದ ಸಂಚಾಲಿತವಾದ ನೀರಿನ ಪೂರೈಕೆ, ದವಾಖಾನೆಗಳು, ಮತ್ತು ಇತರ ಸಂಸ್ಥೆಗಳು ಇಲ್ಲವೆ ಸೇವೆಗಳು ಇವುಗಳನ್ನು ಸುಸ್ಥಿತಿಯಲ್ಲಿಡುವುದಕ್ಕೆ ತಾಲೂಕ ಬೋರ್ಡದಿಂದ ಸರಕಾರಕ್ಕೆ ಕೊಡಬೇಕಾದ ಎಲ್ಲ ವಂತಿಗೆಗಳು.

**ವಿವೇಚನೆ**

ತಾಲೂಕ ಬೋರ್ಡಿನ ವೆಚ್ಚವು ಮುಂಗಡ ಪತ್ರದಲ್ಲಿ ಕಾಣಿಸಿರಬೇಕು. ಅಂದರೆ ಸುಯೋಜಿತವಾಗಿ ವ್ಯವಸ್ಥೆ ನಡೆಯಬೇಕಾದರೆ ಮುಂದಿನ ವರುಷದಲ್ಲಿ ಯಾವ ಬಗೆಯಾಗಿ ವೆಚ್ಚ ಮಾಡಬೇಕು, ಯಾವ ವಿಷಯಗಳ ಬಗ್ಗೆ ಎಷ್ಟು ಮಾಡಬೇಕು ಎಂಬುದನ್ನು ತಿಳಿಸುವ ಮುಂಗಡ ಪತ್ರ ಇರತಕ್ಕದ್ದು. ಅದರಲ್ಲಿ ಕಾಣಿಸದೇ ಇದ್ದ ವೆಚ್ಚವನ್ನು ಮಾಡಕೂಡದೆಂದು ನಿರ್ಬಂಧವನ್ನು ಹಾಕುವುದು ಈ ಕಲಮು. ಆದರೆ ಆ ನಿರ್ಬಂಧಕ್ಕೆ ಅಪವಾದಗಳು ಇವೆ. ಅವುಗಳನ್ನು ಇಲ್ಲಿ ಹೇಳಲಾಗಿದೆ. ಕರಗಳ ರಿಫಂಡು, ಠೇವನ್ನು ತಿರುಗಿ ಕೊಡುವುದು ಡಿಕ್ರಿ, ರಾಜಿ ಮುಂತಾದ ನ್ಯಾಯಾಲಯದ ಹುಕುಮಿನ ಮೂಲಕ ಕೊಡಬೇಕಾಗಿ ಬಂದ ಹಣಗಳು; ಇಲ್ಲವೆ ಸರಕಾರಕ್ಕೆ ಅದು ಬೋರ್ಡಿಗೆ ಉಪಯುಕ್ತವಾದ ಸಂಸ್ಥೆಗಳನ್ನು ಪಾಲಿಸಿದ್ದಕ್ಕಾಗಿ ಕೊಡಬೇಕಾದ ಹಣ. ಅಂದರೆ ಈ ಹಣವು ನ್ಯಾಯವಾದ ರೀತಿಯಲ್ಲಿಯೆ ವೆಚ್ಚವಾಗುವುದೆಂಬುದಕ್ಕೆ ಹೆಚ್ಚಿನ ಭರವಸೆ, ಚರ್ಚೆ ಕಾರಣವಿಲ್ಲ. ಇವುಗಳನ್ನು ಬಿಟ್ಟು ಉಳಿದವು ಪೂರ್ವಯೋಜಿತ ಹಾಗ ಮುಂಗಡ ಪತ್ರದಲ್ಲಿ ಕಾಣಿಸಿದವು ಮಾತ್ರ ಇರತಕ್ಕದ್ದು.

**೧೭೪. ಲೆಕ್ಕಪತ್ರಗಳ ನಿವೇದನೆ**

(೧) ಹಿಂದಿನ ಏಪ್ರಿಲ ಒಂದನೆಯ ದಿನದಿಂದ ಈಚೆಗೆ ತಾಲೂಕ ಬೋರ್ಡಿನ ಆದಾಯ ಮತ್ತು ವೆಚ್ಚಗಳ ಪೂರ್ತಿಯಾದ ಲೆಕ್ಕಗಳನ್ನು ಸ್ಥಾಯಿ ಸಮಿತಿಯು ತಯಾರು ಮಾಡಿಸಿ, ತಾಲೂಕ ಬೋರ್ಡಿನ ಸಾದಾ ಸಭೆಗಳೆದುರು ಮಂಡಿಸುವಂತೆ ಮಾಡಬೇಕು ಮತ್ತು ನವ್ಹಂಬರ ಮೊದಲನೆಯ ದಿನದ ಮತ್ತು ಜನೆವರಿ ಮೊದಲಯ ದಿನಗಳ ನಡುವೆ ಸೇರಿಸಲ್ಪಡುವ ಸಭೆಯಲ್ಲಿ ಮುಂದಿನ ಮಾರ್ಚ ತಿಂಗಳ ಮುವ್ವತ್ತೊಂದಕ್ಕೆ ಮುಕ್ತಾಯವಾಗುವ ಅಧಿಕೃತ ವರ್ಷದ ಬಗ್ಗೆ ವಾಸ್ತವಿಕ ಮತ್ತು ಅಪೇಕ್ಷಿತ ಆದಾಯ ಹಾಗು ವೆಚ್ಚಗಳ ಪೂರ್ತಿ ಲೆಕ್ಕವನ್ನು ಮುಂದಿನ ವರುಷದ ಏಪ್ರಿಲ ಒಂದನೆಯ ದಿನದಿಂದ ಪ್ರಾರಂಭವಾಗುವ ಅಧಿಕೃತ ವರುಷಕ್ಕಾಗಿ ತಾಲೂಕ ಬೋರ್ಡದ ಆಯ ಮತ್ತು ವ್ಯಯದ ಅಂದಾಜುಳ್ಳ ಮುಂಗಡಪತ್ರ ಸಹಿತವಾಗಿ ತಯಾರು ಮಾಡಿಸಿ ಸಾದರಪಡಿಸತಕ್ಕದ್ದು.

(೨) ಆ ನಂತರ ತಾಲೂಕ ಬೋರ್ಡು ಹಣದ ವಿನಿಯೋಗದ ಬಗ್ಗೆ ನಿರ್ಣಯಿಸತಕ್ಕದ್ದು ಮತ್ತು ಮುಂದಿನ ವರುಷದ ಏಪ್ರಿಲ ಒಂದನೆಯ ದಿನಕ್ಕೆ ಪ್ರಾರಂಭವಾಗುವ ವರುಷದ ಮುಂಗಡ ಪತ್ರದಲ್ಲಿಯ ರೀತಿ ಹಾಗೂ ಸಾಧನಗಳ ಬಗ್ಗೆ ನಿರ್ಣಯಿಸತಕ್ಕದ್ದು. ತಾಲೂಕ ಬೋರ್ಡದಿಂದ ಸ್ವೀಕೃತವಾದ ಮುಂಗಡಪತ್ರವು ಸರಕಾರದಿಂದ ನಿಶ್ಚಿತಮಾಡಲ್ಪಡಬಹುದಾದಂತಹ ತಾರೀಖಿನ ಒಳಗೆ ಜಿಲ್ಲಾ ಮಂಡಳಕ್ಕೆ ಒಪ್ಪಿಗೆಗಾಗಿ ಕಳಿಸಲ್ಪಡತಕ್ಕದ್ದು.

ಜಿಲ್ಲಾ ಮಂಡಳಕ್ಕೆ ಮುಟ್ಟಿದ ತಾರೀಖಿನಿಂದ ಎರಡು ತಿಂಗಳ ಒಳಗಾಗಿ ಆ ಮುಂಗಡ ಪತ್ರವು ಮರಳಿ ಬಾರದಿದ್ದರೆ, ಆ ಮುಂಗಡ ಪತ್ರವು ಒಪ್ಪಿತವಾಗಿದೆ ಯೆಂದು ಗಣಿಸಲ್ಪಡತಕ್ಕದ್ದು.

(೩) ಇಂತಹ ಮುಂಗಡಪತ್ರದ ಅಂದಾಜಿನಲ್ಲಿ ತಾಲೂಕು ಬೋರ್ಡು ಇನ್ನಿತರ ಸಂಗತಿಗಳಲ್ಲಿ—

(ಅ) ಈ ಕಾಯಿದೆಯಿಂದ ಇಲ್ಲವೆ ಬೇರೆ ಯಾವುದೇ ಕಾಯಿದೆಯಿಂದ ತಾಲೂಕ ಬೋರ್ಡದ ಮೇಲೆ ಹಾಕಲಾದ ಕರ್ತವ್ಯಗಳನ್ನು ನಿರ್ವಹಿಸುವುದಕ್ಕೆ ಅಗತ್ಯವಾಗಬಹುದಾದಂತಹ ಸೇವೆಗಳಿಗಾಗಿ ತಕ್ಕ ಹಾಗೂ ಯೋಗ್ಯ ಅನುಕೂಲತೆ ಗಳನ್ನು ಮಾಡತಕ್ಕದ್ದು.

(ಬ) ತಾಲೂಕ ಬೋರ್ಡು ಕ್ರರಾರು ಮಾಡಿಕೊಂಡ ಸಾಲಗಳ ಸಂಬಂಧ ವಾಗಿ ಅದು ಹೊಣೆಗಾರವಾಗಿರುವ ಮುದ್ದಲಿನ ಕಂತುಗಳು ಮತ್ತು ಬಡ್ಡಿ ಅವು ಸಂದಾಯ ಯೋಗ್ಯವಾದ ಹಾಗೆ ಕೊಡಲು ಅನುಕೂಲಮಾಡಿಕೊಡತಕ್ಕದ್ದು.

(ಕ) ತಾಲೂಕ ಬೋರ್ಡದ ಪರವಾಗಿ ಇಲ್ಲವೆ ಬೇರೆ ಯಾವುದೇ ಸ್ಥಾನಿಕ ಅಧಿಕಾರ ಇಲ್ಲವೆ ಅಧಿಕಾರಗಳ ಪರವಾಗಿ ಸರಕಾರದಿಂದ ಸಂಚಾಲಿತವಾದ ನೀರಿನ ಪೂರೈಕೆ, ದವಾಖಾನೆಗಳು, ಮತ್ತು ಇತರ ಸಂಸ್ಥೆಗಳು ಇಲ್ಲವೆ ಸೇವೆಗಳು, ಇವು ಗಳನ್ನು ಸುಸ್ಥಿತಿಯಲ್ಲಿಡುವುದಕ್ಕೆ ಸರಕಾರಕ್ಕೆ ಕೊಡಬೇಕಾದ ಎಲ್ಲ ವಂತಿಕೆಗಳು ಮತ್ತು ಸರಕಾರಕ್ಕೆ ಕೊಡಬೇಕಾದ ಎಲ್ಲ ರಕಮುಗಳ ಬಗ್ಗೆ ಅನುಕೂಲ ಮಾಡಿರತಕ್ಕದ್ದು.

(ಡ) ಎಲ್ಲ ತಾಲೂಕ ಬೋರ್ಡುಗಳಿಗಾಗಿ ಸಾಮಾನ್ಯವಾಗಿ ಇಲ್ಲವೆ ವಿಶಿಷ್ಟ ವಾಗಿ ಯಾವುದೇ ತಾಲೂಕ ಬೋರ್ಡಿಗಾಗಿ ಸರಕಾರವು ಕಾಲಕಾಲಕ್ಕೆ ನಿಶ್ಚಿತ ಮಾಡಲ್ಪಡಬಹುದಾದಂತಹ ರಕಮಿಗೆ ಕಡಿಮೆಯಾಗದ ಹಾಗೆ ಆಯಾ ವರುಷದ ಕೊನೆಗೆ ಶಿಲ್ಕು ಉಳಿಯುವ ಹಾಗೆ ಅನುಕೂಲಮಾಡತಕ್ಕದ್ದು.

(೪) ತಾಲೂಕ ಬೋರ್ಡದ ಕರ್ತವ್ಯಗಳನ್ನು ನಿರ್ವಹಿಸುವುದಕ್ಕೆ ತಕ್ಕ ಅನುಕೂಲತೆಗಳನ್ನು ಮಾಡಲು ಮುಂಗಡ ಪತ್ರವು ತಪ್ಪಿದರೆ, ಮತ್ತು ಅದು ಈ ಕಾಯಿದೆಯ ಪ್ರಕಾರ ಬೇರೆ ರೀತಿಯಲ್ಲಿ ಹೊಂದಿಕೆಯಾದದ್ದು ಇರದಿದ್ದರೆ, ಹಾಗೆ ಅನುಕೂಲತೆಗಳು ಉಂಟಾಗುವಂತೆ ಆಶ್ವಾಸನ ಕೊಡಲು ಮತ್ತು ಈ ಕಾಯಿದೆಯ ಪ್ರಕಾರ ಹೊಂದಿಯಾಗುವಂತೆ ಮಾಡಲು, ಮುಂಗಡ ಪತ್ರದ ಯಾವುದೇ ಭಾಗದ ತಿದ್ದಪಡಿಯನ್ನು ಜಿಲ್ಲಾ ಮಂಡಳವು ಮಾಡಬಹುದು.

**ವಿವೇಚನೆ**

ಸ್ಥಾಯಿ ಸಮಿತಿಯ ಹೊಣೆಗಾರಿಕೆಯು ತಾಲೂಕ ಬೋರ್ಡದ ಲೆಕ್ಕಪತ್ರ ಗಳನ್ನು ಮುಂಗಡ ಪತ್ರವನ್ನು ತಯಾರ ಮಾಡಿಸುವುದು. ಕಾಲಕಾಲಕ್ಕೆ ಆಗುವ

ತಾಲೂಕ ಬೋರ್ಡಿನ ಸಾಮಾಸಭೆಗಳಲ್ಲಿ ಲೆಕ್ಕಪತ್ರಗಳು ಮಂಡಿಸಲ್ಪಡಬೇಕು. ನವಂಬರ ೧ ರಿಂದ ಜನವರಿ ೧ ರ ಒಳಗೆ ಕರೆದ ಸಭೆಯಲ್ಲಿ ಆ ವರುಷದ ವಾಸ್ತವಿಕ ಹಾಗು ಅಪೇಕ್ಷಿತ ಆಯವ್ಯಯದ ಬಗ್ಗೆ ಹೇಳಿಕೆ ಮಂಡಿಸಲ್ಪಡಬೇಕು. ಅಲ್ಲದೆ ಮುಂದಿನ ವರುಷದ ಮುಂಗಡ ಪತ್ರವೂ ಮಂಡಿಸಲ್ಪಡಬೇಕು. ಅಧಿಕೃತ ವರುಷ ಎಂದರೆ ಏಪ್ರಿಲ ೧ ರಿಂದ ಮುಂದಿನ ವರುಷದ ಮಾರ್ಚ ೩೧. ಇದು ಭೂಕಂದಾಯದ ವರುಷವೂ ಅಹುದು. ಮುಂಗಡ ಪತ್ರವು ಮುಂದಿನ ಏಪ್ರಿಲಿ ಕ್ಕೆ ಪ್ರಾರಂಭವಾಗುವ ವರುಷದ ಬಗ್ಗೆ ತಯಾರ ಮಾಡಿಸಿದ್ದು ಈ ನವಂಬರ ೧-ಜನವರಿ ೧ ರ ನಡುವೆ ನಡೆಯುವ ಸಭೆಯಲ್ಲಿ ಮಂಡಿಸಲ್ಪಡತಕ್ಕದ್ದು. ಹೀಗೆ ಸಿದ್ಧವಾದ ಮೇಲೆ, ಯಾವ ರೀತಿಯಲ್ಲಿ ಯಾವ ಸಾಧನದಿಂದ ಮುಂಗಡ ಪತ್ರದಲ್ಲಿ ಕಾಣಿಸಿದ್ದನ್ನು ಕಾರ್ಯಕಾರಿಮಾಡಬಹುದು. ಹಣದ ವಿನಿಯೋಗ ಹೇಗೆ ಮಾಡಬಹುದು, ಎಂಬ ಬಗ್ಗೆ ತಾಲೂಕ ಬೋರ್ಡ ನಿರ್ಣಯಿಸತಕ್ಕದ್ದು.

ಅನಂತರ ಅದನ್ನು ಜಿಲ್ಲಾ ಮಂಡಳದ ಒಪ್ಪಿಗೆಗಾಗಿ ಕಳಿಸಿಕೊಡಬೇಕು. ಯಾವ ತಾರೀಖಿಗೆ ಅದು ಕಳಿಸಲ್ಪಡಬೇಕು ಎಂಬುದನ್ನು ಸರಕಾರವು ಗೊತ್ತು ಮಾಡುವುದು. ಅದು ಜಿಲ್ಲಾ ಮಂಡಳಕ್ಕೆ ಮುಟ್ಟಿದ ತಾರೀಖಿನಿಂದ ಎರಡು ತಿಂಗಳ ಒಳಗೆ ಅದು ಮರಳಿ ಬರಲಿಲ್ಲವಾದರೆ ಅದು ಒಪ್ಪಿತವಾಯಿತೆಂದು ತಿಳಿಯತಕ್ಕದ್ದು.

ಮುಂಗಡ ಪತ್ರದಲ್ಲಿ ಏನೇನು ಇರಬೇಕೆಂಬುದನ್ನು ಸೂಚಿಸಲಾಗಿದೆ. ಮಾಡಲೇಬೇಕಾದ ಕರ್ತವ್ಯಗಳನ್ನು ನಿರ್ವಹಿಸಲು ಬೇಕಾಗುವುದಕ್ಕೆ ಹಣ, ಸಾಲ ಮರಳಿಸಲೇ ಬೇಕಾಗಿರುವುದಕ್ಕೆ ಹಣ, ಅದರ ಮೇಲಿನ ಬಡ್ಡಿ, ಸರಕಾರಕ್ಕೆ ಕೊಡಬೇಕಾದ ವಂತಿಗೆ ಇವುಗಳಿಗೆ ಅನುಕೂಲ ಮಾಡಿಕೊಟ್ಟು ಉಳಿದುದನ್ನು ಬೇರೆ ಕಾಮಗಿರಿಗಳಿಗಾಗಿ ವಿನಿಯೋಗಿಸಬೇಕು. ಆದರೆ ಮುಂಗಡ ಪತ್ರದಲ್ಲಿ ಒಂದು ನಿಯಮಿತ ಶಿಲ್ಕು ಉಳಿಯಲಿಕ್ಕೇಬೇಕು, ಎಂದೂ ವಿಧಿಸಲಾಗಿದೆ. ಇದ್ದ ಹಣದಲ್ಲಿ ಅಷ್ಟು ಶಿಲ್ಕು ಉಳಿಸಿ, ಮಾಡಲೇಬೇಕಾದ ಕರ್ತವ್ಯಗಳಿಗೆ ಹಣ ಹಂಚಿ ಹಾಕಿ ಉಳಿದ ಹಣದಲ್ಲಿ ಬೇರೆ ಕೆಲಸ ನಡೆವಂತೆ ಅನುಕೂಲವಾಗುವ ಹಾಗೆ ಮುಂಗಡ ಪತ್ರ ಇರಬೇಕು ಎಂದು ಹೇಳಿದ ಹಾಗಾಯಿತು.

## ೧೭೫. ಮುಂಗಡ ಪತ್ರದ ಪುನರ್ವಿಮರ್ಶೆ

ಅಧಿಕೃತ ವರುಷವು ಮುಗಿಯುವ ಮೊದಲೇ ಮುಂಗಡ ಪತ್ರದಲ್ಲಿಯ ಶರತುಗಳನ್ನು ಆದಾಯದ ಸಂಬಂಧವಾಗಿ ಇಲ್ಲವೆ ಅದು ಕೈಕೊಳ್ಳುವ ಬೇರೆ ಬೇರೆ ಸೇವೆಗಳಲ್ಲಿಯ ವೆಚ್ಚದ ಹಂಚಿಕೆಯ ಸಂಬಂಧವಾಗಿ ತಿದ್ದುಪಡಿ ಮಾಡುವುದು ತಾಲೂಕ ಬೋರ್ಡಿಗೆ ಆವಶ್ಯಕವೆಂದು ಕಂಡರೆ ಅದು ಅಂತಹ ತಿದ್ದುಪಡಿಯನ್ನು ಮಾಡಬಹುದು:

ಆದರೆ, ಜಿಲ್ಲಾ ಮಂಡಳದ ಒಪ್ಪಿಗೆಯಿಲ್ಲದೆ—

(೩) ಕಲಮು ೧೭೪ ರ ಉಪಕಲಮು (೩) ರ ವಾಕ್ಯಾವಳಿ (ಬ) ಮತ್ತು (ಕ) ದಲ್ಲಿ ನಿರ್ದಿಷ್ಟಪಡಿಸಿದ ವಿವಿಧ ವಿಷಯುಗಳ ಸಂಬಂಧವಾಗಿ ಹಂಚಿಹಾಕಲ್ಪಟ್ಟ ರಕಮುಗಳಲ್ಲಿ ಯಾವುದೇ ಕಡಿತಗಳನ್ನು ಮಾಡಲಾಗದು.

(ಬ) ಕಲಮು ೧೭೪ ರ ಉಪಕಲಮು (೩) ರ ವಾಕ್ಯಾವಳಿ (ಡ) ದನ್ವಯು ವಾಗಿ ನಿಶ್ಚಿತಗೊಳಿಸಲಾದ ರಕಮಿನಕಿಂತ ಕಡಿಮೆಯಾಗಿ ಕೊನೆಯಶಿಲ್ಕಿನ ರಕಮು ಕಡಿಮೆ ಮಾಡಲ್ಪಡತಕ್ಕದ್ದಲ್ಲ.

**ವಿವೇಚನೆ**

ಮುಂಗಡ ಪತ್ರವು ಅಂದಾಜು ಪತ್ರಿಕೆಯೆಂಬುದನ್ನು ಲಕ್ಷ್ಯದಲ್ಲಿಟ್ಟರೆ, ಆದಾಯದಲ್ಲಿ ಹೆಚ್ಚುಕಡಿಮೆ ಆದಂತೆ ವೆಚ್ಚದಲ್ಲಿ ಹೆಚ್ಚುಕಡಿಮೆಯಾಗಬೇಕಾಗುವು ದೆಂಬುದು ಕ್ರಮಪ್ರಾಪ್ತ. ಹೆಚ್ಚುಕಡಿಮೆ ಮಾಡಲು ಈ ಕಲಮು ಅಧಿಕಾರ ಕೊಡುತ್ತದೆ. ಆದರೆ, ಸಾಲಕ್ಕೆ ಕೊಡುವುದನ್ನು ಸರಕಾರಕ್ಕೆ ಕೊಡುವುದನ್ನು ಜಿಲ್ಲಾ ಬೋರ್ಡದ ಒಪ್ಪಿಗೆ ಇಲ್ಲದೆ ಕಡಿಮೆ ಮಾಡಲು ಬರುವುದಿಲ್ಲ ಎಂಬ ನಿರ್ಬಂಧ ವಿದೆ. ಅದರಂತೆ ಇಂತಿಷ್ಟು ಶಿಲ್ಕು ಉಳಿಯಬೇಕೆಂದು ಗೊತ್ತುಮಾಡಲ್ಪಟ್ಟಮೇಲೆ ಅದರಕಿಂತ ಕಡಿಮೆಯಾಗಿ ಶಿಲ್ಕು ಉಳಿಯುವ ಹಾಗೆ ಕಡಿಮೆ ಮಾಡಬೇಕಾದರೂ ಜಿಲ್ಲಾ ಮಂಡಳದ ಒಪ್ಪಿಗೆ ಬೇಕು.

**೧೭೩. ಲೆಕ್ಕಪತ್ರ ಇಡುವುದು ಮತ್ತು ವೆಚ್ಚದ ಮೇಲೆ ನಿರ್ಬಂಧ**

(೧) ಗೊತ್ತುಮಾಡಲ್ಪಡಬಹುದಾದಂತಹ ನಿಯಮಗಳ ಅನುಸಾರವಾಗಿ ತಾಲೂಕ ಬೋರ್ಡದ ನಿಧಿಯ ಆದಾಯ ಹಾಗೂ ವೆಚ್ಚದ ಲೆಕ್ಕಪತ್ರಗಳು ಇಡಲ್ಪಡತಕ್ಕದ್ದು.

(೨) ಈ ಕಾಯದೆಯಲ್ಲಿ ಸ್ಪಷ್ಟವಾಗಿ ಬೇರೆಯಾಗಿ ಅನುಕೂಲಿಸಲಾದು ದನ್ನು ಬಿಟ್ಟು, ತಾಲೂಕ ಬೋರ್ಡ ನಿಧಿಯೊಳಗಿಂದ ವೆಚ್ಚವು ಗೊತ್ತುಮಾಡಲ್ಪಡ ಬಹುದಾದಂತಹ ನಿರ್ಬಂಧಗಳು, ಕರಾರುಗಳು ಮತ್ತು ಪರಿಮಿತಿಗಳು ಇವುಗಳ ಅಂಕಿತವಾಗಿ ನಡೆಯತಕ್ಕದ್ದು.

(೩) ಹಿಂದಿನ ಅಧಿಕೃತ ವರುಷದ ಲೆಕ್ಕಪತ್ರಗಳು ತಪಾಸಿಸಲ್ಪಟ್ಟನಂತರ ಸೇರಿದ ಮೊದಲನೆಯ ಸಾದಾ ಸಭೆಯಲ್ಲಿ ಇಂತಹ ಲೆಕ್ಕಪತ್ರಗಳನ್ನು ತಾಲೂಕ ಬೋರ್ಡು ಸ್ವೀಕರಿಸತಕ್ಕದ್ದು.

**ವಿವೇಚನೆ**

ಲೆಕ್ಕಪತ್ರಗಳನ್ನು ಹೇಗೆ ಇಡಬೇಕೆಂಬುದನ್ನು ನಿಯಮಗಳು ಹೇಳುವುವು. ಇಂತಹ ವಿಷಯಕ್ಕೆ ಇಂತಿಷ್ಟು ವೆಚ್ಚ ಮಾಡಬೇಕೆಂದು ಕಾಯಿದೆಯಲ್ಲಿ ಹೇಳಿದು- ದನ್ನು ಬಿಟ್ಟರೆ, ಉಳಿದ ವೆಚ್ಚಕ್ಕೆ ನಿರ್ಬಂಧಗಳು, ಕರಾರುಗಳು ಹಾಗೂ ಪರಿಮಿತಿ ಗಳು ಇರುವುವು. ಅವುಗಳನ್ನು ಲಕ್ಷಿಸಿ ವೆಚ್ಚಮಾಡಬೇಕು. ಈ ಬಗೆಯಾಗಿ ಇಟ್ಟ

ಲೆಕ್ಕಪತ್ರಗಳು ಹಿಂದಿನ ವರುಷದ ಲೆಕ್ಕಪತ್ರಗಳು ತಪಾಸಣೆ ಆದ ಮೇಲೆ ಸೇರಿದ ಮೊದಲನೆಯ ಸಭೆಯಲ್ಲಿ ತಾಲೂಕ ಬೋರ್ಡದಿಂದ ಸ್ವೀಕರಿಸಲ್ಪಡತಕ್ಕದ್ದು. ಅಂದರೆ ಹಳೆಯ ಲೆಕ್ಕ ಹೊಸಲೆಕ್ಕ ಕೂಡಬಾರದು. ಹಳೆಯ ಲೆಕ್ಕತಪಾಸಣೆಯಲ್ಲಿಯ ದೋಷಗಳನ್ನು ತಿದ್ದಿಕೊಳ್ಳಲು ಬರುವುದು.

## ೧೭೭. ಲೆಕ್ಕ ಪತ್ರಗಳನ್ನು ಕಳಿಸಿಕೊಡುವುದು

ವಾರ್ಷಿಕ ಲೆಕ್ಕ ಪತ್ರಗಳು ಕೊನೆಯದಾಗಿ ಸ್ವೀಕರಿಸಲ್ಪಟ್ಟ ಕೂಡಲೆ, ತಾಲೂಕ ಬೋರ್ಡು ಈ ಸಂಬಂಧವಲ್ಲಿ ಗೊತ್ತು ಮಾಡಲ್ಪಟ್ಟ ನಮೂನೆಯಲ್ಲಿ ಲೆಕ್ಕವನ್ನು ಜಿಲ್ಲಾ ಮಂಡಳಕ್ಕೆ ಕಳಿಸಿಕೊಡತಕ್ಕದ್ದು. ಮತ್ತು ಆ ಲೆಕ್ಕದ ಸಂಬಂಧವಾಗಿ ಕಾಲ ಕಾಲಕ್ಕೆ ಕಮಿಶನರನು ನಿರ್ದೇಶಿಸುವ ಹಾಗೆ ಅಂತಹ ವಿವರ ಗಳನ್ನು ಮತ್ತು ಪಾವತಿಗಳನ್ನು ಸಾದರಪಡಿಸತಕ್ಕದ್ದು.

**ವಿವೇಚನೆ**

ಜಿಲ್ಲಾ ಅಭಿವೃದ್ಧಿ ಮಂಡಳಕ್ಕೆ ತಾಲೂಕ ಬೋರ್ಡದ ಲೆಕ್ಕ ಪತ್ರಗಳು ಕಳಿಸಲ್ಪಡಬೇಕು. ಅವು ತಾಲೂಕ ಬೋರ್ಡದಲ್ಲಿ ಕೊನೆಯದಾಗಿ ಸ್ವೀಕೃತವಾದ ಮೇಲೆ ಕಳಿಸಲ್ಪಡಬೇಕು. ಯಾವ ನಮೂನೆಯಲ್ಲಿ ಕಳಿಸಬೇಕೆಂಬುದನ್ನು ಗೊತ್ತು ಮಾಡಲಾಗುವುದು. ಅದರಂತೆ ಆ ಲೆಕ್ಕದ ಸಂಗಡ ಯಾವ ವಿವರ ಮತ್ತು ಪಾವತಿಗಳನ್ನು ಕಳಿಸಬೇಕೆಂಬ ಬಗ್ಗೆ ಕಮಿಶನರನು ಕಾಲ ಕಾಲಕ್ಕೆ ನಿರ್ದೇಶನ ಕೊಡುವನು.

## ೧೭೮. ಖಟ್ಟಿ ಬಾಕಿ ಹಣವನ್ನು ಲೆಕ್ಕದಿಂದ ತೆಗೆದು ಹಾಕುವ ಅಧಿಕಾರ

ಕರಾರು ಪತ್ರದನ್ವಯವಾಗಿರಲಿ ಇಲ್ಲವೆ ಬೇರೆ ಯಾವ ರೀತಿಯದಾಗಿರಲಿ ಇಲ್ಲವೆ ಅದರ ಸಂಬಂಧವಾಗಿ ಕೊಡಬೇಕಾಗಿದ್ದ ಯಾವುದೇ ಹಣವಾಗಿರಲಿ, ತಾಲೂಕ ಬೋರ್ಡಿಗೆ ಸಲ್ಲಬೇಕಾಗಿದ್ದ ಯಾವುದೇ ಹಣವು ತಾಲೂಕ ಬೋರ್ಡದ ಅಭಿಪ್ರಾಯದಲ್ಲಿ ಇಂತಹ ಹಣವು ವಸೂಲಾಗದೆ ಇರುವ ಖಟ್ಟಿ ಬಾಕಿಯಾಗಿದೆ ಯೆಂದು ಅದರೆ, ಗೊತ್ತು ಮಾಡಬಹುದಾದಂತಹ ನಿರ್ಬಂಧ ಮತ್ತು ನಿಯಂತ್ರಣ ದಂಕಿತವಾಗಿ ತಾಲೂಕ ಬೋರ್ಡು ಅವನ್ನು ಸೂಟು ಬಿಡಬಹುದು.

ಆದರೆ, ಐದು ನೂರು ರೂಪಾಯಿಗಿಂತ ಹೆಚ್ಚಾಗಿ ಇರುವ ಯಾವುದೇ ರಕಮು ಸರಕಾರದ ಪೂರ್ವ ಸಮ್ಮತಿ ಇದ್ದ ಹೊರತು ಲೆಕ್ಕದಿಂದ ತೆಗೆದು ಹಾಕಲ್ಪಡತಕ್ಕದ್ದಲ್ಲ.

**ವಿವೇಚನೆ**

ಬಾಕಿ ಹಣ ಸೂಟ ಬಿಡಬೇಕಾದರೆ ಅದು ತಾಲೂಕ ಬೋರ್ಡದ ಅಭಿಪ್ರಾ ಯದ ಪ್ರಕಾರ ಖಟ್ಟಿ ಬಾಕಿಯಾಗಿದೆ ಎಂದು ಆಗಿರಬೇಕು. ಹಾಗೆ ಆದಾಗ

ಮಾತ್ರ ಉಳಿದ ಯಾವ ವಿಷಯಗಳೂ ಅಡ್ಡ ಬರಲಾರವು. ಅದನ್ನು ಸೂಟು ಬಿಡಬಹುದು. ಆದರೆ ಹೀಗೆ ಸೂಟು ಬಿಡಬೇಕೆಂದು ಅಭಿಪ್ರಾಯವಾದ ರಕಮು ೫೦೦/– ರೂಪಾಯಿಗಳಿಗಿಂತ ಹೆಚ್ಚು ಆಗಿದ್ದರೆ, ಅದನ್ನು ಲೆಕ್ಕದಿಂದ ತೆಗೆದು ಹಾಕಬೇಕಾಗಿದ್ದರೆ ಮೊದಲು ಸರಕಾರದ ಪರವಾನಗಿ ಪಡೆದಿರಬೇಕು.

## ೧೭೯. ಲೆಕ್ಕ ಪತ್ರ ತಪಾಸಣೆ

(೧) ತಾಲೂಕ ಬೋರ್ಡುಗಳ ಲೆಕ್ಕ ಪತ್ರಗಳನ್ನು ತಪಾಸು ಮಾಡಲು ಸರಕಾರದಿಂದ ಅಧಿಕರಿಸಲ್ಪಡಬಹುದಾದ ಅಧಿಕಾರಿಗಳಲ್ಲಿ ಒಬ್ಬ ಅಧಿಕಾರಿ ( ಈ ಮುಂದೆ ಅವನಿಗೆ ಲೆಕ್ಕ ತಪಾಸಿಗ ಎಂದು ಕರೆಯಲಾಗಿದೆ.) ಯಿಂದ ಗೊತ್ತುಮಾಡ ಬಹುದಾದಂತಹ ರೀತಿಯಲ್ಲಿ ಕಾಲ ಕಾಲಕ್ಕೆ ಮತ್ತು ಪ್ರತಿ ವರುಷ ಒಮ್ಮೆಯಾದರೂ ತಾಲೂಕ ಬೋರ್ಡ ನಿಧಿಯ ಲೆಕ್ಕ ಪತ್ರಗಳನ್ನು ತಪಾಸಿಸಲ್ಪಡತಕ್ಕದ್ದು. ಮತ್ತು ಸರಕಾರದ ಪೂರ್ವ ಸಮ್ಮತಿಯಿಂದ ತಾಲೂಕ ಬೋರ್ಡು ನೇಮಿಸಬಹುದಾ ದಂತಹ ಬೇರೆ ಯಾವುದಾದರೂ ವ್ಯವಸ್ಥೆ ಇದ್ದರೆ, ಆ ಲೆಕ್ಕ ತಪಾಸಣೆಯ ವ್ಯವಸ್ಥೆ ಯಿಂದಲೂ ತಪಾಸಿಸತಕ್ಕದ್ದು.

(೨) ಲೆಕ್ಕ ತಪಾಸಣೆಯ ಉದ್ದೇಶಗಳಿಗಾಗಿ ತಾಲೂಕ ಬೋರ್ಡದ ಎಲ್ಲ ಲೆಕ್ಕ ಪತ್ರಗಳನ್ನು ಮತ್ತು ಇತರ ಇತರ ದಾಖಲೆಗಳನ್ನು ನೋಡಲು ಲೆಕ್ಕತಪಾಸಿ ಗನಿಗೆ ಇಲ್ಲವೆ ಲೆಕ್ಕ ತಪಾಸಿಗರಿಗೆ ಆಸ್ಪದ ಇರತಕ್ಕದ್ದು.

(೩) ಬೋರ್ಡ ಮತ್ತು ಲೆಕ್ಕ ತಪಾಸಿಗ ಇವರ ನಡುವೆ ಒಪ್ಪಂದವಾಗಿರ ಬಹುದಾದಷ್ಟು ಮತ್ತು ಸರಕಾರದ ಲೆಕ್ಕತಪಾಸಿಗನಿದ್ದ ಸಂದರ್ಭದಲ್ಲಿ ಸರಕಾರ ಗೊತ್ತುಮಾಡಲ್ಪಡಬಹುದಾದಷ್ಟು ಲೆಕ್ಕ ತಪಾಸಣೆ ಫೀ ಎಂದು ತಾಲೂಕ ಬೋರ್ಡದ ನಿಧಿಯೊಳಗಿಂದ ತಾಲೂಕ ಬೋರ್ಡು ಕೊಡತಕ್ಕದ್ದು.

### ವಿವೇಚನೆ

ತಾಲೂಕ ಬೋರ್ಡದ ಲೆಕ್ಕಪತ್ರಗಳು ತಪಾಸಿಸಲ್ಪಡತಕ್ಕದ್ದು. ಎಂದು ? ಕಾಲಕಾಲಕ್ಕೆ, ಆದರೆ ವರುಷದಲ್ಲಿ ಒಮ್ಮೆಯಾದರೂ ಆಗತಕ್ಕದ್ದು. ಯಾರು ಮಾಡಬೇಕು ? ಸರಕಾರದಿಂದ ಈ ಕೆಲಸಕ್ಕಾಗಿ ಗೊತ್ತುಮಾಡಲಾದ ಲೆಕ್ಕತಪಾಸಿ ಗನು ತಪಾಸುಮಾಡತಕ್ಕದ್ದು. ಬೋರ್ಡು ತಾನು ಬೇರೆಯವರನ್ನು ನೇಮಿಸಿಕೊಳ್ಳ ಬೇಕೆಂದರೆ,ಸರಕಾರದ ಪರವಾನಗಿಯಿಂದ ನೇಮಿಸಿಕೊಳ್ಳಬಹುದು. ಆಗ ಸರಕಾರದ ಲೆಕ್ಕ ತಪಾಸಿಗನು ನೋಡುವುದಲ್ಲದೆ ಬೋರ್ಡು ನೇಮಿಸಿಕೊಂಡ ಲೆಕ್ಕತಪಾಸಿಗನೂ ಲೆಕ್ಕತಪಾಸಿಸತಕ್ಕದ್ದು. ಒಬ್ಬರಿದ್ದಾರೆಂದು ಇನ್ನೊಬ್ಬರು ಕೆಲಸ ತಪ್ಪಿಸುವ ಹಾಗಿಲ್ಲ; ಒಬ್ಬರಿದ್ದರೂ ಇನ್ನೊಬ್ಬರೂ ಲೆಕ್ಕತಪಾಸಣೆ ಮಾಡತಕ್ಕದ್ದು. ಹೀಗೆ ತಪಾಸಣೆ ಮಾಡುವವರಿಗೆ ಎಲ್ಲ ಲೆಕ್ಕ ಪತ್ರ ದಾಖಲೆ ನೋಡುವ ಆಸ್ಪದ

ಇರತಕ್ಕದ್ದು. ಅಂದರೆ ಇದು ಖಾಸಗಿಯಾಗಿದೆ, ಇದು ಮಹತ್ವದ ಕಾಗದ ಪತ್ರ ವಿದೆ, ಎಂದು ಒಪ್ಪಿಸುವ ಅಧಿಕಾರ ಬೋರ್ಡಿಗಿಲ್ಲ. ಸಂಬಂಧಪಟ್ಟ ಎಂತಹ ಕಾಗದ ವಿದ್ದರೂ ಅದನ್ನು ನೋಡುವ ಅಧಿಕಾರವನ್ನು ಈ ಕಲಮಿನಿಂದ ಲೆಕ್ಕ ತಪಾಸಿಗರಿಗೆ ಕೊಡಲಾಗಿದೆ.

ಖಾಸಗಿಯಾಗಿ ನೇಮಿಸಿಕೊಂಡ ಬೋರ್ಡಿನ ಲೆಕ್ಕ ತಪಾಸಿಗನಿಗೆ ಕರಾರು ಮಾಡಿಕೊಂಡಷ್ಟು, ಸರಕಾರೀ ಸರಕಾರೀ ತಪಾಸಿಗನಿಗೆ ಸರಕಾರ ಗೊತ್ತು ಮಾಡಿ ದಷ್ಟು ಫೀಯನ್ನು ತಾಲೂಕ ಬೋರ್ಡ ಫಂಡದಿಂದ ಕೊಡಬೇಕು.

## ೧೮೦. ಸರಕಾರೀ ಲೆಕ್ಕ ತಪಾಸಿಗನ ಅಧಿಕಾರ

(೧) ಸರಕಾರೀ ಲೆಕ್ಕ ತಪಾಸಿಗನು—

(ಅ) ತಾನು ಯೋಗ್ಯವಾಗಿ ಲೆಕ್ಕ ತಪಾಸಣೆ ಮಾಡುವುದಕ್ಕೆ ಆವಶ್ಯಕ ವೆಂದು ಅವನು ವಿಚಾರಿಸಬಹುದಾದಂತಹ ಪಾವತಿಗಳು, ಹೇಳಿಕೆಗಳು, ಪತ್ರಿಕೆ ಗಳು, ಪತ್ರವ್ಯವಹಾರಗಳು, ಟಿಪ್ಪಣೆಗಳು ಇಲ್ಲವೆ ಇತರ ಕಾಗದಗಳು ತನ್ನ ಎದುರು ಹಾಜರ ಪಡಿಸಲ್ಪಡಬೇಕೆಂದು ಲಿಖಿತ ರೂಪದಲ್ಲಿ ಕೇಳಿಕೊಳ್ಳಬಹುದು.

(ಬ) ಇಂತಹ ಯಾವುದೇ ಪಾವತಿಗಳು, ಹೇಳಿಕೆಗಳು, ಪತ್ರಿಕೆಗಳು, ಪತ್ರ ವ್ಯವಹಾರಗಳು, ಟಿಪ್ಪಣೆಗಳು, ಇಲ್ಲವೆ ಕಾಗದಗಳು, ಇವುಗಳ ಸ್ವಾಧೀನ ಇಲ್ಲವೆ ನಿಯಂತ್ರಣಕ್ಕಾಗಿ ಜವಾಬುದಾರನಾದ ಯಾವುದೇ ವ್ಯಕ್ತಿಯು ಇಲ್ಲವೆ ತಾಲೂಕ ಬೋರ್ಡದ ಅಧೀನವಾಗಿ ಇಲ್ಲವೆ ಅದರೊಡನೆ ಯಾವುದೇ ಕರಾರು ಒಪ್ಪಂದದಲ್ಲಿ ಪಾಲು ಇಲ್ಲವೆ ಹಿತಾಸಕ್ತಿ ಪ್ರತ್ಯಕ್ಷವಾಗಿ ಇಲ್ಲವೆ ಅಪ್ರತ್ಯಕ್ಷವಾಗಿ ತನಗೆ ಇಲ್ಲವೆ ತನ್ನ ಪಾಲುದಾರನಿಗೆ ಇರುವ ಯಾವುದೇ ವ್ಯಕ್ತಿಯು ತನ್ನ ಎದುರು ಹಾಜರಾಗ ಬೇಕೆಂದು ಲಿಖಿತ ರೂಪದಲ್ಲಿ ಕೇಳಿಕೊಳ್ಳಬಹುದು.

(ಕ) ಇಂತಹ ಪಾವತಿಗಳು, ಹೇಳಿಕೆಗಳು, ಪತ್ರಿಕೆಗಳು, ಪತ್ರವ್ಯವಹಾರ ಗಳು, ಟಿಪ್ಪಣೆಗಳು ಇಲ್ಲವೆ ಕಾಗದಗಳು ಇವುಗಳ ಸಂಬಂಧವಾಗಿ ಹಾಗೆ ತನ್ನ ಎದುರು ಹಾಜರಾದ ಯಾವುದೇ ವ್ಯಕ್ತಿಗೆ ಸತ್ಯವನ್ನು ಸಾರಿ ಹೇಳುವಂತಹ ಲೇಖನವನ್ನು ತಯಾರು ಮಾಡಲು ಮತ್ತು ಸಹಿ ಮಾಡಲು ಹೇಳಬಹುದು ಇಲ್ಲವೆ ಯಾವುದೇ ಪ್ರಶ್ನೆಗೆ ಉತ್ತರ ಕೊಡಲು ಹೇಳಬಹುದು ಇಲ್ಲವೆ ಯಾವುದೇ ಹೇಳಿಕೆ ಯನ್ನು ತಯಾರು ಮಾಡಲು ಮತ್ತು ಸಾದರ ಪಡಿಸಲು ಹೇಳಬಹುದು.

(ಡ) ತಾಲೂಕ ಬೋರ್ಡದ ಅಧ್ಯಕ್ಷನಿಂದ ಇಲ್ಲವೆ ಯಾವುದೇ ಗೌರವ ಅಧಿಕಾರಿ ಇಲ್ಲವೆ ಸದಸ್ಯನಿಂದ ಯಾವುದೇ ವಿವರಣೆ ಬೇಕಾದ ಸಂದರ್ಭದಲ್ಲಿ ಅಂತಹ ವ್ಯಕ್ತಿಯನ್ನು ಲೇಖಿ ಮೂಲಕ ಕರೆಯಿಸಿ ತನ್ನನ್ನು ಕಾಣಬೇಕೆಂದು ಹೇಳ ಬಹುದು. ಮತ್ತು ಯಾವ ಅಂಶದ ಮೇಲೆ ಅವನ ವಿವರಣೆ ಬೇಕಾಗಿದೆಯೆಂಬ ಬಗ್ಗೆ ಲೇಖೀಯಾಗಿ ನಿರ್ದಿಷ್ಟಪಡಿಸತಕ್ಕದ್ದು.

(೨) ಉಪಕಲಮು (೧) ರನ್ವಯವಾಗಿ ಮಾಡಲಾದ ಕಾಯಿದೇಶೀರ ವಿನಂತಿಗೆ ಯಾವುದೇ ವ್ಯಕ್ತಿಯು ಮಾನ್ಯತೆ ಕೊಡಲು ನಿರಾಕರಿಸಿದರೆ ಇಲ್ಲವೆ ಬುದ್ಧಿಪೂರ್ವಕವಾಗಿ ಅಲಕ್ಷಿಸಿದರೆ, ಅವನ ಅಪರಾಧವು ಸಾಬೀತಾದರೆ, ಒಂದು ನೂರು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಅವನು ಶಿಕ್ಷಿತನಾಗತಕ್ಕದ್ದು.

ಆದರೆ, ಡೆಪ್ಯೂಟಿ ಕಮಿಶನರನ ಪರವಾನಗಿ ಇಲ್ಲದೆ ಈ ಉಪಕಲಮಿನನ್ವಯವಾಗಿ ಯಾವುದೇ ಪ್ರಕರಣಗಳು ಪ್ರಾರಂಭಿಸಲ್ಪಡತಕ್ಕದ್ದಲ್ಲ.

**ವಿವೇಚನೆ**

ಈ ಕಲಮಿನಲ್ಲಿ ಸರಕಾರೀ ಲೆಕ್ಕ ತಪಾಸಿಗನ ಅಧಿಕಾರದ ಬಗ್ಗೆ ಹೇಳಲಾಗಿದೆ. ಮೇಲಿನ ಕಲಮಿನಲ್ಲಿ ಸರಕಾರೇತರ ಲೆಕ್ಕತಪಾಸಿಗನೂ ಬೋರ್ಡದ ಲೆಕ್ಕಗಳನ್ನು ತಪಾಸು ಮಾಡಬಹುದಾಗಿದೆಯೆಂಬುದನ್ನು ಹೇಳಿದರೂ ಇಲ್ಲಿ ಸರಕಾರೀ ತಪಾಸಿಗನ ಅಧಿಕಾರಗಳನ್ನು ಮಾತ್ರ ಹೇಳಿದ್ದರಿಂದ ಈ ಅಧಿಕಾರಗಳು ಬೇರೆ ಲೆಕ್ಕ ತಪಾಸಿಗನಿಗೆ ಇರುವುದಿಲ್ಲ ಎಂದು ಸೂಚಿತವಾದಂತೆ.

ಲೆಕ್ಕಕ್ಕೆ ಸಂಬಂಧಪಟ್ಟ ಎಲ್ಲ ಕಾಗದಪತ್ರಗಳನ್ನು ಹಾಜರಪಡಿಸಿಕೊಳ್ಳಲಿಕ್ಕೆ ಸಂಬಂಧಪಟ್ಟ ವ್ಯಕ್ತಿಗಳು ಹಾಜರಾಗಬೇಕೆಂದು ಹೇಳಲಿಕ್ಕೆ ಅವನಿಗೆ ಅಧಿಕಾರ ಇದೆ. ಇಷ್ಟೇ ಅಲ್ಲ, ಅವನು ಕೇಳಿಕೊಂಡಂತೆ ಮಾಡಲು ಯಾರಾದರೂ ತಪ್ಪಿದರೆ, ಅವನ ತಪ್ಪು ಸಾಬೀತಾದರೆ ಅದು ಅಪರಾಧವಾಗಿ ಪರಿಣಮಿಸಿ, ಅದಕ್ಕೆ ೧೦೦/-ರೂಪಾಯಿಗಳ ವರೆಗೆ ದಂಡವಿದೆ. ಆದ್ದರಿಂದ ಸಂಬಂಧಪಟ್ಟವರು ಸರಕಾರದ ಲೆಕ್ಕ ತಪಾಸಿಗನಿಗೆ ವಿಧೇಯರಾಗಿರಬೇಕೆಂದು ಪರ್ಯಾಯವಾಗಿ ಸೂಚಿಸಿದಂತಾಯಿತು. ಇಷ್ಟೆ. ತಪ್ಪಿತಸ್ಥನ ವಿರುದ್ಧ ಪ್ರಕರಣ ನಡೆಸಬೇಕಾದರೆ, ಡೆಪ್ಯೂಟಿ ಕಮೀಶನರನ ಪರವಾನಗಿ ಬೇಕು.

**೧೮೧. ಸರಕಾರೀ ಲೆಕ್ಕತಪಾಸಿಗನ ಕರ್ತವ್ಯಗಳು**

(೧) ಸರಕಾರೀ ಲೆಕ್ಕ ತಪಾಸಿಗನು—

(ಅ) ಲೆಕ್ಕ ತಪಾಸಣೆಯು ಮುಗಿದ ನಂತರ ಆದಷ್ಟು ಬೇಗನೇ ತಾಲೂಕ ಬೋರ್ಡದ ನಿಧಿಯ ಲೆಕ್ಕ ಪತ್ರಗಳ ತಪಾಸಣೆಯ ಮೇಲೆ ಒಂದು ವರದಿಯನ್ನು ತಾಲೂಕ ಬೋರ್ಡದ ಸ್ಥಾಯಿ ಸಮಿತಿಗೆ ಕೊಡತಕ್ಕದ್ದು.

(ಬ) ವೆಚ್ಚದಲ್ಲಿ ಇಲ್ಲವೆ ತಾಲೂಕ ಬೋರ್ಡಿಗೆ ಸಂದಾಯವಾಗಬೇಕಾಗಿರುವ ಹಣದ ವಸೂಲಿಯಲ್ಲಿ ಇಲ್ಲವೆ ತಾಲೂಕ ಬೋರ್ಡದ ನಿಧಿಯ ಲೆಕ್ಕಪತ್ರದಲ್ಲಿ ಅವನು ಕಂಡಿರಬಹುದಾದ ಯಾವುದೇ ಮಹತ್ವದ ಅನೌಚಿತ್ಯ ಇಲ್ಲವೆ ಅಕ್ರಮವನ್ನು ಸ್ಥಾಯಿ ಸಮಿತಿಗೂ ಮತ್ತು ಕಮಿಶನರನಿಗೂ ವರದಿಮಾತಕ್ಕದ್ದು.

(ಕ) ತಾಲೂಕ ಬೋರ್ಡದ ಒಡೆತನದಲ್ಲಿದ್ದ ಇಲ್ಲವೆ ಅದರ ಅಂತರ್ಗತವಾಗಿದ್ದ ಹಣದ ಇಲ್ಲವೆ ಇತರ ಆಸ್ತಿಯು ಯಾವುದೇ ಹಾನಿ ಇಲ್ಲವೆ ಹಾಳಾದುದು ಅಂತಹ ಹಾನಿಗೆ ಇಲ್ಲವೆ ಹಾಳಾದುದಕ್ಕೆ ಪ್ರತ್ಯಕ್ಷ ಇಲ್ಲವೆ ಅಪ್ರತ್ಯಕ್ಷವಾಗಿ ಹೊಣೆಗಾರನಾಗಿದ್ದ ವ್ಯಕ್ತಿಗಳ ಹೆಸರುಗಳೊಂದಿಗೆ ಸ್ಥಾಯಿ ಸಮಿತಿಗೆ ಮತ್ತು ಕಮಿಶನರರಿಗೆ ವರದಿಮಾಡತಕ್ಕದ್ದು.

(೨) ಲೆಕ್ಕತಪಾಸಿಗನಿಂದ ತೋರಿಸಲ್ಪಡಬಹುದಾದ ಯಾವುದೇ ದೋಷಗಳನ್ನು ಇಲ್ಲವೆ ಅಕ್ರಮಗಳನ್ನು ಸ್ಥಾಯಿಸಮಿತಿಯು ಕೂಡಲೇ ಸರಿಪಡಿಸತಕ್ಕದ್ದು.

**ವಿವೇಚನೆ**

ಅಧಿಕಾರಗಳ ಜತೆಗೆ ಕರ್ತವ್ಯಗಳು ಇರುವುದು ಯೋಗ್ಯ. ಲೆಕ್ಕತಪಾಸಣೆ ಮಾಡಿದ ನಂತರ ಅವನು ಸ್ಥಾಯಿಸಮಿತಿಗೆ ವರದಿ ಒಪ್ಪಿಸಬೇಕು. ಅಲ್ಲದೆ ತನಗೆ ಕಂಡು ಬಂದ ಲೆಕ್ಕದಲ್ಲಿಯ ದೋಷ ಇಲ್ಲವೆ ಅಕ್ರಮಗಳನ್ನು ಸ್ಥಾಯಿಸಮಿತಿಗೆ ಹಾಗೂ ಕಮಿಶನರರಿಗೆ ವರದಿ ಮಾಡಬೇಕು. ತಾಲೂಕ ಬೋರ್ಡದ ಹಣ ಇಲ್ಲವೆ ಆಸ್ತಿಯು ಹಾನಿಗೆ ಇಲ್ಲವೆ ನಾಶಕ್ಕೆ ಒಳಗಾಗಿದ್ದರೆ ಆ ಸ್ಥಿತಿ ಒದಗಲು ಕಾರಣರಾದ ವ್ಯಕ್ತಿಗಳ ಹೆಸರು ಸಹಿತವಾಗಿ ಸ್ಥಾಯಿಸಮಿತಿಗೆ ಮತ್ತು ಕಮಿಶನರರಿಗೆ ತಿಳಿಸಬೇಕು. ಹೀಗೆ ಮಾಡುವುದು ಲೆಕ್ಕತಪಾಸಿಗನ ಕರ್ತವ್ಯ. ಅಂದರೆ ದೋಷಗಳನ್ನು ಇಲ್ಲವೆ ಅಕ್ರಮಗಳನ್ನು ತಿದ್ದಲು ಅನುಕೂಲವಾಗುವುದು.

## ೧೮೨. ಸರಕಾರಿ ಲೆಕ್ಕತಪಾಸಿಗನು ವೆಚ್ಚವನ್ನು ಒಪ್ಪದಿರುವುದು ಮತ್ತು ಕಮಿಶನರರನಿಂದ ಆ ಬಗ್ಗೆ ಹುಕುಮು

(೧) ಕಾಯಿದೆಗೆ ವಿರುದ್ಧವಾಗಿ ಹಣ ಸಲ್ಲಿಸಿದ ಪ್ರತಿಯೊಂದು ವಿಷಯಕ್ಕೆ ಸರಕಾರೀ ಲೆಕ್ಕತಪಾಸಿಗನ ಮನ್ನಣೆ ಕೊಡತಕ್ಕದ್ದಲ್ಲ ಮತ್ತು ಇಂತಹ ಹಣ ಸಲ್ಲಿಸಿದ ಇಲ್ಲವೆ ಸಲ್ಲಿಸಲು ಅಧಿಕರಿಸಿದ ವ್ಯಕ್ತಿಯ ಸಂಬಂಧವಾಗಿ ವಿವರಗಳನ್ನು ಕೊಟ್ಟು ಆ ವಿಷಯವನ್ನು ಕಮಿಶನರರಿಗೆ ವರದಿ ಮಾಡತಕ್ಕದ್ದು.

(೨) ಲೆಕ್ಕತಪಾಸಿಗನಿಂದ ಬಂದ ವರದಿಯ ಮೂಲಕ ಇಲ್ಲವೆ ತನ್ನ ಸ್ವಂತದ ಪ್ರೇರಣೆಯಿಂದ ಮತ್ತು ಸಂಬಂಧಪಟ್ಟ ವ್ಯಕ್ತಿಯ ವಿವರಣೆಯನ್ನು ಕೇಳಿಕೊಂಡು ಇಲ್ಲವೆ ತನಗೆ ಅವಶ್ಯಕವೆಂದು ಅನ್ನಿಸಬಹುದಾದ ಹೆಚ್ಚಿನ ವಿಚಾರಣೆ ಮಾಡಿ, ಕಮಿಶನರನು ಉಪಕಲಮು (೧) ರನ್ವಯವಾಗಿ ಮನ್ನಣೆ ಕೊಡದೆ ಇರುವ ವೆಚ್ಚಕ್ಕೆ ಹೊಣೆಗಾರನಾಗಿರುವ ಯಾವುದೇ ವ್ಯಕ್ತಿಯನ್ನು ಆ ಹಣದ ಬಗ್ಗೆ ಇಲ್ಲವೆ ಇಂತಹ ವ್ಯಕ್ತಿಯ ಅಲಕ್ಷ್ಯ ಇಲ್ಲವೆ ಗೈರವರ್ತನೆಯಿಂದ ಉಂಟಾದ ಕೊರತೆ ಇಲ್ಲವೆ ಹಾನಿಯ ಹಣದ ಬಗ್ಗೆ ಇಲ್ಲವೆ ಪಾವತಿಯಾದ ಯಾವುದೇ ರಕಮು ಲೆಕ್ಕದಲ್ಲಿ ಬರಬೇಕಾದುದು ಇಂತಹ ವ್ಯಕ್ತಿಯ ಮೂಲಕ ಲೆಕ್ಕದಲ್ಲಿ ಕಾಣಿಸದೆ ಇದ್ದ ಹಣದ ಬಗ್ಗೆ

ಅವನನ್ನು ಆಪಾದಿಸಿ ಜವಾಬುದಾರಿ ಎಂದು ಹಿಡಿಯಬಹುದು ಮತ್ತು ಇಂತಹ ಪ್ರತಿಯೊಂದು ಸಂದರ್ಭದಲ್ಲಿ ಇಂತಹ ವ್ಯಕ್ತಿಯಿಂದ ಬರಬೇಕಾದ ಹಣದ ಬಗ್ಗೆ ಪ್ರಮಾಣವಾಗಿ ಸಹಿಯನ್ನು ಕಮಿಶನರನು ಮಾಡತಕ್ಕದ್ದು.

(೩) ಪ್ರತಿಯೊಂದು ಅಪಾದನೆಯ ಸಂದರ್ಭದಲ್ಲಿ ಕಮಿಶನರನು ಲೇಖೀ ಯಾಗಿ ತನ್ನ ಕಾರಣಗಳನ್ನು ಹೇಳತಕ್ಕದ್ದು ಮತ್ತು ಯಾವ ವ್ಯಕ್ತಿಯ ವಿರುದ್ಧ ಆಪಾದನೆ ಮಾಡಲಾಗಿದೆಯೋ ಅವನಿಗೆ ಅದರ ಒಂದು ನಕಲನ್ನು ಕೊಡತಕ್ಕದ್ದು.

**ವಿವೇಚನೆ**

ಲೆಕ್ಕ ತಪಾಸಿಗನು ಎಲ್ಲ ದೃಷ್ಟಿಯಿಂದ ಲೆಕ್ಕವನ್ನು ತಪಾಸು ಮಾಡಬೇಕಾಗು ವುದು. ಎಲ್ಲ ವೆಚ್ಚಗಳು ಕ್ರಮವಾಗಿವೆಯೋ ಇಲ್ಲವೊ ? ಕಾಯಿದೆಯ ವಿರುದ್ಧ ವಾಗಿ ಯಾವುದಾದರೂ ವೆಚ್ಚವಿದ್ದರೆ, ಅಂತಹವಕ್ಕೆ ಅವನು ಮನ್ನಣೆ ಕೊಡತಕ್ಕ ದ್ದಲ್ಲ. ಹೀಗೆ ಮನ್ನಣೆ ಕೊಡದೆ ಇದ್ದ ಪ್ರತಿಯೊಂದು ವೆಚ್ಚದ ವಿಷಯವನ್ನು ವಿವರ ಸಹಿತವಾಗಿ, ಅಂದರೆ- ವೆಚ್ಚದ ವಿವರ, ಅಧಿಕರಿಸಿ ವ್ಯಕ್ತಿಯ ವಿವರ- ಕಮಿಶನರರ ಕಡೆಗೆ ವರದಿ ಕಳಿಸತಕ್ಕದ್ದು. ಕಮಿಶನರನು ವಿಚಾರಣೆ ಮಾಡಿ, ಮನ್ನಣೆ ಸಿಗದೆ ಇದ್ದ ವೆಚ್ಚದ ಹೊಣೆಗಾರನಾದ ವ್ಯಕ್ತಿಯ ಮೇಲೆ ಆ ಹಣವನ್ನು ಹಾಕತಕ್ಕದ್ದು. ಆ ಬಗ್ಗೆ ಪ್ರಮಾಣದ ಸಹಿ ಮಾಡತಕ್ಕದ್ದು. ಅಂದರೆ ಆಪಾದಿತನಿಗೆ ಕಾರಣಗಳನ್ನು ತಿಳಿಸುವುದಲ್ಲದೆ, ಆಪಾದಿತನ ಮೇಲೆ ಬಂದ ಹಣದ ಬಗ್ಗೆ ನಿಶ್ಚಿತ ಪ್ರಮಾಣ ದೊರೆವುದು. ಆಪಾದನೆಯ ಪ್ರತಿಯನ್ನು ಆ ವ್ಯಕ್ತಿಗೆ ಕಳಿಸತಕ್ಕದ್ದು. ಕಾಯಿದೆ ವಿರುದ್ಧವಾಗಿ ಯಾರಾದರೂ ವರ್ತಿಸಿದರೆ ಅವರೇ ಆ ವೆಚ್ಚಕ್ಕೆ ಹೊಣೆಗಾರರಾಗಬೇಕಾಗುವುದು. ಆದ್ದರಿಂದ ವೆಚ್ಚವನ್ನು ಮಾಡುವಾಗ ಇಲ್ಲವೆ ಪರವಾನಗಿ ಕೊಡುವಾಗ ಅದು ಕಾಯಿದೆಗೆ ಸಮ್ಮತವಾದುದೋ ಇಲ್ಲವೊ ನೋಡಲೇಬೇಕೆಂಬುದು ಇವರಿಂದ ಸ್ಪಷ್ಟವಾಗುವುದು.

**೧೮೩. ಹುಕುಮಿನ ವಿರುದ್ಧ ಅಪೀಲು**

ಕಲಮು ೧೮೨ ರನ್ವಯವಾಗಿರುವ ಕಮಿಶನರರ ಹುಕುಮಿನಿಂದ ಯಾವುದೇ ವ್ಯಕ್ತಿಯು ಬಾಧಿತನಾಗಿದ್ದರೆ, ಕಮಿಶನರರ ನಿರ್ಣಯದ ಪ್ರತಿಯು ಮುಟ್ಟಿದ ತಾರೀಖಿನಿಂದ ಮುವ್ವತ್ತು ದಿವಸಗಳಲ್ಲಿ,

(ಅ) ಇಂತಹ ಹುಕುಮನ್ನು ರದ್ದು ಪಡಿಸಬೇಕೆಂದು ಅಧಿಕಾರವಿರುವ ದಿವಾಣಿ ನ್ಯಾಯಾಲಯಕ್ಕೆ ಅರ್ಜಿಯನ್ನು ಮಾಡಿಕೊಳ್ಳಬಹುದು; ಮತ್ತು ನ್ಯಾಯಾ ಲಯವು ತನಗೆ ಆವಶ್ಯಕವೆಂದು ಕಂಡು ಬಂದ ಪುರಾವೆಗಳನ್ನು ಸಾದರಪಡಿಸಿ ಕೊಂಡು ಆಪಾದನೆಯನ್ನು ಸ್ಥಿರೀಕರಿಸಬಹುದು, ತಿದ್ದುಪಡಿ ಮಾಡಬಹುದು, ಇಲ್ಲವೆ ಮುಕ್ತ ಮಾಡಬಹುದು. ಮತ್ತು ಪರಿಸ್ಥಿತಿಯಿಂದ ಅದಕ್ಕೆ ಯೋಗ್ಯವೆಂದು ಕಂಡು ಬಂದ ಹಾಗೆ ನ್ಯಾಯಾಲಯದ ವೆಚ್ಚದ ಬಗ್ಗೆ ಹುಕುಮು ಮಾಡಬಹುದು; ಇಲ್ಲವೆ

(೫) ಇಂತಹ ಅರ್ಜಿಯ ಬದಲು, ಸರಕಾರಕ್ಕೆ ಅಪೀಲು ಮಾಡಿಕೊಳ್ಳ ಬಹುದು; ಸರಕಾರವು ತನಗೆ ಯೋಗ್ಯವೆಂದು ಅನ್ನಿಸಿದಂತಹ ಹುಕುಮು ಮಾಡ ತಕ್ಕದ್ದು.

**ವಿವೇಚನೆ**

ಕಲಮು ೧೮೩ ರಲ್ಲಿ ಹೇಳಿದಂತೆ ಕಮಿಶನರರು ಯಾವುದೇ ವ್ಯಕ್ತಿಯನ್ನು ಆಪಾದಿಸಿ ಹುಕುಮು ಮಾಡಿದ್ದರೆ ಆ ವ್ಯಕ್ತಿಗೆ ಎರಡು ದಾರಿ. ಒಂದು ದಿವಾಣಿ ನ್ಯಾಯಾಲಯಕ್ಕೆ ಅರ್ಜಿ; ಇನ್ನೊಂದು ಸರಕಾರಕ್ಕೆ ಅಪೀಲು ಇವು ಕಮಿಶನರ ರಿಂದ ಆಪಾದನೆಯ ಪ್ರತಿ ಮುಟ್ಟಿದ ೩೦ ದಿವಸಗಳಲ್ಲಿ ಮಾಡಬೇಕು. ನ್ಯಾಯಾ ಲಯವು ಪುರಾವೆ ಸ್ವೀಕರಿಸಿ ಹುಕುಮು ಮಾಡಬಹುದು. ಸರಕಾರವು ತನಗೆ ಯೋಗ್ಯಕಂಡ ಹುಕುಮನ್ನು ಮಾಡತಕ್ಕದ್ದು.

**೧೮೪. ಮನ್ನಣೆ ಕೊಡದೇ ಇದ್ದ ಹಣದ ವಸೂಲಿ**

(೧) ಕಲಮು ೧೮೩ ರ ಉಪಕಲಮು (೨) ರನ್ವಯವಾಗಿ ಯಾವುದೇ ವ್ಯಕ್ತಿಯಿಂದ ಬಾಕಿ ಬರುವುದಿದೆಯೆಂದು ಕಮಿಶನರರಿಂದ ಪ್ರಮಾಣ ಸಹಿ ಮಾಡ ಲ್ಪಟ್ಟ ಪ್ರತಿಯೊಂದು ರಕಮು ಅಂತಹ ವ್ಯಕ್ತಿಯಿಂದ ತಾಲೂಕ ಬೋರ್ಡಿಗೆ ಕಮಿಶನರರ ನಿರ್ಣಯದ ಪ್ರತಿಯು ಮುಟ್ಟಿದ ಮುವ್ವತ್ತು ದಿವಸಗಳಲ್ಲಿ- ಆ ಕಾಲಾ ವಧಿಯೊಳಗೆ ಅವನು ಕಲಮು ೧೮೩ರಲ್ಲಿ ಅನುಕೂಲಿಸಲಾದಂತೆ ನ್ಯಾಯಾಲಯಕ್ಕೆ ಅರ್ಜಿಯನ್ನಾಗಲೀ ಇಲ್ಲವೆ ಸರಕಾರಕ್ಕೆ ಅಪೀಲನ್ನಾಗಲೀ ಮಾಡಿದ ಹೊರತು ಕೊಡಲ್ಪಡತಕ್ಕದ್ದು.

(೨) ಇಂತಹ ರಕಮು ಯೋಗ್ಯ ರೀತಿಯಲ್ಲಿ ಕೊಡಲ್ಪಡದಿದ್ದರೆ, ಇಲ್ಲವೆ ೧೮೩ನೇಯ ಕಲಮಿನನ್ವಯವಾಗಿ ನ್ಯಾಯಾಲಯವು ಇಲ್ಲವೆ ಸರಕಾರವು ಬಾಕಿ ಯೆಂದು ನಿರ್ಣಯಿಸಿದಂತಹ ರಕಮು ಯೋಗ್ಯರೀತಿಯಲ್ಲಿ ಕೊಡಲ್ಪಡದಿದ್ದರೆ, ಡೆಪ್ಯೂಟಿ ಕಮಿಶನರರಿಂದ ಆ ರಕಮು ಭೂಕಂದಾಯದ ವಸೂಲಿಯಂತೆ, ವಸೂ ಲಿಯ ವೆಚ್ಚದ ಸಹಿತವಾಗಿ ವಸೂಲ ಮಾಡಲ್ಪಡತಕ್ಕದ್ದು ಮತ್ತು ಅದು ತಾಲೂಕ ಬೋರ್ಡ ನಿಧಿಗೆ ಜಮಾ ಮಾಡಲ್ಪಡತಕ್ಕದ್ದು.

**ವಿವೇಚನೆ**

ಲೆಕ್ಕತಪಾಸಿಗನು ಮನ್ನಣೆ ಕೊಡದೆ ಇದ್ದ ವೆಚ್ಚದ ಹಣವು ಅದನ್ನು ಯಾರು ಅಧಿಕರಿಸಿದರೋ ಅವರು ಕೊಡಬೇಕೆಂದು ಆದ ಮೇಲೆ ಅದರ ವಸೂಲಿಯ ಪ್ರಶ್ನೆ ಬರುವುದು. ಅದರ ಬಗ್ಗೆ ಇಲ್ಲಿ ಹೇಳಲಾಗಿದೆ. ಹೀಗೆ ಬಾಕಿ ಬರುವುದಿದೆ ಎಂದು ಕಮಿಶನರರು ನಿರ್ಣಯ ಮಾಡಿ ಆ ಸಂಬಂಧಪಟ್ಟ ವ್ಯಕ್ತಿಗೆ ತಿಳಿಸಿದ ನಂತರ, ಆ ಹುಕುಮಿನ ಪ್ರತಿಯು ಆ ವ್ಯಕ್ತಿಗೆ ಮುಟ್ಟಿದ ತಾರೀಖಿನಿಂದ ೩೦ ದಿವಸಗಳಲ್ಲಿ ಆ ಬಾಕಿ ರಕಮನ್ನು ಕೊಡತಕ್ಕದ್ದು. ಆದರೆ ಆ ಮುವ್ವತ್ತು ದಿವಸಗಳ ಒಳಗೆ ಅವನು

೧೮೩ ನೆಯ ಕಲಮಿನ ಪ್ರಕಾರ ಕಮಿಶನರನ ಹುಕುಮು ರದ್ದಾಗಬೇಕೆಂದು ನ್ಯಾಯಾಲಯಕ್ಕೆ ಅರ್ಜಿ ಇಲ್ಲವೆ ಸರಕಾರಕ್ಕೆ ಅಪೀಲು ಮಾಡಿದ್ದರೆ, ಆ ಅರ್ಜಿ-ಇಲ್ಲವೆ ಅಪೀಲು ನಿರ್ಣಯವಾಗುವ ತನಕ ಅವನಿಗೆ ಸಮಯ ಸಿಗುತ್ತದೆ. ಅರ್ಜಿ ಮಾಡದೆ ಹೋದರೆ, ಮುವ್ವತ್ತು ದಿನದಲ್ಲಿ ಕೊಡವೆ ಇದ್ದರೆ, ಅರ್ಜಿಯ ನಂತರ ಇಲ್ಲವೆ ಅಪೀಲ ನಂತರ ನಿರ್ಣಯಿಸಲಾದ ಹಣವನ್ನು ಕೊಡದೆ ಇದ್ದರೆ, ಆಗ ಆ ಬಾಕಿ ಹಣವು ಭೂಕಂದಾಯದ ಬಾಕಿ ಎಂಬಂತೆ ಡೆಪ್ಯೂಟಿ ಕಮಿಶನರನು ವಸೂಲು ಮಾಡಿ ವಸೂಲಿಯ ವೆಚ್ಚವನ್ನು ವಸೂಲು ಮಾಡಿ ಅದನ್ನೆಲ್ಲ ತಾಲೂಕ ಬೋರ್ಡಿನ ನಿಧಿಗೆ ಜಮಾ ಮಾಡತಕ್ಕದ್ದು.

## ೧೮೫. ಬಾಕಿ ವಸೂಲಿಗಾಗಿ ವಿಧಾನ

(೧) ಬೇಡಿಕೆ ಸಲ್ಲಿಸದ ನಂತರ ಯಾವುದೇ ರಕಮು ಕೊಡಲ್ಪಡಬೇಕಾಗಿರುವಾಗ—

(ಅ) ಯಾವುದು ಈ ಕಾಯಿದೆಯ ಶರತುಗಳನ್ವಯವಾಗಿ ಈ ಪ್ರಕರಣದಲ್ಲಿ ಅನುಕೂಲಿಸಲಾದ ರೀತಿಯಲ್ಲಿ ವಸೂಲುಮಾಡಲ್ಪಡಬೇಕೆಂದು ಹೇಳಲಾಗಿರುವಾಗ; ಇಲ್ಲವೆ

(ಬ) ಯಾವುದು ಈ ಕಾಯಿದೆಯನ್ವಯವಾಗಿ ಇಲ್ಲವೆ ಅದರನ್ವಯವಾಗಿರುವ ಯಾವುದೇ ನಿಯಮ ಇಲ್ಲವೆ ಕ್ರಮನಿಯಮದನ್ವಯವಾಗಿ, ತಾಲೂಕ ಬೋರ್ಡಿಗೆಸಲ್ಲಬೇಕಾದ ಯಾವುದೇ ಬಾಕಿ ಹಣ ಇಲ್ಲವೆ ಕರ,ಫೀ, ಎಂದು ಮಾಗಣಿ ಮಾಡಲ್ಪಡಲು ಯೋಗ್ಯವಾಗಿರುವಾಗ,

ಅದು ಸಂದಾಯ ಯೋಗ್ಯವಾಗಿ ಅದು ಬಾಕಿಯಾದ ನಂತರ ಹದಿನೈದು ದಿನಗಳ ವರೆಗೆ ಕೊಡದೆ ಉಳಿದರೆ, ಮುಖ್ಯ ಕಾರ್ಯಾಧಿಕಾರಿಯು ಇಲ್ಲವೆ ಈ ಸಂಬಂಧದಲ್ಲಿ ಲಿಖಿತವಾಗಿ ಅವನಿಂದ ಯೋಗ್ಯವಾಗಿ ಅಧಿಕರಿಸಲ್ಪಟ್ಟ ಅಧಿಕಾರಿಯು (ಈ ಮುಂದೆ ಅವರಿಗೆ ಅಧಿಕರಿಸಲ್ಪಟ್ಟ ಅಧಿಕಾರಿಯೆಂದು ಕರೆಯಲಾಗಿದೆ) ಇಂತಹ ರಕಮನ್ನು ಕೊಡಲು ಪಾತ್ರರಾಗಿದ್ದವ್ಯಕ್ತಿ ಇಲ್ಲವೆ ವ್ಯಕ್ತಿಗಳಮೇಲೆ ಗೊತ್ತುಮಾಡಿದ ನಮೂನೆಯಲ್ಲಿ ನೋಟೀಸನ್ನು ಜಾರಿ ಮಾಡಿಸತಕ್ಕದ್ದು.

(೨) ಇಂತಹ ಬೇಡಿಕೆಯ ನೋಟೀಸು ಜಾರಿಯಾದ ಹದಿನೈದು ದಿವಸಗಳಲ್ಲಿ ಇಂತಹ ವ್ಯಕ್ತಿಯು ಬಾಕಿಯಾಗಿದ್ದ ಹಣವನ್ನು ಕೊಡದೆ ಇದ್ದರೆ, ಇಲ್ಲವೆ ಅದನ್ನು ಯಾಕೆ ಕೊಡಬಾರದೆಂಬ ಬಗ್ಗೆ ಮುಖ್ಯ ಕಾರ್ಯಾಧಿಕಾರಿಗೆ ಸಮಾಧಾನವಾಗುವಂತೆ ಕಾರಣವನ್ನು ತೋರಿಸದೆ ಇದ್ದರೆ, ತಪ್ಪಿತಸ್ಥನ ಜಂಗಮ ಆಸ್ತಿಯ ಜಪ್ತಿ ಮತ್ತು ಮಾರಾಟದಿಂದ ಅಂತಹ ರಕಮನ್ನು ಎಲ್ಲ ವೆಚ್ಚಗಳೊಂದಿಗೆ ಮುಖ್ಯ ಕಾರ್ಯಾಧಿಕಾರಿಯು ಇಲ್ಲವೆ ಅಧಿಕರಿಸಲ್ಪಟ್ಟ ಅಧಿಕಾರಿಯು ವಸೂಲ ಮಾಡಬಹುದು.

(೩) ಉಪಕಲಮು (೨) ರನ್ವಯವಾಗಿ ಆಸ್ತಿಯ ಜಪ್ತಿ ಮತ್ತು ಮಾರಾಟ ವನ್ನು ಪರಿಣಾಮಕಾರಿಯಾಗಿಸುವುದರ ಸಲುವಾಗಿ ಮುಖ್ಯ ಕಾರ್ಯಾಧಿಕಾರಿಯು ಇಲ್ಲವೆ ಅಧಿಕರಿಸಲ್ಪಟ್ಟ ಅಧಿಕಾರಿಯು ಗೊತ್ತು ಮಾಡಿದ ನಮೂನೆಯಲ್ಲಿ ವಾರಂಟನ್ನು ಹೊರಡಿಸತಕ್ಕದ್ದು ಮತ್ತು ವಾರಂಟ ಫೀ ಎಂದು ಒಂದೊಂದು ವಾರಂಟಿಗೆ ಹನ್ನೆರಡು ನಯೆಪೈಸೆಯಂತೆ ಆಕರಿಸತಕ್ಕದ್ದು.

(೪) ಜಪ್ತಿಮಾಡಿದ ಆಸ್ತಿಯ ವಿವರವನ್ನು ಮುಖ ಕಾರ್ಯಾಧಿಕಾರಿ ಇಲ್ಲವೆ ಅಧಿಕರಿಸಲ್ಪಟ್ಟ ಅಧಿಕಾರಿಯು ಕಂಡುಹಿಡಿದು,ಯಾದಿಮಾಡಿ ತಪ್ಪಿತಸ್ಥನು ಆ ವಿವರ ಗಳನ್ನು ಬೇಡಿದರೆ ಆ ವಿವರವುಳ್ಳ ಪತ್ರಿಕೆಯ ಪ್ರತಿಯನ್ನು ಅವನಿಗೆ ಇಲ್ಲವೆ ಅವನ ಪರವಾಗಿ ಯಾವುದೇ ವ್ಯಕ್ತಿಗೆ ಕೊಡತಕ್ಕದ್ದು. ಜಪ್ತಿಯಾದ ನಂತರದ ಹದಿನೈದು ದಿನಗಳಲ್ಲಿ ರಕಮು ಕೊಡಲ್ಪಡದಿದ್ದರೆ, ಆ ಆಸ್ತಿಯನ್ನು ಮಾರಾಟ ಮಾಡಿಸ ಬಹುದು.

(೫) ಕರ, ಫೀ ಇಲ್ಲವೆ ಇತರ ಬಾಕಿ ರಕಮನ್ನು ಕೊಡುವ ಪ್ರತಿಯೊಬ್ಬ ವ್ಯಕ್ತಿಗೆ ಮುಖ್ಯ ಕಾರ್ಯಾಧಿಕಾರಿಯು ಇಲ್ಲವೆ ಅಧಿಕರಿಸಲ್ಪಟ್ಟ ಅಧಿಕಾರಿಯು ತಾನು ಸಹಿ ಮಾಡಿದ ಪಾವತಿಯನ್ನು ಕೊಡತಕ್ಕದ್ದು ಇಲ್ಲವೆ ಕೊಡುವಂತೆ ಮಾಡಿಸ ತಕ್ಕದ್ದು. ಇಂತಹ ಪಾವತಿಯು—

(ಅ) ಅದನ್ನು ಕೊಟ್ಟ ತಾರೀಖು,

(ಬ) ಯಾವನಿಂದ ಕೊಡಲ್ಪಟ್ಟಿತೋ ಆ ವ್ಯಕ್ತಿಯ ಹೆಸರು,

(ಕ) ಯಾತರ ಸಲುವಾಗಿ ಹಣವು ಸಲ್ಲಿಸಲ್ಪಟ್ಟಿದೆಯೋ ಆ ಕರ, ಫೀ, ಇಲ್ಲವೆ ಬಾಕಿಯಾಗಿದ್ದ ವಿಷಯ,

(ಡ) ಯಾವ ಕಾಲಾವಧಿಯ ಸಲುವಾಗಿ ಹಣವು ಸಲ್ಲಿಸಲ್ಪಟ್ಟಿದೆ,

(ಇ) ಯಾತರ ಸಂಬಂಧವಾಗಿ ಹಣವು ದಯಪಾಲಿಸಲ್ಪಟ್ಟಿದೆ,

ಎಂಬ ವಿಷಯಗಳನ್ನು ನಿರ್ದಿಷ್ಟಪಡಿಸತಕ್ಕದ್ದು.

## ವಿವೇಚನೆ

ತಾಲೂಕ ಬೋರ್ಡಿಗೆ ರಕಮು ಬಾಕಿಯಾಗುವುದು ಅದು ಬೇಡಲ್ಪಟ್ಟ ದಿನದಿಂದ. ಹೀಗೆ ಬೇಡಿಕೆ ಸಲ್ಲಿಸಿದ ಮೇಲೆ ಅದು ಬಾಕಿಯಾದ ಮೇಲೆ, ಆ ಹಣವು ಆ ಬಾಕಿ ಸಂಬಂಧವಾಗಿ ಕೊಡಲ್ಪಡಬೇಕು. ಈ ಪ್ರಕರಣದಲ್ಲಿ ಹೇಳಿದ ರೀತಿ ಯಲ್ಲಿ ವಸೂಲ ಮಾಡಲ್ಪಡಬೇಕೆಂದು ಈ ಕಾಯಿದೆಯಲ್ಲಿ, ನಿಯಮಗಳಲ್ಲಿ, ಕ್ರಮ ನಿಯಮಗಳಲ್ಲಿ ಹೇಳಿದಾಗ, ಅದು ಈ ಕಲಮಿನಲ್ಲಿ ಹೇಳಿದಂತೆ ವಸೂಲ ಮಾಡಲ್ಪಡಬೇಕು.

ಬೇಡಿಕೆಯ ನಂತರ ಬಾಕಿಯಾದ ಹದಿನೈದು ದಿನಗಳಲ್ಲಿ ಆ ರಕಮು ಕೊಡ ಲ್ಪಡದಿದ್ದರೆ, ಮುಖ್ಯ ಕಾರ್ಯಾಧಿಕಾರಿ ಇಲ್ಲವೆ ಅಧಿಕರಿಸಲ್ಪಟ್ಟ ಅಧಿಕಾರಿಯು

ಒಂದು ನೋಟೀಸು ಕೊಡತಕ್ಕದ್ದು. ಆ ನೋಟೀಸು ಲಿಖಿತವಾಗಿದ್ದು ಗೊತ್ತು ಮಾಡಿದ ನಮೂನೆಯಲ್ಲಿ ಇರತಕ್ಕದ್ದು. ಯಾವ ವ್ಯಕ್ತಿಯಿಂದ ಹಣವು ಸಲ್ಲಬೇಕಾಗಿರುವುದೋ ಆ ವ್ಯಕ್ತಿಯ ಮೇಲೆ ನೋಟೀಸು ಜಾರಿಮಾಡಲ್ಪಡಬೇಕು.

ಹೀಗೆ ಜಾರಿ ಆದ ನಂತರ ೧೫ ದಿವಸಗಳಲ್ಲಿ ಆ ವ್ಯಕ್ತಿಯು ಹಣವನ್ನು ಕೊಡಲಿಲ್ಲ, ಯಾಕೆ ಕೊಡಬಾರದು ಎಂಬ ಕಾರಣವನ್ನು ಮುಖ್ಯ ಕಾರ್ಯಾಧಿಕಾರಿಗೆ ಸಮಾಧಾನವಾಗುವಂತೆ ತೋರಿಸಲಿಲ್ಲ, ಅಂದರೆ ಮುಂದೆ ಮುಖ್ಯ ಕಾರ್ಯಾಧಿಕಾರಿ ಇಲ್ಲವೆ ಅಧಿಕರಿಸಲ್ಪಟ್ಟ ಅಧಿಕಾರಿಯು ಆ ತಪ್ಪಿತಸ್ಥನ ಜಂಗಮು ಆಸ್ತಿ ಜಪ್ತಮಾಡಿ ಮಾರಿಸಿ ಹಣ ವಸೂಲ ಮಾಡಬಹುದು. ಹೀಗೆ ಜಪ್ತಮಾಡಲು ಆಸ್ತಿ ಮಾರಾಟ ಮಾಡಿಸಲು ಅನುಕೂಲವಾಗುವುದಕ್ಕಾಗಿ ವಾರಂಟು ಹೊರಡಿಸತಕ್ಕದ್ದು. ಆ ವಾರಂಟ ಫೀ ಒಂದೊಂದು ವಾರಂಟಕ್ಕೆ ೧೨ ನಯೆ ಪೈಸೆ.

ಜಪ್ತುಮಾಡಿದನಂತರ ಆ ಸಾದಾನುಗಳ ಯಾದಿ ತಯಾರು ಮಾಡಿಸಬೇಕು. ಅದರ ಮಾಲಕನು ಬೇಡಿದರೆ ಆ ಯಾದಿಯ ನಕಲನ್ನು ತಪ್ಪಿತಸ್ಥನಿಗೆ ಇಲ್ಲವೆ ಅವನ ಪರವಾಗಿ ಯಾರಿಗಾದರೂ ಕೊಡಬೇಕು. ಇಷ್ಟಾದ ನಂತರ ಹದಿನೈದು ದಿನಗಳಲ್ಲಿ ಹಣವನ್ನು ಕೊಡದಿದ್ದರೆ, ಆ ಆಸ್ತಿಯನ್ನು ಮಾರಾಟ ಮಾಡಿಸಬಹುದು.

ಬಾಕಿ ಇದ್ದ ಹಣದಷ್ಟು ಆಸ್ತಿಯ ಕಿಮ್ಮತ್ತು ಆಗದಿದ್ದರೆ, ಇಲ್ಲವೆ ಮಾರಾಟವಾದಾಗ ಹಣವು ಹೆಚ್ಚಿಗೆ ಬಂದರೆ ಏನು ಮಾಡಬೇಕೆಂಬುದನ್ನು ಈ ಕಲಮು ಹೇಳಿಲ್ಲ.

ಪಾವತಿಯಲ್ಲಿ ಏನೇನು ಇರಬೇಕೆಂಬ ಬಗ್ಗೆ ವಿವರಗಳನ್ನು ಕೊಡಲಾಗಿದೆ. ತಾರೀಖು, ಕೊಟ್ಟವನ ಹೆಸರು, ಯಾವ ಕರ, ಫೀ, ಎಂಬುದರ ವಿವರ, ಯಾವ ಕಾಲಾವಧಿಗಾಗಿ ಮುಂತಾದ ವಿವರ ಕೊಡಬೇಕು. ಅಂದರೆ ಪಾವತಿಯಿಂದ ಎಲ್ಲವೂ ತಿಳಿವುದು. ಪಾವತಿ ಸಹಿ ಮಾಡಲ್ಪಟ್ಟಿರಬೇಕು.

## ೧೮೬. ಜಪ್ತಿ ಹಾಗೂ ಮಾರಾಟಕ್ಕಾಗಿ ಕರಾರುಗಳು

ಯಾವುದೇ ಕರ, ಫೀ ಇಲ್ಲವೆ ಇತರ ಬಾಕಿ ಹಣವನ್ನು ಕೊಡದೆ ಇರುವದರ ಪರಿಣಾಮವಾಗಿ ಕಲಮು ೧೮೫ ರನ್ವಯವಾಗಿ ಯಾವುದೇ ಆಸ್ತಿಯು ಜಪ್ತಿ ಮಾಡಲ್ಪಟ್ಟಾಗ, ಹಿಡಿಯಲ್ಪಟ್ಟಾಗ ಇಲ್ಲವೆ ಮಾರಾಟ ಮಾಡಲ್ಪಟ್ಟಾಗ, ಇಂತಹ ಜಪ್ತಿ ಇಲ್ಲವೆ ಹಿಡಿಯುವುದು ಇಲ್ಲವೆ ಮಾರಾಟವು ಈ ಕೆಳಗಿನ ಉಪಕಲಮುಗಳ ಮತ್ತು ೧೯೦೮ (೧೯೦೮ ರ ಕೇಂದ್ರ ಕಾಯಿದೆ ನಂ. v) ರ ಸಿವಿಲ ಪ್ರೊಸೀಜರ ಕೋಡದ ಕಲಮು ೬೨ ರ ಶರತುಗಳ ಅಂಕಿತವಾಗಿ ಪರಿಣಾಮಕಾರಿಯಾಗಿ ಮಾಡತಕ್ಕದ್ದು.

(೨) ೧೯೦೮ (೧೯೦೮ ರ ಕೇಂದ್ರ ಕಾಯಿದೆ ನಂ. v) ರ ಸಿವಿಲ ಪ್ರೊಸೀಜರ ಕೋಡದಿಂದ ಹುಕುಮುನಾಮೆಯ ದರಖಾಸ್ತದಲ್ಲಿ ಜಪ್ತಿ ಇಲ್ಲವೆ ಮಾರಾಟದ

ವಿನಾಯತಿಯನ್ನು ಪಡೆದಂತಹ ಎಲ್ಲ ಆಸ್ತಿಯು ಈ ಕಲಮಿನನ್ವಯವಾಗಿ ಜಪ್ತ ಇಲ್ಲವೆ ಮಾರಾಟದಿಂದ ವಿನಾಯತಿ ಪಡೆಯತಕ್ಕದ್ದು.

(೩) ಜಪ್ತಿಯು ಅವಶ್ಯಕತೆಗಿಂತ ಹೆಚ್ಚಾಗತಕ್ಕದ್ದಲ್ಲ. ಅಂದರೆ, ಜಪ್ತ ಮಾಡಲಾದ ಆಸ್ತಿಯ ಬೆಲೆಯು ಶಕ್ಯವಾದಷ್ಟು ಮಟ್ಟಿಗೆ, ಕರ, ಫೀ, ಇಲ್ಲವೆ ಇತರ ಬಾಕಿ ಹಣವು ಇವುಗಳ ಲೆಕ್ಕದಲ್ಲಿ ಬಾಕಿಯಾಗಿದ್ದ ರಕಮು ಮತ್ತು ಜಪ್ತಿ ಫೀ, ಮತ್ತು ಆ ಆಸ್ತಿಯನ್ನು ಹಿಡಿದಿಡುವುದಕ್ಕೆ ಮತ್ತು ಮಾರಾಟ ಮಾಡುವುದಕ್ಕೆ ಆನುಷಂಗಿಕವಾಗಿರುವ ಸಂಭವನೀಯ ವೆಚ್ಚ ಇವೆಲ್ಲವುಗಳಿಗೆ ಸರಿಸಮಾನವಾಗುವ ಹಾಗೆ ಇರತಕ್ಕದ್ದು.

(೪) ಜಪ್ತಿ ಮಾಡಿದ ಆಸ್ತಿಯು ಶೀಘ್ರ ಮತ್ತು ನೈಸರ್ಗಿಕವಾಗಿ ಕೊಳೆಯು ವಂತಹದು ಆಗಿದ್ದರೆ, ಇಲ್ಲವೆ ಆಸ್ತಿಯನ್ನು ಜಪ್ತಮಾಡುವ ವ್ಯಕ್ತಿಯ ಅಭಿಪ್ರಾಯದಲ್ಲಿ ಬಾಕಿಯಾಗಿದ್ದ ಹಣದ ಜತೆಗೆ ಈ ಆಸ್ತಿಯನ್ನು ಸ್ವಾಧೀನದಲ್ಲಿಟ್ಟುಕೊಳ್ಳುವ ವೆಚ್ಚವು ಸೇರಿ, ಆಸ್ತಿಯ ಬೆಲೆಯಕಿಂತ ಹೆಚ್ಚಾಗು ತ್ತಿದ್ದರೆ ಅಂತಹ ವ್ಯಕ್ತಿಯು ಅಂತಹ ಆಸ್ತಿಯನ್ನು ಜಪ್ತ ಮಾಡಿದ ಕೂಡಲೇ ಯಾರ ವಶದಿಂದ ಆ ಆಸ್ತಿಯನ್ನು ಜಪ್ತ ಮಾಡಲಾಗಿರುವುದೋ ಆ ವ್ಯಕ್ತಿಗೆ ಆ ಆಸ್ತಿಯು ಕೂಡಲೇ ಮಾರಲ್ಪಡುವುದೆಂದು ನೋಟೀಸು ಕೊಡತಕ್ಕದ್ದು. ಮತ್ತು ಬಾಕಿಯಾಗಿದ್ದ ಹಣವು ತತ್‌ಕ್ಷಣ ಕೊಡಲ್ಪಟ್ಟ ಹೊರತು, ಆ ನೋಟೀಸಿನನು ಸಾರವಾಗಿ ಆ ಆಸ್ತಿಯನ್ನು ಮಾರಾಟ ಮಾಡತಕ್ಕದ್ದು.

(೫) ಕರ, ಫೀಯ ಹಣದ ಇಲ್ಲವೆ ಇತರ ಬಾಕಿ ಹಣದ ಬಗ್ಗೆ ಸಲ್ಲಬೇಕಾ ಗಿದ್ದ ರಕಮನ್ನು ಮತ್ತು ಮಾರಾಟದ ವೆಚ್ಚ ಸಹಿತವಾದ ಮೇಲ್ಕಾಣಿಸಿದ ಎಲ್ಲ ವೆಚ್ಚವನ್ನು ಮುರಿದುಕೊಂಡು ಉಳಿಯಬಹುದಾದಂತಹ ಹೆಚ್ಚಿನ ಹಣವನ್ನು ಆ ಆಸ್ತಿಯ ಮಾಲಕನಿಗೆ ಕೊಡಲ್ಪಡತಕ್ಕದ್ದು.

(೬) ಕಲಮು ೧೮೫ ರನ್ವಯವಾಗಿ ಜಪ್ತ ಮಾಡಲಾದ ಜಂಗಮ ಆಸ್ತಿಗೆ ಯಾವುದೇ ಮೂರನೆಯ ವ್ಯಕ್ತಿಯು ಯಾವುದೇ ಮಾಗಣಿಯನ್ನು ಮುಂದೆ ಮಾಡಿ ದರೆ, ಆ ಮಾಗಣಿದಾರನಿಗೆ ಯೋಗ್ಯ ನೋಟೀಸು ಕೊಟ್ಟ ನಂತರ ಮುಖ್ಯ ಕಾರ್ಯಾ ಧಿಕಾರಿಯು ಅವನಿಂದ ವಿಚಾರಣೆ ನಡೆಸಿ ಮಾಗಣಿಯನ್ನು ಒಪ್ಪತಕ್ಕದ್ದು. ಇಲ್ಲವೆ ನಿರಾಕರಿಸತಕ್ಕದ್ದು. ಆ ಮಾಗಣಿಯು ಪೂರ್ಣವಾಗಿ ಇಲ್ಲವೆ ಅಂಶತಃ ಒಪ್ಪ ಲ್ಪಟ್ಟರೆ, ಆ ಆಸ್ತಿಯು ತದನುಸಾರವಾಗಿ ವ್ಯವಸ್ಥೆ ಮಾಡಲ್ಪಡತಕ್ಕದ್ದು. ಒಪ್ಪಿತ ವಾದುದನ್ನು ಹೊರತು ಪಡಿಸಿ ಉಳಿದ ಆಸ್ತಿಯು ಮಾರಲ್ಪಡತಕ್ಕದ್ದು. ಮತ್ತು ಕೊಂಡವನ ಒಡೆತನದ ಹಕ್ಕು ಎಲ್ಲ ಉದ್ದೇಶಗಳಿಗಾಗಿ ಭದ್ರವಾಗಿರತಕ್ಕದ್ದು. ಮತ್ತು ಮಾರಾಟದಿಂದ ಬಂದ ಹಣವು ಈ ಮೊದಲು ನಿರ್ದೇಶಿಸಲಾದಂತೆ ವಿನಿ ಯೋಗಿಸಲ್ಪಡತಕ್ಕದ್ದು.

ಆದರೆ ಜಪ್ತಿಯಾದ ಆಸ್ತಿಯಲ್ಲಿ ಯಾವುದೇ ಹಿತಾಸಕ್ತಿ ಇದ್ದ, ಯಾವುದೇ ವ್ಯಕ್ತಿಯು ಇಲ್ಲವೆ ಮಾಗಣಿದಾರನು ಅಧಿಕಾರವಿರುವ ದಿವಾಣಿ ನ್ಯಾಯಾಲಯದಲ್ಲಿ ಪರಿಹಾರ ಪಡೆಯಲು ಈ ಉಪಕಲಮಿನಲ್ಲಿ ಹೇಳಿದ ಯಾವುದೂ ಆತಂಕವುಂಟು ಮಾಡುವುದೆಂದು ಗಣಿಸತಕ್ಕದ್ದಲ್ಲ.

**ವಿವೇಚನೆ**

ಜಪ್ತಿ ಮಾಡಿದ ಮೇಲೆ ಮಾರಾಟ ಮಾಡಲ್ಪಡತಕ್ಕದ್ದು ಎಂಬುದು ನಿಶ್ಚಿತ. ಆದರ ಬಗ್ಗೆ ವಿಧಾನ ಹೇಗೆ ಎಂಬುದನ್ನು ಇಲ್ಲಿ ಹೇಳಲಾಗಿದೆ. ಈ ಕಲಮಿನ ಉಪ ಕಲಮುಗಳ ಜೊತೆಗೆ ಸಿವಿಲ ಪ್ರೊಸೀಜರ ಕೋಡದ, ಕಲಮು ೬೨ ನ್ನು ನೋಡ ಬೇಕು. ಸಿವಿಲ್ ಪ್ರೊಸೀಜರ ಕೋಡದ ಕಲಮು ೬೨ ರಲ್ಲಿ ವಾಸವಾಗಿರುವ ಮನೆ ಗಳಲ್ಲಿಯ ಆಸ್ತಿಯನ್ನು ಹೇಗೆ ಜಪ್ತ ಮಾಡಬೇಕೆಂಬ ಬಗ್ಗೆ ಹೇಳಲಾಗಿದೆ. ಜಪ್ತ ಮಾಡುವ ಉದ್ದೇಶದಿಂದ ಬಂದವನು ವಾಸವಾಗಿರುವ ಮನೆಯನ್ನು ಆ ಉದ್ದೇಶ ಕ್ಕಾಗಿ ಸೂರ್ಯಾಸ್ತದ ನಂತರ ಹಾಗೂ ಸೂರ್ಯೋದಯದಕಿಂತ ಮೊದಲು ಪ್ರವೇಶ ಮಾಡತಕ್ಕದ್ದಲ್ಲ. ಋಣಕೋನ ಸ್ವಾಧೀನದಲ್ಲಿದ್ದ ಹೊರತು ಯಾವುದೇ ಮನೆಯ ಹೊರಗಿನ ಬಾಗಿಲವನ್ನು ಅವನಃ ಪ್ರವೇಶಕ್ಕೆ ಅಡ್ಡಿ ಮಾಡಿದ ಹೊರತು ಮುರಿಯತಕ್ಕದ್ದಲ್ಲ. ಆದರೆ ಒಮ್ಮೆ ಒಳಗೆ ಪ್ರವೇಶಮಾಡಿವ ಮೇಲೆ ಒಳಗೆ ಯಾವು ದಾದರೂ ಕೋಣೆಯಲ್ಲಿ ಆಸ್ತಿ ಇದೆಯೆಂದು ನಂಬಲು ಅವನಿಗೆ ಕಾರಣವಿದ್ದರೆ ಅದರ ಬಾಗಿಲು ಮುರಿದು ಪ್ರವೇಶ ಮಾಡಬಹುದು. ವಾಸವಾಗಿರುವ ಮನೆಯ ಕೋಣೆಯು ಹೆಂಗಸಿನ ಸ್ವಾಧೀನದಲ್ಲಿದ್ದು ಆ ಹೆಣ್ಣುಮಗಳು ಆ ದೇಶದ ಪದ್ಧತಿ ಗನುಸಾರವಾಗಿ ಬಹಿರಂಗದಲ್ಲಿ ಕಾಣಿಸಿಕೊಳ್ಳದೆ ಇರುವಂತಹಳು ಇದ್ದರೆ, ಆ ಹೆಂಗಸಿಗೆ ಅಲ್ಲಿಂದ ಬೇರೆ ಕಡೆಗೆ ಹೋಗಬಹುದೆಂದು ಅವಳಿಗೆ ತಿಳಿಸಬೇಕು. ಅವಳಿಗೆ ಬೇರೆ ಕಡೆಗೆ ಹೋಗುವುದಕ್ಕೆ ಯೋಗ್ಯ ಸಮಯವನ್ನು ಕೊಟ್ಟ ಮೇಲೆ, ಮತ್ತು ಅವಳಿಗೆ ಎಲ್ಲ ಅನುಕೂಲತೆಗಳನ್ನು ಮಾಡಿಕೊಟ್ಟು, ಜಪ್ತಿಗಾಗಿ ಬಂದ ವನು ಆ ಕೋಣೆಯನ್ನು ಪ್ರವೇಶ ಮಾಡತಕ್ಕದ್ದು. ಆದರೆ ಅಲ್ಲಿಯ ವಸ್ತುಗಳು ರಹಸ್ಯವಾಗಿ ಸಾಗಿಸಲ್ಪಡುವ ಬಗ್ಗೆ ಎಲ್ಲ ಬಗೆಯ ಜಾಗರೂಕತೆ ವಹಿಸತಕ್ಕದ್ದು.

ಸಿವಿಲ ಪ್ರೊಸೀಜರ ಕೋಡದಲ್ಲಿ ಯಾವುದೇ ಆಸ್ತಿಯ ಜಪ್ತಿ ಇಲ್ಲವೆ ಮಾರಾ ಟದ ಬಗ್ಗೆ ವಿನಾಯತಿ ಕೊಡಲಾಗಿದ್ದರೆ ಅದನ್ನು ಪಾಲಿಸಬೇಕೆಂದು ಹೇಳಲಾಗಿದೆ. ಸಿವಿಲ ಪ್ರೊಸೀಜರ ಕೋಡದಲ್ಲಿ ಕಲಮು ೬೦ ರಲ್ಲಿ ಯಾವ ಆಸ್ತಿಗಳು ಜಪ್ತ ಮಾಡಲು ಪಾತ್ರವಾಗಿವೆ ಎಂದು ಹೇಳಿ ೬೧ ನೇ ಕಲಮಿನಲ್ಲಿ ಕೆಲವು ವಿನಾಯತಿ ಗಳನ್ನು ಹೇಳಿದೆ. ಒಕ್ಕಲುತನದ ಹುಟ್ಟುವಳಿ, ಕೈಗಾರಿಕೆಯ ಕಸಬಿನ ಉಪಕರಣ ಗಳು, ಮುಂತಾದ ಜೀವನಾವಶ್ಯಕವಾದ ವಸ್ತುಗಳನ್ನು ಜಪ್ತ ಮಾಡಲಾಗದೆಂದು ಸೂಚಿಸಲಾಗಿದೆ. ಒಕ್ಕಲುತನದ ಉಪಕರಣಗಳು ಈ ಮಾಲಿಕೆಯಲ್ಲಿ ಬರುವುವು.

ಜಪ್ತಿ ಮಾಡಬಹುದಾದ ಆಸ್ತಿಯು ಯಾವ ಬಾಕಿ ಹಣಕ್ಕಾಗಿ ಇರುವುದೋ ಅದಕ್ಕಿಂತ ಹೆಚ್ಚು ಆಗಬಾರದು. ಇವರಲ್ಲಿ ಜಪ್ತಿ, ಮಾರಾಟ ಮುಂತಾದ ವೆಚ್ಚದ ಹಣವನ್ನು ಸೇರಿಸಿ ಅವಕ್ಕೆ ಸಮವಾಗುವಷ್ಟು ಬೆಲೆಯು ಬರುವ ಹಾಗೆ ಇರುವಷ್ಟು ಆಸ್ತಿಯನ್ನು ಮಾತ್ರ ಜಪ್ತಿ ಮಾಡಬೇಕೆಂದು ಸೂಚಿಸಲಾಗಿದೆ. ಜಪ್ತು ಮಾಡಲಾದ ಆಸ್ತಿಯು ತೀವ್ರ ಹಾಳಾಗುವ ಇಲ್ಲವೆ ಕೊಳೆತು ಹೋಗುವಂತಹದು ಇದ್ದರೆ ಮಾಲಕನಿಗೆ ನೋಟೀಸು ಕೊಟ್ಟು ಅವನ್ನು ಕೂಡಲೇ ಮಾರಿಸಬೇಕು. ಮಾರುವುದಕ್ಕಿಂತ ಮೊದಲು ಅವನು ಹಣ ಕೊಟ್ಟರೆ ಮಾರಿಸಬಾರದು. ಮಾರಾಟದಿಂದ ಬಂದ ಹಣವು ಬಾಕಿ ಹಣದಕಿಂತ ಹೆಚ್ಚಾದರೆ, ಎಲ್ಲ ವೆಚ್ಚಗಳನ್ನು ಮುರಿದುಕೊಂಡು ಮಾಲಿಕನಿಗೆ ಅವನ್ನು ಕೊಡಬೇಕು.

ಜಪ್ತ ಮಾಡಿದ ಆಸ್ತಿಯು ಜಪ್ತ ಮಾಡುವಾಗ ಬಾಕಿ ಇಟ್ಟುಕೊಂಡವನ ಆಸ್ತಿಯೆಂದು ನಂಬಿ ಜಪ್ತ ಮಾಡಲಾಗಿರುವುದು. ಆದರೆ ಯಾರಾದರೂ ಮೂರನೆಯವನು ಆ ಆಸ್ತಿ ತನ್ನದೆಂದು ಮುಂದೆ ಬಂದರೆ, ಆ ಬಗ್ಗೆ ಅವನಿಗೆ ನೋಟೀಸು ಕೊಟ್ಟು ವಿಚಾರಣೆ ನಡಿಸಿ, ಅವನ ವಾದವನ್ನು ಒಪ್ಪಬಹುದು ಇಲ್ಲವೆ ನಿರಾಕರಿಸಬಹುದು. ಒಪ್ಪಿದರೆ ಅವನ ಆಸ್ತಿ ಅವನಿಗೆ ಕೊಡಬಹುದು. ಒಪ್ಪದೆ ಇದ್ದ ಆಸ್ತಿಯನ್ನು ಮಾರಿಸತಕ್ಕದ್ದು. ಆದರೆ ಹಾಗೆ ಮಾಗಣಿ ಮಾಡಿದವನು ತನ್ನ ಹಕ್ಕು ಪ್ರಸ್ಥಾಪನೆಗಾಗಿ ದಿವಾಣಿ ನ್ಯಾಯಾಲಯಕ್ಕೆ ಹೋಗಬೇಕೆಂದರೆ ಈ ಕಲಮು ಅಂತಹನಿಗೆ ಅಡ್ಡಿಯಾಗದು.

# ಭಾಗ ನಾಲ್ಕು

## ಪ್ರಕರಣ : ೧೦ : ಜಿಲ್ಲಾ ಅಭಿವೃದ್ಧಿ ಮಂಡಳಗಳು

### ೧೮೭. ಜಿಲ್ಲಾ ಮಂಡಳಗಳ ರಚನೆ

(೧) ಪ್ರಕಟನೆ–ಪರಿಪತ್ರದಿಂದ ಸರಕಾರವು ಒಂದು ಭೂಕಂದಾಯ ಜಿಲ್ಲೆಗೆ ಒಂದು ಜಿಲ್ಲಾ ಅಭಿವೃದ್ಧಿ ಮಂಡಳವನ್ನು ರಚಿತಕ್ಕದ್ದು.

(೨) ಜಿಲ್ಲಾ ಅಭಿವೃದ್ಧಿ ಮಂಡಳದಲ್ಲಿ—

(i) ಆ ಜಿಲ್ಲೆಯ ಡೆಪ್ಯೂಟಿ ಕಮಿಶನರನು;

(ii) ಯಾರ ಮತದಾರ ಸಂಘವು ಆ ಜಿಲ್ಲೆಯಲ್ಲಿ ಇರುವುದೋ ಯಾರು ಇಡಿ ಜಿಲ್ಲೆಯನ್ನು ಇಲ್ಲವೆ ಅದರ ಭಾಗವನ್ನು ಪ್ರತಿನಿಧಿಸುವರೋ ಅಂತಹ, ಲೋಕಸಭೆಯ ಸದಸ್ಯರು, ರಾಜ್ಯದ ಶಾಸನ ಸಭೆಯ ಹಾಗೂ ರಾಜ್ಯದ ಶಾಸನ ಪರಿಷತ್ತಿನ ಸದಸ್ಯರು,

(iii) ಪ್ರಾದೇಶಿಕ ಮತದಾರ ಸಂಘಗಳಿಂದ ಆರಿಸಲ್ಪಡದೆ ಇದ್ದ, ಜಿಲ್ಲೆ ಯಲ್ಲಿ ಸಾಮಾನ್ಯವಾಗಿ ವಾಸವಾಗಿರುವ ರಾಜ್ಯಸಭೆಯ ಮತ್ತು ರಾಜ್ಯದ ಶಾಸನ ಪರಿಷತ್ತಿನ ಸದಸ್ಯರು,

(iv) ಜಿಲ್ಲೆಯಲ್ಲಿಯ ತಾಲೂಕ ಬೋರ್ಡುಗಳ ಆ ಕಾಲಕ್ಕೆ ಅಧಿಕಾರದಲ್ಲಿ ರುವ ಅಧ್ಯಕ್ಷರು,

(v) ಸರಕಾರದಿಂದ ಸದಸ್ಯರೆಂದು ನಾಮಕರಣ ಹೊಂದಬಹುದಾದ, ಹದಿನೈದಕ್ಕಿಂತ ಹೆಚ್ಚು ಆಗದಂತಹ ಆ ಜಿಲ್ಲೆಯಲ್ಲಿ ಕೆಲಸ ಮಾಡುವ ಸರಕಾರೀ ಅಧಿಕಾರಿಗಳು,

(vi) ಸರಕಾರದಿಂದ ನಾಮಕರಣ ಹೊಂದಿದ ಪರಿಶಿಷ್ಟ ವರ್ಗದ ಸದಸ್ಯರು,

(vii) ಸರಕಾರದಿಂದ ನಾಮಕರಣ ಹೊಂದಿದ ಮಹಿಳೆಯು.

(೩) ಉಪಕಲಮು (೨) ರ ವಾಕ್ಯಾವಳಿ (vi) ಮತ್ತು (vii) ರನ್ವಯ ವಾಗಿ ನಾಮಕರಣವಾದ ಸದಸ್ಯರು ಸರಕಾರವು ಕಾಲಕಾಲಕ್ಕೆನಿರ್ಧರಿಸುವ ಕಾಲಾ ವಧಿಯ ವರೆಗೆ ಅಧಿಕಾರಪದದಲ್ಲಿರತಕ್ಕದ್ದು.

**ವಿವೇಚನೆ**

ಜಿಲ್ಲಾ ಅಭಿವೃದ್ಧಿ ಮಂಡಳದ ಈ ರಚನೆಯನ್ನು ನೋಡಿದರೆ, ಆ ಮಂಡಳ ಕ್ಕಾಗಿ ನೇರವಾಗಿ ಚುನಾಯಿತ ಸದಸ್ಯರು ಯಾರೂ ಇಲ್ಲವೆಂಬುದು ಲಕ್ಷ್ಯದಲ್ಲಿ ಬರುವುದು. ಒಂದಿಲ್ಲೊಂದು ರೀತಿಯಿಂದ ಬೇರೆ ಪ್ರಾತಿನಿಧಿಕ ಸಂಸ್ಥೆಗಳಿಗೆ ಚುನಾ ಯಿತರಾದವರು ಈ ಮಂಡಳದ ಸದಸ್ಯರು. ಲೋಕಸಭೆ, ರಾಜ್ಯಸಭೆಯ ಸದಸ್ಯರು ರಾಜ್ಯಶಾಸನ ಸಭೆ–ಶಾಸನ ಪರಿಷತ್ತಿನ ಸದಸ್ಯರು, ತಾಲೂಕ ಬೋರ್ಡದ ಅಧ್ಯಕ್ಷರು, ಇವರು ಚುನಾಯಿರಾದ ಪ್ರತಿನಿಧಿಗಳು. ಇವರಲ್ಲದೆ ಡೆಪ್ಯೂಟಿ ಕಮಿಶನ ರನು ಮತ್ತು ಇತರ ನಾಮಕರಣ ಹೊಂದಿದ ಸದಸ್ಯರು. ಮಂಡಳದಲ್ಲಿ ಕೆಲಸ ಮಾಡುವವರು ಆ ಜಿಲ್ಲೆಯ ಅಭಿವೃದ್ಧಿಯ ಬಗ್ಗೆ ದುಡಿಯಬೇಕೆಂದವರು, ಅಲ್ಲದೆ ಎಲ್ಲ ವರ್ಗದ ಪ್ರತಿನಿಧಿಗಳು ಇರುವಂತೆ ಇದರ ರಚನೆ ಇದೆ ಎಂಬುದನ್ನು ಗಮನಿಸಬೇಕು.

**೧೮೮. ಪ್ರೆಸಿಡೆಂಟ ಮತ್ತು ಸೆಕ್ರೆಟರಿ**

(೧) ಆ ಜಿಲ್ಲೆಯ ಡೆಪ್ಯೂಟಿ ಕಮಿಶನರನು ಅಧಿಕಾರಪದದ ಮೂಲಕವಾಗಿ ಸ್ಥಾನಬಲದಿಂದ ಜಿಲ್ಲಾ ಮಂಡಳದ ಪ್ರೆಸಿಡೆಂಟನಾಗಿರತಕ್ಕದ್ದು.

(೨) ಸರಕಾರದಿಂದ ನೇಮಕವಾದಂತಹ ಒಬ್ಬ ಸೆಕ್ರೆಟರಿಯು ಮಂಡಳಕ್ಕೆ ಇರತಕ್ಕದ್ದು.

### ವಿವೇಚನೆ

ಜಿಲ್ಲಾಧಿಕಾರಿಯಾದ ಡೆಪ್ಯುಟಿ ಕಮಿಶನರನು, ಸ್ಥಾನಬಲದಿಂದ ಮಂಡಳದ ಪ್ರೆಸಿಡೆಂಟನಾಗತಕ್ಕದ್ದು. ಮಂಡಳದ ಕಾರ್ಯದರ್ಶಿಯು ಸರಕಾರದಿಂದ ನೇಮಕವಾದವನು ಇರತಕ್ಕದ್ದು. ಇದನ್ನು ಮತ್ತು ರಚನೆಯನ್ನು ನೋಡಿದರೆ, ಸರಕಾರದಿಂದ ನಡೆಸಲ್ಪಟ್ಟ, ಜನತೆಯ ಪ್ರತಿನಿಧಿಗಳ ಬೆಂಬಲವುಳ್ಳ ಸಂಸ್ಥೆ ಇದು ಎಂಬುದು ಸ್ಪಷ್ಟವಾಗುವುದು. ಪಂಚಾಯತಗಳು ಹಾಗೂ ತಾಲೂಕ ಬೋರ್ಡುಗಳು ಮಾಡಲೇಬೇಕಾದ ಕರ್ತವ್ಯಗಳನ್ನು ಒಪ್ಪಿಸಿಕೊಟ್ಟ ಕರ್ತವ್ಯಗಳನ್ನು ಮಾಡಬಹುದಾದ ಕರ್ತವ್ಯಗಳನ್ನು ಮಾಡಿದ ಮೇಲೆ ಜಿಲ್ಲಾ ಮಂಡಳಕ್ಕೆ ಪ್ರತ್ಯೇಕವಾದ ಕಾರ್ಯಕ್ಷೇತ್ರವು ಜನತೆಯ ಸಂಸ್ಥೆ ಎಂಬುವ ದೃಷ್ಟಿಯಿಂದ ಉಳಿವುದಿಲ್ಲ. ಮೇಲ್ವಿಚಾರಣೆ, ಮಾರ್ಗದರ್ಶನ ಮಾಡುವ ಸಂಸ್ಥೆಯಾಗುವುದು.

### ೧೪೯. ಜಿಲ್ಲಾ ಅಭಿವೃದ್ಧಿ ಮಂಡಳದ ಕಾರ್ಯಗಳು

(೧) ಜಿಲ್ಲಾ ಮಂಡಳಗಳು ಈ ಕೆಳಗಿನ ಕಾರ್ಯಗಳನ್ನು ಮಾಡತಕ್ಕದ್ದು. ಅವು ಯಾವುವೆಂದರೆ—

(ಅ) ತಾಲೂಕ ಬೋರ್ಡದ ಮುಂಗಡ ಪತ್ರಗಳನ್ನು ಪರಿಶೀಲನೆ ಮಾಡುವುದು ಹಾಗೂ ಒಪ್ಪುವುದು;

(ಬ) ತಾಲೂಕ ಬೋರ್ಡದ ಕೆಲಸವನ್ನು ಕಾಲಕಾಲಕ್ಕೆ ವಿಮರ್ಶೆ ಮಾಡುವುದು;

(ಕ) ಬೇಡಿದಾಗ ತಾಲೂಕ ಬೋರ್ಡುಗಳಿಗೆ ಮಾರ್ಗದರ್ಶನ ಇಲ್ಲವೆ ಸಹಾಯವನ್ನು ಒದಗಿಸುವುದು;

(ಡ) ಒಂದು ತಾಲೂಕದಕಿಂತ ಹೆಚ್ಚು ತಾಲೂಕಗಳ ಸಂಬಂಧ ಬರುವ ಕೆಲಸ ಇಲ್ಲವೆ ಕಾರ್ಯಕ್ರಮದಲ್ಲಿ, ಇಲ್ಲವೆ ತಾಲೂಕದ ಹೊರಗೆ ನಡೆಸಲ್ಪಟ್ಟ ಕಾಮಗಿರಿಗಳ ಮೇಲೆ ಇಲ್ಲವೆ ಅಲ್ಲಿಯ ಪರಿಸ್ಥಿತಿಯ ಮೇಲೆ ಪ್ರತಿಕ್ರಿಯೆ ಆಗುವಂತಹ ಸಂದರ್ಭವಿದ್ದಲ್ಲಿ ತಾಲೂಕ ಬೋರ್ಡುಗಳ ಕಾರ್ಯದಲ್ಲಿ ಸಂಬಂಧೀಕರಣವನ್ನು ಮಾಡುವುದು;

(ಇ) ತಾಲೂಕ ಬೋರ್ಡಗಳ ಸಂಬಂಧವಾಗಿ ಸರಕಾರವು ಒಪ್ಪಿಸಿಕೊಡಬಹುದಾದ ಬೇರೆ ಯಾವುದೇ ಕರ್ತವ್ಯ.

(೨) ಜಿಲ್ಲಾ ಮಂಡಳಗಳ ಕೆಲಸ ಹಾಗೂ ವ್ಯವಹಾರ ನಡೆವಳಿಕೆಯು ಗೊತ್ತುಮಾಡಬಹುದಾದಂತಹ ನಿಯಮಗಳ ಅನುಸಾರವಾಗಿ ಇರತಕ್ಕದ್ದು.

(೩) ಅದಕ್ಕೆ ಕೇಳಿಕೊಂಡ ಯಾವುದೇ ವಿಷಯದ ಬಗ್ಗೆ ಸಮಿತಿಗಳನ್ನು ನೇಮಕ ಮಾಡಲು, ಮತ್ತು ವರದಿ ಮಾಡಲು ಜಿಲ್ಲಾ ಮಂಡಳಕ್ಕೆ ಅಧಿಕಾರ ಇರತಕ್ಕದ್ದು.

**ವಿವೇಚನೆ**

ತಾಲೂಕ ಬೋರ್ಡುಗಳ ಕಾರ್ಯಗಳ ಮೇಲ್ವಿಚಾರಣೆ, ಅವುಗಳಿಗೆ ಮಾರ್ಗ ದರ್ಶನ ಸಹಾಯ, ಇವೇ ಮೂಲ ಕಾರ್ಯಗಳು. ಎರಡು ಇಲ್ಲವೆ ಹೆಚ್ಚು ಬೋರ್ಡಗಳ ಕಾರ್ಯದಲ್ಲಿ ಸಂಬಂಧೀಕರಿಸುವ ಕಾರ್ಯವು ಮಂಡಳದ್ದು. ಬೋರ್ಡಗಳು ತಮ್ಮ ಅಧಿಕಾರ ಕ್ಷೇತ್ರದಲ್ಲಿ ಕೆಲಸ ಮಾಡಲು ಅಧಿಕಾರವುಳ್ಳ ಸಂಸ್ಥೆಗಳು. ಆ ಕ್ಷೇತ್ರದ ಹೊರಗೆ ಕಾರ್ಯ ನಡೆಯಬೇಕಾದರೆ ಇಂತಹ ಸಂಬಂಧೀಕರಿಸುವ ಅಧಿಕಾರವುಳ್ಳ ಸಂಸ್ಥೆ ಬೇಕು. ಮಂಡಳದ ವ್ಯವಹಾರದ ನಡೆವಳಿಕೆಗೆ ನಿಯಮಗಳು ಇವೆ.

**೧೯೦. ಆಡಳಿತದ ವರದಿ**

ಆ ಜಿಲ್ಲೆಯಲ್ಲಿಯ ತಾಲೂಕ ಬೋರ್ಡುಗಳ ಆಡಳಿತದ ವರದಿಗಳು ಸ್ವೀಕೃತವಾದ ನಂತರ, ತನ್ನ ಕಾರ್ಯದ ವರದಿಯನ್ನು ಒಳಗೊಂಡ ಒಂದು ಏಕೀಕೃತ ವರದಿಯನ್ನು ಸಿದ್ಧಪಡಿಸತಕ್ಕದ್ದು. ಮತ್ತು ಸರಕಾರವು ನಿಶ್ಚಿತ ಮಾಡಬಹುದಾದಂತಹ ತಾರೀಖಿನ ಮೊದಲು ವರದಿಯ ಒಂದು ಪ್ರತಿಯನ್ನು ಕಮಿಶನರರ ಕಡೆಗೆ ಮತ್ತು ಒಂದು ಪ್ರತಿಯನ್ನು ಸರಕಾರಕ್ಕೆ ಕಳಿಸಿಕೊಡತಕ್ಕದ್ದು.

**ವಿವೇಚನೆ**

ಕಾರ್ಯದಲ್ಲಿ ಸಂಬಂಧೀಕರಿಸುವ ಹೊಣೆ ಇದ್ದಂತೆ ಆಡಳಿತ ವರದಿಯನ್ನು ಏಕೀಕರಿಸುವುದು ಅದರ ಕರ್ತವ್ಯವಾಗಿದೆ. ತಾಲೂಕ ಬೋರ್ಡುಗಳು ಕಳಿಸಿದ ವರದಿಗಳ ಮೇಲಿಂದ ಜಿಲ್ಲೆಯ ಆಡಳಿತದ ಏಕೀಕೃತ ವರದಿಯನ್ನು ತನ್ನ ಕಾರ್ಯದ ವರದಿಯನ್ನು ಸೇರಿಸಿ, ಸಿದ್ಧಪಡಿಸತಕ್ಕದ್ದು. ಅದರ ಪ್ರತಿಯನ್ನು ಸರಕಾರಕ್ಕೆ ಒಂದು ಕಮಿಶನರರ ಕಡೆಗೆ ಒಂದು ಕಳಿಸತಕ್ಕದ್ದು. ಎಂದು ಕಳಿಸತಕ್ಕದ್ದು ಎಂಬುವ ಬಗ್ಗೆ ಸರಕಾರವು ತಾರೀಖನ್ನು ನಿಶ್ಚಿತ ಮಾಡುವುದು.

# ಭಾಗ : ೫ ಸಾಮಾನ್ಯ

## ಪ್ರಕರಣ ೧೧ : ಈ ಕಾಯಿದೆಯ ಕಾರ್ಯಾಚರಣೆಯಿಂದ ಹೊರಗೆ ಇದ್ದ ಪ್ರದೇಶಗಳ ಸಂಬಂಧವಾಗಿ ವಿಶೇಶ ಶರತುಗಳು

**೧೯೧. ಈ ಕಾಯಿದೆಯ ಕಾರ್ಯಾಚರಣೆಯಿಂದ ಪ್ರದೇಶಗಳನ್ನು ದೂರವಾಗಿರಿಸುವುದು**

(೧) ಈ ಪ್ರಕರಣದ ಶರತುಗಳ ಅನುಸಾರವಾಗಿ ಜಿಲ್ಲೆಯಲ್ಲಿಯ ಯಾವುದೇ ಪ್ರದೇಶಕ್ಕೆ ಮುನಸಿಪಲ ಆಡಳಿತೆಯನ್ನು ಅನುಕೂಲ ಮಾಡಿ

ಕೊಡುವುದು ಯುಕ್ತವೆಂದು ಸರಕಾರದ ಅಭಿಪ್ರಾಯವಾದಲ್ಲಿ ಸರಕಾರವು ಪ್ರಕಟಣೆ ಪರಿಪತ್ರದಿಂದ, ಈ ಕಾಯಿದೆಯ ಶರತ್ತುಗಳು (ಈ ಪ್ರಕರಣ ಹಾಗೂ ಕಲಮು ೨೧೦ ಬಿಟ್ಟು) ಇಂತಹ ಪ್ರಕಟಣೆಯಲ್ಲಿ ನಿರ್ದಿಷ್ಟಪಡಿಸಬಹುದಾದ ತಾರೀಖಿನಿಂದ ಇಂತಹ ಪ್ರದೇಶಕ್ಕೆ (ಈ ಮುಂದೆ ಅದಕ್ಕೆ ಪಟ್ಟಣ ಪ್ರದೇಶ ಎಂದು ಕರೆಯಲಾಗಿದೆ.) ಅನ್ವಯಿಸತಕ್ಕದ್ದಲ್ಲವೆಂದು ಘೋಷಣೆ ಮಾಡಬಹುದು. ಮತ್ತು ಆ ಪ್ರಕಟಣೆ ಯಲ್ಲಿ ಸರಕಾರವು ಆ ಪಟ್ಟಣ ಪ್ರದೇಶದ ಅಧಿಕಾರದ ಕ್ಷೇತ್ರದಲ್ಲಿರುವ ಯಾವುದೇ ಸ್ಥಾನಿಕ ಅಧಿಕಾರದ ಆಸ್ತಿ, ಹಕ್ಕುಗಳು ಹಾಗೂ ಹೊಣೆಗಾರಿಕೆಗಳನ್ನು ಕಲಮು ೧೯೩ ರಲ್ಲಿ ಹೇಳಿದ ಪಟ್ಟಣ ಪ್ರದೇಶ ಕಮಿಟಿಗೆ ಹಸ್ತಾಂತರಿಸುವುದರ ಸಲುವಾಗಿಯೂ ಕೂಡ ಶರತುಗಳನ್ನು ಕಾಣಿಸಬಹುದು. ಮತ್ತು ಅಂತಹ ಪ್ರಕಟಣೆಯ ಶರತುಗಳು ಅದರನುಸಾರವಾಗಿ ಪರಿಣಾಮಕಾರಿಯಾಗತಕ್ಕದ್ದು.

(೨) ಉಪಕಲಮು (೧) ರನ್ವಯವಾಗಿ ನಿರ್ದಿಷ್ಟ ಪಡಿಸಿದ ಪ್ರದೇಶದ ಪ್ರಾದೇಶಿಕ ಮಿತಿಗಳನ್ನು ಸರಕಾರವು ಕಾಲ ಕಾಲಕ್ಕೆ ಪ್ರಕಟಣೆ ಪರಿಪತ್ರದಿಂದ ಬದಲು ಮಾಡಬಹುದು. ಮತ್ತು ಇಂತಹ ಬದಲಾವಣೆ ಮಾಡಿದಾಗ, ಯಾವುದೇ ಕಾಯಿದೆಯು ಅನ್ವಯಿಸುವ ಇಲ್ಲವೆ ಅನ್ವಯಿಸುವುದು ನಿಲ್ಲುವ ಸಂಬಂಧವಾಗಿ ಮತ್ತು ಉಪಕಲಮು (೧) ರನ್ವಯವಾಗಿ ನಿರ್ದಿಷ್ಟ ಪಡಿಸಿದ ಪ್ರದೇಶದಲ್ಲಿ ಸೇರ್ಪಡೆಯಾದ ಇಲ್ಲವೆ ಪ್ರದೇಶದಿಂದ ಬೇರ್ಪಡೆಯಾದ ಪ್ರದೇಶದ ಸಂಬಂಧವಾಗಿ ಅಧಿಕಾರವನ್ನು ನಿರ್ವಹಿಸುವ ಇಲ್ಲವೆ ನಿರ್ವಹಿಸುವುದನ್ನು ನಿಲ್ಲಿಸುವ ಸ್ಥಾನಿಕ ಅಧಿಕಾರದ ಸಂಬಂಧವಾಗಿ, ಸಂಬಂಧಪಟ್ಟ ಸ್ಥಾನಿಕ ಅಧಿಕಾರಗಳ ನಡುವೆ ಸೊತ್ತು ಹಾಗೂ ಹೊಣೆಗಾರಿಕೆಗಳ ಹೊಂದಾಣಿಕೆ ಮತ್ತು ಹಂಚಿಕೆಗಳ ಸಂಬಂಧವಾಗಿ, ಮತ್ತು ಸರಕಾರವು ಆವಶ್ಯಕ ಇಲ್ಲವೆ ಯೋಗ್ಯವೆಂದು ತಿಳಿಯುವ ಇತರಆನುಷಂಗಿಕ ಇಲ್ಲವೆ ಪಾರಿಣಾಮಿಕ ವಿಷಯಗಳ ಸಂಬಂಧವಾಗಿ ಆ ಪ್ರಕಟಣೆಯಲ್ಲಿ ಶರತುಗಳು ಇರುವಂತೆ ಮಾಡಬಹುದು. ಮತ್ತು ಆ ಪ್ರಕಟಣೆಯ ಶರತುಗಳು ಅದರನುಸಾರವಾಗಿ ಪರಿಣಾಮಕಾರಿಯಾಗತಕ್ಕದ್ದು.

**ವಿವೇಚನೆ**

ಜಿಲ್ಲೆಯ ಪ್ರದೇಶದಲ್ಲಿ ತಾಲೂಕ ಬೋರ್ಡು, ಪಂಚಾಯತಗಳೆಂದು ಸಂಸ್ಥೆಗಳು ಇರುವುವು. ಅವುಗಳಲ್ಲದೆ ಯಾವುದೇ ಪ್ರದೇಶವನ್ನು ಮುನಸಿಪಲ್ ಆಡಳಿತಕ್ಕೆ ಕೊಡಬೇಕೆಂದು ಸರಕಾರದ ಅಭಿಪ್ರಾಯವಾದರೆ, ಅಂತಹ ಪ್ರದೇಶ ಯಾವುದು ಎಂಬುದನ್ನು ಸರಕಾರವು ನಿರ್ಧರಿಸಿ ಪ್ರಕಟಣೆ ಹೊರಡಿಸಬೇಕು. ಅನಂತರ ಅದಕ್ಕೆ ಈ ಪ್ರಕರಣ ಮತ್ತು ಕಲಮು ೨೧೦ ಇವುಗಳನ್ನು ಬಿಟ್ಟು ಈ ಕಾಯಿದೆಯ ಯಾವುದೇ ಮಾತುಗಳು ಅನ್ವಯಿಸತಕ್ಕದ್ದಲ್ಲ. ಇಂತಹ ಪ್ರದೇಶಕ್ಕೆ

ಪಟ್ಟಣ ಪ್ರದೇಶವೆಂದು ಹೆಸರು. ಆ ಪ್ರದೇಶದಲ್ಲಿ ಬಂದ ಆಸ್ತಿ, ಹಕ್ಕು ಹೊಣೆಗಾರಿಕೆಗಳು ಆ ಮುಂಚೆ ಬೇರೆ ಸ್ಥಾನಿಕ ಅಧಿಕಾರದ ಅಧೀನವಾಗಿದ್ದರೆ ಅವು ಈ ಪಟ್ಟಣ ಪ್ರದೇಶ ಸಮಿತಿಯ ಅಧಿಕಾರಕ್ಕೆ ಹಸ್ತಾಂತರಿಸಲ್ಪಡತಕ್ಕದ್ದು. ಈ ಹಸ್ತಾಂತರದ ವಿಷಯವು ಪ್ರಕಟನೆಯಲ್ಲಿಯ ಶರತುಗಳ ಪ್ರಕಾರ ನಡೆಯತಕ್ಕದ್ದು.

ಒಮ್ಮೆ ಒಂದು ಪ್ರದೇಶವು ಪಟ್ಟಣ ಪ್ರದೇಶ ಕಮಿಟಿಯ ಅಧಿಕಾರಕ್ಕೆ ಬಂದ ಮೇಲೆ ಸರಕಾರವು ಅದರ ಪ್ರಾದೇಶಿಕ ಮಿತಿಯಲ್ಲಿ ಬದಲಾವಣೆ ಮಾಡಬಹುದು. ಆಗ ಮತ್ತೆ ಪ್ರಕಟನೆ ಹೊರಡಿಸಲ್ಪಡಬೇಕು. ಆ ಪ್ರಕಟನೆಯಲ್ಲಿ ಎಲ್ಲ ಸಂಗತಿಗಳು ಬರಬೇಕು. ಯಾವ ಪ್ರದೇಶ ಯಾರ ಅಧಿಕಾರಕ್ಕೆ ಹೋಯಿತು ಇಲ್ಲವೆ ಉಳಿಯಿತು, ಅದಕ್ಕೆ ಯಾವ ಕಾಯಿದೆ ಹತ್ತಬೇಕು ಇಲ್ಲವೆ ಬಿಡಬೇಕು ಆಯಾ ಪ್ರದೇಶಗಳಲ್ಲಿಯ ಆಸ್ತಿಯ ಬಗ್ಗೆ ಹಕ್ಕು ಹೊಣೆಗಾರಿಕೆಗಳ ಹೊಂದಾಣಿಕೆ-ಹಂಚಿಕೆ ಹೇಗೆ, ಇವಲ್ಲದೆ ಇನ್ನಿತರ ಅನುಷಂಗಿಕ ಸಂಗತಿಗಳೂ ಆ ಪ್ರಕಟನೆಯಲ್ಲಿ ಬಂದು ಅದರ ಅನುಸಾರವಾಗಿ ಎಲ್ಲ ಪರಿಣಾಮಗಳು ಉಂಟಾಗತಕ್ಕದ್ದು.

## ೧೯೨. ಪಟ್ಟಣ ಪ್ರದೇಶಗಳ ಆಡಳಿತಕ್ಕಾಗಿ ಕಮಿಟಿಗಳ ರಚನೆ ಹಾಗೂ ಸ್ವರೂಪ.

(೧) ಪಟ್ಟಣ ಪ್ರದೇಶದ ಮುನಸಿಪಲ್ (ಸ್ಥಾನಿಕ) ವ್ಯವಹಾರಗಳ ಆಡಳಿತ ನಡೆಸುವ ಉದ್ದೇಶಕ್ಕಾಗಿ, ಅಂತಹ ನಿಯಮಗಳಲ್ಲಿ ನಿರ್ದಿಷ್ಟ ಪಡಿಸಬಹುದಾದಂತೆ ಚುನಾಯಿತ ಇಲ್ಲವೆ ನಾಮಕರಣವಾದ ಇಲ್ಲವೆ ಎರಡೂ ರೀತಿಯಲ್ಲಿರುವ ಅಂತಹ ಸದಸ್ಯರ ಸಂಖ್ಯೆಯುಳ್ಳ ಕಮಿಟಿಯ ರಚನೆಗಾಗಿ ಸರ್ಕಾರವು ನಿಯಮಗಳನ್ನು ಮಾಡತಕ್ಕದ್ದು.

(೨) ಪಟ್ಟಣ ಪ್ರದೇಶ ಕಮಿಟಿಯು ಒಂದು ಸಂಸ್ಥೀಕೃತ ಸಂಸ್ಥೆಯಾಗಿದ್ದು ಅದಕ್ಕೆ ಪರಂಪರಾಗತ ವಾರಸಾ ಹಾಗೂ ಸಾಮಾನ್ಯ ಮುದ್ರೆ ಇರತಕ್ಕದ್ದು, ಮತ್ತು ಈ ಕಾಯಿದೆಯ ಅಂಕಿತವಾಗಿ ಇಲ್ಲವೆ ಈ ಕಾಯಿದೆಯಿಂದ ಇಲ್ಲವೆ ಬೇರೆ ಯಾವುದೇ ಕಾಯಿದೆಯಿಂದ ಹಾಕಲ್ಪಟ್ಟ ಯಾವುದೇ ನಿರ್ಬಂಧಗಳಿಗೆ ಇಲ್ಲವೆ ಯೋಗ್ಯತೆಗಳಿಗೆ ಅಂಕಿತವಾಗಿ ಅದರ ಸಂಸ್ಥೆಯ ಹೆಸರಿನಲ್ಲಿ ವಾದಿ ಮತ್ತು ಪ್ರತಿವಾದಿ ಎಂಬ ಸಾಮರ್ಥ್ಯವನ್ನು ಹೊಂದಿರತಕ್ಕದ್ದು, ಸ್ಥಾವರ ಇಲ್ಲವೆ ಜಂಗಮ ಅಸ್ತಿಯನ್ನು ಧಾರಣಮಾಡಲು, ಪಡೆಯಲು, ಮತ್ತು ಹಸ್ತಾಂತರಿಸಲು, ಕರಾರುಪತ್ರಗಳಲ್ಲಿ ಭಾಗಿಯಾಗಲು, ಮತ್ತು ಯಾವ ಉದ್ದೇಶಗಳಿಗಾಗಿ ಅದು ರಚಿತವಾಗಿರುವುದೋ ಆ ಉದ್ದೇಶ ಸಾಧನೆಗಾಗಿ ಅಗತ್ಯವಿದ್ದ, ಯೋಗ್ಯವಾಗಿದ್ದ ಇಲ್ಲವೆ ಪ್ರಸಂಗೋಚಿತವಾಗಿದ್ದ ಎಲ್ಲ ಕೆಲಸ ಕಾರ್ಯಗಳನ್ನು ಮಾಡಲು ಸಾಮರ್ಥ್ಯವಿರತಕ್ಕದ್ದು.

**ವಿವೇಚನೆ**

ಪಟ್ಟಣ ಪ್ರದೇಶವು ರಚಿತವಾಗುವುದು ಆ ಪ್ರದೇಶದಲ್ಲಿ ಸ್ಥಾನಿಕ ವ್ಯವಹಾರ ಆಡಳಿತ ನಡಸುವುದಕ್ಕಾಗಿ. ಅದರಲ್ಲಿ ಸದಸ್ಯರು ಎಷ್ಟು ಇರಬೇಕು ಚುನಾಯಿತರಾದವರು ಎಷ್ಟು, ನಾಮಕರಣರಾದವರು ಎಷ್ಟು, ಇಲ್ಲವೆ ಎಲ್ಲರೂ ಚುನಾಯಿತರಾಗಬೇಕೋ, ನಾಮಕರಣವಾಗಬೇಕೋ ಎರಡೂ ರೀತಿಯಲ್ಲಿಯ ಸದಸ್ಯರು ಎಷ್ಟು ಇರಬೇಕೆಂಬುದನ್ನು ನಿಯಮಗಳು ಹೇಳುವವು. ಈ ನಿಯಮಗಳನ್ನು ಸರಕಾರವು ಮಾಡುವುದು. ಈ ಪಟ್ಟಣ ಪ್ರದೇಶವು ಒಂದು ಸಂಸ್ಥೆ. ಆ ಸಂಸ್ಥೆಯು ಪರಂಪರಾಗತ ವಾರಸಾವುಳ್ಳದ್ದು ಹಾಗೂ ಸಾಮಾನ್ಯ ಮುದ್ರೆಯುಳ್ಳದ್ದು. ದಾವೆಯಲ್ಲಿ ವಾದಿಯಾಗಿ ಇಲ್ಲವೆ ಪ್ರತಿವಾದಿಯಾಗಿ ಈ ಸಂಸ್ಥೆಯು ಹೆಸರಿನಲ್ಲಿಯೇ ಇರತಕ್ಕದ್ದು. ಕರಾರು ಪತ್ರದಲ್ಲಿ ಭಾಗಿಯಾಗುವಾಗ, ಆಸ್ತಿ ಪಡೆಯುವಾಗ, ಧಾರಣಮಾಡುವಾಗ ಈ ಹೆಸರಿನಿಂದಲೇ ಮಾಡತಕ್ಕದ್ದು. ಹಾಗೆ ಮಾಡಲು ಅದಕ್ಕೆ ಅಧಿಕಾರವಿದೆ. ಒಟ್ಟಿನಲ್ಲಿ ಅದು ಯಾವ ಉದ್ದೇಶಕ್ಕಾಗಿ ರಚಿತವಾಗಿರುವುದೋ ಆ ಉದ್ದೇಶ ಸಾಧನೆಯ ಕೆಲಸ ಮಾಡಲು ಅದಕ್ಕೆ ಅಧಿಕಾರವಿದೆ. ಆ ಅಧಿಕಾರ ಈ ಕಲಮಿನಿಂದ ಬರುವುದು.

**೧೯೩. ಪಟ್ಟಣ ಪ್ರದೇಶಕ್ಕೆ ಅನ್ವಯಿಸುವ ಕಾಯಿದೆಗಳು ನಿರ್ದಿಷ್ಟ ತಿದ್ದುಪಡಿ, ಜೋಡಣೆ, ಮತ್ತು ನಿರ್ಬಂಧಗಳಿಗೆ ಅಂಕಿತವಾಗಿರತಕ್ಕದ್ದು**

(೧) ಮೈಸೂರ ರಾಜ್ಯದಲ್ಲಿ ಆ ಕಾಲಕ್ಕೆ ಜಾರಿಯಲ್ಲಿರುವ ಕಾಯಿದೆಯ ಯಾವುದೇ ಶರತುಗಳು, ಪ್ರಕಟನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂತಹ ತಿದ್ದುಪಡಿ, ಮತ್ತು ನಿರ್ಬಂಧಗಳಿಗಂಕಿತವಾಗಿ, ಮತ್ತು ಅಂತಹ ವ್ಯಾಪ್ತಿಯಿರುವಷ್ಟು ಮಟ್ಟಿಗೆ, ಅನ್ವಯಿಸತಕ್ಕದ್ದೆಂದು ಸರಕಾರವು ಪ್ರಕಟನೆಯ ಮುಖಾಂತರ ನಿರ್ದೇಶಿಸಬಹುದು.

(೨) ನಿರ್ದಿಷ್ಟವಾಗಿ ಮತ್ತು ಈ ಮೊದಲಿನ ಶರತಿನ ಸಾಮಾನ್ಯ ಸ್ವರೂಪಕ್ಕೆ ಭಂಗಬರದಂತೆ, ಪಟ್ಟಣ ಪ್ರದೇಶ ಕಮಿಟಿಯು ಈ ಕಲಮಿನನ್ವಯವಾಗಿ ಪಟ್ಟಣ ಪ್ರದೇಶಕ್ಕೆ ಅನ್ವಯಿಸಿದ ಶರತುಗಳ ಸತ್ವದಿಂದ ಹಾಕಬಹುದಾದ ಎಲ್ಲ ಇಲ್ಲವೆ ಯಾವುದೇ ಕರಗಳು ಮತ್ತು ಫೀಗಳು ಹಾಕಲ್ಪಡಲು ಪ್ರಕಟನೆಯು ಅಧಿಕರಿಸಬಹುದು.

**ವಿವೇಚನೆ**

ಪಟ್ಟಣ ಪ್ರದೇಶವೆಂದು ರಚಿತವಾದ ಮೇಲೆ ಅದಕ್ಕೆ ಯಾವ ಕಾಯದೆಗಳು ಅನ್ವಯಿಸಬೇಕು ? ಆ ಕಾಲದಲ್ಲಿ ಮೈಸೂರ ರಾಜ್ಯದಲ್ಲಿ ಜಾರಿಯಲ್ಲಿರುವ

ಯಾವುದೇ ಕಾಯಿದೆಗಳು, ಅವು ಸಂಬಂಧಪಟ್ಟ ಪಟ್ಟಣ ಪ್ರದೇಶದಲ್ಲಿ ಜಾರಿಯಲ್ಲಿ ಇರದೇ ಇರುವಂತಹವು, ಅವಶ್ಯಕ ತಿದ್ದುಪಡಿಗಳೊಂದಿಗೆ ಅನ್ವಯಿಸುವುವು. ಯಾವ ಕಾಯಿದೆಗಳು, ಎಷ್ಟು ಮಟ್ಟಿಗೆ ಅನ್ವಯಿಸಬೇಕು, ಯಾವ ತಿದ್ದುಪಡಿ ಮಾಡಿರಬೇಕು ಮುಂತಾದ ಎಲ್ಲ ಸಂಗತಿಗಳು ಪ್ರಕಟನೆಯಲ್ಲಿ ಸಮಾವೇಶವಾಗಿರತಕ್ಕದ್ದು. ಈ ಪ್ರಕಟನೆಯ ಮುಖಾಂತರ ಪಟ್ಟಣ ಪ್ರದೇಶ ಕಮಿಟಿಗೆ ಕರ, ಫೀ, ಹಾಕಲು ಅಧಿಕಾರ ಕೊಡತಕ್ಕದ್ದು. ಈ ಕಲಮಿನ ಪ್ರಕಾರ ಅನ್ವಯಿಸಲಾದ ಕಾಯಿದೆಯ ಸತ್ವದಿಂದ ಈ ಕರ-ಫೀ ಹಾಕುವುದಕ್ಕೆ ಇಲ್ಲಿ ಅನುಕೂಲಿಸಲಾಗಿದೆ.

## ೧೯೪. ಕಲಮು ೧೯೧ ರನ್ವಯುವಾಗಿರುವ ಪ್ರಕಟನೆಯ ನಿವರ್ತನ.

ಸರಕಾರವು, ಅದರ ಅಭಿಪ್ರಾಯದಲ್ಲಿ ಹಾಗೆ ಮಾಡುವುದು ಯುಕ್ತವೆಂದಾದರೆ ಕಲಮು ೧೯೧ ರ ಉಪಕಲಮು ೧ ರನ್ವಯುವಾಗಿ ಹೊರಡಿಸಲಾದ ಪ್ರಕಟನೆಯನ್ನು ನಿವರ್ತನ ಮಾಡಬಹುದು, ಮತ್ತು ಆ ನಂತರ ಸಂಬಂಧಪಟ್ಟ ಪಟ್ಟಣ ಪ್ರದೇಶಕ್ಕಾಗಿ ರಚಿತವಾದ ಪಟ್ಟಣ ಪ್ರದೇಶ ಕಮಿಟಿಯು ಇಲ್ಲದಂತಾಗತಕ್ಕದ್ದು. ಮತ್ತು ಇಂತಹ ಅಧಿಕಾರದ ಅಂತರ್ಗತವಾಗಿದ್ದ ಆಸ್ತಿ ಹಾಗೂ ಹಕ್ಕುಗಳು ಅವುಗಳನ್ನು ಬಾಧಿಸುವ ಎಲ್ಲ ಭಾರ ಹಾಗೂ ಹೊಣೆಗಾರಿಕೆಗಳ ಅಂಕಿತವಾಗಿ, ಸರಕಾರದ ಇಲ್ಲವೆ ಸರಕಾರದಿಂದ ನಿರ್ದಿಷ್ಟ ಪಡಿಸಬಹುದಾದಂತಹ ಸ್ಥಾನಿಕ ಅಧಿಕಾರದ ಅಂತರ್ಗತವಾಗತಕ್ಕದ್ದು. ಮತ್ತು ಅದರ ಹಣವು ಯಾವುದಾದರೂ ಇದ್ದರೆ, ಸರಕಾರವು ಇಲ್ಲವೆ ಸರಕಾರದಿಂದ ನಿರ್ದಿಷ್ಟ ಪಡಿಸಲಾದ ಸ್ಥಾನಿಕ ಅಧಿಕಾರದ ಹುಕುಮಿನನ್ವಯುವಾಗಿ ಯಾವ ಪ್ರದೇಶಕ್ಕಾಗಿ ಆ ಕಮಿಟಿಯು ರಚಿತವಾಗಿದ್ದಿತೋ ಆ ಪ್ರದೇಶದ ಹಿತಕ್ಕಾಗಿ ವೆಚ್ಚ ಮಾಡಲ್ಪಡತಕ್ಕದ್ದು.

### ವಿವೇಚನೆ

ಪಟ್ಟಣ ಪ್ರದೇಶವು ರಚಿತವಾಗಲಿಕ್ಕೆ ಪ್ರಕಟನೆ ಬೇಕು. ಅದರಂತೆ ಅದನ್ನು ಇಲ್ಲದಾಗಿಸಲಿಕ್ಕೆ— ಅಂದರೆ ರದ್ದುಗೊಳಿಸಲಿಕ್ಕೆ ಪ್ರಕಟನೆ ಬೇಕು. ಪ್ರಕಟನೆಯ ಮುಖಾಂತರ ಸರಕಾರವು ಪಟ್ಟಣ ಪ್ರದೇಶ ಕಮಿಟಿಯನ್ನು ರದ್ದುಗೊಳಿಸಬಹುದು. ಈ ರದ್ದಾದನಂತರ ಆ ಕಮಿಟಿಯ ಆಸ್ತಿ ಮತ್ತು ಹಕ್ಕುಗಳು ಅವುಗಳ ಮೇಲಿನ ಹೊಣೆಗಾರಿಕೆಯೊಂದಿಗೆ ಸರಕಾರದ ವಶಕ್ಕೆ ಇಲ್ಲವೆ ಸರಕಾರವು ಗೊತ್ತು ಮಾಡುವ ಯಾವುದೇ ಸ್ಥಾನಿಕ ಅಧಿಕಾರದ ವಶಕ್ಕೆ ಬರುವುವು. ಹಾಗೆ ಬಂದ ಆಸ್ತಿಯು ಯಾವ ಪ್ರದೇಶಕ್ಕಾಗಿ ಕಮಿಟಿ ಇದ್ದಿತೋ ಈಗ ರದ್ದಾಗಿದೆಯೋ ಆ ಪ್ರದೇಶದ ಹಿತದ ಸಲುವಾಗಿ ಅದು ವೆಚ್ಚ ಮಾಡತಕ್ಕದ್ದು. ಕಾರಣವೆಂದರೆ ಆ ಆಸ್ತಿಯು ಅಲ್ಲಿಯ ಜನರು ಕೊಟ್ಟ ಕರ-ಫೀ ಮುಂತಾದ ಹಣದಿಂದ ರೂಪುಗೊಂಡಿರುವುದು.

ಯಾರು ಹಣ ಕೊಟ್ಟಿರುವರೋ ಅವರ ಹಿತಕ್ಕೆ ಅದು ವೆಚ್ಚವಾಗುವುದು ಕ್ರಮ ಪ್ರಾಪ್ತ.

**೧೯೫. ಸಂಧಿಕಾಲದ ಶರತುಗಳು**

ಈ ಪ್ರಕರಣದಲ್ಲಿ ಏನೇ ಹೇಳಲಾಗಿದ್ದರೂ ಈ ಪ್ರಕರಣದ ಶರತುಗಳನು ಸಾರವಾಗಿ ಪಟ್ಟಣ ಪ್ರದೇಶ ಕಮಿಟಿಗಳ ರಚನೆಯಾಗುವತನಕ, ೧೯೫೦ ಮೈಸೂರ ಗ್ರಾಮಪಂಚಾಯತ ಮತ್ತು ಲೋಕಲ್ ಬೋರ್ಡ ಕಾಯಿದೆಯು ರದ್ದಾಗುವುದಕ್ಕೆ ತತ್‍ಕ್ಷಣ ಮುಂಚಿತವಾಗಿ ಯಾವುದೇ ಪ್ರದೇಶದ ಟಾವುನ್ ಬೋರ್ಡ ಎಂದು ಇಲ್ಲವೆ ಸ್ಯಾನಿಟರಿ ಬೋರ್ಡು ಎಂದು ಸಂದರ್ಭಾನುಸಾರವಾಗಿ ಕಾರ್ಯಮಾಡುತ್ತಿದ್ದ ಸಂಸ್ಥೆಗಳೇ ಆ ಸಂಸ್ಥೆಗಳಿಗೆ ದಯಪಾಲಿಸಲಾದ ಅಧಿಕಾರಗಳನ್ನು ನಿರ್ವಹಿಸ ತಕ್ಕದ್ದು. ಮತ್ತು ಕರ್ತವ್ಯಗಳನ್ನು ।ಅವು ಈ ಕಾಯಿದೆಯನ್ವಯವಾಗಿ ದಯ ಪಾಲಿಸಲಾದ ಅಧಿಕಾರಿಗಳು ಮತ್ತು ಕರ್ತವ್ಯಗಳು ಇದ್ದ ಹಾಗೆ ಮಾಡತಕ್ಕದ್ದು, ಮತ್ತು ಈ ಪ್ರಕರಣದನ್ವಯವಾಗಿ ತೆಗೆದುಕೊಳ್ಳಲ್ಪಟ್ಟ ಯಾವುದೇ ಕ್ರಮ ಇಲ್ಲವೆ ಮಾಡಲಾದ ಕಾರ್ಯವಿಂದ ಹಿಂದೆ ಸರಿಸುವ ತನಕ ಮತ್ತು ಹಿಂದೆ ಸರಿಸಿದ ಹೊರತು ಯಾವುದೇ ನಿಯಮ, ಪೋಟನಿಯಮ, ಪ್ರಕಟನೆ ಇಲ್ಲವೆ ಹೊರಡಿಸಿದ ಹುಕುಮು ಇವುಗಳನ್ನು ಒಳಗೊಂಡು ।ತೆಗೆದುಕೊಂಡ ಯಾವುದೇ ಕ್ರಮ ಇಲ್ಲವೆ ಮಾಡಲಾದ ಯಾವುದೇ ಕಾರ್ಯವು ಜಾರಿಯಲ್ಲಿ ಉಳಿಯತಕ್ಕದ್ದು.

**ವಿವೇಚನೆ**

ಈ ಪ್ರಕರಣದ ಪ್ರಕಾರ ಪಟ್ಟಣ ಪ್ರದೇಶಗಳು ರಚಿತವಾಗುವುದಕ್ಕಿಂತ ಮೊದಲು ಮತ್ತು ಈ ಕಾಯಿದೆಯ ಪ್ರಕಾರ ೧೯೫೦ ರ ಮೈಸೂರ ಗ್ರಾಮಪಂಚಾ ಯತ ಹಾಗೂ ಲೋಕಲ್ ಬೋರ್ಡ ಕಾಯಿದೆಯು ರದ್ದಾದ ನಂತರ ಇರುವ ಮಧ್ಯಂತರ ಅವಧಿಯಲ್ಲಿ ಯಾವ ಸ್ಥಿತಿ ಉಂಟಾಗುವುದು ಎಂಬುದನ್ನು ಈ ಕಲಮು ಹೇಳುತ್ತದೆ. ೧೯೫೦ ರ ಮೈಸೂರ ಗ್ರಾಮಪಂಚಾಯತ ಲೋಕಲ್‍ಬೋರ್ಡ ಕಾಯಿದೆಯು ರದ್ದಾದರೂ ಅದರನ್ವಯವಾಗಿರುವ ಯಾವುದೇ ಪ್ರದೇಶಕ್ಕೆ ಟಾವುನ್‍ಬೋರ್ಡ ಇಲ್ಲವೆ ಸ್ಯಾನಿಟರಿ ಬೋರ್ಡ ಎಂದು ಇರುವ ಸಂಸ್ಥೆಗಳೇ ಮುಂದರಿಯುವುವು. ಆದರೆ ಅವು ೧೯೫೯ ರ ಗ್ರಾಮಪಂಚಾಯತ ಲೋಕಲ್ ಬೋರ್ಡ ಕಾಯಿದೆಯ ಕಲಮು ೧೯೫ ರ ಪ್ರಕಾರ ।ಅಧಿಕಾರ ಪಡೆದು ಸಾಗುವುವು. ಈ ಪ್ರಕರಣದ ಪ್ರಕಾರ ಹೊಸ ಪಟ್ಟಣ ಪ್ರದೇಶ ಕಮಿಟಿಗಳು ರಚಿತವಾಗುವ ತನಕ ಮುಂದುವರೆವುವು. ಅಲ್ಲಿಯ ತನಕ ಹಳೆಯ ಸಂಸ್ಥೆಗಳು, ಅವುಗಳ ನಿಯಮ, ಪೋಟನಿಯಮ, ಪ್ರಕಟನೆ, ಹುಕುಮುಗಳು ಈ ಕಾಯಿದೆಯ ಪ್ರಕಾರ ಮಾಡಿದಂತಹವು ಎಂದೇ ಅವು ಜಾರಿಯಲ್ಲಿ ಉಳಿಯತಕ್ಕದ್ದು. ಮಧ್ಯಂತರ ಕಾಲಾವಧಿಯಲ್ಲಿ ಅಧಿಕಾರ ಇಲ್ಲದೆ ಉಳಿಯಬಾರದೆಂದು ಸಂಧಿ ಕಾಲಕ್ಕಾಗಿ ವ್ಯವಸ್ಥೆ ಮಾಡಲಾಗಿದೆ.

## ಪ್ರಕರಣ : ೧೨ : ನಿಯಂತ್ರಣ

### ೧೯೬. ಮುಖ್ಯ ನಿಯಂತ್ರಣಾಧಿಕಾರಿ

ಸರಕಾರದ ನಿಯಂತ್ರಣ ಹಾಗೂ ಹುಕುಮುಗಳ ಅಂಕಿತವಾಗಿ ಕಮಿಶನರನು ಈ ಕಾಯಿದೆಯ ಆಡಳಿತದ ಸಂಬಂಧವಾಗಿರುವ ಎಲ್ಲ ವಿಷಯಗಳ ಬಗ್ಗೆ ಮುಖ್ಯ ನಿಯಂತ್ರಣಾಧಿಕಾರಿಯಾಗಿರತಕ್ಕದ್ದು.

**ವಿವೇಚನೆ**

ಈ ಕಾಯಿದೆಗೆ ಸಂಬಂಧಿಸಿದ ವಿಷಯದಲ್ಲಿ ಕಮಿಶನರನು ಮುಖ್ಯ ನಿಯಂತ್ರಣಾಧಿಕಾರಿ. ಆದರೆ ಅವನು ಸರಕಾರದ ನಿಯಂತ್ರಣ ಹಾಗೂ ಹುಕುಮುಗಳ ಅಂಕಿತವಾಗಿರತಕ್ಕದ್ದು. ಅಂದರೆ ಸರಕಾರವು ಹೊರಡಿಸುವ ಆಜ್ಞೆಗಳ ಅಂಕಿತವಾಗಿ, ಈ ಕಾಯಿದಗೆ ಸಂಬಂಧಪಟ್ಟ ಎಲ್ಲ ಆಡಳಿತದ ವಿಷಯಗಳನ್ನು ನಿಯಂತ್ರಿಸುವವನು ಕಮಿಶನರನು ಎಂದು ಹೇಳಿದ ಹಾಗೆ.

### ೧೯೭. ಅಧಿಕಾರಿಗಳನ್ನು ಒಪ್ಪಿಸಿಕೊಡುವುದು

(೧) ಪ್ರಕರಣ ೯ ರನ್ವಯವಾಗಿ ಪ್ರಕಟನೆಗಳನ್ನು ಹೊರಡಿಸುವ ಅಧಿಕಾರ, ಇಲ್ಲವೆ ಕಲಮು ೨೧೦ ರನ್ವಯವಾಗಿ ನಿಯಮಗಳನ್ನು ಮಾಡುವ ಅಧಿಕಾರ ಇಲ್ಲವೆ ಕಲಮು ೨೪೫ ರನ್ವಯವಾಗಿ ಹುಕುಮು ಮಾಡುವ ಅಧಿಕಾರ ಹೊರತುಪಡಿಸಿ ಸರಕಾರವು ನಿರ್ದಿಷ್ಟಪಡಿಸಬಹುದಾದ ಈ ಕಾಯಿದೆಯನ್ವಯವಾಗಿರುವ ಅಂತಹ ತನ್ನ ಅಧಿಕಾರಗಳನ್ನು ಪ್ರಕಟನೆಯ ಮೂಲಕ ಕಮಿಶನರನಿಗೆ ಒಪ್ಪಿಸಿಕೊಡಬಹುದು.

(೨) ಈ ಕಾಯಿದೆಯನ್ವವಾಗಿ ಕಮಿಶನರನಿಗೆ ದಯಪಾಲಿಸಲ್ಪಟ್ಟ ಯಾವುದೇ ಅಧಿಕಾರಗಳನ್ನು ಸರಕಾರವು ಪ್ರಕಟನೆಯ ಮೂಲಕ ಡೆಪ್ಯೂಟಿ ಕಮಿಶನರನಿಗೆ ಒಪ್ಪಿಸಿಕೊಡಬಹುದು.

(೩) ಅಧಿಕೃತ ಗ್ಯಾಜೆಟದಲ್ಲಿ ಪ್ರಸಿದ್ಧಿಸಲಾದ ಹುಕುಮಿನಿಂದ ಸರಕಾರವು ನಿರ್ದೇಶಿಸಬಹುದಾದಂತೆ, ಈ ಕಾಯಿದೆಯನ್ವಯವಾಗಿ ಡೆಪ್ಯೂಟಿ ಕಮಿಶನರನಿಗೆ ದಯಪಾಲಿಸಲ್ಪಟ್ಟ ಅಂತಹ ಅಧಿಕಾರಿಗ್ಗಳನ್ನು ಪಂಚಾಯತಗಳ ಮತ್ತು ತಾಲೂಕ ಬೋರ್ಡಗಳ ಸಂಬಂಧವಾಗಿ ಭೂಕಂದಾಯದ ಪ್ರಾಂತದ ಅಸಿಸ್ಟಂಟ ಕಮಿಶನರನು ನಿರ್ವಹಿಸಬಹುದು.

(೪) ಅಂತಹ ತಾಲೂಕ ಬೋರ್ಡ ಮುರಗಡೆ ಮಾಡಲ್ಪಟ್ಟಾಗ ಇಲ್ಲವೆ ಅಧಿಕಾರಹೀನವಾದಾಗ ಈ ಕಾಯಿದೆಯ ಶರತುಗಳನ್ವಯವಾಗಿ ತಾಲೂಕ ಬೋರ್ಡಿಗೆ ದಯಪಾಲಿಸಲ್ಪಟ್ಟ ಯಾವುದೇ ಅಧಿಕಾರಗಳನ್ನು ಪಂಚಾಯತಗಳ ಸಂಬಂಧವಾಗಿ ನಿರ್ವಹಿಸಲು ಸರಕಾರವು ಅಧಿಕೃತ ಗ್ಯಾಜೆಟನಲ್ಲಿಯ ಪ್ರಕಟನೆಯಿಂದ ಯಾವುದೇ ವ್ಯಕ್ತಿಯನ್ನು ಅಧಿಕರಿಸಬಹುದು.

(೫) ಪಂಚಾಯತದ ಸಂಬಂಧವಲ್ಲಿ ಈ ಕಾಯಿದೆಯನ್ವಯವಾಗಿ ಡೆಪ್ಯುಟಿ ಕಮಿಶನರನಿಗೆ ದಯಪಾಲಿಸಲ್ಪಟ್ಟ. ಉಪಕಲಮು (೩) ರನ್ವಯವಾಗಿ ಅಸಿಸ್ಟಂಟ ಕಮಿಶನರನಿಂದ ನಿರ್ವಹಿಸಲು ಯೋಗ್ಯವಾದ ಅಧಿಕಾರಗಳನ್ನು ಒಳಗೊಂಡ ಅಧಿಕಾರಗಳನ್ನು ಗೊತ್ತುಮಾಡಬಹುದಾದಂತಹ ನಿಯಮಗಳ ಅಂಕಿತವಾಗಿ ಡೆಪ್ಯುಟಿ ಕಮಿಶನರನು ತಹಶೀಲದಾರ ಇಲ್ಲವೆ ಘಟಕ ಅಭಿವೃದ್ಧಿ ಅಧಿಕಾರಿಯಕಿಂತ ಕಡಿಮೆಯ ಅಧಿಕಾರಸ್ಥಾನದಲ್ಲಿ ಇರದೇ ಇರುವಂತಹ ಅಧಿಕಾರಿಗೆ ಒಪ್ಪಿಸಿಕೊಡಬಹುದು.

**ವಿವೇಚನೆ**

ಈ ಕಾಯಿದೆಯ ಸಂಬಂಧವಾಗಿ ಸರಕಾರಕ್ಕೆ, ಕಮಿಶನರನಿಗೆ, ಡೆಪ್ಯುಟಿ ಕಮಿಶನರನಿಗೆ ಅಧಿಕಾರಗಳು ಉಂಟು. ಅಧಿಕಾರಗಳು ಅವರಿಂದಲೇ ನಿರ್ವಹಿಸಲ್ಪಡದೆ, ಕೆಳಗಿನ ಅಧಿಕಾರಿಗೆ ಒಪ್ಪಿಸಿಕೊಡಲು ಈ ಕಲಮು ಅಧಿಕಾರಕೊಡುತ್ತದೆ. ಸರಕಾರವು ಕಮಿಶನರನಿಗೆ, ಕಮಿಶನರನು, ಡೆಪ್ಯುಟಿ ಕಮಿಶನರನಿಗೆ, ಡೆ. ಕಮಿಶನರನು, ಅಸಿಸ್ಟಂಟ ಕಮಿಶನರನಿಗೆ, ಇಲ್ಲವೆ ತಹಶೀಲದಾರನಸಮಾನ ಅಧಿಕಾರವುಳ್ಳ ವ್ಯಕ್ತಿಗೆ ಒಪ್ಪಿಸಿಕೊಡಬಹುದು. ಮೇಲಿನ ಅಧಿಕಾರಿಗಳೇ ಎಲ್ಲವನ್ನು ಮಾಡಬೇಕೆಂದರೆ ಕೆಲಸವು ವಿಲಂಬವಾಗುವ ಸಂಭವವಿರುತ್ತದೆ. ಮತ್ತು ಹೀಗೆ ಒಪ್ಪಿಸಿಕೊಡುವುದರಿಂದ ಕೆಲಸವು ಬೇಗನೇ ಆಗುವ ಸಂಭವವಿದ್ದು ಇಲ್ಲಿಯೆ ಕೆಳ ಮಟ್ಟದಲ್ಲಿಯೇ ಆಗುವುದು. ಇದು ಅನುಕೂಲತೆಯನ್ನು ಹೆಚ್ಚಿಸುವುದು.

## ೧೯೮. ಪರೀಕ್ಷಣ ಹಾಗೂ ಮೇಲ್ವಿಚಾರಣೆಯ ಅಧಿಕಾರ

(೧) ಕಮಿಶನರನು, ಡೆಪ್ಯುಟಿ ಕಮಿಶನರನು, ಇಲ್ಲವೆ ಸರಕಾರದ ಸಾಮಾನ್ಯ ಇಲ್ಲವೆ ವಿಶಿಷ್ಟ ಹುಕುಮಿನಿಂದ ಅಧಿಕರಿಸಲ್ಪಟ್ಟ ಯಾವುದೇ ಸರಕಾರಿ ಅಧಿಕಾರಿಯು—

(ಅ) ಯಾವುದೇ ಪಂಚಾಯತ ಇಲ್ಲವೆ ತಾಲೂಕ ಬೋರ್ಡು ಇಲ್ಲವೆ ಅದರ ನಿಯಂತ್ರಣ ಮತ್ತು ಸಂಚಾಲನೆಯಲ್ಲಿದ್ದ ಯಾವುದೇ ಸಂಸ್ಥೆಯ ಅಧೀನದಲ್ಲಿದ್ದ ಯಾವುದೇ ಸ್ಥಾವರ ಅಸ್ತಿಯನ್ನು ಪ್ರವೇಶಮಾಡಬಹುದು. ಹಾಗೂ ಪರೀಕ್ಷಣ ಮಾಡಬಹುದು ಇಲ್ಲವೆ ಅದರ ಅಧೀನವಾಗಿ ಇಲ್ಲವೆ ಅದರ ಒಡೆತನದ ಅಧೀನವಾಗಿ ನಡೆಯುವ ಯಾವುದೇ ಕಾಮಗಿರಿಯ ಪರೀಕ್ಷಣ ಮಾಡಬಹುದು, ಇಲ್ಲವೆ ಇಂತಹ ಸ್ಥಾವರ ಆಸ್ತಿ, ಸಂಸ್ಥೆ, ಇಲ್ಲವೆ ಕಾಮಗಿರಿಯಲ್ಲಿ ಈ ಸಂಬಂಧವಾಗಿ ಲಿಖಿತವಾಗಿ ಅವನಿಂದ ಅಧಿಕರಿಸಲ್ಪಟ್ಟ ಯಾವುದೇ ಬೇರೆ ಅಧಿಕಾರಿಯಿಂದ ಪ್ರವೇಶ ಮಾಡಿಸಬಹುದು ಮತ್ತು ಪರೀಕ್ಷಣಮಾಡಿಸಬಹುದು; ಮತ್ತು

(ಬ) ಯಾವುದೇ ಪಂಚಾಯತದ ಇಲ್ಲವೆ ತಾಲೂಕ ಬೋರ್ಡದ ಇಲ್ಲವೆ ಪಂಚಾಯತ ಇಲ್ಲವೆ ಬೋರ್ಡದಿಂದ ನೇಮಕವಾದ ಯಾವುದೇ ಸಮಿತಿಯ

ಕಾರ್ಯಕಲಾಪಗಳಲ್ಲಿಯ ಯಾವುದೇ ಅವತರಣಿಕೆಯನ್ನು ತರಿಸಿಕೊಳ್ಳಬಹುದು. ಮತ್ತು ಪಂಚಾಯತದ ಇಲ್ಲವೆ ತಾಲೂಕ ಬೋರ್ಡದ ಅಧೀನವಾಗಿರುವ ಇಲ್ಲವೆ ನಿಯಂತ್ರಣದ ಅಧೀನವಾಗಿರುವ ಯಾವುದೇ ಪುಸ್ತಕ ಇಲ್ಲವೆ ಕಾಗದವನ್ನು ತರಿಸಿ ಕೊಳ್ಳಬಹುದು ಇಲ್ಲವೆ ಪರೀಕ್ಷಣಮಾಡಬಹುದು.

(೨) ಕಮಿಶನರನು ಇಲ್ಲವೆ ಡೆಪ್ಯೂಟಿ ಕಮಿಶರನು

(ಅ) ಪಂಚಾಯತದಿಂದ ಇಲ್ಲವೆ ತಾಲೂಕ ಬೋರ್ಡದಿಂದ ಯಾವುದೇ ಪತ್ರಿಕೆ, ಹೇಳಿಕೆ, ಲೆಕ್ಕ ಇಲ್ಲವೆ ವರದಿಯನ್ನು ತರಿಸಿಕೊಳ್ಳಬಹುದು; ಮತ್ತು

(ಬ) ಪಂಚಾಯತವು ಇಲ್ಲವೆ ತಾಲೂಕ ಬೋರ್ಡು—

(i) ಇಂತಹ ಪಂಚಾಯತದಿಂದ ಇಲ್ಲವೆ ತಾಲೂಕ ಬೋರ್ಡದಿಂದ ಮಾಡಲ್ಪಡುವ ಸಂಭವವಿದ್ದ ಯಾವುದನ್ನು ಮಾಡುವುದಕ್ಕೆ ಯಾವುದೇ ತಕರಾರು ಇದೆಯೆಂದು ಅವನಿಗೆ ಅನ್ನಿಸಿದುದರ ಬಗ್ಗೆ ವಿಚಾರಮಾಡಿಸಲು ಹಚ್ಚಬಹುದು; ಇಲ್ಲವೆ

(ii) ಇಂತಹ ಪಂಚಾಯತದಿಂದ ಇಲ್ಲವೆ ತಾಲೂಕ ಬೋರ್ಡದಿಂದ ಯಾವುದೊಂದು ಕೆಲಸವು ಮಾಡಬೇಕಾದುದರ ಅಗತ್ಯವುಂಟಾಗಿದೆಯೆಂದು ಅವನಿಗೆ ಅನ್ನಿಸಿದ ಯಾವುದೇ ಸಂಗತಿಯನ್ನು ವಿಚಾರಮಾಡಿಸಲು ಹಚ್ಚಬಹುದು.

ಮತ್ತು ಅಂತಹ ಕೆಲಸವನ್ನು ಮಾಡುವುದನ್ನು ಇಲ್ಲವೆ ಮಾಡದೆ ಇರುವುದನ್ನು ತಡೆಯದೆ ಇರುವುದಕ್ಕಾಗಿ ಇರುವ ಕಾರಣಗಳನ್ನು ಹೇಳುವ ಲಿಖಿತ ಉತ್ತರವನ್ನು ಯೋಗ್ಯ ಕಾಲಾವಧಿಯ ಒಳಗೆ ಕೊಡಲು ಹಚ್ಚಬಹುದು.

**ವಿವೇಚನೆ**

ಪರೀಕ್ಷಣದ ಮತ್ತು ಮೇಲ್ವಿಚಾರಣೆಯ ಅಧಿಕಾರವನ್ನು ಈ ಕಲಮು ಕೊಡುವುದು. ಕಮಿಶನರನು, ಡೆಪ್ಯೂಟಿ ಕಮಿಶನರನು, ಇಲ್ಲವೆ ಸರಕಾರದಿಂದ ಅಧಿಕರಿಸಲ್ಪಟ್ಟ ಅಧಿಕಾರಿಯು ಪರಿಷಣ ಮತ್ತು ಮೇಲ್ವಿಚಾರಣೆ ಮಾಡುವ ಅಧಿಕಾರಿಗಳು. ಇವರು ಪಂಚಾಯತ ಇಲ್ಲವೆ ತಾಲೂಕ ಬೋರ್ಡದ ಆಸ್ತಿ, ಸಂಸ್ಥೆ ಕಾಮುಗಿರಿಗಳನ್ನು ಪರೀಕ್ಷಣೆ ಮಾಡುವ ಅಧಿಕಾರ, ಅವುಗಳಲ್ಲಿ ಪ್ರವೇಶ ಮಾಡುವ ಅಧಿಕಾರ, ಪಡೆದಿರುತ್ತಾರೆ. ಪಂಚಾಯತ ಇಲ್ಲವೆ ತಾಲೂಕ ಬೋರ್ಡ ಇಲ್ಲವೆ ಅವು ನೇಮಕ ಮಾಡಿದ ಸಮಿತಿಗಳ ಕಾರ್ಯಕಲಾಪಗಳನ್ನು ತರಿಸಿಕೊಳ್ಳುವ ಅಧಿಕಾರ ಅವರಿಗೆ ಇದೆ. ಮತ್ತು ಇತರ ಮಾಹಿತಿ ಪಡೆವ ಅಧಿಕಾರ ಅವರಿಗೆ ಇದೆ. ಯಾವುದೊಂದು ಕೆಲಸವು ಮಾಡಲ್ಪಡುವುದೆಂದು ತಿಳಿದಾಗ ಅದನ್ನು ಮಾಡಕೂಡದು,ಎಂದು ಹೇಳಿದ ಹುಕುಮನ್ನುವಿಚಾರಿಸಲು ಹಚ್ಚುವ ಮತ್ತು ಕೆಲಸವನ್ನು

ಮಾಡಿದೆ ಇರುವ, ಇಲ್ಲವೆ ಇರದಿರುವ ಕಾರಣವನ್ನು ಲೇಖಿಯಾಗಿ ಪಡೆ ಯಲು ಅಧಿಕಾರವೂ ಅವರಿಗೆ ಇದೆ.

## ೧೯೯. ಪಂಚಾಯತಿಗಳ ಹಾಗೂ ತಾಲೂಕ ಬೋರ್ಡುಗಳ ಸಿಬ್ಬಂದಿ ಯಲ್ಲಿ ಕಡಿಮೆ ಮಾಡುವುದು.

(೧) ಪಂಚಾಯತದಿಂದ ಇಲ್ಲವೆ ತಾಲೂಕ ಬೋರ್ಡದಿಂದ ಅಧಿಕಾರಿ ಗಳೆಂದು ಇಲ್ಲವೆ ಸೇವಕರೆಂದು ನೇಮಕವಾದ ಇಲ್ಲವೆ ನೇಮಿಸಿಕೊಳ್ಳಬೇಕೆಂದು ಸೂಚಿಸಲಾದ ವ್ಯಕ್ತಿಗಳ ಸಂಖ್ಯೆಯು, ಇಲ್ಲವೆ ಇಂತಹ ವ್ಯಕ್ತಿಗಳಿಗೆ ಪಂಚಾಯತ ದಿಂದ ಇಲ್ಲವೆ ತಾಲೂಕ ಬೋರ್ಡದಿಂದ ಕೊಟ್ಟ ಇಲ್ಲವೆ ಕೊಡಬೇಕೆಂದು ಸೂಚಿತ ವಾದ ವೇತನದ ಹಣವು ಡೆಪ್ಯೂಟಿ ಕಮೀಶನರನ ಅಭಿಪ್ರಾಯದಲ್ಲಿ ಹೆಚ್ಚಾಗಿದೆ ಯೆಂದಾದರೆ, ಈ ಸಂಬಂಧವಾಗಿ ಡೆಪ್ಯೂಟಿ ಕಮೀಶನರನಿಂದ ಹೊರಡಿಸಲ್ಪಟ್ಟ ನಿರ್ದೇಶನದ ಮೂಲಕವಾಗಿ ಪಂಚಾಯತವು ಇಲ್ಲವೆ ತಾಲೂಕ ಬೋರ್ಡು ಆ ಸಂಖ್ಯೆಯಲ್ಲಿ ಇಲ್ಲವೆ ಹಣದಲ್ಲಿ ಕಡಿಮೆ ಮಾಡತಕ್ಕದ್ದು.

ಆದರೆ, ತಾಲೂಕ ಬೋರ್ಡದ ಸಂಬಂಧವಾಗಿ ಇಂತಹ ನಿರ್ದೇಶನವು ಜಿಲ್ಲಾ ಅಭಿವೃದ್ಧಿ ಮಂಡಳವನ್ನು ವಿಚಾರಿಸದೆ ಡೆಪ್ಯೂಟಿ ಕಮೀಶನರನಿಂದ ಹೊರಡಿಸಲ್ಪಡ ತಕ್ಕದ್ದಲ್ಲ

(೨) ಉಪಕಲಮು (೧) ರನ್ವಯವಾಗಿ ಕೊಟ್ಟ ಯಾವುದೇ ನಿರ್ದೇಶನದ ವಿರುದ್ಧವಾಗಿ ಪಂಚಾಯತವು ಇಲ್ಲವೆ ತಾಲೂಕ ಬೋರ್ಡು ಕಮೀಶನರನ ಕಡೆಗೆ ಅಪೀಲು ಮಾಡಿಕೊಳ್ಳಬಹುದು. ಮತ್ತು ಇಂತಹ ಅಪೀಲಿನ ಮೇಲಿನ ಕಮೀಶನರನ ನಿರ್ಣಯವು ಕೊನೆಯದಾಗಿರತಕ್ಕದ್ದು.

### ವಿವೇಚನೆ

ಪಂಚಾಯತವು ಇಲ್ಲವೆ ತಾಲೂಕ ಬೋರ್ಡು ತನ್ನ ಕೆಲಸಕ್ಕೆ ಅಧಿಕಾರಿ ಗಳನ್ನು, ಸೇವಕರನ್ನು ನೇಮಿಸಿಕೊಳ್ಳುತ್ತದೆ. ಈ ಸಿಬ್ಬಂದಿಯ ಸಂಖ್ಯೆ ಇಲ್ಲವೆ ಅವರ ವೇತನವು ಹೆಚ್ಚಾಗಿದೆಯೆಂದು ಡೆ. ಕಮಿಶನರನ ಅಭಿಪ್ರಾಯವಾದರೆ ಅವನು ಅದರಲ್ಲಿ ಕಡಿತಮಾಡಲು ನಿರ್ದೇಶನ ಕೊಡುತ್ತಾನೆ. ನಿರ್ದೇಶನ ಬಂದ ಮೇಲೆ ಪಂಚಾಯತ ಇಲ್ಲವೆ ಬೋರ್ಡು ಅದರಂತೆ ಮಾಡಬೇಕಾಗುತ್ತದೆ. ಇಲ್ಲವೆ ಅದರ ವಿರುದ್ಧ ಅಪೀಲನ್ನು ಕಮೀಶನರನ ಕಡೆಗೆ ಮಾಡಬೇಕಾಗುತ್ತದೆ. ಕಮಿಶನರನು ಕೊಟ್ಟ ಅಪೀಲಿನ ನಿರ್ಣಯವು ಕೊನೆಯದು. ಅಂದರೆ ಅದರ ಮೇಲೆ ಅಪೀಲು ಇಲ್ಲ. ತಾಲೂಕ ಬೋರ್ಡ ಸಂಬಂಧವಾಗಿ ಡೆ. ಕಮಿಶನರನು ನಿರ್ದೇಶನ ಕೊಡುವುದಕ್ಕೆ ಮೊದಲು ಜಿಲ್ಲಾ ಅಭಿವೃದ್ಧಿ ಮಂಡಳವನ್ನು ವಿಚಾರಿಸ ತಕ್ಕದ್ದು. ವಿಚಾರಿಸದೆ ನಿರ್ದೇಶನ ಕೊಡಲು ಬರುವುದಿಲ್ಲ.

## ೨೦೦. ಪಂಚಾಯತಗಳ ಹಾಗೂ ತಾಲೂಕ ಬೋರ್ಡದ ಹುಕುಮುಗಳ ಅಮಲಬಜಾವಣೆಯನ್ನು ಸ್ಥಗಿತಗೊಳಿಸಲು ಡೆಪ್ಯೂಟಿ ಕಮಿಶನರನಿಗೆ ಅಧಿಕಾರ

(೧) ಈ ಕಾಯಿದೆಯ ಬೇರೆ ಯಾವುದೇ ಶರತುಗಳಲ್ಲಿ ನಿರ್ದಿಷ್ಟವಾಗಿ ಅನುಕೂಲಿಸಲಾದಂತಹ ಪ್ರಕರಣಗಳ ಸಂಬಂಧವಾಗಿರುವುದನ್ನು ಹೊರತುಪಡಿಸಿ, ತಾಲೂಕ ಬೋರ್ಡದ ಇಲ್ಲವೆ ಪಂಚಾಯತದ ಯಾವುದೇ ಹುಕುಮಿನ ಇಲ್ಲವೆ ಠರಾವಿನ, ಇಲ್ಲವೆ ಪಂಚಾಯತದ ಇಲ್ಲವೆ ತಾಲೂಕ ಬೋರ್ಡ ಯಾವುದೇ ಅಧಿಕಾರದ ಇಲ್ಲವೆ ಅಧಿಕಾರಿಯ ಯಾವುದೇ ಹುಕುಮಿನ ಅಮಲಬಜಾವಣೆಯು ಇಲ್ಲವೆ ಪಂಚಾಯತದಿಂದ ಇಲ್ಲವೆ ತಾಲೂಕ ಬೋರ್ಡದಿಂದ ಇಲ್ಲವೆ ಅದರ ಪರವಾಗಿ ಮಾಡಲ್ಪಡುವ ಸಂಭವವಿದ್ದ ಯಾವುದೇ ಕಾರ್ಯದ ಮಾಡುವಿಕೆಯು ಡೆಪ್ಯೂಟಿ ಕಮಿಶನರನ ಅಭಿಪ್ರಾಯದಲ್ಲಿ ಅನ್ಯಾಯದ್ದು, ಬೇಕಾಯಿದೇಶೀರ ಇಲ್ಲವೆ ಅಯೋಗ್ಯವಾಗಿದೆಯೆಂದು ಇಲ್ಲವೆ ಸಾರ್ವಜನಿಕರಿಗೆ ಅದು ಅಪಾಯ ಇಲ್ಲವೆ ತೊಂದರೆ ಮಾಡುತ್ತಿದೆ ಇಲ್ಲವೆ ಮಾಡುವ ಸಂಭವವಿದೆಯೆಂದು ಇಲ್ಲವೆ ಶಾಂತತಾ ಭಂಗವನ್ನು ಉಂಟುಮಾಡುವ ಹಾಗೆ ಇದೆಯೆಂದು ಆಗಿದ್ದರೆ, ಅವನು ತನ್ನ ಸಹಿಯೊಂದಿಗೆ ಇದ್ದ ಲೇಖಿ ಹುಕುಮಿನಿಂದ ಅಮಲಬಜಾವಣೆಯನ್ನು ಸ್ಥಗಿತಗೊಳಿಸಬಹುದು ಇಲ್ಲವೆ ಮಾಡುವುದನ್ನು ನಿರ್ಬಂಧಿಸಬಹುದು.

(೨) ಉಪಕಲಮು (೧) ರನ್ವಯವಾಗಿ ಡೆಪ್ಯೂಟಿ ಕಮಿಶನರನು ಯಾವುದೇ ಹುಕುಮು ಮಾಡಿದಾಗ ಕಮಿಶನರನಿಗೆ ಮತ್ತು ಅದರಿಂದ ಬಾಧಿತವಾದ ಪಂಚಾಯತ ಇಲ್ಲವೆ ತಾಲೂಕ ಬೋರ್ಡಿಗೆ ಆ ಹುಕುಮು ಮಾಡಿದುದ ಕಾರಣವನ್ನು ತೋರಿಸುವ ಹೇಳಿಕೆಯೊಂದಿಗೆ ಆ ಹುಕುಮಿನ ನಕಲನ್ನು ಕೂಡಲೇ ಕಳಿಸಿಕೊಡತಕ್ಕದ್ದು; ಕಮಿಶನರನು ತನಗೆ ಯೋಗ್ಯಕಂಡ ಆವಶ್ಯಕವಾದಂತಹ ವಿಚಾರಣೆಯನ್ನು ಮಾಡಿದ ನಂತರ ಆ ಹುಕುಮನ್ನು ರದ್ದುಗೊಳಿಸಬಹುದು ಇಲ್ಲವೆ ತಿದ್ದುಪಡಿ ಮಾಡಬಹುದು.

### ವಿವೇಚನೆ

ಪಂಚಾಯತ ಇಲ್ಲವೆ ತಾಲೂಕ ಬೋರ್ಡು ತಮ್ಮ ಕಾರ್ಯ ನಿರ್ವಹಣೆಯಲ್ಲಿ ಠರಾವು ಪಾಸು ಮಾಡುತ್ತವೆ, ಹುಕುಮು ಮಾಡುತ್ತವೆ. ಆದರೆ ಇಂತಹ ಠರಾವು ಇಲ್ಲವೆ ಹುಕುಮು ಕಾರ್ಯಕಾರಿಮಾಡಲ್ಪಡುವುದರಿಂದ ಅನ್ಯಾಯವಾಗುವುದು, ಸಾರ್ವಜನಿಕರಿಗೆ ತೊಂದರೆ ಇಲ್ಲವೆ ಅಪಾಯವಾಗುವುದು ಎಂದು ಡೆ. ಕಮಿಶನರರಿಗೆ ಅನ್ನಿಸಿದರೆ, ಅವನು ಅಂತಹ ಹುಕುಮು ಇಲ್ಲವೆ ಠರಾವು ಅಮಲಬಜಾವಣಿ ಆಗುವುದನ್ನು ಸ್ಥಗಿತಗೊಳಿಸುವ ಹುಕುಮು ಮಾಡಬಹುದು.

ಈ ಹುಕುಮಿನ ಪ್ರತಿಯನ್ನು ಅವನು ಕಮಿಶನರರಿಗೆ, ಮತ್ತು ಸಂಬಂಧಪಟ್ಟ ಪಂಚಾಯತ ಇಲ್ಲವೆ ತಾಲೂಕ ಬೋರ್ಡಿಗೆ ಕಳಿಸತಕ್ಕದ್ದು. ಕಮಿಶನರರು ತನಗೆ ಯೋಗ್ಯಕಂಡ ವಿಚಾರಣೆ ಮಾಡಿದ ಮೇಲೆ ಡೆಪ್ಯುಟಿ ಕಮಿಶನರರ ಆ ಹುಕುಮು ರದ್ದುಮಾಡಬಹುದು ಇಲ್ಲವೆ ತಿದ್ದುಪಡಿಮಾಡಬಹುದು. ಈ ಕ್ರಮವು ಅನುಸರಿಸಲ್ಪಡಬೇಕೆಂದು ಈ ಕಲಮು ಹೇಳುತ್ತದೆ.

## ೨೦೧. ಕೆಲವು ಸಂದರ್ಭಗಳಲ್ಲಿ ಕಾಮಗಿರಿ ಮಾಡಿಸುವುದು

(೧) ಯಾವ ಕಾಮಗಿರಿಯನ್ನು ಇಲ್ಲವೆ ಕಾರ್ಯವನ್ನು ಮಾಡುವುದಕ್ಕೆ ಪಂಚಾಯತಕ್ಕೆ ಇಲ್ಲವೆ ತಾಲೂಕ ಬೋರ್ಡಕ್ಕೆ ಅಧಿಕಾರ ಪಡೆದಿದೆಯೋ ಅಂತಹ ಕಾಮಗಿರಿ ಇಲ್ಲವೆ ಕೆಲಸವನ್ನು ಕೂಡಲೇ ಮಾಡಿಸುವುದು ಸಾರ್ವಜನಿಕರ ಹಿತದ ದೃಷ್ಟಿಯಿಂದ ಅವಶ್ಯಕವಾಗಿದೆಯೆಂದು ಅವನ ಅಭಿಪ್ರಾಯವಾಗಿದ್ದರೆ ಡೆಪ್ಯುಟಿ ಕಮಿಶನರನು ಅಂತಹ ಕಾಮಗಿರಿ ಇಲ್ಲವೆ ಕಾರ್ಯವು ನಿರ್ವಹಿಸಲ್ಪಡಲು ಅನುಕೂಲತೆ ಮಾಡಬಹುದು. ಮತ್ತು ಆ ಕಾಮಗಿರಿಯ ನಿರ್ವಹಣೆಯ ಇಲ್ಲವೆ ಕಾರ್ಯದ ನಿರ್ವಹಣೆಯ ವೆಚ್ಚವು ಸಂದರ್ಭಾನುಸಾರ ಪಂಚಾಯತದಿಂದ ಇಲ್ಲವೆ ತಾಲೂಕ ಬೋರ್ಡದಿಂದ ಕೂಡಲೇ ಕೊಡಲ್ಪಡಬೇಕೆಂದು ನಿರ್ದೇಶಿಸಬಹುದು.

(೨) ಹಾಗೆ ವೆಚ್ಚವು ಕೊಡಲ್ಪಡದಿದ್ದರೆ ಸಂದರ್ಭಾನುಸಾರವಾಗಿ ಪಂಚಾಯತ ನಿಧಿಯನ್ನು ಇಲ್ಲವೆ ತಾಲೂಕ ಬೋರ್ಡದ ನಿಧಿಯನ್ನು ಸ್ವಾಧೀನದಲ್ಲಿಟ್ಟುಕೊಂಡ ಅಧಿಕಾರಿಗೆ ಇಂತಹ ವೆಚ್ಚವನ್ನು ಇಲ್ಲವೆ ಶಕ್ಯವಾದಷ್ಟು ಮಟ್ಟಿಗೆ ಅದರ ಭಾಗವನ್ನು ಅವನ ಕೈಯಲ್ಲಿದ್ದ ನಿಧಿಯ ಶಿಲ್ಕಿನೊಳಗಿಂದ ಕೊಡುವಂತೆ ಡೆಪ್ಯುಟಿ ಕಮಿಶನರನು ನಿರ್ದೇಶಿಸಬಹುದು.

(೩) ಉಪಕಲಮು (೧)ರನ್ವಯವಾಗಿ ಅವನು ಅಧಿಕಾರಗಳನ್ನು ನಿರ್ವಹಿಸುವ ಪ್ರತಿಯೊಂದು ಪ್ರಕರಣವನ್ನು ಡೆಪ್ಯುಟಿ ಕಮಿಶನರನು ಕಮಿಶನರರಿಗೆ ಕೂಡಲೇ ವರದಿ ಮಾಡತಕ್ಕದ್ದು.

### ವಿವೇಚನೆ

ಪಂಚಾಯತ ಇಲ್ಲವೆ ತಾಲೂಕ ಬೋರ್ಡು ಕಾಮಗಿರಿ ಇಲ್ಲವೆ ಕೆಲಸ ಮಾಡಿಸಲು ಅಧಿಕಾರವುಳ್ಳದ್ದಾಗಿರಬೇಕು. ಆ ಕೆಲಸ ಇಲ್ಲವೆ ಕಾಮಗಿರಿ ಕೂಡಲೇ ಮಾಡಿಸುವುದು ಸಾರ್ವಜನಿಕರ ಹಿತದ ದೃಷ್ಟಿಯಿಂದ ಅವಶ್ಯಕವಾಗಿದೆಯೆಂದು ಡೆ. ಕಮಿಶನರರ ಅಭಿಪ್ರಾಯವಾಗಿರಬೇಕು. ಆಗ, ಡೆಪ್ಯುಟಿ ಕಮಿಶನರನು ಆ ಕಾಮಗಿರಿ ಇಲ್ಲವೆ ಕೆಲಸ ಮಾಡಿಸಲ್ಪಡುವಂತೆ ಅನುಕೂಲತೆ ಮಾಡಿಸಬಹುದು. ಮತ್ತು ಅದಕ್ಕೆ ತಗಲಿದ ವೆಚ್ಚವನ್ನು ಪಂಚಾಯತ ಇಲ್ಲವೆ ತಾಲೂಕ ಬೋರ್ಡು ಕೊಡುವಂತೆ ನಿರ್ದೇಶನ ಮಾಡಬಹುದು. ನಿರ್ದೇಶನ ಮಾಡಿದಾಗ್ಯೂ ಪಂಚಾಯತ ಇಲ್ಲವೆ ಬೋರ್ಡು ವೆಚ್ಚದ ಹಣ ಕೊಡದಿದ್ದರೆ ಪಂಚಾಯತ ನಿಧಿ ಇಲ್ಲವೆ

ಬೋರ್ಡ ನಿಧಿಯು ಯಾರ ವಶದಲ್ಲಿರುವುದೋ ಆ ಅಧಿಕಾರಿಗೆ ಆ ವೆಚ್ಚದ ಹಣ ವನ್ನು ಇಲ್ಲವೆ ಶಕ್ಯವಾದಷ್ಟು ಭಾಗವನ್ನು ನಿಧಿಯ ಶಿಲ್ಕಿನೊಳಗಿಂದ ಕೊಡಲು ನಿರ್ದೇಶನ ಮಾಡಬಹುದು. ಮತ್ತು ಕೆಲಸ ಮಾಡಿಸಿದ ಬಗ್ಗೆ ಬೋರ್ಡು ಇಲ್ಲವೆ ಪಂಚಾಯುತವು ವೆಚ್ಚದ ಹಣ ಕೊಡಬೇಕೆಂದು ನಿರ್ದೇಶನವಿತ್ತ ಬಗ್ಗೆ ಡೆಪ್ಯೂಟಿ ಕಮಿಶನರನು ಕೂಡಲೆ ಕಮಿಶನರನಿಗೆ ವರದಿ ಮಾಡತಕ್ಕದ್ದು.

## ೨೦೨. ಪಂಚಾಯುತಗಳ ಇಲ್ಲವೆ ತಾಲೂಕ ಬೋರ್ಡುಗಳ ಕರ್ತವ್ಯಪಾಲನೆಯಲ್ಲಿ ಚ್ಯುತಿ

(೧) ಈ ಕಾಯಿದೆಯಿಂದ ಇಲ್ಲವೆ ಈ ಕಾಯಿದೆಯ ಯಾವುದೇ ಶರತ್ತಿನನ್ವಯವಾಗಿ ಇಲ್ಲವೆ ಜಾರಿಯಲ್ಲಿದ್ದ ಯಾವುದೇ ಕಾಯಿದೆಯನ್ವಯವಾಗಿ ನಿರ್ದಿಷ್ಟಪಡಿಸಿದ ಯಾವುದೇ ಕರ್ತವ್ಯಪಾಲನೆಯಲ್ಲಿ ಪಂಚಾಯುತವು ಇಲ್ಲವೆ ತಾಲೂಕ ಬೋರ್ಡು ತಪ್ಪಿದೆಯೆಂದು ಯಾವುದೇ ಕಾಲಕ್ಕೆ ಡೆಪ್ಯೂಟಿ ಕಮಿಶನರನಿಗೆ ಕಂಡು ಬಂದರೆ, ಅವನು ನಿರ್ದಿಷ್ಟಪಡಿಸಿದ ಕಾಲಾವಧಿಯಲ್ಲಿ ಆ ಕರ್ತವ್ಯವು ಪಾಲಿಸಲ್ಪಡಬೇಕೆಂದು ಹುಕುಮು ಮಾಡಬಹುದು. ಮತ್ತು ನಿರ್ದಿಷ್ಟಪಡಿಸಿದ ಆ ಕಾಲಾವಧಿಯಲ್ಲಿ ಆ ಕರ್ತವ್ಯವು ಪಾಲಿಸಲ್ಪಡದೆ ಇದ್ದರೆ, ಡೆಪ್ಯೂಟಿ ಕಮಿಶನರನು ಆ ಕರ್ತವ್ಯ ಪಾಲಿಸಲಿಕ್ಕೆ ಬೇರೊಬ್ಬ ವ್ಯಕ್ತಿಯನ್ನು ನೇಮಿಸಬಹುದು. ಮತ್ತು ತಪ್ಪಿತಸ್ಥವಾದ ಪಂಚಾಯುತದಿಂದ ಇಲ್ಲವೆ ತಾಲೂಕ ಬೋರ್ಡುದಿಂದ ಅವನು ಗೊತ್ತುಮಾಡುವ ಕಾಲಾವಧಿಯ ಒಳಗೆ ಆ ವೆಚ್ಚವು ಕೊಡಲ್ಪಡಬೇಕೆಂದು ನಿರ್ದೇಶಿಸಬಹುದು.

(೨) ಹಾಗೆ ವೆಚ್ಚವು ಕೊಡಲ್ಪಡದಿದ್ದರೆ, ಸಂದರ್ಭಾನುಸಾರವಾಗಿ ಪಂಚಾಯತ ನಿಧಿಯನ್ನು ಇಲ್ಲವೆ ತಾಲೂಕ ಬೋರ್ಡ ನಿಧಿಯನ್ನು ಸ್ವಾಧೀನದಲ್ಲಿಟ್ಟುಕೊಂಡ ಅಧಿಕಾರಿಗೆ ಇಂತಹ ವೆಚ್ಚವನ್ನು ಇಲ್ಲವೆ ಶಕ್ಯವಾದಷ್ಟು ಮಟ್ಟಿಗೆ ಅದರ ಭಾಗವನ್ನು ಅವನ ಕೈಯಲ್ಲಿದ್ದ ನಿಧಿಯ ಶಿಲ್ಕಿನೊಳಗಿಂದ ಕೊಡುವಂತೆ ಡೆಪ್ಯೂಟಿ ಕಮಿಶನರನು ನಿರ್ದೇಶಿಸಬಹುದು.

(೩) ಈ ಕಲಮಿನನ್ವಯವಾಗಿ ತೆಗೆದುಕೊಂಡ ಯಾವುದೇ ಕ್ರಮವನ್ನು ಕಮಿಶನರನಿಗೆ ಡೆಪ್ಯೂಟಿ ಕಮಿಶನರನು ಕೂಡಲೇ ವರದಿಮಾಡತಕ್ಕದ್ದು, ಮತ್ತು ಉಪಕಲಮು (೧)ರನ್ವಯವಾಗಿ ಮಾಡಿದ ಯಾವುದೇ ಹುಕುಮನ್ನು ಕಮಿಶನರನು ಪುನರ್ವಿಮರ್ಶೆ ಇಲ್ಲವೆ ತಿದ್ದುಪಡಿ ಮಾಡಬಹುದು ಮತ್ತು ಅದರ ಸಂಬಂಧವಾಗಿ ಡೆಪ್ಯೂಟಿ ಕಮಿಶನರನು ಮಾಡಬಹುದಾಗಿದ್ದ ಬೇರೆ ಯಾವುದೇ ಹುಕುಮನ್ನು ಮಾಡಬಹುದು.

### ವಿವೇಚನೆ

ಈ ಕಾಯಿದೆ ಇಲ್ಲವೆ ಯಾವುದೇ ಕಾಯಿದೆಯ ಪ್ರಕಾರ ಕರ್ತವ್ಯಮಾಡಬೇಕಾಗಿದ್ದುದನ್ನು ಪಂಚಾಯುತ ಇಲ್ಲವೆ ತಾಲೂಕ ಬೋರ್ಡು ಮಾಡಿಲ್ಲವೆಂದು

ಯಾವುದೇ ಕಾಲಕ್ಕೆ ಡೆಪ್ಯುಟಿ ಕಮಿಶನರರಿಗೆ ಕಂಡು ಬಂದರೆ, ಆ ಕರ್ತವ್ಯವನ್ನು ಅವನು ಅಂಥಾ ಸಂಸ್ಥೆಯ ಕಡೆಯಿಂದ ಮಾಡಿಸತಕ್ಕವನು. ಆ ಸಂಸ್ಥೆಯು ಮಾಡಲು ತಪ್ಪಿದರೆ, ಬೇರೆ ವ್ಯಕ್ತಿಯನ್ನು ಆ ಕಾರ್ಯಕ್ಕಾಗಿ ನೇಮಿಸಿ ಅವನ ಕಡೆಯಿಂದ ಮಾಡಿಸುವನು. ಈ ಬಗೆಯಾಗಿ ಮಾಡಿದಾಗ ಆದ ವೆಚ್ಚವನ್ನು ಪಂಚಾಯತ ಇಲ್ಲವೆ ಬೋರ್ಡು ಕೊಡಬೇಕೆಂದು ನಿರ್ದೇಶನ ಮಾಡುವನು. ಈ ನಿರ್ದೇಶನದ ಮೂಲಕ ಕೊಡಬೇಕಾಗಿದ್ದ ವೆಚ್ಚವು ಕೊಡಲ್ಪಡದಿದ್ದರೆ, ಪಂಚಾಯತ ನಿಧಿ ಇಲ್ಲವೆ ಬೋರ್ಡದ ನಿಧಿಯು ಯಾರ ಸ್ವಾಧೀನದಲ್ಲಿರುವುದೋ ಆ ವ್ಯಕ್ತಿಯು ಕೊಡಬೇಕೆಂದು ಆದೇಶಕೊಡುವನು. ಅವನು ತನ್ನ ಕೈಯಲ್ಲಿದ್ದ ನಿಧಿಯ ಶಿಲ್ಕಿನಲ್ಲಿಯ ಹಣವನ್ನು ಈ ವೆಚ್ಚಕ್ಕಾಗಿ ಕೊಡತಕ್ಕದ್ದು. ಹೀಗೆ ಕೆಲಸ ಮಾಡಿಸಿದ ಬಗ್ಗೆ ಅವನು ಕೂಡಲೇ ಕಮಿಶನರರಿಗೆ ವರದಿ ಒಪ್ಪಿಸತಕ್ಕದ್ದು. ಕಮಿಶನರರು ಡೆ. ಕಮಿಶನರರ ಆಜ್ಞೆಯನ್ನು ಹೆಚ್ಚು ಕಡಿಮೆ ಮಾಡಬಹುದು; ಡೆ. ಕಮಿಶನರರು ಮಾಡಬಹುದಾಗಿದ್ದಂತೆ ಬೇರೆ ಹುಕುಮನ್ನು ಮಾಡಬಹುದು.

ಒಟ್ಟಿನಲ್ಲಿ ಕೆಲಸ ನಡೆಯಬೇಕು. ಕೆಲಸದ ವೆಚ್ಚವು ನಿಧಿಯೊಳಗಿಂದ ಕೊಡಲ್ಪಡಬೇಕು.

## ೨೦೩. ಪಂಚಾಯತಗಳ ಇಲ್ಲವೆ ತಾಲೂಕ ಬೋರ್ಡದ ಮುರಗಡೆ ಇಲ್ಲವೆ ಅಧಿಕಾರಹೀನತೆ.

(೧) ಕಮಿಶನರರ ಅಭಿಪ್ರಾಯದಲ್ಲಿ ಪಂಚಾಯತವು ತನ್ನ ಅಧಿಕಾರಗಳನ್ನು ಮೀರಿದರೆ ಇಲ್ಲವೆ ದುರುಪಯೋಗಿಸಿದರೆ, ಇಲ್ಲವೆ ಕಲಮು ೪೩, ಇಲ್ಲವೆ ೪೭, ಇಲ್ಲವೆ ೪೫ ರನ್ವಯವಾಗಿ ಇಲ್ಲವೆ ಜಾರಿಯಲ್ಲಿದ್ದ ಬೇರೆ ಯಾವುದೇ ಕಾಯಿದೆಯನ್ವಯವಾಗಿ ಹಾಕಲಾದ ಕರ್ತವ್ಯಗಳನ್ನು ಮಾಡುವುದರಲ್ಲಿ ಪದೇ ಪದೇ ತಪ್ಪಿದರೆ, ಇಲ್ಲವೆ ಮಾಡಲು ಅಸಮರ್ಥವಾದರೆ, ಇಲ್ಲವೆ ಕಲಮು ೬೩ ರನ್ವಯವಾಗಿ ಕರವನ್ನು ಹಾಕಲು ತಪ್ಪಿದರೆ, ಇಲ್ಲವೆ ಈ ಕಾಯಿದೆಯನ್ವಯವಾಗಿ ಕಮಿಶನರ ಇಲ್ಲವೆ ಡೆಪ್ಯುಟಿ ಕಮಿಶನರರ ಹುಕುಮುಗಳನ್ನು ಪದೇ ಪದೇ ಉಲ್ಲಂಘಿಸಿದರೆ, ಕಮಿಶನರರು ಅಧಿಕೃತ ಗ್ಯಾಜೆಟದಲ್ಲಿ ಪ್ರಸಿದ್ಧಿಸಿದ ಹುಕುಮಿನಿಂದ—

(i) ಇಂತಹ ಪಂಚಾಯತವನ್ನು ಮುರಗಡೆ ಮಾಡಬಹುದು; ಇಲ್ಲವೆ

(ii) ಹುಕುಮಿನಲ್ಲಿ ನಿರ್ದಿಷ್ಟಪಡಿಸಿದ ಕಾಲಾವಧಿಯ ವರೆಗೆ ಇಂತಹ ಪಂಚಾಯತವನ್ನು ಅಧಿಕಾರಹೀನವಾಗಿ ಮಾಡಿ ಅದರ ಅಧಿಕಾರವನ್ನು ತಾನು ವಹಿಸಿಕೊಳ್ಳಬಹುದು.

ಈ ಕಲಮಿನ್ವಯವಾಗಿ ಪಂಚಾಯತವು ಅಧಿಕಾರಹೀನ ಮಾಡಲ್ಪಟ್ಟು ಅದರ ಅಧಿಕಾರವನ್ನು ವಶಪಡಿಸಿಕೊಳ್ಳದಿದ್ದರೆ, ಕಲಮು ೨೪ ರನ್ವಯವಾಗಿ ಪಂಚಾಯತದ

ಸದಸ್ಯರು ತಮ್ಮ ಅಧಿಕಾರಪದದಲ್ಲಿ ಯಾವ ಕಾಲಾವಧಿಯ ವರೆಗೆ ಉಳಿಯುತ್ತಿದ್ದರೋ ಅದರಕಿಂತ ಹೆಚ್ಚಿನ ಕಾಲಾವಧಿಯ ವರೆಗೆ ಈ ಅಧಿಕಾರಹೀನತೆ ಉಳಿಯಬಹುದು.

ಆದರೆ, ಕಮಿಶನರರು ಕಾಲಕಾಲಕ್ಕೆ ಅಧಿಕೃತ ಗ್ಯಾಜೆಟದಲ್ಲಿ ಪ್ರಸಿದ್ಧಿಸಿದ ಹುಕುಮಿನಿಂದ ಅಧಿಕಾರ ವಶಪಡಿಸಿಕೊಂಡ ಕಾಲಾವಧಿಯನ್ನು ಹಿಗ್ಗಿಸಬಹುದು ಇಲ್ಲವೆ ತಗ್ಗಿಸಬಹುದು.

ಆದರೆ, ಸರಕಾರದ ಪೂರ್ವಸಮ್ಮತಿ ಪಡೆದಿದ್ದ ಹೊರತು ಇಂತಹ ಕಾಲಾವಧಿಯು ಒಂದು ವರುಷದಕಿಂತ ಹೆಚ್ಚು ಬೆಳೆಸಲ್ಪಡತಕ್ಕದ್ದಲ್ಲ.

(೨) ಸರಕಾರದ ಅಭಿಪ್ರಾಯದಲ್ಲಿ ತಾಲೂಕ ಬೋರ್ಡ ತನ್ನ ಅಧಿಕಾರಗಳನ್ನು ಮೀರಿದರೆ ಇಲ್ಲವೆ ದುರುಪಯೋಗ ಮಾಡಿದರೆ, ಇಲ್ಲವೆ ಕಲಮು ೧೩೦ ಇಲ್ಲವೆ ೧೩೧ ಇಲ್ಲವೆ ಜಾರಿಯಲ್ಲಿದ್ದ ಬೇರೆ ಯಾವುದೇ ಕಾಯಿದೆಯನ್ವಯವಾಗಿ ಹಾಕಲಾದ ಕರ್ತವ್ಯಗಳ ನಿರ್ವಹಣೆಯಲ್ಲಿ ಅಸಮರ್ಥವಾದರೆ ಇಲ್ಲವೆ ಪದೇ ಪದೇ ತಪ್ಪಿದರೆ, ಇಲ್ಲವೆ ಡೆಪ್ಯೂಟಿ ಕಮಿಶನರರ, ಇಲ್ಲವೆ ಕಮಿಶನರರ, ಇಲ್ಲವೆ ಸರಕಾರದ ಈ ಕಾಯಿದೆಯನ್ವಯವಾಗಿದ್ದ ಯಾವುದೇ ಹುಕುಮುಗಳನ್ನು ಪದೇ ಪದೇ ಉಲ್ಲಂಘಿಸಿದರೆ, ಸರಕಾರವು ಅಧಿಕೃತ ಗ್ಯಾಜೆಟದಲ್ಲಿ ಪ್ರಸಿದ್ಧಿಸಿದ ಹುಕುಮಿನಿಂದ—

(i) ಇಂತಹ ತಾಲೂಕ ಬೋರ್ಡನ್ನು ಮುರಗಡೆ ಮಾಡಬಹುದು; ಇಲ್ಲವೆ

(ii) ಆ ಹುಕುಮಿನಲ್ಲಿ ನಿರ್ದಿಷ್ಟಪಡಿಸಿದ ಕಾಲಾವಧಿಯ ವರೆಗೆ ಇಂತಹ ತಾಲೂಕ ಬೋರ್ಡನ್ನು ಅಧಿಕಾರಹೀನವಾಗಿ ಮಾಡಿ ಅದರ ಅಧಿಕಾರವನ್ನು ತಾನು ವಹಿಸಿಕೊಳ್ಳಬಹುದು.

ಈ ಕಲಮಿನನ್ವಯವಾಗಿ ತಾಲೂಕ ಬೋರ್ಡ ಅಧಿಕಾರಹೀನ ಮಾಡಲ್ಪಟ್ಟು ಅದರ ಅಧಿಕಾರವನ್ನು ವಶಪಡಿಸಿಕೊಳ್ಳದಿದ್ದರೆ, ಕಲಮು ೧೧೦ರ ರನ್ವಯವಾಗಿ ತಾಲೂಕ ಬೋರ್ಡದ ಸದಸ್ಯರು ತಮ್ಮ ಅಧಿಕಾರಪದದಲ್ಲಿ ಯಾವ ಕಾಲಾವಧಿಯ ವರೆಗೆ ಉಳಿಯುತ್ತಿದ್ದರೋ ಅದರಕಿಂತ ಹೆಚ್ಚಿನ ಕಾಲಾವಧಿಯ ವರೆಗೆ ಈ ಅಧಿಕಾರಹೀನತೆ ಉಳಿಯಬಹುದು.

ಆದರೆ, ಸರಕಾರವು ಕಾಲಕಾಲಕ್ಕೆ ಅಧಿಕೃತ ಗ್ಯಾಜೆಟದಲ್ಲಿ ಪ್ರಸಿದ್ಧಿಸಿದ ಹುಕುಮಿನಿಂದ ಅಧಿಕಾರ ವಹಿಸಿಕೊಂಡ ಕಾಲಾವಧಿಯನ್ನು ಹಿಗ್ಗಿಸಬಹುದು ಇಲ್ಲವೆ ತಗ್ಗಿಸಬಹುದು.

(೩) ಉಪಕಲಮು (೧) ಇಲ್ಲವೆ ಉಪಕಲಮು (೨) ರನ್ವಯವಾಗಿ ಹುಕುಮನ್ನು ಪ್ರಸಿದ್ಧಿಸುವ ಮೊದಲು ಕಮಿಶನರರನು ಇಲ್ಲವೆ ಸರಕಾರವು ಸಂಭಾರ್ಾನುಸಾರ

ಪಂಚಾಯತಕ್ಕೆ ಇಲ್ಲವೆ ತಾಲೂಕ ಬೋರ್ಡಿಗೆ ತಾನು ಇಲ್ಲವೆ ಅದು ಮಾಡಬೇಕೆಂದಿರುವ ಹುಕುಮಿನ ಕಾರಣಗಳನ್ನು ತಿಳಿಸತಕ್ಕದ್ದು, ಅಂತಹ ಸೂಚನೆಯ ವಿರುದ್ಧ ಕಾರಣ ತೋರಿಸಲು ಪಂಚಾಯತ ಇಲ್ಲವೆ ತಾಲೂಕ ಬೋರ್ಡದ ಸಲುವಾಗಿ ಯೋಗ್ಯ ಕಾಲಾವಧಿಯನ್ನು ನಿಶ್ಚಿತಮಾಡತಕ್ಕದ್ದು ಮತ್ತು ಅದರ ತಕರಾರು ಮತ್ತು ವಿವರಣೆಗಳು ಯಾವುದಾದರೂ ಇದ್ದರೆ ಅವುಗಳನ್ನು ವಿಚಾರಿಸತಕ್ಕದ್ದು.

(೨) ಪಂಚಾಯತವು ಇಲ್ಲವೆ ತಾಲೂಕ ಬೋರ್ಡ ಮುರಗಡೆ ಮಾಡಲ್ಪಟ್ಟಾಗ ಇಲ್ಲವೆ ಅಧಿಕಾರಹೀನ ಮಾಡಲ್ಪಟ್ಟಾಗ, ಪಂಚಾಯತದ ಇಲ್ಲವೆ ತಾಲೂಕ ಬೋರ್ಡದ ಎಲ್ಲ ಸದಸ್ಯರು ಆ ಹುಕುಮಿನಲ್ಲಿ ನಿರ್ದಿಷ್ಟಪಡಿಸಿದ ತಾರೀಖಿನಿಂದ ಸದಸ್ಯರೆಂದು ತಮ್ಮ ಅಧಿಕಾರ ಪದಗಳನ್ನು ಖಾಲೀ ಮಾಡತಕ್ಕದ್ದು.

(೩) ಪಂಚಾಯತವು ಇಲ್ಲವೆ ತಾಲೂಕ ಬೋರ್ಡು ಮುರಗಡೆ ಮಾಡಲ್ಪಟ್ಟಾಗ ಈ ಕಾಯಿದೆಯಲ್ಲಿ ಅನುಕೂಲಿಸಲಾದ ರೀತಿಯಲ್ಲಿ ಅದು ಪುನಾರಚಿತ ಮಾಡಲ್ಪಡತಕ್ಕದ್ದು.

(೪) ಪಂಚಾಯತವು ಇಲ್ಲವೆ ತಾಲೂಕ ಬೋರ್ಡು ಅಧಿಕಾರ ಹೀನ ಮಾಡಲ್ಪಟ್ಟರೆ,

(ಅ) ಈ ಅಧಿಕಾರ ಹೀನತೆಯ ಕಾಲಾವಧಿಯಲ್ಲಿ ಪಂಚಾಯತದ ಇಲ್ಲವೆ ತಾಲೂಕ ಬೋರ್ಡದ ಎಲ್ಲ ಅಧಿಕಾರಗಳು ಹಾಗೂ ಕರ್ತವ್ಯಗಳು ಸಂದರ್ಭಾನುಸಾರವಾಗಿ ಡೆಪ್ಯುಟಿ ಕಮಿಶನರನಿಂದ ಇಲ್ಲವೆ ಸರಕಾರದಿಂದ ಈ ಸಂಬಂಧವಲ್ಲಿ ಕಾಲ ಕಾಲಕ್ಕೆ ನೇಮಿಸಬಹುದಾದಂತಹ ವ್ಯಕ್ತಿ ಇಲ್ಲವೆ ವ್ಯಕ್ತಿಗಳಿಂದ ನಿರ್ವಹಿಸಲ್ಪಡತಕ್ಕದ್ದು ಮತ್ತು ಮಾಡಲ್ಪಡತಕ್ಕದ್ದು.

(ಬ) ಪಂಚಾಯತದ ಇಲ್ಲವೆ ತಾಲೂಕ ಬೋರ್ಡದ ಅಂತರ್ಗತವಾಗಿದ್ದ ಎಲ್ಲ ಆಸ್ತಿಯು ಈ ಅಧಿಕಾರ ಹೀನತೆಯ ಕಾಲಾವಧಿಯಲ್ಲಿ, ಸರಕಾರದ ಅಂತರ್ಗತವಾಗಿರತಕ್ಕದ್ದು.

(ಕ) ಈ ಅಧಿಕಾರ ಹೀನತೆಯ ಕಾಲಾವಧಿಯು ಮುಗಿದ ಮೇಲೆ, ಪಂಚಾಯತವು ಇಲ್ಲವೆ ತಾಲೂಕ ಬೋರ್ಡು ಈ ಕಾಯಿದೆಯಲ್ಲಿ ಅನುಕೂಲಿಸಲಾದ ರೀತಿಯಲ್ಲಿ ಪುನಾರಚಿತ ಮಾಡಲ್ಪಡತಕ್ಕದ್ದು. ಮತ್ತು ಅಧಿಕಾರ ಪದ ಖಾಲೀ ಮಾಡಿದ ವ್ಯಕ್ತಿಗಳು ಮತ್ತೆ ಚುನಾವಣೆ ಇಲ್ಲವೆ ಮತ್ತೆ ನಾಮಕರಣಕ್ಕೆ ಅರ್ಹರಾಗಿರತಕ್ಕದ್ದು.

**ವಿವೇಚನೆ**

ಪಂಚಾಯತವಾಗಲೀ ಇಲ್ಲವೆ ತಾಲೂಕ ಬೋರ್ಡವಾಗಲೀ ಪ್ರಾತಿನಿಧಿಕ ಸಂಸ್ಥೆಗಳೇನೋ ನಿಜ. ಆದರೆ ಆದರ ಕಾರ್ಯ ಕರ್ತವ್ಯಗಳ ಮೇಲೆ ಸರಕಾರದ ಮೇಲ್ವಿಚಾರಣೆಯ ಅಧಿಕಾರವು ಈ ಕಾಯಿದೆಯ ಪ್ರಕಾರ ಇದೆ. ಪಂಚಾಯತ

ಇಲ್ಲವೆ ಬೋರ್ಡು ತನ್ನ ಅಧಿಕಾರ ಮೀರಿ ನಡೆದರೆ ಅಧಿಕಾರದ ದುರುಪಯೋಗ ಮಾಡಿದರೆ, ಕರ್ತವ್ಯ ಪಾಲನೆಯಲ್ಲಿ ಪದೇಪದೇ ತಪ್ಪಿದರೆ ಮೇಲ್ವಿಚಾರಣೆ ಮಾಡಲು ಅಧಿಕೃತರಾದವರ ಹುಕುಮುಗಳನ್ನು ಪದೇಪದೇ ಉಲ್ಲಂಘಿಸಿದರೆ, ಆ ಸಂಸ್ಥೆಯು ಈ ಕಾಯಿದೆಯ ಪ್ರಕಾರ ಕೆಲಸ ಮಾಡಿದಂತೆ ಆಗುವುದಿಲ್ಲ. ವಿಧೇಯತೆಯು ಬಾಳಿನ ಲಕ್ಷಣ; ಅವಿಧೇಯತೆಯು ಅಹಿತಕ್ಕಾಗಿ ಇರುವುದು. ಆದ್ದರಿಂದ ಅಂತಹ ಸಂಸ್ಥೆಗಳನ್ನು ಮುರಗಡೆ ಮಾಡಬೇಕು, ಇಲ್ಲವೆ ಅದರ ಅಧಿಕಾರ ಕಸಿದುಕೊಳ್ಳಬೇಕು. ಈ ಅಧಿಕಾರಗಳ ವಿವರವನ್ನು ಈ ಕಲಮಿನಲ್ಲಿ ಹೇಳಲಾಗಿದೆ.

ಮುರಗಡೆ ಮಾಡಲ್ಪಟ್ಟರೆ ಇಲ್ಲವೆ ಅಧಿಕಾರ ಕಸಿದುಕೊಳ್ಳಲ್ಪಟ್ಟರೆ, ಮುಂದೆ ಅದು ಈ ಕಾಯಿದೆಯಲ್ಲಿ ಹೇಳಿದಂತೆ ಮತ್ತೆ ರಚಿತವಾಗತಕ್ಕದ್ದು. ಅಧಿಕಾರ ಹೀನತೆಯ ಕಾಲಾವಧಿಯು ಸದಸ್ಯರ ಅಧಿಕಾರ ಕಾಲಾವಧಿಯಕಿಂತ ಹೆಚ್ಚು ಆಗಬಹುದು. ಪಂಚಾಯತದ ಅಧಿಕಾರ ಹೀನತೆಯ ಕಾಲಾವಧಿಯು ಒಂದು ವರುಷಕ್ಕಿಂತ ಹೆಚ್ಚು ಆಗಿರಬೇಕಾಗಿದ್ದರೆ, ಸರಕಾರದ ಪೂರ್ವ ಸಮ್ಮತಿ ಪಡೆಯಬೇಕು.

ಮುರಗಡೆ ಇಲ್ಲವೆ ಅಧಿಕಾರ ಹೀನ ಮಾಡುವ ಹುಕುಮು ಹೊರಡಿಸಲ್ಪಡುವ ಮುಂಚೆ ಆ ಸಂಸ್ಥೆಗೆ ತಿಳಿಸಿ, ಅದರ ತಕರಾರುಗಳನ್ನು ಕೇಳಿಕೊಳ್ಳಬೇಕು. ಸಂಸ್ಥೆ ಮುರಗಡೆ ಇಲ್ಲವೆ ಅಧಿಕಾರ ಹೀನವಾದರೆ ಸದಸ್ಯರು ಸ್ಥಳಗಳನ್ನು ಖಾಲೀ ಮಾಡತಕ್ಕದ್ದು. ಪುನಾರಚಿತವಾಗುವ ಕಾಲದಲ್ಲಿ ಮತ್ತೆ ಚುನಾವಣೆಗೆ ಇಲ್ಲವೆ ನಾಮಕರಣಕ್ಕೆ ಅವರು ಅರ್ಹನಾಗಿರುವರು. ಅಧಿಕಾರ ಹೀನತೆಯ ಕಾಲಾವಧಿಯಲ್ಲಿ ಅಧಿಕಾರವು ಸರಕಾರದಿಂದ ಇಲ್ಲವೆ ಡೆಪ್ಯೂಟಿ ಕಮಿಶನರನಿಂದ ನೇಮಕವಾದ ವ್ಯಕ್ತಿಯಿಂದ ನಡೆಸಲ್ಪಡಬೇಕು.

## ೨೦೪. ಜಿಲ್ಲೆಯಲ್ಲಿಯ ಪಂಚಾಯತಗಳ ಮತ್ತು ತಾಲೂಕ ಬೋರ್ಡಗಳ ಮತ್ತು ಮುನಸಿಪಾಲಿಟಿಗಳ ಮತ್ತು ಪಟ್ಟಣ ಪ್ರದೇಶ ಕಮಿಟಿಗಳ ನಡುವಿನ ತಂಟೆಗಳು

ಜಿಲ್ಲೆಯಲ್ಲಿಯ ಎರಡು ಇಲ್ಲವೆ ಹೆಚ್ಚು ಪಂಚಾಯತಗಳ ಇಲ್ಲವೆ ತಾಲೂಕ ಬೋರ್ಡಗಳ ನಡುವೆ, ಇಲ್ಲವೆ ಪಂಚಾಯತ ಮತ್ತು ತಾಲೂಕ ಬೋರ್ಡದ ನಡುವೆ, ಇಲ್ಲವೆ ಪಂಚಾಯತ ಇಲ್ಲವೆ ತಾಲೂಕ ಬೋರ್ಡ ಮತ್ತು ಪಟ್ಟಣ ಮುನಸಿಪಲ್ ಕಾವುನ್ಸಿಲ ಇಲ್ಲವೆ ಕಾವುನ್ಸಿಲಗಳು ಇಲ್ಲವೆ ಪಟ್ಟಣ ಪ್ರದೇಶ ಕಮಿಟಿ ಇಲ್ಲವೆ ಕಮಿಟಿಗಳ ನಡುವೆ ತಂಟೆ ಉಂಟಾದರೆ, ತಂಟೆಯ ವಿಷಯಗಳು ನಿರ್ಣಯಕ್ಕಾಗಿ ಡೆಪ್ಯೂಟಿ ಕಮಿಶನರನ ಕಡೆಗೆ ಇಲ್ಲವೆ ಈ ಸಂಬಂಧದಲ್ಲಿ ಗೊತ್ತುಮಾಡಬಹುದಾದಂತಹ ಇತರ ಅಧಿಕಾರಿಯ ಕಡೆಗೆ ಕಳಿಸಲ್ಪಡತಕ್ಕದ್ದು.

**ವಿವೇಚನೆ**

ಜಿಲ್ಲೆಯಲ್ಲಿ ಪಂಚಾಯತ, ತಾಲೂಕ ಬೋರ್ಡು, ಮುನಿಸಿಪಲ್‌ಕಾವ್ನಿಲ್ಸ್ ಪಟ್ಟಣ ಪ್ರದೇಶ ಕಮಿಟಿ, ಎಂದು ಅನೇಕ ಸ್ಥಾನಿಕ ಅಧಿಕಾರಗಳು ಇವೆ. ಅವುಗಳ ಕಾರ್ಯ ಮತ್ತು ಕ್ಷೇತ್ರಗಳು ಪ್ರತ್ಯೇಕವಾಗಿದ್ದರೂ ವ್ಯವಹಾರಗಳ ಮೂಲಕ ಒಮ್ಮೊಮ್ಮೆ ಅವುಗಳ ನಡುವೆ ತಂಟೆ ಉಂಟಾಗುವ ಸಂಭವ ಇರುತ್ತದೆ. ಹಾಗೆ ತಂಟೆ ಉಂಟಾದರೆ ತಂಟೆಯುವನ್ನು ಡೆಪ್ಯುಟಿ ಕಮಿಶನರನ ಇಲ್ಲವೆ ಈ ಸಂಬಂಧದಲ್ಲಿ ಬೇರೆಯಾಗಿ ಗೊತ್ತುಮಾಡಬಹುದಾದ ಅಧಿಕಾರಿಯ ಕಡೆಗೆ ನಿರ್ಣಯಕ್ಕಾಗಿ ಕಳಿಸ ತಕ್ಕದ್ದು. ಇವೆಲ್ಲ ಒಂದೇ ಜಿಲ್ಲೆಯಲ್ಲಿಯ ಸಂಸ್ಥೆಗಳ ನಡುವಿನ ತಂಟೆಗಳು.

## ೨೦೫. ಎರಡು ಜಿಲ್ಲೆಗಳಲ್ಲಿಯ ಪಂಚಾಯತಗಳ, ತಾಲೂಕ ಬೋರ್ಡುಗಳ ಮತ್ತು ಸಿಟಿ–ಮುನಸಿಪಾಲಿಟಿಗಳ ಮತ್ತು ಸ್ಥಾನಿಕ ಅಧಿಕಾರಗಳ ನಡುವಿನ ತಂಟೆಗಳು

(೧) ಬೇರೆ ಜಿಲ್ಲೆಗಳಲ್ಲಿರುವ ಎರಡು ಇಲ್ಲವೆ ಹೆಚ್ಚು ಪಂಚಾಯತಗಳ ನಡುವೆ, ಇಲ್ಲವೆ ಎರಡು ಇಲ್ಲವೆ ಹೆಚ್ಚು ತಾಲೂಕ ಬೋರ್ಡುಗಳ ನಡುವೆ, ಇಲ್ಲವೆ ಪಂಚಾಯತ ಮತ್ತು ತಾಲೂಕ ಬೋರ್ಡದ ನಡುವೆ, ಇಲ್ಲವೆ ಯಾವುದೇ ಜಿಲ್ಲೆಯಲ್ಲಿಯ ಯಾವುದೇ ಪಂಚಾಯತ ಇಲ್ಲವೆ ತಾಲೂಕ ಬೋರ್ಡ ಮತ್ತು ಯಾವುದೇ ಟೌವುನ್ ಮುನಸಿಪಲ್ ಕಾವುನ್ಸಿಲ್ ಇಲ್ಲವೆ ಪಟ್ಟಣ ಪ್ರದೇಶ ಕಮಿಟಿ ನಡುವೆ ಇಲ್ಲವೆ ಅದೇ ಭೂಕಂದಾಯ ವಿಭಾಗದ ಇಂತಹ ಯಾವುದೇ ಸ್ಥಾನಿಕ ಅಧಿಕಾರ ಮತ್ತು ಸಿಟಿ ಮುನಸಿಪಲ್ ಕಾವುನ್ಸಿಲದ ನಡುವೆ ಇಲ್ಲವೆ ಯಾವುದೇ ಪಂಚಾಯತ ಇಲ್ಲವೆ ತಾಲೂಕ ಬೋರ್ಡ ಮತ್ತು ಯಾವುದೇ ಸಿಟಿ ಮುನಸಿಪಲ್ ಕಾವುನ್ಸಿಲದ ನಡುವೆ, ಅದು ಅದೇ ಜಿಲ್ಲೆಯಲ್ಲಿರಲಿ, ಇಲ್ಲವೆ ಅದೇ ಭೂಕಂದಾಯ ವಿಭಾಗದ ಬೇರೆ ಜಿಲ್ಲೆಯಲ್ಲಿರಲಿ, ತಂಟೆ ಉಂಟಾದರೆ ತಂಟೆಯ ವಿಷಯಗಳನ್ನು ನಿರ್ಣಯಕ್ಕಾಗಿ ಕಮಿಶನರನ ಕಡೆಗೆ ಕಳಿಸತಕ್ಕದ್ದು.

(೨) ಉಪಕಲಮು (೧) ರಲ್ಲಿ ಹೇಳಲಾದ ಯಾವುದೇ ತಂಟೆಯು ಬೇರೆ ಬೇರೆ ಭೂಕಂದಾಯ ವಿಭಾಗಗಳಲ್ಲಿಯ ಸ್ಥಾನಿಕ ಅಧಿಕಾರಗಳ ನಡುವೆ ಉಂಟಾದರೆ ತಂಟೆಯ ವಿಷಯಗಳನ್ನು ನಿರ್ಣಯಕ್ಕಾಗಿ ಸರಕಾರದ ಕಡೆಗೆ ಕಳಿಸತಕ್ಕದ್ದು.

**ವಿವೇಚನೆ**

ಕಲಮು ೨೦೪ ರಂತೆಯೆ ಇದೆ ಈ ಕಲಮು ಕೂಡ. ಆದರೆ ಇಲ್ಲಿ ಬೇರೆ ಬೇರೆ ಜಿಲ್ಲೆಗಳಲ್ಲಿಯ ಸ್ಥಾನಿಕ ಅಧಿಕಾರಗಳ ನಡುವೆ ತಂಟೆ ಉಂಟಾದರೆ, ಅವು ಒಂದೇ ಭೂಕಂದಾಯದ ವಿಭಾಗದಲ್ಲಿದ್ದರೆ, ಆ ವಿಭಾಗದ ಕಮಿಶನರನ ಕಡೆಗೆ, ಬೇರೆ ಬೇರೆ ಭೂಕಂದಾಯದ ವಿಭಾಗಗಳಲ್ಲಿಯ ಜಿಲ್ಲೆಯಲ್ಲಿಯ ಸ್ಥಾನಿಕ ಅಧಿಕಾರಗಳ

ನಡುವಿನ ತಂಟೆಯಾಗಿದ್ದರೆ ಅದನ್ನು ಸರಕಾರದ ಕಡೆಗೆ ನಿರ್ಣಯಕ್ಕೆ ಕಳಿಸಬೇಕು. ಏಕೆಂದರೆ ಸರಕಾರ ಆ ಎರಡು ವಿಭಾಗಳ ಮೇಲಿನ ಅಧಿಕಾರಿಯಾಗುತ್ತದೆ.

**೨೦೩. ಅಪೀಲುಗಳು**

(೧) ಈ ಕಾಯಿದೆಯನ್ವಯವಾಗಿ ಡೆಪ್ಯೂಟಿ ಕಮಿಶನರನ ಯಾವುದೇ ಮೂಲ ಹುಕುಮಿನಿಂದ ಯಾವುದೇ ವ್ಯಕ್ತಿಯು ಬಾಧಿತನಾಗಿದ್ದರೆ, ಗೊತ್ತುಮಾಡಬಹುದಾದಂತಹ ಕಾಲಾವಧಿಯಲ್ಲಿ ಅವನು ಕಮಿಶನರನ ಕಡೆಗೆ ಅಪೀಲು ಮಾಡಿಕೊಳ್ಳಬಹುದು.

(೨) ಈ ಕಾಯಿದೆಯನ್ವಯವಾಗಿ ಕಮಿಶನರನ ಯಾವುದೇ ಮೂಲ ಹುಕುಮಿನಿಂದ ಯಾವುದೇ ವ್ಯಕ್ತಿಯು ಬಾಧಿತನಾಗಿದ್ದರೆ, ಗೊತ್ತುಮಾಡಬಹುದಂತಹ ಕಾಲಾವಧಿಯಲ್ಲಿ ಅವನು ಸರಕಾರದ ಕಡೆಗೆ ಅಪೀಲು ಮಾಡಿಕೊಳ್ಳಬಹುದು.

(೩) ಅಪೆಲೆಂಟನಿಗೆ ಅವನ ವಾದ ಮಂಡಿಸಲು ಅವಕಾಶಮಾಡಿಕೊಟ್ಟ ನಂತರ ಮತ್ತು ತನಗೆ ಯೋಗ್ಯ ಕಂಡಂತಹ ವಿಚಾರಣೆ ನಡೆಸಿ, ಅಪೀಲಾಧಿಕಾರಿಯು ಅಪೀಲಿನ ನಿರ್ಣಯವನ್ನು ಕೊಡತಕ್ಕದ್ದು ಮತ್ತು ಅವನ ನಿರ್ಣಯವು ಕೊನೆಯದಾಗಿರತಕ್ಕದ್ದು.

**ವಿವೇಚನೆ**

ಅಪೀಲಿನ ಬಗ್ಗೆ ಇಲ್ಲಿ ಹೇಳಲಾಗಿದೆ. ಡೆ. ಕಮಿಶನರನ ಹುಕುಮಿನ ಮೇಲೆ ಕಮಿಶನರನ ಕಡೆಗೆ, ಕಮಿಶನರನ ಹುಕುಮಿನ ಮೇಲೆ ಸರಕಾರಕ್ಕೆ ಅಪೀಲು ಮಾಡಿಕೊಳ್ಳಲು ಅವಕಾಶವಿದೆ. ಅಪೀಲು ಮಾಡಿಕೊಳ್ಳಲು ನಿಶ್ಚಿತ ಮಾಡಿದ ಕಾಲಾವಧಿಯಲ್ಲಿ ಹುಕುಮು ಮಾಡಿದ ತಾರೀಖಿನಿಂದ ಅವಕಾಶವಿದೆ. ಅಪೀಲಾಧಿಕಾರಿಯು ಅಪೆಲಂಟನಿಗೆ ವಾದ ಮಂಡಿಸಲು ಅವಕಾಶ ಕೊಟ್ಟು, ತಾನು ಬೇರೆ ವಿಚಾರಣೆ ಮಾಡಬೇಕೆನ್ನಿಸಿದರೆ ಮಾಡಿ ನಂತರ ಹುಕುಮು ಮಾಡತಕ್ಕದ್ದು. ಆ ಹುಕುಮು ಕೊನೆಯದು.

ಇಲ್ಲಿ ಒಂದು ಮಾತು ಮಹತ್ವದ್ದಿದೆ. ಮೂಲ ಹುಕುಮಿನಿಂದ, ಎಂಬ ಪದ ಪ್ರಯೋಗವಾಗಿದೆ. ಅಂದರೆ ಡೆ. ಕಮಿಶನರನು ಇಲ್ಲವೆ ಕಮಿಶನರನು, ಅಪೀಲಾಧಿಕಾರಿಯಾಗಿ ಕೂತು ಬೇರೊಂದು ಕೆಳಅಧಿಕಾರಿಯ ಹುಕುಮಿನ ಮೇಲೆ ನಿರ್ಣಯ ಕೊಟ್ಟದ್ದು ಮೂಲ ಹುಕುಮು ಆಗುವುದೋ ಇಲ್ಲವೊ ಹೇಳಲು ಬಾರದು. ಅಂದರೆ ಎರಡನೆಯ ಅಪೀಲಿಗೆ ಅವಕಾಶ ಮಾಡಲಾಗಿದೆಯೊ ಇಲ್ಲವೊ ಎಂಬುದು ಸ್ಪಷ್ಟವಿಲ್ಲ. ಅಪೀಲಾಧಿಕಾರಿಯ ನಿರ್ಣಯವು ಕೊನೆಯದು ಎಂದಾಗ ಅಪೀಲಾಧಿಕಾರಿ ಕಮಿಶನರನು ಆಗಿರುವಾಗ ಅದು ಕೊನೆಯದಾಗಿದೆಯೆಂದು ತಿಳಿದರೆ, ಅದರ ಮೇಲೆ ಸರಕಾರಕ್ಕೆ ಅಪೀಲು ಇಲ್ಲವೆಂಬ ಅರ್ಥ ಹೊರಡುವುದು. ಅದರಿಂದ ಅಪೀಲಿನಲ್ಲಿ

ಮಾಡಿದ ಹುಕುಮು ಮುಖ್ಯ ಹುಕುಮು ಅಲ್ಲ ಎಂಬ ಧ್ವನಿ ಹೊರಡುವುದು. ಈ ಬಗ್ಗೆ ಹೆಚ್ಚು ಸ್ಪಷ್ಟ ಮಾಡಿದ್ದರೆ ಒಳಿತಾಗುತ್ತಿತ್ತು.

**೨೦೭. ಪುನರ್ವಿಮರ್ಶೆ**

(೧) ಈ ಕಾಯಿದೆಯನ್ವಯವಾಗಿರುವ ಯಾವುದೇ ಕೆಳಗಿನ ಅಧಿಕಾರಿಯ ಹತ್ತಿರ ಇರುವ ಯಾವುದೇ ಪ್ರಕರಣದಲ್ಲಿರುವ ದಾಖಲೆ ಪತ್ರಗಳನ್ನು ಸರಕಾರವು ಇಲ್ಲವೆ ಕಮಿಶನರನು ತರಿಸಿಕೊಳ್ಳಬಹುದು ಮತ್ತು ಪರೀಕ್ಷಣ ಮಾಡಬಹುದು. ಮತ್ತು ಯೋಗ್ಯ ಕಂಡಂತಹ ವಿಚಾರಣೆ ನಡಸಿದ ನಂತರ, ಸಂದರ್ಭಾನುಸಾರವಾಗಿ ಸರಕಾರಕ್ಕೆ ಇಲ್ಲವೆ ಕಮಿಶನರನಿಗೆ ಆ ಕೆಳಗಿನ ಅಧಿಕಾರಿಯ ಹುಕುಮು ಕಾಯಿದೆಗೆ ವಿರುದ್ಧವಾಗಿದೆಯೆಂದು ಮತ್ತು ನ್ಯಾಯದಾನದಲ್ಲಿ ಚ್ಯುತಿಯಾಗಿದೆಯೆಂದು ಸಮಾಧಾನವಾದರೆ ಸರಕಾರವು ಇಲ್ಲವೆ ಕಮಿಶನರನು ಯೋಗ್ಯ ಕಂಡಂತಹ ಹುಕುಮನ್ನು ಅದರ ಮೇಲೆ ಮಾಡಬಹುದು.

(೨) ಉಪಕಲಮು (೧) ರನ್ವಯವಾಗಿ ಯಾವ ಹುಕುಮೂ ಯಾವುದೇ ಪಕ್ಷಕಾರನ ಹಿತಾಸಕ್ತಿಗೆ ವ್ಯತ್ಯಯವುಂಟಾಗುವಂತೆ ಅವನಿಗೆ ತನ್ನ ವಾದ ಮಂಡಿಸಲು ಆಸ್ಪದ ಮಾಡಿಕೊಟ್ಟ ಹೊರತು ಮಾಡತಕ್ಕದ್ದಲ್ಲ.

**ವಿವೇಚನೆ**

ಈ ಕಾಯಿದೆಯ ಪ್ರಕಾರ ಪ್ರಕರಣಗಳು ನಡೆದಿರಬೇಕು. ಅಲ್ಲಿ ಕಮಿಶನರ ಇಲ್ಲವೆ ಸರಕಾರದ ಕೆಳಗಿನ ಅಧಿಕಾರಿಯು ಹುಕುಮು ಮಾಡಿರಬೇಕು. ಆ ಹುಕುಮು ಕಾಯಿದೆಗೆ ವಿರುದ್ಧವಾಗಿದೆ, ನ್ಯಾಯದಾನದಲ್ಲಿ ಚ್ಯುತಿಯಾಗಿದೆ ಎಂದು ಸರಕಾರಕ್ಕೆ ಇಲ್ಲವೆ ಕಮಿಶನರನಿಗೆ ಸಮಾಧಾನವಾಗಿರಬೇಕು. ಆ ಪ್ರಕರಣದಲ್ಲಿಯ ದಾಖಲೆ ಪತ್ರಗಳನ್ನು ತರಿಸಿಕೊಂಡು ಪರೀಕ್ಷಣ ಮಾಡಿದ ವೇಳೆ, ಮೇಲೆ ಹೇಳಿದಂತೆ ಸರಕಾರಕ್ಕೆ ಇಲ್ಲವೆ ಕಮಿಶನರನಿಗೆ ಸಮಾಧಾನವಾದರೆ ಅದರ ಮೇಲೆ ಯೋಗ್ಯ ಹುಕುಮು ಮಾಡಬಹುದು. ಹೀಗೆ ಹುಕುಮು ಸರಕಾರ ಇಲ್ಲವೆ ಕಮಿಶನರ ಮಾಡುವಾಗ ಆ ಹುಕುಮಿನಿಂದ ಯಾವುದೇ ಪಕ್ಷಕಾರನ ಹಿತಾಸಕ್ತಿಗೆ ವ್ಯತ್ಯಯವುಂಟಾಗುತ್ತಿದ್ದರೆ, ಅವನ ವಾದವನ್ನು ಕೇಳಿಕೊಂಡ ನಂತರ ಹುಕುಮು ಮಾಡಬೇಕು. ಅನ್ಯಾಯದ ಪರಿಹಾರಕ್ಕೆ ಈ ರೀತಿಯ ವ್ಯವಸ್ಥೆ ಮಾಡಲಾಗಿದೆ.

**೨೦೮. ಹಾನಿ–ನಾಶ–ತಪ್ಪುವಿನಿಯೋಗಕ್ಕಾಗಿ ಸದಸ್ಯರ ಹೊಣೆಗಾರಿಕೆ**

(೧) ಯಾವುದಕ್ಕೆ ಅವನು ಭಾಗಿಯಾಗಿರುವನೋ ಇಲ್ಲವೆ ಸದಸ್ಯನೆಂದು ತನ್ನ ಕರ್ತವ್ಯದಲ್ಲಿ ತೀರ ಅಲಕ್ಷ್ಯ ಇಲ್ಲವೆ ಅವನ ದುರ್ವರ್ತನೆಯಿಂದ ಯಾವುದು

ಮಾಡಲ್ಪಟ್ಟಿದೆಯೋ ಇಲ್ಲವೆ ಸೌಕರ್ಯ ಒದಗಿಸಲ್ಪಟ್ಟಿದೆಯೋ ಅಂತಹ ಪಂಚಾಯು ತದ ಇಲ್ಲವೆ ತಾಲೂಕ ಬೋರ್ಡದ ಹಣ ಇಲ್ಲವೆ ಆಸ್ತಿಯ ಹಾನಿಗೆ, ನಾಶಕ್ಕೆ, ಇಲ್ಲವೆ ದುರ್ವಿನಿಯೋಗಕ್ಕೆ ಪಂಚಾಯತದ ಇಲ್ಲವೆ ತಾಲೂಕ ಬೋರ್ಡದ ಪ್ರತಿಯೊಬ್ಬ ಸದಸ್ಯನು ವೈಯಕ್ತಿಕವಾಗಿ ಹೊಣೆಗಾರನಾಗಿರತಕ್ಕದ್ದು.

(೨) ಸಂಬಂಧಪಟ್ಟ ಸದಸ್ಯ ಇಲ್ಲವೆ ಸದಸ್ಯರಿಗೆ, ಪರಿಸ್ಥಿತಿಯು ವಿರುದ್ಧ ವಾಗಿದೆಯೆಂದು ತೋರಿಸಲು ಸಾಕಷ್ಟು ಅವಕಾಶವನ್ನು ಒದಗಿಸಿಕೊಟ್ಟ ನಂತರ, ತಾಲೂಕ ಬೋರ್ಡದ ಇಲ್ಲವೆ ಪಂಚಾಯತದ ಯಾವುದೇ ಹಣದ ಇಲ್ಲವೆ ಆಸ್ತಿಯ ಹಾನಿ, ನಾಶ, ಇಲ್ಲವೆ ದುರ್ವಿನಿಯೋಗವು ಅವನ ಇಲ್ಲವೆ ಅವರ ದುರ್ವರ್ತನೆಯ ಇಲ್ಲವೆ ದುರ್ಲಕ್ಷ್ಯದ ಪ್ರತ್ಯಕ್ಷ ಪರಿಣಾಮವಾಗಿದೆಯೆಂದು ಡೆಪ್ಯೂಟಿ ಕಮಿಶನರನು ಸಮಾಧಾನಪಟ್ಟರೆ, ಇಂತಹ ಸದಸ್ಯನು ಇಲ್ಲವೆ ಸದಸ್ಯರು ಪಂಚಾಯತಕ್ಕೆ ಇಲ್ಲವೆ ತಾಲೂಕ ಬೋರ್ಡಿಗೆ ನಿಶ್ಚಿತಗೊಳಿಸಿದ ತಾರೀಖಿನ ಒಳಗೆ, ಇಂತಹ ಹಾನಿ, ನಾಶ, ಇಲ್ಲವೆ ದುರ್ವಿನಿಯೋಗದಿಂದ ತುಂಬಬೇಕಾದ ಹಣವನ್ನು ಸಲ್ಲಿಸಬೇಕೆಂದು ಡೆಪ್ಯೂಟಿ ಕಮಿಶನರನು ಲೇಖೀ ಹುಕುಮಿನಿಂದ ನಿರ್ದೇಶಿಸಬಹುದು.

(೩) ಆ ರಕಮು ಹಾಗೆ ಕೊಡಲ್ಪಡದಿದ್ದರೆ, ಅದನ್ನು ಭೂಕಂದಾಯದ ಬಾಕಿ ಎಂಬಂತೆ ಡೆಪ್ಯೂಟಿ ಕಮಿಶನರನು ವಸೂಲ ಮಾಡತಕ್ಕದ್ದು. ಮತ್ತು ಅದನ್ನು ಸಂದರ್ಭಾನುಸಾರವಾಗಿ ಪಂಚಾಯತ ನಿಧಿಗೆ ಇಲ್ಲವೆ ತಾಲೂಕ ಬೋರ್ಡ ನಿಧಿಗೆ ಜಮಾ ಮಾಡತಕ್ಕದ್ದು.

(೪) ಉಪಕಲಮು (೨) ರನ್ವಯವಾಗಿರುವ ಡೆಪ್ಯೂಟಿ ಕಮಿಶನರನ ನಿರ್ಣಯದ ಮೇಲೆ ಕಮಿಶನರನ ಕಡೆಗೆ ಅಪೀಲಿಗೆ ಅವಕಾಶ ಇರತಕ್ಕದ್ದು. ಮತ್ತು ಕಮಿಶನರನ ನಿರ್ಣಯದ ಮೇಲೆ ಸರಕಾರಕ್ಕೆ ಎರಡನೆಯ ಅಪೀಲು

## ವಿವೇಚನೆ

ಪಂಚಾಯತದ ಇಲ್ಲವೆ ತಾಲೂಕ ಬೋರ್ಡದ ಯಾವುದೇ ಸದಸ್ಯನು ತನ್ನ ದುರ್ವರ್ತನೆಯಿಂದ ಇಲ್ಲವೆ ದುರ್ಲಕ್ಷ್ಯದಿಂದ ಪಂಚಾಯತದ ಇಲ್ಲವೆ ತಾಲೂಕ ಬೋರ್ಡದ ಯಾವುದೇ ಹಣ ಇಲ್ಲವೆ ಆಸ್ತಿಗೆ ಹಾನಿಯಾಗುವ ಹಾಗೆ, ಅದು ನಾಶ ವಾಗುವ ಹಾಗೆ ಇಲ್ಲವೆ ದುರ್ವಿನಿಯೋಗವಾಗುವ ಹಾಗೆ ಮಾಡಿದ್ದರೆ,ಇಲ್ಲವೆ ಮಾಡಲು ಸೌಕರ್ಯ ಒದಗಿಸಿದ್ದರೆ ಅವನು ವೈಯಕ್ತಿಕವಾಗಿ ಅದಕ್ಕೆ ಹೊಣೆಗಾರನು. ಅಂತಹ ಸದಸ್ಯನಿಗೆ ತನ್ನ ಹೇಳಿಕೆಯನ್ನು ಮಂಡಿಸಲು ಅವಕಾಶ ಮಾಡಿಕೊಟ್ಟ ನಂತರ ಲುಕಸಾನು ಭರಪಾಯಿ ತರೀಖ ಹಣವನ್ನು ತುಂಬಬೇಕೆಂದು ಡೆಪ್ಯೂಟಿ ಕಮಿಶನರನು ಆದೇಶ ಕೊಡುವನು. ಈ ಆದೇಶದ ಪ್ರಕಾರ ಹಣ ತುಂಬದಿದ್ದರೆ

ಅದನ್ನು ಭೂಕಂದಾಯದ ಬಾಕಿ ಎಂಬಂತೆ ವಸೂಲಿ ಮಾಡತಕ್ಕದ್ದು. ಅದನ್ನು ಸಂಬಂಧಪಟ್ಟ ನಿಧಿಗೆ ಜಮಾ ಮಾಡತಕ್ಕದ್ದು.

ಡೆ. ಕಮಿಶನರನ ಆಜ್ಞೆಯ ವಿರುದ್ಧ ಕಮಿಶನರನ ಕಡೆಗೆ, ಅಪೀಲು ಇದೆ. ಈ ಅಪೀಲಿನಲ್ಲಿ ಕಮಿಶನರನು ಮಾಡಿದ ಹುಕುಮಿನ ಮೇಲೆ ಎರಡನೆಯ ಅಪೀಲ ಸರಕಾರಕ್ಕೆ ಇದೆ. ಇಲ್ಲಿ ಎರಡನೆಯ ಅಪೀಲಿನ ಬಗ್ಗೆ ಸ್ಪಷ್ಟವಾಗಿ ಹೇಳಿದಂತೆ ಕಲಮು ೨೦೬ ರಲ್ಲಿ ಹೇಳಿಲ್ಲ.

## ೨೦೯. ದಾಖಲೆ ಪತ್ರಗಳನ್ನು ಬೇಡಿ ತರಿಸಿಕೊಳ್ಳಲು ಡೆಪ್ಯೂಟಿ ಕಮಿಶನರರ ಅಧಿಕಾರ

(೧) ಪಂಚಾಯತಕ್ಕೆ ಇಲ್ಲವೆ ತಾಲೂಕ ಬೋರ್ಡಿಗೆ ಸಂಬಂಧಪಟ್ಟ ಹಣ, ಲೆಕ್ಕ, ದಾಖಲೆ ಪತ್ರ ಇಲ್ಲವೆ ಇತರ ಆಸ್ತಿಯನ್ನು ಸ್ವಾಧೀನಪಡಿಸಿಕೊಂಡ ಪ್ರತಿಯೊಬ್ಬ ವ್ಯಕ್ತಿಯು ಆ ಉದ್ದೇಶಕ್ಕಾಗಿ ಡೆಪ್ಯೂಟಿ ಕಮಿಶನರನಿಂದ ಲಿಖಿತವಾಗಿ ಬೇಡಿಕೆ ಬಂದಕೂಡಲೆ, ಇಂತಹ ಹಣ, ಲೆಕ್ಕ, ದಾಖಲೆ ಪತ್ರ ಇಲ್ಲವೆ ಆ ಆಸ್ತಿಯನ್ನು ಚೇರಮನ್ನನಿಗೆ ಇಲ್ಲವೆ ಅಧ್ಯಕ್ಷನಿಗೆ, ಇಲ್ಲವೆ ಆ ಬೇಡಿಕೆಯಲ್ಲಿ ಸ್ವೀಕರಿಸಲು ಅಧಿಕರಿಸಲ್ಪಟ್ಟ ಬೇರೆ ವ್ಯಕ್ತಿಗೆ ಕೊಡತಕ್ಕದ್ದು ಇಲ್ಲವೆ ಒಪ್ಪಿಸಿಕೊಡತಕ್ಕದ್ದು.

(೨) ಇಂತಹ ವ್ಯಕ್ತಿಯಿಂದ ಯಾವುದೇ ಹಣವು ಬಾಕಿಯಾಗಿದ್ದರೆ, ಅದನ್ನು ತಪ್ಪಿತಸ್ಥರಿಂದ ಭೂಕಂದಾಯವನ್ನು ವಸೂಲಿ ಮಾಡುವುದರ ಸಲುವಾಗಿ ೧೮೮೮ (೧೮೮೮ ರ ಮೈಸೂರ ಕಾಯಿದೆ ನಂ iv) ರ ಮೈಸೂರ ಲ್ಯಾಂಡ ರೆವೆನ್ಯೂ ಕೋಡದ ಶರತುಗಳ ಅಂಕಿತವಾಗಿ ಮತ್ತು ಅದರಲ್ಲಿ ಹೇಳಿದ ರೀತಿಯಲ್ಲಿ ವಸೂಲ ಮಾಡಲು ಡೆಪ್ಯೂಟಿ ಕಮಿಶನರನು ಕ್ರಮಗಳನ್ನು ಕೂಡ ತೆಗೆದು ಕೊಳ್ಳಬಹುದು; ಮತ್ತು ಪಂಚಾಯತಕ್ಕೆ ಇಲ್ಲವೆ ತಾಲೂಕ ಬೋರ್ಡಿಗೆ ಸಂಬಂಧಪಟ್ಟ ಲೆಕ್ಕಗಳು, ದಾಖಲೆ ಪತ್ರಗಳು, ಇಲ್ಲವೆ ಇತರ ಆಸ್ತಿಯು ಇವುಗಳನ್ನು ವಸೂಲ ಮಾಡುವ ಉದ್ದೇಶಕ್ಕಾಗಿ, ಶೋಧ ವಾರಂಟನ್ನು ಹೊರಡಿಸತಕ್ಕದ್ದು ಮತ್ತು ೧೮೯೮ (೧೮೯೮ ರ ಕೇಂದ್ರ ಕಾಯಿದೆ ನಂ. v) ರ ಕ್ರಿಮಿನಲ್ ಪ್ರೊಸೀಜರ ಕೋಡದ ಪ್ರಕರಣ vii ರಲ್ಲಿಯ ಶರತುಗಳನ್ವಯವಾಗಿ ಮ್ಯಾಜಿಸ್ಟ್ರೇಟನಿಂದ ಕಾಯಿದೇಶೀರವಾಗಿ ನಿರ್ವಹಿಸಲ್ಪಡಬಹುದಾದ ಎಲ್ಲ ಅಧಿಕಾರಗಳನ್ನು ಆ ಸಂಬಂಧವಾಗಿ ನಿರ್ವಹಿಸತಕ್ಕದ್ದು.

(೩) ಪಂಚಾಯತಕ್ಕೆ ಇಲ್ಲವೆ ತಾಲೂಕ ಬೋರ್ಡಿಗೆ ಸಂಬಂಧಪಟ್ಟ ಯಾವುದೇ ಹಣ, ಲೆಕ್ಕ ಪತ್ರಗಳು, ದಾಖಲೆ ಪತ್ರಗಳು ಇಲ್ಲವೆ ಇತರ ಆಸ್ತಿಯು ಎಲ್ಲಿ ಬಚ್ಚಿಡಲಾಗಿದೆಯೆಂದು ಗೊತ್ತಿದ್ದ ಪ್ರತಿಯೊಬ್ಬ ವ್ಯಕ್ತಿಯು ಅದರ ಬಗ್ಗೆ ಡೆಪ್ಯೂಟಿ ಕಮಿಶನರನಿಗೆ ಮಾಹಿತಿ ಕೊಡಲು ಬದ್ಧನಾಗಿರತಕ್ಕದ್ದು.

(೪) ಈ ಕಲಮಿನನ್ವಯವಾಗಿರುವ ಡೆಪ್ಯೂಟಿ ಕಮಿಶನರರ ಹುಕುಮಿನ ಮೇಲೆ ಕಮಿಶನರರ ಕಡೆಗೆ ಅಪೀಲ ಇರತಕ್ಕದ್ದು.

**ವಿವೇಚನೆ**

ಈ ಕಲಮು ಡೆಪ್ಯೂಟಿ ಕಮಿಶನರರನಿಗೆ ಕಾಗದಪತ್ರ-ಹಣ-ದಾಖಲೆ ಲೆಕ್ಕದ ಪತ್ರಗಳನ್ನು ಬೇಡಿ ತರಿಸಿಕೊಳ್ಳಲು ಅಧಿಕಾರವಿದೆ. ಆದರೆ ಇದು ಸಾಮಾನ್ಯವಾಗಿ ಮಾಹಿತಿಗಾಗಿ ಬೇಕಾದ ಬೇಡಿಕೆ ಅಲ್ಲ ಎಂಬುದು ಕಲಮಿನ ಅಂತರಂಗದಿಂದ ತಿಳಿವುದು. ಯಾವುದಾದರೂ ಅಧಿಕಾರಿ ಇಲ್ಲವೆ ಸೇವಕನು ಪಂಚಾಯತಕ್ಕೆ ಇಲ್ಲವೆ ತಾಲೂಕ ಬೋರ್ಡಿಗೆ ಸಂಬಂಧಪಟ್ಟ ಹಣ, ಲೆಕ್ಕಪತ್ರ, ದಾಖಲೆ, ಇತರ ಆಸ್ತಿ ಇವುಗಳ ಬಗ್ಗೆ ಏನಾದರೂ ಬೇಕಾಯಿದೆಶೀರ ಕೃತಿಯನ್ನು ಮಾಡಿರಬಹುದೆಂಬ ಸಂಶಯ ಬಂದಾಗ ಬೇಡಿಕೆ ಕಳಿಸಿ ಕೂಡಲೆ ಅವುಗಳನ್ನು ವಶಪಡಿಸಿಕೊಳ್ಳುವಹಾಗೆ ಇಲ್ಲವೆ ಇತರ ಕ್ರಮ ಕೈಕೊಳ್ಳುವಹಾಗೆ ಈ ಕಲಮನ್ನು ರಚಿಸಲಾಗಿದೆ.

ಡೆ. ಕಮಿಶನರರನಿಂದ ಬೇಡಿಕೆ ಬಂದ ಕೂಡಲೇ ಸಂಬಂಧಪಟ್ಟ ವ್ಯಕ್ತಿಯು ಪಂಚಾಯತದ ಚೇರಮನ್-ಇಲ್ಲವೆ ತಾಲೂಕ ಬೋರ್ಡದ ಪ್ರೆಸಿಡೆಂಟ, ಇಲ್ಲವೆ ಈ ಕಾರ್ಯಕ್ಕಾಗಿ ಗೊತ್ತು ಮಾಡಿದ ಬೇರೆ ವ್ಯಕ್ತಿಯ ಕಡೆಗೆ ಆ ಸಂಬಂಧಪಟ್ಟ ವ್ಯಕ್ತಿಯು ಹಣ, ಕಾಗದ, ಲೆಕ್ಕ, ಇತರ ಆಸ್ತಿಯನ್ನು ಒಪ್ಪಿಸಿಕೊಡತಕ್ಕದ್ದು. ಆ ವ್ಯಕ್ತಿಯ ಹತ್ತಿರ ಪಂಚಾಯತದ ಇಲ್ಲವೆ ತಾಲೂಕ ಬೋರ್ಡದ ಬಾಕಿ ಹಣ ಉಳಿದಿದ್ದರೆ ಅದನ್ನು ಭೂಕಂದಾಯದ ಬಾಕಿ ಎಂಬಂತೆ ವಸೂಲ ಮಾಡಲು ಕ್ರಮ ಕೈಕೊಳ್ಳತಕ್ಕದ್ದು. ಈ ಸಂಬಂಧದಲ್ಲಿ ಭೂಕಂದಾಯ ಬಾಕಿ ವಸೂಲಿಗಾಗಿ ಮೈಸೂರ ಭೂಕಂದಾಯ ಕಾಯಿದೆ—೧೮೮೮ ಇದನ್ನು ಲಕ್ಷಿಸಬೇಕು. ಇತರ ಕಾಗದಪತ್ರಗಳನ್ನು, ಹುಡಿಕಿಸಿ ಪಡೆವ ಪ್ರಸಂಗವಿದ್ದರೆ ಕ್ರಿಮಿನಲ್ ಪ್ರೊಸೀಜರ ಕೋಡದ ಪ್ರಕರಣ ೭ ರಲ್ಲಿ ಹೇಳಿದಂತೆ ಮ್ಯಾಜಿಸ್ಟ್ರೇಟನಿಗೆ ಇದ್ದ ಅಧಿಕಾರಗಳನ್ನು ಡೆ. ಕಮಿಶನರನು ಚಲಾಯಿಸಬಹುದು. ಈ ಕಾಗದ ಪತ್ರಗಳು ಮುಂತಾದುವು ಬಚ್ಚಿಟ್ಟಿದ್ದ ಸಂಗತಿ ಯಾರಿಗಾದರೂ ಗೊತ್ತಿದ್ದರೆ, ಅವನು ಆ ಮಾಹಿತಿಯನ್ನು ಡೆಪ್ಯೂಟಿ ಕಮಿಶನರರನಿಗೆ ಕೊಡಲು ಬದ್ಧನಾಗಿದ್ದಾನೆ. ಈ ಕಲಮಿನ ಪ್ರಕಾರ ಮಾಡಿದ ಡೆಪ್ಯೂಟಿ ಕಮಿಶನರರ ಹುಕುಮಿನ ಮೇಲೆ ಕಮಿಶನರರ ಕಡೆಗೆ ಅಪೀಲು ಇದೆ.

## ಪ್ರಕರಣ : ೧೩ : ನಿಯಮಗಳು, ಕ್ರಮನಿಯಮಗಳು, ಪೋಟ ನಿಯಮಗಳು ಮತ್ತು ದಂಡನೆಗಳು

### ೨೧೦. ನಿಯಮಗಳನ್ನು ಮಾಡುವ ಅಧಿಕಾರ

(೧) ಈ ಕಾಯಿದೆಯ ಎಲ್ಲ ಇಲ್ಲವೆ ಯಾವುದೇ ಉದ್ದೇಶಗಳನ್ನು ಕಾರ್ಯಕಾರಿ ಮಾಡುವುದರ ಸಲುವಾಗಿ ಸರಕಾರವು ಪ್ರಕಟನೆಯಿಂದ ಮತ್ತು ಪೂರ್ವ

ಭಾವಿಯಾಗಿ ಪ್ರಸಿದ್ಧಿ ಮಾಡಿದ ನಂತರ ನಿಯಮಗಳನ್ನು ಮಾಡಬಹುದು. ಮತ್ತು ಯಾವುದಕ್ಕೆ ನಮೂನೆಗಳನ್ನು ಒದಗಿಸಬೇಕೆಂದು ಅದು ವಿಚಾರಿಸುವುದೋ ಅಂತಹ ಯಾವುದೇ ಪ್ರಕರಣಗಳಿಗಾಗಿ ನಮೂನೆಗಳನ್ನು ಗೊತ್ತುಮಾಡಬಹುದು.

(೨) ನಿರ್ದಿಷ್ಟವಾಗಿ ಮತ್ತು ಈ ಮೊದಲು ಹೇಳಿದ ಅಧಿಕಾರಕ್ಕೆ ವ್ಯತ್ಯಯ ಬರದಂತೆ ಈ ಕೆಳಗಿನ ವಿಷಯಗಳ ಸಂಬಂಧವಾಗಿ ಅದಕ್ಕೆ ನಿಯಮಗಳನ್ನು ಮಾಡಲು ಅಧಿಕಾರವಿರತಕ್ಕದ್ದು—

(ಅ) ಪಂಚಾಯತದಿಂದ ಸ್ಥಾಪಿಸಬಹುದಾದ ಯಾವುದೇ ಪ್ರಾವಿಡೆಂಟ್ ಫಂಡಿಗೆ ಅಂತಹ ನಿಯಮಗಳಲ್ಲಿ ಗೊತ್ತು ಮಾಡಬಹುದಾದ ಕರಾರುಗಳಿಗಂಕಿತವಾಗಿ ಮತ್ತು ಅಂತಹ ದರಗಳಂತೆ ವಂತಿಗೆಯನ್ನು ಕೊಡಲು ಅಧಿಕರಿಸುವುದಕ್ಕಾಗಿ;

(ಬ) ತಾಲೂಕ ಬೋರ್ಡುಗಳ ಅಧ್ಯಕ್ಷರ, ಉಪಾಧ್ಯಕ್ಷರ ಮತ್ತು ಸದಸ್ಯರ ಮತ್ತು ಜಿಲ್ಲಾ ಅಭಿವೃದ್ಧಿ ಮಂಡಳದ ಸದಸ್ಯರ ವೇತನ, ಮತ್ತು ಯಾವುದಾದರೂ ಇದ್ದರೆ, ಭತ್ತೆಗಳು ಇವುಗಳನ್ನು ಗೊತ್ತು ಮಾಡುವುದಕ್ಕಾಗಿ, ಯಾವ ಸಂದರ್ಭಗಳಲ್ಲಿ ಮತ್ತು ಯಾವ ದರದಂತೆ ಪ್ರವಾಸ ಭತ್ತೆಗಳು ಕೊಡಲ್ಪಡಬೇಕೆಂಬುದನ್ನು ಗೊತ್ತು ಮಾಡುವುದಕ್ಕಾಗಿ;

(ಕ) ಪಂಚಾಯತಗಳು ಇಲ್ಲವೆ ತಾಲೂಕ ಬೋರ್ಡುಗಳು ಮತ್ತು ಸರಕಾರ ಇಲ್ಲವೆ ಸರಕಾರಿ ಅಧಿಕಾರಿಗಳ ನಡುವಿನ ಪತ್ರವ್ಯವಹಾರವು ಯಾವ ಮಧ್ಯಂತರ ಕಚೇರಿಗಳ ಮುಖಾಂತರ ನಡೆಯಬೇಕು ಎಂಬುದನ್ನು ಗೊತ್ತು ಮಾಡುವುದಕ್ಕಾಗಿ;

(ಡ) ಪಂಚಾಯತ ನಿಧಿ ಮತ್ತು ತಾಲೂಕ ಬೋರ್ಡ ನಿಧಿಯೊಳಗಿಂದ ಹಣವನ್ನು ಹೇಗೆ ಕೊಡಬೇಕೆಂಬ ವಿಧಾನವನ್ನು ಗೊತ್ತು ಮಾಡುವುದಕ್ಕಾಗಿ;

(ಇ) ಪಂಚಾಯತ ನಿಧಿಯೊಳಗಿಂದ ಮತ್ತು ತಾಲೂಕ ಬೋರ್ಡ ನಿಧಿಯೊಳಗಿಂದ ಯಾವ ಕರಾರುಗಳ ಮೇಲೆ ಸಹಾಯಧನವು ಕೊಡಲ್ಪಡಬೇಕೆಂಬುದನ್ನು ಗೊತ್ತು ಮಾಡುವುದಕ್ಕಾಗಿ;

(ಫ) ತಾಲೂಕ ಬೋರ್ಡದಿಂದ ಸಾಲ ಎತ್ತುವದರ ಬಗ್ಗೆ ಮತ್ತು ಪಂಚಾಯತಗಳಿಗೆ ಸಾಲವನ್ನು ಕೊಡುವುದರ ಬಗ್ಗೆ ನಿಯಂತ್ರಣ ಹಾಕುವುದಕ್ಕಾಗಿ;

(ಗ) ಪಂಚಾಯತಗಳ ಮತ್ತು ತಾಲೂಕ ಬೋರ್ಡುಗಳ ಪೂರ್ಣ ಇಲ್ಲವೆ ಅಂಶತಃ ವೆಚ್ಚದಿಂದ ರಚಿತವಾಗಬೇಕಾದ ಕಾಮಗಿರಿಗಳ ಯೋಜನೆ ಮತ್ತು ಅವುಗಳಿಗಾಗಿರುವ ಅಂದಾಜು ಸಿದ್ಧಪಡಿಸುವುದರ ಸಂಬಂಧವಾಗಿ ಮತ್ತು ಅಂದಾಜುಗಳಿಗೆ ತಾಂತ್ರಿಕ ಹಾಗೂ ಆಡಳಿತಾತ್ಮಕ ಸಮ್ಮತಿಯನ್ನು ಕೊಡುವ ಅಧಿಕಾರದ ಸಂಬಂಧವಾಗಿ;

(ಹ) ಅಭಿವೃದ್ಧಿ ಘಟಕಗಳ ಚಟುವಟಿಕೆಗಳ ಸಲುವಾಗಿ ನಿಧಿಗಳನ್ನು ವಿನಿಯೋಗಿಸುವುದರ ಸಲುವಾಗಿ ಮತ್ತು ಇಂತಹ ಘಟಕಗಳ ಅಧಿಕಾರಿಗಳ ಸೇವೆಯ ಕರಾರುಗಳನ್ನು ಕ್ರಮಪಡಿಸುವುದರ ಸಲುವಾಗಿ;

(ಈ) ತಾಲೂಕ ಬೋರ್ಡುಗಳಿಂದ ಸಾದರ ಪಡಿಸಲ್ಪಡಬೇಕಾದ ಆಯ ಮತ್ತು ವ್ಯಯದ ಅಂದಾಜುಗಳು, ಪತ್ರಿಕೆಗಳು, ಹೇಳಿಕೆಗಳು ಮತ್ತು ವರದಿಗಳು ಇವುಗಳ ಸಂಬಂಧವಾಗಿ;

(ಜ) ಈ ಕಾಯಿದೆಯ ಉದ್ದೇಶಗಳನ್ನು ಕಾರ್ಯಕಾರಿ ಮಾಡುವುದರಲ್ಲಿ ತಾಲೂಕ ಬೋರ್ಡುಗಳಿಗೆ ಸರಕಾರೀ ಅಧಿಕಾರಿಗಳು ಸಲಹೆ ಕೊಡುವ ಇಲ್ಲವೆ ಸಹಾಯ ಮಾಡುವ ವಿಧಾನದ ಸಂಬಂಧವಾಗಿ;

(ಕಾ) ಅಧಿಕಾರಿಗಳನ್ನು ಮತ್ತು ಸೇವಕರನ್ನು ಭರತಿ ಮಾಡುವುದರ ಮತ್ತು ಅವರ ಯೋಗ್ಯತೆಗಳನ್ನು ನಿರ್ಧರಿಸುವುದರ ಸಂಬಂಧವಾಗಿ ಮತ್ತು ಪಂಚಾಯತದ ಮತ್ತು ತಾಲೂಕ ಬೋರ್ಡಗಳ ಅಧಿಕಾರಿಗಳ ಹಾಗೂ ಸೇವಕರ ನಿಯಂತ್ರಣ, ವರ್ಗಾವರ್ಗಿ, ದಂಡನೆ ಇಲ್ಲವೆ ಕಿತ್ತಿಹಾಕುವುದು ಇದರ ಸಂಬಂಧವಾಗಿ ಮತ್ತು ಅಂತಹ ನೌಕರರ ಸಂಬಳ,ರಜೆ, ಮತ್ತು ಇತರ ಬಾಧ್ಯತೆಗಳ ಸಂಬಂಧವಾಗಿ;

(ಲ) ಈ ಕಾಯಿದೆಯ ಆಡಳಿತದ ಸಂಬಂಧವಾಗಿರುವ ಮತ್ತು ಇಲ್ಲಿ ನಿರ್ದಿಷ್ಟವಾಗಿ ಅನುಕೂಲ ಮಾಡಿರದೆ ಇರುವ ಎಲ್ಲ ವಿಷಯಗಳಲ್ಲಿ ಪಂಚಾಯತಗಳ, ತಾಲೂಕ ಬೋರ್ಡಗಳ, ಕಮಿಟಿಗಳ ಮತ್ತು ಸರಕಾರೀ ಅಧಿಕಾರಿಗಳ ಸಾಮಾನ್ಯ ಮಾರ್ಗದರ್ಶನ ಮಾಡುವುದರ ಸಂಬಂಧವಾಗಿ;

(ಮ) ಎಲ್ಲ ಇಲ್ಲವೆ ಯಾವುದೇ ಪಟ್ಟಣ ಪ್ರದೇಶದ ಕಮಿಟಿಯ ರಚನೆ ಮತ್ತು ಸ್ವರೂಪದ ಮತ್ತು ಪಟ್ಟಣ ಪ್ರದೇಶ ಕಮಿಟಿಗಳ ಅಧಿಕಾರ ಕಾಲಾವಧಿ;

(ನ) ಪಟ್ಟಣ ಪ್ರದೇಶ ಕಮಿಟಿಗಳ ಮತದಾರರ ಮತ್ತು ಚುನಾವಣೆಗಾಗಿ ಇಲ್ಲವೆ ನಾಮಕರಣಕ್ಕಾಗಿ ಉಮೇದವಾರರ ಯೋಗ್ಯತೆಗಳು, ಇಂತಹ ಮತದಾರರ ನೋಂದಣಿಯ ಬಗ್ಗೆ, ಚುನಾವಣೆಯ ಸಲುವಾಗಿ ಉಮೇದವಾರರ ನಾಮಕರಣ; ಚುನಾವಣೆಯ ಕಾಲ,ಮತದಾನ ಮಾಡುವ ಪದ್ಧತಿ, ಚುನಾವಣೆಯಿಂದ ಉಂಟಾಗುವ ತಂಟೆಗಳ ಇಲ್ಲವೆ ಪ್ರಶ್ನೆಗಳ ಪರಿಹಾರದ ವಿಧಾನ ಮತ್ತು ಪಟ್ಟಣ ಪ್ರದೇಶಗಳ ಚುನಾವಣೆಗಳನ್ನು ಕ್ರಮಪಡಿಸುವುದರ ಸಲುವಾಗಿ ಸಾಮಾನ್ಯವಾದ ವಿಷಯಗಳು;

(ಓ) ಪಟ್ಟಣ ಪ್ರದೇಶ ಕಮಿಟಿಯ ಪ್ರೆಸಿಡೆಂಟ ಮತ್ತು ಕಾರ್ಯಾಧಿಕಾರಿಯ ನೇಮಕ, ವಾಯಿಸ್ ಪ್ರೆಸಿಡೆಂಟನ ನೇಮಕ ಇಲ್ಲವೆ ಚುನಾವಣೆ, ಪಟ್ಟಣ ಪ್ರದೇಶ ಕಮಿಟಿಯ ವ್ಯವಹಾರದ ನಡೆವಳಿಕೆ, ಮತ್ತು ಪಟ್ಟಣ ಪ್ರದೇಶ ಕಮಿಟಿಯ

ಕಾರ್ಯವು ಯೋಗ್ಯವಾಗಿ ಸಾಗುವುದರ ಸಂಬಂಧವಾಗಿರುವ ಇತರ ಎಲ್ಲ ವಿಷಯುಗಳು;

(ಪ) ಲಾಯಸೆನ್ಸು ಮತ್ತು ಪರವಾನಿಗಿಗಳನ್ನು ದಯಪಾಲಿಸುವುದಕ್ಕಾಗಿ ಫೀಗಳನ್ನು ಗೊತ್ತುಮಾಡುವುದಕ್ಕಾಗಿ;

(ಕೊ) ಈ ಕಾಯಿದೆಯಲ್ಲಿ ಯಾವುದಕ್ಕೆ ಏನೂ ಇಲ್ಲವೆ ಸಾಕಷ್ಟು ಅನುಕೂಲ ಶರತು ಇಲ್ಲದೆ ಇರುವ ಮತ್ತು ಈ ಕಾಯಿದೆಯ ಉದ್ದೇಶಗಳನ್ನು ಪರಿಣಾಮಕಾರಿಯಾಗಿ ಮಾಡುವುದಕ್ಕೆ ಸರಕಾರದ ಅಭಿಪ್ರಾಯದಲ್ಲಿ ಶರತುಗಳ ಆವಶ್ಯಕವಾಗಿವೆಯೆಂದು ಆಗಿರುವ ಇತರ ಯಾವುದೇ ವಿಷಯುಗಳು.

(೩) ಈ ಕಲಮಿನನ್ವಯವಾಗಿ ನಿಯಮ ಮಾಡುವಾಗ, ಯಾವುದೇ ಉಲ್ಲಂಘನೆಯಿಂದ ಅಪರಾಧಿಯಾದ ವ್ಯಕ್ತಿಯು, ಅವನ ಅಪರಾಧ ಸಾಬೀತಾದರೆ, ಐದು ನೂರು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಶಿಕ್ಷಿತನಾಗುವ ಹಾಗೆ ಮತ್ತು ಆ ಉಲ್ಲಂಘನೆಯು ಮುಂದುವರಿಯುವಂತಹದು ಆಗಿದ್ದರೆ, ಮೊದಲ ಉಲ್ಲಂಘನೆಯಿಂದ ಮುಂದೆ ದಿನಕ್ಕೆ ಇಪ್ಪತ್ತೈದು ರೂಪಾಯಿಯಂತೆ ಪ್ರತಿ ದಿನ ಹೆಚ್ಚಿನ ದಂಡದಿಂದ ಶಿಕ್ಷಿತನಾಗುವ ಹಾಗೆ ಸರಕಾರವು ಅನುಕೂಲತೆ ಒದಗಿಸಬಹುದು.

**ವಿವೇಚನೆ**

ಈ ಕಲಮಿನಲ್ಲಿ ಹೇಳಿದ ಎಲ್ಲ ವಿಷಯುಗಳ ಬಗ್ಗೆ ವಿವರವಾಗಿ ನಿಯಮಗಳು ಮಾಡಲ್ಪಡುವುವು. ನಿಯಮ ಮಾಡಲು ಸರಕಾರಕ್ಕೆ ಈ ಕಲಮು ಅಧಿಕಾರ ಕೊಡುತ್ತದೆ. ನಿಯಮಗಳು ಪ್ರಸಿದ್ಧಿಯಾಗಬೇಕು; ಅನಂತರ ಪ್ರಕಟನೆಯ ಮುಖಾಂತರ ಸರಕಾರವು ಅವುಗಳನ್ನು ಜಾರಿಯಲ್ಲಿ ತರುವುದು.

ಯಾವ ಯಾವ ವಿಷಯುಗಳ ಬಗ್ಗೆ ನಿಯಮಗಳು ಮಾಡಲ್ಪಡಬೇಕು ಎಂಬ ಬಗ್ಗೆ ಎಲ್ಲ ವಿವರವೂ ಕಲಮಿನಲ್ಲಿ ಕೊಡಲಾಗಿದೆ. ಪಂಚಾಯತ, ತಾಲೂಕ ಬೋರ್ಡು, ಪಟ್ಟಣ ಪ್ರದೇಶ ಕಮಿಟಿ ಅವುಗಳ ಕಮಿಟಿ ರಚನೆ ಸ್ವರೂಪ, ಚುನಾವಣೆ, ಮತದಾನ, ತಂಟೆ, ತಕರಾರು, ವ್ಯವಹಾರದ ನಡೆವಳಿಕೆ, ಮುಂತಾದ ಎಲ್ಲ ವಿಷಯುಗಳ ಬಗ್ಗೆ ನಿಯಮಗಳು ಇರುವುವು. ವಿಧಾನವನ್ನು ತಿಳಿಸಲು ನಮೂನೆಗಳನ್ನು ಗೊತ್ತುಮಾಡಲು, ಕಾಯಿದೆಗೆ ವಿವರಣೆಕೊಡಲು ನಿಯಮಗಳು ಇರುವುವು.

**೨೧೧. ಕ್ರಮ ನಿಯಮಗಳನ್ನು ಮಾಡಲು ತಾಲೂಕ ಬೋರ್ಡಿಗೆ ಅಧಿಕಾರ**

(೧) ಈ ಕಾಯಿದೆಯ ಶರತುಗಳ ಅಂಕಿತವಾಗಿ, ಮತ್ತು ೨೧೦ ರನ್ವಯವಾಗಿ ಮಾಡಿದ ನಿಯಮಗಳಿಗಂಕಿತವಾಗಿ, ಮತ್ತು ಪ್ರಕಟನೆಯಿಂದ ಸರಕಾರದ

ಪೂರ್ವ ಸಮ್ಮತಿಯಿಂದ ತಾಲೂಕ ಬೋರ್ಡು ಕ್ರಮ ನಿಯಮಗಳನ್ನು ಮಾಡ ಬಹುದು.

(ಅ) (i) ಮುಸಾಫಿರಖಾನಾಗಳು, ಪ್ರವಾಸಿಕರ ಬಂಗಲೆಗಳು, ತಂಗು ಮನೆಗಳು, ಚಕ್ಕಡಿ ನಿಲ್ದಾಣಗಳು, ಮತ್ತು ಬಸ ನಿಲ್ದಾಣಗಳು, (ii) ಮಾರ್ಕೆಟು ಗಳು, ಕಸಾಯಿಖಾನೆಗಳು, ಹೊಟೆಲುಗಳು, ಬೇಕರಿಗಳು, ಮಿಠಾಯಿ ಅಂಗಡಿಗಳು, ಮತ್ತು ಮಾನವನ ಆಹಾರ ಹಾಗೂ ಪೇಯಗಳಿಗಾಗಿ ಇರುವ ವಸ್ತುಗಳ ಮಾರಾಟ ಕ್ಕಾಗಿ ಉಪಯೋಗಿಸಲ್ಪಡುವ ಇತರ ಸ್ಥಳಗಳು, (iii) ಪ್ರಾಣಿಗಳ ಬಾಡಿಗೆ ಇಲ್ಲವೆ ಮಾರಾಟದ ಸಲುವಾಗಿ ಉಪಯೋಗಿಸಲ್ಪಡುವ ಇಲ್ಲವೆ ಪ್ರಾಣಿಗಳ ಉತ್ಪತ್ತಿಯನ್ನು ಮಾರಾಟ ಮಾಡುವಂತಹ ಸ್ಥಳಗಳು; (iv) ಕೋಷ್ಟಕ ii ರಲ್ಲಿ ನಿರ್ದಿಷ್ಟಪಡಿಸಿದ ಉದ್ದೇಶಗಳಿಗಾಗಿ ಉಪಯೋಗಿಸಲ್ಪಡುವ ಸ್ಥಳಗಳು, ಇವುಗಳ ಸಾಮಾನ್ಯ ಇಲ್ಲವೆ ನಿರ್ದಿಷ್ಟ ಕ್ರಮಪಡಿಸುವಿಕೆ, ಪರೀಕ್ಷಣ ಮತ್ತು ನಿಯಂತ್ರಣದ ಸಲುವಾಗಿ;

(ಬ) ವಾಕ್ಯಾವಳಿ (ಅ) ದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಸ್ಥಳಗಳಲ್ಲಿಯ ಸ್ವಚ್ಛತೆಯನ್ನು ಕಾದಿಡುವದನ್ನು ಮತ್ತು ಸಿದ್ಧಪಡಿಸಿದ ಇಲ್ಲವೆ ಇಟ್ಟ ಇಲ್ಲವೆ ಮಾರಿದ ವಸ್ತುಗಳ ಆರೋಗ್ಯಕಾರಿತ್ವವನ್ನು ಕಾದಿಡುವುದನ್ನು ಇಲ್ಲವೆ ಇಂತಹ ಸ್ಥಳಗಳಲ್ಲಿ ಉಂಟಾಗುವ ಇಲ್ಲವೆ ಉಂಟಾಗುವ ಸಂಭವವಿದ್ದ ಯಾವುದೇ ಅಪಾಯಕಾರಕ, ಕ್ಲೇಶಕಾರಕ, ಇಲ್ಲವೆ ಗಂಡಾಂತರಕಾರಕ ಪರಿಣಾಮಗಳನ್ನು ಕಡಿಮೆಯಾಗಿಸುವುದನ್ನು ಕ್ರಮಗೊಳಿಸುವುದಕ್ಕಾಗಿ;

(ಕ) (i) ಸ್ವಚ್ಛತೆಯ ಸಂಬಂಧವಾಗಿರುವ ಎಲ್ಲ ವಿಷಯಗಳನ್ನು ಕ್ರಮ ಪಡಿಸುವುದರ ಸಲವಾಗಿ.

(ii) ಮುಖ್ಯ ಕಾರ್ಯಾಧಿಕಾರಿಯು ಇಲ್ಲವೆ ಬೋರ್ಡದಿಂದ ಅಧಿಕರಿಸ ಲ್ಪಟ್ಟ ಯಾವುದೇ ವ್ಯಕ್ತಿಯು ಯಾವುದೇ ಕಟ್ಟಡ ಇಲ್ಲವೆ ಭೂಮಿ ಇದರಲ್ಲಿ ಪ್ರವೇಶ ಮಾಡಲು ಮತ್ತು ಪರೀಕ್ಷಣ ಮಾಡಲು ಮತ್ತು ಅದು ಆರೋಗ್ಯಕರವಾದ ಸ್ಥಿತಿ ಯಲ್ಲಿ ಇಡಲ್ಪಡುವಂತೆ ಮಾಡಲು ಅಧಿಕಾರವನ್ನು ಕೊಡುವುದಕ್ಕಾಗಿ;

(ಡ) (i) ಸಾರ್ವಜನಿಕ ನೀರಿನ ಪೂರೈಕೆಯನ್ನು, ಸ್ನಾನದ ಮತ್ತು ತೊಳೆ ಯುವ ಸ್ಥಳಗಳ ಪ್ರವಾಹ, ಕಾಲುವೆಗಳ, ಕೆರೆ ಮತ್ತು ಭಾವಿಗಳ ಉಪಯೋಗ ವನ್ನು ಮತ್ತು ಅದರ ಸಂಬಂಧವಾಗಿ ಆಗುವ ಕಂಟಕದ ನಿರ್ಬಂಧವನ್ನು ಕ್ರಮ ಪಡಿಸುವುದಕ್ಕಾಗಿ,

(ii) ಸಾರ್ವಜನಿಕರಿಂದ ಇಲ್ಲವೆ ಸಾರ್ವಜನಿಕರಲ್ಲಿ . ಯಾವುದೊಂದು ವರ್ಗದವರಿಂದ ಉಪಯೋಗಿಸಲ್ಪಡುವ ನೀರಿನ ಪೂರೈಕೆಯ ಖಾಸಗಿ ಉಗಮಗ ಳನ್ನು ಒಳ್ಳೆಯ ಸ್ಥಿತಿಯಲ್ಲಿಡಲು, ಸುಧಾರಿಸಲು, ಇಲ್ಲವೆ ಕೊಳೆಯಿಂದ ಸಂರಕ್ಷಿಸಲು,

ಹಚ್ಚುವುದರ ಸಲುವಾಗಿ ಮತ್ತು ಈ ಉದ್ದೇಶಗಳಿಗಾಗಿ ಅದರ ವೆಚ್ಚವು ಪೂರ್ತಿಯಾಗಿ ಇಲ್ಲವೆ ಅದರ ಭಾಗವನ್ನು ತಾಲೂಕ ಬೋರ್ಡಿನ ನಿಧಿಯೊಳಗಿಂದ ಕೊಡುವುದಕ್ಕೆ ಹಚ್ಚುವುದರ ಸಲುವಾಗಿ;

(iii) ನೀರಿನ ಪ್ರತ್ಯೇಕವು ಖಾಸಗಿ ಉಗಮುಗಳ ಸಂದರ್ಭದಲ್ಲಿ ಮಾಲಿಕನ ಸಮ್ಮತಿಯಿಂದ ಮತ್ತು ಸರಕಾರದ ನಿಯಂತ್ರಣದಲ್ಲಿದ್ದವುಗಳ ಸಂದರ್ಭದಲ್ಲಿ ಸರಕಾರದ ಸಮ್ಮತಿಯಿಂದ, ಬುಗ್ಗಿಗಳು, ಕೆರೆಗಳು, ಬಾವಿಗಳು, ನೀರಿನ ಉಗಮುಗಳು ಮತ್ತು ಇತರ ಸ್ಥಳಗಳು ನಿರ್ದಿಷ್ಟಪಡಿಸಿದ ಉದ್ದೇಶಗಳಿಗಾಗಿ ಪ್ರತ್ಯೇಕವಾಗಿಡುವುದರ ಸಲುವಾಗಿ ಮತ್ತು ಬೇರೆ ಯಾವುದೇ ಉದ್ದೇಶಗಳಿಗಾಗಿ ಅವುಗಳ ಉಪಯೋಗವನ್ನು ನಿರ್ಬಂಧಿಸುವುದರ ಸಲುವಾಗಿ;

(ಇ) (i) ಸಾರ್ವಜನಿಕರ ಆರೋಗ್ಯ, ಭದ್ರತೆ ಇಲ್ಲವೆ ಅನುಕೂಲತೆಯನ್ನು ಬಾಧಿಸುವ ಕಂಟಕಗಳನ್ನು ನಿರ್ಬಂಧಿಸುವುದರ ಸಲುವಾಗಿ;

(ii) ಯಾವುದು ಅಲ್ಲಿಯ ರಹಿವಾಸಿಗಳ ಆರೋಗ್ಯಕ್ಕೆ ಅಪಾಯಕಾರಕವಾಗಬಹುದೆಂಬ ಇಲ್ಲವೆ ನೆರೆಹೊರೆಯವರಿಗೆ ಕ್ಲೇಶಕಾರಕವಾಗಬಹುದೆಂಬ ಹಾಗೆ ಇರುವುದೋ ಅಂತಹ ಯಾವುದೇ ಹೊಂಡ, ತೆಗ್ಗು, ಕೆರೆ, ಹೌದು, ಬಾವಿ, ಕುಣಿ ಇಲ್ಲವೆ ಯಾವುದೇ ನಿಂತ ಇಲ್ಲವೆ ಕೊಳಚೆ ನೀರು, ಇಲ್ಲವೆ ಹೊಲಸು ನೀರಿನ ಇಲ್ಲವೆ ಇತರ ಕ್ಲೇಶಕಾರಕ ಇಲ್ಲವೆ ಅಪಾಯಕಾರಕ ವಸ್ತುವಿನ ಯಾವುದೇ ಕಾಲುವೆ ಇಲ್ಲವೆ ಪಾತ್ರವು ಸ್ವಚ್ಛವಾಗಿಸಲು, ತುಂಬಿಸಲ್ಪಡಲು ಹರಿಯಿಸಿ, ಬಿಡಲು, ಇಲ್ಲವೆ ಕಂಟಕ ಕಡಿಮೆ ಮಾಡಲು ಇಲ್ಲವೆ ತೆಗೆದುಹಾಕಲು ತೆಗೆದುಕೊಳ್ಳಬೇಕಾದ ಯೋಗ್ಯ ಉಪಾಯಗಳನ್ನು ತೆಗೆದುಕೊಳ್ಳಲು ಹಚ್ಚುವುದರ ಸಲುವಾಗಿ;

(ಈ) (i) ಗಂಡಾಂತರಕಾರಿಯಾದ ರೋಗಗಳ ಮತ್ತು ಅದರ ಹಬ್ಬುವಿಕೆಯನ್ನು ನಿರ್ಬಂಧಿಸುವುದರ ಸಲುವಾಗಿ;

(ii) ರೋಗಾದಿಗಳ ಕಾಲದಲ್ಲಿ ಯಾವುದೇ ನೀರಿನ ಪ್ರತ್ಯೇಕವು ಉಗಮುವನ್ನು ಅದು ಖಾಸಗಿಯಾಗಿರಲಿ ಇಲ್ಲವೆ ಸಾರ್ವಜನಿಕವಾಗಿರಲಿ, ಉಪಯೋಗಿಸುವುದನ್ನು ನಿರ್ಬಂಧಿಸುವುದರ ಸಲುವಾಗಿ;

(iii) ರೇಲ್ವೆ ಇಲ್ಲವೆ ಬೇರೆ ರೀತಿಯಲ್ಲಿ ಪ್ರವಾಸ ಮಾಡುವ ವ್ಯಕ್ತಿಗಳ ಪರೀಕ್ಷಣ ಮಾಡುವುದನ್ನು ಮತ್ತು ಯಾವುದೇ ಸಾಂಕ್ರಾಮಿಕ ರೋಗದಿಂದ ಬಳಲುತ್ತಿರಬಹುದೆಂದು ಸಂಶಯಿತನಾದ ವ್ಯಕ್ತಿಯನ್ನು ಆ ಉದ್ದೇಶಕ್ಕಾಗಿ ಪ್ರತ್ಯೇಕವಾಗಿರಿಸಿದ ಆಸ್ಪತ್ರೆ ಇಲ್ಲವೆ ಬೇರೆ ಯಾವುದೇ ಸ್ಥಳದಲ್ಲಿ ದೂರವಾಗಿರಿಸುವುದನ್ನು ಇಲ್ಲವೆ ಇಂತಹ ಬೇನೆಯು ಹುಟ್ಟುವುದನ್ನು ಇಲ್ಲವೆ ಅದರ ಹಬ್ಬುವಿಕೆಯನ್ನು ತಡೆಯುವುದಕ್ಕೆ

ಆವಶ್ಯಕವೆಂದು ಅನ್ನಿಸಬಹುದಾದಂತಹ ಇತರ ಉಪಾಯುಗಳನ್ನು ಅನುಕೂಲಿಸುವುದಕ್ಕಾಗಿ;

(iv) ಯಾವ ಸ್ಥಳದಲ್ಲಿ ಯಾವುದೇ ಸಾಂಕ್ರಾಮಿಕ ಬೇನೆಯು ಇರುವದೆಂದು ಇಲ್ಲವೆ ಇರುವದೆಂಬ ಸಂಶಯುವಿದೆಯೆಂದು ವರದಿಯಾಗಿರುವುದೋ ಅಂತಹ ಯಾವುದೇ ಕಟ್ಟಡವನ್ನು ಇಲ್ಲವೆ ಆವಾರವನ್ನು ಪ್ರವೇಶಿಸಲು ಮುಖ್ಯಕಾರ್ಯಾಧಿಕಾರಿಯನ್ನು ಇಲ್ಲವೆ ಬೋರ್ಡದಿಂದ ಯೋಗ್ಯವಾಗಿ ನೇಮುಕವಾದ ಯಾವುದೇ ವ್ಯಕ್ತಿಯನ್ನು ಅಧಿಕರಿಸುವುದರ ಸಲುವಾಗಿ, ಇಂತಹ ಕಟ್ಟಡ ಇಲ್ಲವೆ ಆವಾರದ ಮಾಲಕ ಇಲ್ಲವೆ ಸ್ವಾಧೀನದಲ್ಲಿಟ್ಟುಕೊಂಡವನು ಆ ಕಟ್ಟದ ಆವಾರವನ್ನು ಸ್ವಚ್ಛಮಾಡಿಸಲು ಇಲ್ಲವೆ ಕ್ರಿಮಿನಾಶಮಾಡಿಸಲು ಹಚ್ಚುವುದಕ್ಕಾಗಿ, ಇಲ್ಲವೆ ತಾತ್ಕಾಲಿಕ ಕ್ರಮ ತೆಗೆದುಕೊಳ್ಳುವುದು ಆವಶ್ಯಕವಾಗಿದ್ದ ಸಂದರ್ಭದಲ್ಲಿ ಇಂತಹ ಕಟ್ಟಡ ಇಲ್ಲವೆ ಆವಾರವನ್ನು ಸ್ವಚ್ಛಮಾಡಿಸಿ ಇಲ್ಲವೆ ಕ್ರಿಮಿನಾಶ ಮಾಡಿಸಿ, ಈ ಬಗ್ಗೆ ಆದ ವೆಚ್ಚವನ್ನು ಪೂರ್ತಿಯಾಗಿ ಇಲ್ಲವೆ ಅದರ ಯಾವುದೇ ಭಾಗವುನ್ನು ಇಂತಹ ಮಾಲಕನಿಂದ ಇಲ್ಲವೆ ಸ್ವಾಧೀನದಲ್ಲಿಟ್ಟುಕೊಂಡವನಿಂದ ವಸೂಲ ಮಾಡಲು ಇಲ್ಲವೆ ಯೋಗ್ಯ ಸಂದರ್ಭಗಳಲ್ಲಿ ಅದನ್ನು ಸೂಟಬಿಡಲು ಅಧಿಕರಿಸುವುದರ ಸಲವಾಗಿ;

(v) ಸಾಂಕ್ರಾಮಿಕ ರೋಗಗಳಿಗೆ ಬಹಿರಂಗಗೊಳಿಸಲ್ಪಟ್ಟ ಅರಿವೆಗಳು ಇಲ್ಲವೆ ಹಾಸಿಗೆ ಇಲ್ಲವೆ ಇತರ ವಸ್ತುಗಳು ತಾಲೂಕ ಬೋರ್ಡದಿಂದ ಪ್ರಕಟಿಸೆ ಮಾಡಲ್ಪಟ್ಟ ಸ್ಥಳಗಳಲ್ಲಿ ತೊಳೆಯಲ್ಪಡಬೇಕು ಇಲ್ಲವೆ ಕ್ರಿಮಿನಾಶ ಮಾಡಲ್ಪಡಬೇಕು ಎಂದು ಮಾಡಲು ಹಚ್ಚುವುದಕ್ಕಾಗಿ, ಮತ್ತು ಸಾಂಕ್ರಾಮಿಕತೆಯನ್ನು ಉಳಿಸಿಕೊಳ್ಳುವ ಸಂಭವವಿರುವ ವಸ್ತುಗಳನ್ನು ನಾಶಮಾಡುವುದಕ್ಕಾಗಿ;

(ಗ) ಸಾರ್ವಜನಿಕ ರಸ್ತೆಗಳನ್ನು ಉಪಯೋಗಿಸುವುದನ್ನು ಕ್ರಮಪಡಿಸುವುದಕ್ಕಾಗಿ; ಬೋರ್ಡದ ಅಂತರ್ಗತವಾಗಿದ್ದ ಸಾರ್ವಜನಿಕ ರಸ್ತೆಗಳ ಮತ್ತು ಜಾಗಾದ ತಾತ್ಪೂರ್ತಿಕ ಉಪಯೋಗಕ್ಕಾಗಿ ಇಲ್ಲವೆ ಸ್ವಾಧೀನದಲ್ಲಿಟ್ಟುಕೊಳ್ಳುವುದಕ್ಕಾಗಿ; ಅವುಗಳ ಸಂಬಂಧವಾಗಿ ಸ್ವಚ್ಛತೆ, ಭದ್ರತೆ ಮತ್ತು ಸುವ್ಯವಸ್ಥೆಯನ್ನು ಕಾದಿಡುವುದಕ್ಕಾಗಿ;

(ಹ) ಯಾವ ಕರಾರುಗಳ ಮೇಲೆ ಇಲ್ಲವೆ ಯಾವುದರ ಅಂಕಿತವಾಗಿ ಮತ್ತು ಯಾವ ಪರಿಸ್ಥಿತಿಯಲ್ಲಿ ಮತ್ತು ಯಾವ ಪ್ರದೇಶ ಇಲ್ಲವೆ ಸ್ಥಾನಿಕ ಭಾಗಗಳ ಸಂಬಂಧವಾಗಿ ಯಾವುದೇ ಲಾಯಸೆನ್ಸು ಇಲ್ಲವೆ ಪರವಾನಗಿಯು ಈ ಕಾಯಿದೆಯನ್ವಯವಾಗಿ ದಯಪಾಲಿಸಲ್ಪಡಬೇಕು, ನಿರಾಕರಿಸಲ್ಪಡಬೇಕು, ಸ್ಥಗಿತಗೊಳಿಸಲ್ಪಡಬೇಕು ಇಲ್ಲವೆ ಹಿಂತೆಗೆದುಕೊಳ್ಳಲ್ಪಡಬೇಕು, ಎಂಬುದನ್ನು ವ್ಯಾಖ್ಯೆಮಾಡುವುದಕ್ಕಾಗಿ ಮತ್ತು ಇಂತಹ ಲಾಯಸೆನ್ಸು ಇಲ್ಲವೆ, ಪರವಾನಗಿಯ ಸಂಬಂಧವಾಗಿ

ಕೊಡಲ್ಪಡಬೇಕಾದ ಫೀಗಳನ್ನು ಗೊತ್ತುಮಾಡುವುದಕ್ಕಾಗಿ ಮತ್ತು ವಾಕ್ಯಾವಳಿ (ಅ) ದಲ್ಲಿ ನಿರ್ದಿಷ್ಟ ಪಡಿಸಿದ ಯಾವುದೇ ಸ್ಥಳಗಳ ಇಲ್ಲವೆ ತಾಲೂಕ ಬೋರ್ಡವ ಒಡೆತನವಿದ್ದ ಯಾವುದೇ ಆಸ್ತಿಯ ಉಪಯೋಗದ ಸಲುವಾಗಿ ಬಾಡಿಗೆ, ಫೀ ಮತ್ತು ಇತರ ಚಾರ್ಜುಗಳು ಆಕರಿಸಲ್ಪಡುವುದಕ್ಕಾಗಿ;

(೨) ಈ ಕಲಮಿನನ್ವಯವಾಗಿ ತಾಲೂಕ ಬೋರ್ಡು ಕ್ರಮ ನಿಯಮವನ್ನು ಮಾಡುವಾಗ, ಅದರ ಉಲ್ಲಂಘನೆಯ ಅಪರಾಧಮಾಡಿದ ಯಾವುದೇ ವ್ಯಕ್ತಿಯು, ಅವನ ಅಪರಾಧವು ಸಾಬೀತಾದರೆ, ಐವತ್ತು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಅವನು ಶಿಕ್ಷಿತನಾಗುವ ಹಾಗೆ, ಮತ್ತು ಉಲ್ಲಂಘನೆಯು ಮುಂದುವರೆಯುವಂತಹದು ಇರುವಾಗ, ಉಲ್ಲಂಘನೆಯು ಮುಂದುವರೆಯುವಷ್ಟು ಕಾಲ ಮೊದಲ ದಿನವಂದು ಮತ್ತು ನಂತರ ಪ್ರತಿ ಒಂದು ದಿವಸಕ್ಕೆ ಹತ್ತು ರೂಪಾಯಿಂತೆ ಹೆಚ್ಚಿನ ದಂಡದಿಂದ ಅವನು ಶಿಕ್ಷಿತನಾಗುವಂತೆ ತಾಲೂಕ ಬೋರ್ಡು ಅನುಕೂಲತೆ ಮಾಡಬಹುದು.

(೩) ಈ ಕಲಮಿನನ್ವಯವಾಗಿ ಮಾಡಲಾದ ಎಲ್ಲ ಕ್ರಮನಿಯಮಗಳು ಪೂರ್ವಭಾವಿಯಾದ ಪ್ರಸಿದ್ಧಿಯಂಕಿತವಾಗಿರತಕ್ಕದ್ದು ಮತ್ತು ಇಂತಹ ಪ್ರಸಿದ್ಧಿಯು ಅಧಿಕೃತ ಗ್ಯಾಜೆಟದಲ್ಲಿ ಮತ್ತು ಗೊತ್ತುಮಾಡಬಹುದಾದಂತಹ ಬೇರೆ ರೀತಿಯಲ್ಲಿ ಆಗತಕ್ಕದ್ದು.

## ವಿವೇಚನೆ

ನಿಯಮಗಳನ್ನು ಮಾಡುವ ಅಧಿಕಾರವು ಸರಕಾರದ್ದು. ನಿಯಮಗಳು ಕಾಯಿದೆಯ ಶರತುಗಳಿಗೆ ಪೋಷಕವಾಗಿ ಕಾಯಿದೆಯ ಸಾಮರ್ಥ್ಯವನ್ನು ಪಡೆದಂತಹವು ಆಗಿರುವುವು. ಕ್ರಮನಿಯಮಗಳನ್ನು ಮಾಡುವ ಕಾರ್ಯವು ತಾಲೂಕ ಬೋರ್ಡಿನದು. ತನ್ನ ದೈನಂದಿನ ವ್ಯವಹಾರಕ್ಕೆ ಅನುಕೂಲವಾಗುವ ಎಲ್ಲ ವಿಷಯಗಳ ಕ್ರಮ-ನಿಯಮವನ್ನು ನಿರ್ಧರಿಸುವುದಕ್ಕಾಗಿ ಈ ಕಲಮಿನ ಮೂಲಕ ಕ್ರಮ-ನಿಯಮಗಳನ್ನು ಅದು ಮಾಡುವುದು. ಅವು ಜಾರಿಯಲ್ಲಿ ಬರುವುದಕ್ಕಿಂತ ಮುಂಚಿತವಾಗಿ ಅಧಿಕೃತ ಗ್ಯಾಜೆಟದಲ್ಲಿ ಮತ್ತು ನಿಯಮಗಳು ಗೊತ್ತು ಮಾಡಬಹುದಾದ ರೀತಿಯಲ್ಲಿ ಪ್ರಸಿದ್ಧಿಸಲ್ಪಡಬೇಕು. ಅವು ಈ ಕಾಯಿದೆಯ ಶರತುಗಳ ಅಂಕಿತವಾಗಿ ಹಾಗೂ ಕಲಮು ೨೧೦ ರನ್ವಯ ಮಾಡಿದ ನಿಯಮಗಳ ಅಂಕಿತವಾಗಿರತಕ್ಕದ್ದು.

ಯಾವ ಯಾವ ವಿಷಯಗಳ ಬಗ್ಗೆ ಕ್ರಮ-ನಿಯಮಗಳು ಮಾಡಲ್ಪಡಬೇಕು ಎಂಬುವ ಬಗ್ಗೆ ಕಲಮಿನಲ್ಲಿ ವಿವರವನ್ನು ಕೊಡಲಾಗಿದೆ. ಈ ಕ್ರಮ-ನಿಯಮವನ್ನು ಮುರಿದು ಅಪರಾಧ ಮಾಡಿದವರಿಗೆ ಐವತ್ತು ರೂಪಾಯಿಗಳ ವರೆಗೆ

ಮೂಲ ದಂಡ ಮತ್ತು ದಿನಕ್ಕೆ ಹತ್ತು ರೂಪಾಯಿಯಂತೆ ಮುಂದುವರೆದ ದಂಡ ವನ್ನು ವಿಧಿಸಲಾಗುವಂತೆ ಕ್ರಮ-ನಿಯಮಗಳು ಮಾಡಲ್ಪಡಬೇಕು.

ಈ ಕಾಯಿದೆಯ ಕಲಮಿನ ಜೋರಿನ ಮೇಲೆ ಮಾಡಲ್ಪಟ್ಟ ಮೇಲೆ ಕ್ರಮ-ನಿಯಮಗಳು ಈ ಕಾಯಿದೆಯ ಭಾಗಗಳೇ ಆಗುವವು.

**೨೧೨. ಪೋಟ ನಿಯಮಗಳನ್ನು ಮಾಡಲು ಪಂಚಾಯತಗಳ ಅಧಿಕಾರ**

(೧) ಈ ಕಾಯಿದೆಯ ಶರತುಗಳ ಅಂಕಿತವಾಗಿ ಮತ್ತು ಕಲಮು ೨೧೦ ರನ್ವಯವಾಗಿ ಮಾಡಲಾದ ನಿಯಮಗಳ ಅಂಕಿತವಾಗಿ, ಮತ್ತು ಡೆಪ್ಯೂಟಿ ಕಮಿಶ ನರನ ಪೂರ್ವ ಸಮ್ಮತಿಯಿಂದ ಈ ಕೆಳಗಿನ ಉದ್ದೇಶಗಳಿಗಾಗಿ ಪಂಚಾಯತವು ಪೋಟ ನಿಯಮಗಳನ್ನು ಮಾಡಬಹುದು; ಅವು ಯಾವುವೆಂದರೆ—

(ಅ) ಕುಡಿಯುವ ಉದ್ದೇಶಗಳಿಗಾಗಿ ಉಪಯೋಗವಾಗುವ ನೀರಿನ ಎಲ್ಲ ಉಗಮಗಳನ್ನು ಶುದ್ಧೀಕರಿಸುವುದಕ್ಕಾಗಿ ಮತ್ತು ಕೊಳೆಯಿಂದ ಸಂರಕ್ಷಿಸುವುದ ಕ್ಕಾಗಿ;

(ಬ) ಯಾವ ನೀರನ್ನು ತೆಗೆದುಕೊಂಡು ಹೋಗುವುದರಿಂದ ಇಲ್ಲವೆ ಉಪಯೋಗಿಸುವುದರಿಂದ ಬೇನೆ ಇಲ್ಲವೆ ಆರೋಗ್ಯಕ್ಕೆ ಅಪಾಯ ಉಂಟಾಗುವುದೋ ಇಲ್ಲವೆ ಉಂಟಾಗುವ ಸಂಭವವಿರುವುದೋ ಅಂತಹ ಯಾವುದೇ ಪ್ರವಾಹದ, ಕೆರೆಯ, ಬಾವಿಯ ಇಲ್ಲವೆ ಇತರ ಉಗಮದ ಯಾವುದೇ ನೀರನ್ನು ಕುಡಿಯುವ ಉದ್ದೇಶಕ್ಕಾಗಿ ಉಪಯೋಗಿಸುವುದನ್ನು ಇಲ್ಲವೆ ತೆಗೆದುಕೊಂಡು ಹೋಗುವುದನ್ನು ಪ್ರತಿಬಂಧಿಸುವುದಕ್ಕಾಗಿ ಮತ್ತು ಇಂತಹ ಕೆರೆ, ಇಲ್ಲವೆ ಬಾವಿಯನ್ನು ತುಂಬಿಸು ವುದರಿಂದ ಇಲ್ಲವೆ ಮುಚ್ಚಿಸುವುದರಿಂದ ಇಲ್ಲವೆ ಯೋಗ್ಯವೆಂದು ಕಂಡು ಬಂದ ಇತರ ಬೇರೆ ಯಾವುದೇ ಪದ್ಧತಿಯಿಂದ ಇಂತಹ ತೆಗೆದುಕೊಂಡು ಹೋಗುವುದನ್ನು ಇಲ್ಲವೆ ಉಪಯೋಗಿಸುವುದನ್ನು ತಡೆಯುವುದಕ್ಕಾಗಿ;

(ಕ) ಸಾರ್ವಜನಿಕ ಆರೋಗ್ಯ, ಅನುಕೂಲ ಇಲ್ಲವೆ ಸೌಖ್ಯಕ್ಕೆ ವ್ಯತ್ಯಯ ಉಂಟಾಗುವ ಹಾಗೆ ಇಲ್ಲವೆ ಸ್ಥಳದಲ್ಲಿ ಗೊಬ್ಬರ, ಹಳಸು ಇಲ್ಲವೆ ಇತರ ಕ್ಲೇಶ ಕಾರಕ ವಸ್ತುವನ್ನು ಇಡುವುದನ್ನು ಇಲ್ಲವೆ ಸಂಗ್ರಹಿಸುವುದನ್ನು ಪ್ರತಿಬಂಧಿಸು ವುದಕ್ಕಾಗಿ;

(ಡ) ಗಂಡಾಂತರಕಾರಿಯಾದ ಇಲ್ಲವೆ ಕ್ಲೇಶಕಾರಕ ಉದ್ಯಮಗಳನ್ನು ಇಲ್ಲವೆ ವ್ಯಾಪಾರಗಳನ್ನು ಕ್ರಮಪಡಿಸುವದಕ್ಕಾಗಿ;

(ಇ) ಹುಗಿಯುದರಿಂದ ಇಲ್ಲವೆ ಸುಡುವುದರಿಂದ ಹೆಣಗಳ ಸಂಸ್ಕಾರದ ವಿಷಯವಾಗಿ;

(ಫ) ಮಣ್ಣನ್ನು ಅಗೆದು ತೆಗೆಯುವುದಕ್ಕಾಗಿ ಮತ್ತು ನೆರೆಹೊರೆಯವರ ಆರೋಗ್ಯಕ್ಕೆ ಅಪಾಯಕಾರಕವಾದ ಇಲ್ಲವೆ ಕ್ಲೇಶಕಾರಕವಾದ ಅಗಳ್ತಗಳನ್ನು, ತೆಗ್ಗುಗಳನ್ನು ತುಂಬಿಸುವುದಕ್ಕಾಗಿ;

(ಗ) ಉಪದ್ರವಿಯಾದ ಗಿಡಬಳ್ಳಿಗಳನ್ನು ತೆಗೆಸುವುದಕ್ಕಾಗಿ;

(ಹ) ಗಂಡಾಂತರಕಾರಿ ಇಲ್ಲವೆ ಗಲೀಜಾದ ಕಟ್ಟಡಗಳನ್ನು ತೆಗೆಯಿಸುವದರ ಸಲುವಾಗಿ ಮತ್ತು ದುರಸ್ತಿ ಮಾಡುವುದರ ಸಲುವಾಗಿ.

(ಈ) ತಕ್ಕಷ್ಟು ಹವೆಯಾಡುವುದಕ್ಕೆ ಅನುಕೂಲತೆ ಇರದೆ ಇರುವ ಕಟ್ಟಡಗಳ ರಚನೆಯನ್ನು ತಡೆಯುವುದಕ್ಕಾಗಿ ಇಲ್ಲವೆ ರಸ್ತೆಗಳನ್ನು ಯೋಜಿಸಲು ಮತ್ತು ಗೆರೆಹೊಡೆದು ತೋರಿಸುವುದು.

(ಜ) ಜಾತ್ರೆಗಳ ಮತ್ತು ಸಂತೆಗಳ ನಿಯಂತ್ರಣಕ್ಕಾಗಿ ಮತ್ತು ಮಾರ್ಕೆಟಗಳನ್ನು, ಕಸಾಯಿಖಾನೆಗಳನ್ನು ಮತ್ತು ಚಕ್ಕಡಿ ನಿಲ್ದಾಣಗಳನ್ನು ಕ್ರಮಪಡಿಸುವುದಕ್ಕಾಗಿ;

(ಕಾ) ಮಾರಾಟಕ್ಕಾಗಿ ಬಹಿರಂಗಪಡಿಸಿದ ಅಯೋಗ್ಯ ಆಹಾರ ಮತ್ತು ಪೇಯಗಳನ್ನು ಪರೀಕ್ಷಿಸುವುದಕ್ಕಾಗಿ ಮತ್ತು ನಾಶಮಾಡುವುದಕ್ಕಾಗಿ;

(ಲ) ಸ್ವಚ್ಛತೆ ಮತ್ತು ಭಂಗೀ ವ್ಯವಸ್ಥೆಯ ಸಾಮಾನ್ಯ ಕ್ರಮಪಡಿಸುವಿಕೆಗಾಗಿ;

(ಮ) ಸ್ಥಾನಿಕ ಅಧಿಕಾರಗಳಿಂದ ನೇಮಿಸಿಕೊಳ್ಳಲ್ಪಟ್ಟ ಕೂಲಿಕಾರರ ಮೇಲೆ ಮೇಲ್ವಿಚಾರಣೆ ಮಾಡುವುದಕ್ಕಾಗಿ ಮತ್ತು ಧರ್ಮಶಾಲೆಗಳ ದುರಸ್ತಿಯ ಮೇಲ್ವಿಚಾರಣೆ ಮಾಡುವುದಕ್ಕಾಗಿ;

(ನ) ಕೋಂಡವಾಡೆಗಳ ಸಂಚಾಲನ ಮತ್ತು ಪರಿಪಾಲನ;

(ಓ) ತಾಲೂಕ ಬೋರ್ಡದಿಂದ ಒಪ್ಪಿಸಿಕೊಡಲ್ಪಟ್ಟ ಕಾಮಗಿರಿಗಳ ನಿರ್ವಹಣೆ;

(ಪ) ಸರಕಾರದಿಂದ ಒಪ್ಪಿಸಿಕೊಡಲ್ಪಟ್ಟ ಇನ್ನಿತರ ಕರ್ತವ್ಯಗಳನ್ನು ಮಾಡುವುದು;

(೨) ಈ ಕಲಮಿನನ್ವಯವಾಗಿ ಪಂಚಾಯತವು ಪ್ರೋಟನಿಯಮವನ್ನು ಮಾಡುವಾಗ ಅದರ ಉಲ್ಲಂಘನೆಯ ಅಪರಾಧವನ್ನು ಮಾಡಿದ ಯಾವುದೇ ವ್ಯಕ್ತಿಯು, ಅವನ ಅಪರಾಧವು ಸಾಬೀತಾದರೆ, ಇಪ್ಪತ್ತು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಶಿಕ್ಷಿತನಾಗುವ ಹಾಗೆ ಮತ್ತು ಉಲ್ಲಂಘನೆಯು ಮುಂದುವರೆಯುವಂತಹದು ಇರುವಾಗ ಅದು ಮುಂದುವರೆದಷ್ಟು ಕಾಲ ಮೊದಲ ದಿನದಿಂದ ಪ್ರತಿದಿವಸಕ್ಕೆ ಒಂದು ರೂಪಾಯಿಯ ವರೆಗೆ ವ್ಯಾಪಿಸಬಹುದಾದಷ್ಟು ಹೆಚ್ಚಿನ ದಂಡದಿಂದ ಶಿಕ್ಷಿತನಾಗುವ ಹಾಗೆ ಅನುಕೂಲತೆ ಮಾಡಬಹುದು.

(೩) ಈ ಕಲಮಿನನ್ವಯವಾಗಿ ಮಾಡಲಾದ ಪೋಟನಿಯಮಗಳು ಪೂರ್ವ ಭಾವಿಯಾದ ಪ್ರಸಿದ್ಧಿಯಂಕಿತವಾಗಿರತಕ್ಕದ್ದು ಮತ್ತು ಇಂತಹ ಪ್ರಸಿದ್ಧಿಯು ಗೊತ್ತು ಮಾಡಬಹುದಾದಂತಹ ರೀತಿಯಲ್ಲಿ ಇರತಕ್ಕದ್ದು.

## ವಿವೇಚನೆ

ನಿಯಮಗಳು ಸರಕಾರದಿಂದ ಮಾಡಲ್ಪಡುವುವು; ಕ್ರಮನಿಯಮಗಳು ತಾಲೂಕ ಬೋರ್ಡದಿಂದ ಮಾಡಲ್ಪಡುವುವು; ಪೋಟನಿಯಮಗಳು ಪಂಚಾಯತ ದಿಂದ ಮಾಡಲ್ಪಡುವುವು. ಹೀಗೆ ವ್ಯವಸ್ಥೆ ಇರುವುದರಿಂದ ನಿಯಮವೆಂದು ಕೂಡಲೆ ಸರಕಾರದವು, ಕಾಯಿದೆಗೆ ಪೋಷಕವಾದುವು. ಮತ್ತು ಇದೆ ಕಾಯಿದೆಗೆ ಸಂಬಂಧಿಸಿದ ವ್ಯವಹಾರಕ್ಕಾಗಿ ಎಂದು ಅರ್ಥವಾಗುವುದು. ಕ್ರಮ-ನಿಯಮ ಎಂದ ಕೂಡಲೆ ಅದು ತಾಲೂಕ ಬೋರ್ಡದಿಂದ ಮಾಡಲ್ಪಟ್ಟುದು ಮತ್ತು ಅದರ ಕಾರ್ಯ ನಿರ್ವಹಣೆಯಲ್ಲಿ ಅನುಕೂಲತೆ ಒದಗಿಸುವಂತಹವು ಎಂದು ಅರ್ಥವಾಗುವುದು. ಪೋಟನಿಯಮವೆಂದ ಕೂಡಲೆ ಅದು ಪಂಚಾಯತದಿಂದ ಮಾಡಲ್ಪಟ್ಟುದು ಮತ್ತು ಪಂಚಾಯತದ ಕಾರ್ಯ ನಿರ್ವಹಣೆಗಾಗಿ ಅನುಕೂಲತೆ ಉಂಟುಮಾಡುವಂತ ಹದು. ನಿಯಮವು ತಾಲೂಕ ಬೋರ್ಡು ಹಾಗೂ ಪಂಚಾಯತಕ್ಕೆ ಅನ್ವಯಿಸು ವುದು; ಕ್ರಮ-ನಿಯಮವು ತಾಲೂಕ ಬೋರ್ಡಿಗೆ ಅನ್ವಯಿಸುವುದು. ಪೋಟ ನಿಯಮವು ಪಂಚಾಯತಕ್ಕೆ ಮಾತ್ರ ಅನ್ವಯಿಸುವುದು ಎಂದು ಹೆಸರಿನಿಂದಲೇ ಗುರುತಿಸುವ ಹಾಗೆ ಆಗುವುದು.

ಪಂಚಾಯತವು ಯಾವ ಯಾವ ವಿಷಯಗಳ ಬಗ್ಗೆ ಪೋಟ ನಿಯಮ ಗಳನ್ನು ಮಾಡಬಹುದು ಎಂಬುದರ ವಿವರ ಕೊಡಲಾಗಿದೆ. ಅವು ೨೧೦ ನೆಯ ಕಲಮಿನನ್ವಯವಾಗಿರುವ ನಿಯಮಗಳ ಅಂಕಿತವಾಗಿ ಇರತಕ್ಕದ್ದು. ಈ ಕಾಯಿ ದೆಯ ಶರತುಗಳಿಗಂಕಿತವಾಗಿ ಇರತಕ್ಕದ್ದು. ಮತ್ತು ಡೆಪ್ಯೂಟಿ ಕಮಿಶನರನ ಸಮ್ಮತಿ ಪಡೆದಂತಹವು ಇರತಕ್ಕದ್ದು. ಮತ್ತು ಜಾರಿಯಲ್ಲಿ ಬರುವುದಕ್ಕಿಂತ ಮೊದಲು ಗೊತ್ತು ಮಾಡಿದ ರೀತಿಯಲ್ಲಿ ಪ್ರಸಿದ್ಧಿಸಲ್ಪಟ್ಟಿರಬೇಕು.

ಪೋಟ ನಿಯಮವೂ ಈ ಕಾಯಿದೆಯ ಅನುಸಾರವಾಗಿ ಇರುವುದರಿಂದ ಅದರ ಉಲ್ಲಂಘನೆಯು ಅಪರಾಧವಾಗುವುದು. ಅದಕ್ಕೆ ೨೦/- ರೂಪಾಯಿಗಳ ವರೆಗೆ ದಂಡ. ಮುಂದರಿದ ಅಪರಾಧಕ್ಕೆ ದಿನಕ್ಕೆ ಒಂದು ರೂಪಾಯಿಯ ವರೆಗೆ ದಂಡ ಹಾಕಲು ಪೋಟ ನಿಯಮಗಳಲ್ಲಿ ಅನುಕೂಲತೆ ಮಾಡಲು ಅಧಿಕಾರ ಕೊಡಲಾಗಿದೆ.

### ೨೧೩. ಅನರ್ಹತೆ ಪಡೆದ ಮೇಲೆ ಪಂಚಾಯತದ, ಸದಸ್ಯ ಚೇರಮನ್ನ ಇಲ್ಲವೆ ಉಪಚೇರಮನ್ನ ಎಂದು ಇಲ್ಲವೆ ತಾಲೂಕ ಬೋರ್ಡದ ಸದಸ್ಯ, ಅಧ್ಯಕ್ಷ ಇಲ್ಲವೆ ಉಪಾಧ್ಯಕ್ಷ ಎಂದು ಕಾರ್ಯ ಮಾಡಿದ್ದಕ್ಕೆ ದಂಡನೆ

(೧) ಈ ಕಾಯಿದೆಯನ್ವಯವಾಗಿ ಇಲ್ಲವೆ ಅದರನ್ವಯವಾಗಿ ಮಾಡಿದ ನಿಯಮಗಳನ್ವಯವಾಗಿ ಅವನು ಸದಸ್ಯನೆಂದು ಅಧಿಕಾರದಲ್ಲಿ ಇಲ್ಲವೆಂದು ಇಲ್ಲವೆ ಇರಲು ಬಾಧ್ಯಸ್ಥನಾಗಿಲ್ಲವೆಂದು ತಿಳಿದೂ ಯಾವನಾದರೂ ಪಂಚಾಯತದ ಇಲ್ಲವೆ ತಾಲೂಕ ಬೋರ್ಡದ ಸದಸ್ಯನೆಂದು ಕಾರ್ಯ ಮಾಡಿದ್ದರೆ, ಅವನ ಅಪರಾಧವು ಸಾಬೀತಾದರೆ, ಸದಸ್ಯನೆಂದು ಕಾರ್ಯ ಮಾಡಿದ ಇಲ್ಲವೆ ಮತ ಹಾಕಿದ ಪ್ರತಿಯೊಂದು ದಿವಸಕ್ಕೆ ಐವತ್ತು ರೂಪಾಯಿಯ ದಂಡದಿಂದ ಅವನು ಶಿಕ್ಷಿತನಾಗ ತಕ್ಕದ್ದು.

(೨) ಈ ಕಾಯಿದೆಯನ್ವಯವಾಗಿ ಇಲ್ಲವೆ ಅದರನ್ವಯವಾಗಿ ಮಾಡಿದ ನಿಯಮಗಳನ್ವಯವಾಗಿ ಅವನು ಪಂಚಾಯತದ ಚೇರಮನ್ನ ಇಲ್ಲವೆ ಉಪ ಚೇರಮನ್ನ ಎಂದು ಇಲ್ಲವೆ ತಾಲೂಕ ಬೋರ್ಡದ ಅಧ್ಯಕ್ಷ ಇಲ್ಲವೆ ಉಪಾಧ್ಯಕ್ಷ ಎಂದು ಅಧಿಕಾರದಲ್ಲಿ ಇಲ್ಲವೆಂದು ಇಲ್ಲವೆ ಇರಲು ಬಾಧ್ಯಸ್ಥನಾಗಿಲ್ಲವೆಂದು ತಿಳಿದೂ ಯಾವನಾದರೂ ಪಂಚಾಯತದ ಚೇರಮನ್ನ ಇಲ್ಲವೆ ಉಪಚೇರಮನ್ನ ಎಂದು ಇಲ್ಲವೆ ತಾಲೂಕ ಬೋರ್ಡದ ಅಧ್ಯಕ್ಷ ಇಲ್ಲವೆ ಉಪಾಧ್ಯಕ್ಷ ಎಂದು ಕಾರ್ಯ ಮಾಡಿದರೆ, ಇಲ್ಲವೆ ಅಂತಹ ಕಾರ್ಯ ನಿರ್ವಹಿಸಿದರೆ ಅವನ ಅಪರಾಧವು ಸಾಬೀತಾದರೆ, ಹಾಗೆ ಕಾರ್ಯ ಮಾಡಿದ ಇಲ್ಲವೆ ನಿರ್ವಹಿಸಿದ ಪ್ರತಿ ಒಂದು ದಿವಸಕ್ಕೆ ಎರಡು ನೂರು ರೂಪಾಯಿಯಷ್ಟು ದಂಡದಿಂದ ಶಿಕ್ಷಿತನಾಗತಕ್ಕದ್ದು.

(೩) ಪಂಚಾಯತದ ಚೇರಮನ್ನ ಇಲ್ಲವೆ ಉಪಚೇರಮನ್ನ ಇಲ್ಲವೆ ತಾಲೂಕ ಬೋರ್ಡದ ಅಧ್ಯಕ್ಷ ಇಲ್ಲವೆ ಉಪಾಧ್ಯಕ್ಷನಾಗಿದ್ದ ಯಾವುದೇ ವ್ಯಕ್ತಿಯು ಸಂದರ್ಭಾನುಸಾರ ಪಂಚಾಯತದ ಇಲ್ಲವೆ ತಾಲೂಕ ಬೋರ್ಡದ ಅಂತರ್ಗತ ವಾಗಿದ್ದ ಇಲ್ಲವೆ ಒಡೆತನದಲ್ಲಿದ್ದ ಯಾವುದೇ ಕಾಗದಪತ್ರಗಳನ್ನು ಇಲ್ಲವೆ ಯಾವುದೇ ಹಣವನ್ನು ಇಲ್ಲವೆ ಇತರ ಆಸ್ತಿಯನ್ನು ತನ್ನ ಸ್ವಾಧೀನದಲ್ಲಿ ಇರುವ ಇಲ್ಲವೆ ಬಂದ ಇಲ್ಲವೆ ನಿಯಂತ್ರಣದಲ್ಲಿ ಬಂದವುಗಳನ್ನು ಅಧಿಕಾರಪದದಲ್ಲಿಯ ಉತ್ತ ರಾಧಿಕಾರಿಗೆ ಇಲ್ಲವೆ ಗೊತ್ತುಮಾಡಿದ ಬೇರೆ ಅಧಿಕಾರಿಗೆ ಒಪ್ಪಿಸಿಕೊಡಲು ತಪ್ಪಿದರೆ—

(ಅ) ಇಂತಹ ಚೇರಮನ್ನ, ಉಪಚೇರಮನ್ನ, ಅಧ್ಯಕ್ಷ ಇಲ್ಲವೆ ಉಪಾಧ್ಯಕ್ಷ ಎಂದು ಅವನ ಅಧಿಕಾರ ಕಾಲಾವಧಿಯು ಮುಗಿದ ಕೂಡಲೇ ಪ್ರತಿಯೊಂದು ಸಂದರ್ಭದಲ್ಲಿ; ಮತ್ತು

(ಬ) ಸಂದರ್ಭಾನುಸಾರ ಚೇರಮನ್ನನಿಂದ ಇಲ್ಲವೆ ಅಧ್ಯಕ್ಷನಿಂದ ವಿನಂತಿಯ ಮೂಲಕ ಉಪಚೇರಮನ್ ಇಲ್ಲವೆ ಉಪಾಧ್ಯಕ್ಷನೆಂದು ಯಾವುದೇ ವ್ಯಕ್ತಿಯು ಆಗಿರುವ ಸಂದರ್ಭದಲ್ಲಿ,

ಅವನ ಅಪರಾಧವು ಸಾಬೀತಾದರೆ, ಒಂದು ಸಾವಿರ ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಅವನು ಶಿಕ್ಷಿತನಾಗತಕ್ಕದ್ದು.

**ವಿವೇಚನೆ**

ಅಧಿಕಾರ ಕಾಲಾವಧಿ ಮುಗಿದ ಮೇಲೆ ಸದಸ್ಯರೆಂದು, ಚೇರಮನ್ನ, ಉಪ ಚೇರಮನ್ನನೆಂದು ಪಂಚಾಯತದಲ್ಲಿ ಇಲ್ಲವೆ ಸದಸ್ಯನೆಂದು, ಅಧ್ಯಕ್ಷನೆಂದು, ಉಪಾಧ್ಯಕ್ಷನೆಂದು ತಾಲೂಕ ಬೋರ್ಡದಲ್ಲಿ ಯಾರಾದರೂ ತಿಳಿದೂ ತಿಳಿದೂ ಕೆಲಸ ಮಾಡಿದರೆ, ಅಪರಾಧವೆನ್ನಿಸುವುದು. ತಿಳಿಯದೆ ಮಾಡಿದ್ದು ಅಪರಾಧವಲ್ಲ. ತಿಳಿದು ಮಾಡುವುದು ಅಪರಾಧವಾಗುವುದು. ಆ ಬಗ್ಗೆ ಈ ಕಲಮಿನಲ್ಲಿ ಹೇಳಲಾಗಿದೆ.

ಸದಸ್ಯನು ಹಾಗೆ ಅಧಿಕಾರ ಕಾಲಾವಧಿ ಮುಗಿದಿದ್ದು ತಿಳಿದ ಮೇಲೆ ಕೆಲಸ ಮಾಡಿದರೆ ಅವನಿಗೆ ಹಾಗೆ ಕೆಲಸಮಾಡಿದ ಪ್ರತಿಯೊಂದು ದಿವಸಕ್ಕೆ ೫೦/- ರೂಪಾಯಿಯ ದಂಡ. ಚೇರಮನ್ನ, ಉಪಚೇರಮನ್ನ, ಅಧ್ಯಕ್ಷ, ಉಪಾಧ್ಯಕ್ಷ ಎಂದು ಹಾಗೆ ಅಧಿಕಾರ ಮುಗಿದಿದ್ದು ತಿಳಿದ ಮೇಲೆ ಕೆಲಸ ಮಾಡಿದರೆ, ಅವನಿಗೆ ಪ್ರತಿ ದಿನಕ್ಕೆ ೨೦೦/- ರೂಪಾಯಿಯ ದಂಡ. ಅಧಿಕಾರ ಕಾಲಾವಧಿ ಮುಗಿದು, ತನ್ನ ಹತ್ತರವಿದ್ದ ಇಲ್ಲವೆ ನಿಯಂತ್ರಣದಲ್ಲಿದ್ದ ಕಾಗದಪತ್ರ, ಹಣ, ಆಸ್ತಿ ಇದನ್ನು ಉತ್ತರಾಧಿಕಾರಿಗೆ ಒಪ್ಪಿಸಿಕೊಡಲು ತಪ್ಪಿದರೆ, ೧೦೦೦/- ರೂಪಾಯಿಗಳ ವರೆಗೆ ವ್ಯಾಪಿಸುವಷ್ಟು ದಂಡ. ಇವೆಲ್ಲ ಅಪರಾಧಗಳು ಆದುದರಿಂದ ಅವು ಸಾಬೀತಾ ದರೆ ಶಿಕ್ಷೆ.

**೨೧೪. ಹಿತಾಸಕ್ತಿ ಇದ್ದ ಸದಸ್ಯನು ಮತದಾನ ಮಾಡಿದರೆ ದಂಡನೆ**

ಕಲಮು ೩೭ ರ ಉಪಕಲಮು (೪) ಶರತುಗಳ ವಿರುದ್ಧವಾಗಿ ಇಲ್ಲವೆ ಕಲಮು ೧೧೭ ರ ಉಪಕಲಮು (೨) ರ ವಾಕ್ಯಾವಳಿ (ಗ) ದ ವಿರುದ್ಧವಾಗಿ ಯಾರಾದರೂ ಪಂಚಾಯತದ ಇಲ್ಲವೆ ತಾಲೂಕ ಬೋರ್ಡದ ಸದಸ್ಯನೆಂದು ಮತ ದಾನ ಮಾಡಿದರೆ, ಅವನ ಅಪರಾಧವು ಸಾಬೀತಾದರೆ, ಐದು ನೂರು ರೂಪಾಯಿ ಗಳ ವರೆಗೆ ವಾಪಿಸಬಹುದಾದಷ್ಟು ದಂಡದಿಂದ ಅವನು ಶಿಕ್ಷಿತನಾಗತಕ್ಕದ್ದು.

**ವಿವೇಚನೆ**

ಈ ಕಲಮಿನಲ್ಲಿ ಹೇಳಿದ ಮಾತುಗಳ ಬಗ್ಗೆ ಕಲಮು ೩೭ ಮತ್ತು ೧೧೭ ರ ಸಂಬಂಧಪಟ್ಟ ಉಪಕಲಮುಗಳನ್ನು ನೋಡಬೇಕು. ಅಂದರೆ ಹಿತಾಸಕ್ತಿ ಇದ್ದ

ಸದಸ್ಯನು ಅಂಥಾ ವಿಷಯಗಳ ಚರ್ಚೆ ನಡೆದಾಗ ಭಾಗವಹಿಸಬಾರದು, ಮತದಾನ ಮಾಡಬಾರದು ಎಂಬ ನಿರ್ಬಂಧವನ್ನು ಪಾಲಿಸದಿದ್ದರೆ ಅವನಿಗೆ ೫೦೦/-ರೂಪಾಯಿ ಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡ.

## ೨೧೫. ಕರಾರಿನಲ್ಲಿ ಹಿತಾಸಕ್ತಿಯು ಅಧಿಕಾರಿಯಿಂದ ಇಲ್ಲವೆ ಸೇವಕನಿಂದ ಪಡೆಯಲ್ಪಟ್ಟಿದ್ದಕ್ಕೆ ದಂಡನೆ

ಪಂಚಾಯತದ ಇಲ್ಲವೆ ತಾಲೂಕ ಬೋರ್ಡಿನ ಯಾವುದೇ ಅಧಿಕಾರಿಯು ಇಲ್ಲವೆ ಸೇವಕನು ತನಗಾಗಿ, ಪ್ರತ್ಯಕ್ಷವಾಗಿ ಇಲ್ಲವೆ ಅಪ್ರತ್ಯಕ್ಷವಾಗಿ, ತಾನೇ ಇಲ್ಲವೆ ಪಾಲುಗಾರನಿಂದ, ಮಾಲಿಕನಿಂದ, ಇಲ್ಲವೆ ಸೇವಕನಿಂದ ಪಂಚಾಯತದ ಇಲ್ಲವೆ ತಾಲೂಕ ಬೋರ್ಡಿನ ಸಂಗಡ, ಅದರಿಂದ ಇಲ್ಲವೆ ಅದರ ಪರವಾಗಿ ಇರುವ ಯಾವುದೇ ಕರಾರಿನಲ್ಲಿ ಇಲ್ಲವೆ ಸೇವೆಯಲ್ಲಿ ಯಾವುದೇ ಪಾಲು ಇಲ್ಲವೆ ಹಿತಾಸಕ್ತಿ ಯನ್ನು ತಿಳಿದೂ ತಿಳಿದೂ ಪಡೆದರೆ, ಅವನ ಅಪರಾಧವು ಸಾಬೀತಾದರೆ, ಐದು ನೂರು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಅವನು ಶಿಕ್ಷಿತ ನಾಗತಕ್ಕದ್ದು.

ಆದರೆ, ಅವನು ಅಂತಹ ಕಂಪನಿಯ ಡಾಯರೆಕ್ಟರನಾಗಿದ್ದ ಹೊರತು, ಅಂತಹ ಕಂಪನಿ ಮತ್ತು ಪಂಚಾಯತ ಇಲ್ಲವೆ ತಾಲೂಕ ಬೋರ್ಡುಗಳ ನಡುವೆ ಆದ ಯಾವುದೇ ಕರಾರಿನಲ್ಲಿ ಯಾವುದೇ ಕಂಪನಿಯ ಸದಸ್ಯ ಇಲ್ಲವೆ ಪಾಲು ಪಡೆದವನು ಆಗಿರುವನೆಂಬ ಕಾರಣದಿಂದ ಯಾವುದೇ ವ್ಯಕ್ತಿಯು ಅದರ ಹಿತಾ ಸಕ್ತಿ ಇದ್ದವನೆಂದು ತಿಳಿಯತಕ್ಕದ್ದಲ್ಲ.

ಆದರೆ, ಪಂಚಾಯತದೊಂದಿಗೆ ಇಲ್ಲವೆ ತಾಲೂಕ ಬೋರ್ಡದೊಂದಿಗೆ, ಕಮಿಶನರನ ಪರವಾನಗಿಯಿಂದ ಯಾವುದೇ ವ್ಯಕ್ತಿಯು ಕರಾರಿನಲ್ಲಿ ಭಾಗಿಯಾದರೆ, ಈ ಕಲಮಿನನ್ವಯ ಯಾವ ಮಾತೂ ಆ ವ್ಯಕ್ತಿಗೆ ಅನ್ವಯಿಸುವುದಿಲ್ಲ.

### ವಿವೇಚನೆ

ಹಿತಾಸಕ್ತಿ ಪಡೆವಂತಹ ಕೆಲಸವನ್ನು ಮಾಡಬಾರದು ಎಂದು ಹೇಳಿದಾಗ ಸದಸ್ಯನಾಗಿದ್ದವನು ಪಂಚಾಯತದ ಇಲ್ಲವೆ ತಾಲೂಕ ಬೋರ್ಡಿನ ಹಿತವನ್ನೇ ಮಾಡತಕ್ಕದ್ದು ಎಂದು ಗ್ರಹಿಕೆ. ಅದರ ವಿರುದ್ಧವಾಗಿ ತನ್ನ ಸ್ವಂತಕ್ಕೆ ಲಾಭ ಮಾಡಿಕೊಳ್ಳುವುದು ಅಪರಾಧವಾಗುವುದು. ಅದಕ್ಕೆ ೫೦೦/– ರೂಪಾಯಿಗಳ ವರೆಗೆ ದಂಡ. ಆದರೆ ಕಂಪನಿಯ ಶೇರು ಪಡೆದಿದ್ದರೆ, ಅದರ ಸದಸ್ಯನಾಗಿದ್ದರೆ, ಆ ಕಂಪನಿಯು ಪಂಚಾಯತದೊಡನೆ ಇಲ್ಲವೆ ತಾಲೂಕ ಬೋರ್ಡಿನೊಡನೆ ಕರಾರು ಮಾಡಿಕೊಂಡಿದ್ದರೆ ಆ ಸದಸ್ಯನಿಗೆ ಪ್ರತ್ಯಕ್ಷ ಇಲ್ಲವೆ ಅಪ್ರತ್ಯಕ್ಷ ಹಿತಾಸಕ್ತಿ ಇದೆ ಯೆಂದು ತಿಳಿಯತಕ್ಕದ್ದಲ್ಲ ಎಂದು ಇಲ್ಲಿಯೂ ಹೇಳಿದೆ. ಸಂಬಂಧಪಟ್ಟ ಹಿಂದಿನ

ಕಲಮುಗಳಲ್ಲಿಯೂ ಹೇಳಿದೆ. ಕಮಿಶನರರ ಪರವಾನಗಿಯಿಂದ ಕರಾರಿನಲ್ಲಿ ಭಾಗಿಯಾದರೆ, ಅದು ಅಪರಾಧವಾಗುವುದಿಲ್ಲ. ಏಕೆಂದರೆ ಅಲ್ಲಿ ಪರವಾನಗಿ ಇರುತ್ತದೆ.

## ೨೧೬. ಕೆಲ ಅಧಿಕಾರಿಗಳ ಇಲ್ಲವೆ ಅವರ ಪ್ರತಿನಿಧಿಗಳ ಕಾರ್ಯಕ್ಕೆ ಅನ್ಯಾಯವಾಗಿ ಅಡ್ಡಿ ಮಾಡುವುದು

ಪಂಚಾಯತದ ಸೆಕ್ರೆಟರಿಯನ್ನು ಇಲ್ಲವೆ ತಾಲೂಕ ಬೋರ್ಡದ ಮುಖ್ಯ ಕಾರ್ಯಾಧಿಕಾರಿಯನ್ನು ಇಲ್ಲವೆ ಇಂತಹ ಅಧಿಕಾರಿಯು ಕಾಯಿದೆಬದ್ಧವಾಗಿ ಅಧಿಕಾರ ವಹಿಸಿಕೊಟ್ಟ ಯಾವುದೇ ವ್ಯಕ್ತಿಯನ್ನು ಯಾವುದೇ ಸ್ಥಳ, ಕಟ್ಟಡ ಇಲ್ಲವೆ ಭೂಮಿ ಇದರಲ್ಲಿ ಪ್ರವೇಶ ಮಾಡುವುದನ್ನು ಇಲ್ಲವೆ ಪ್ರವೇಶ ಮಾಡುವ ತನ್ನ ಕಾಯಿದೇಶೀರ ಅಧಿಕಾರವನ್ನು ನಿರ್ವಹಿಸುವುದನ್ನು ಯಾರು ಅಡ್ಡಿ ಮಾಡುವರೋ ಅಂತಹ ಯಾವುದೇ ವ್ಯಕ್ತಿಯು, ಅವನ ಅಪರಾಧವು ಸಾಬೀತಾದರೆ ಒಂದು ತಿಂಗಳ ವರೆಗೆ ವ್ಯಾಪಿಸಬಹುದಾದಷ್ಟು ಸಾದಾ ಕಾರಾವಾಸದಿಂದ, ಇಲ್ಲವೆ ಐದು ನೂರು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಇಲ್ಲವೆ ಎರಡೂ ದಂಡನೆಗಳಿಂದ ಶಿಕ್ಷಿತನಾಗತಕ್ಕದ್ದು.

### ವಿವೇಚನೆ

ಕಟ್ಟಡ ಮುಂತಾದವುಗಳಲ್ಲಿ ಪ್ರವೇಶಿಸುವ ಅಧಿಕಾರ, ಪಂಚಾಯತದ ಸೆಕ್ರೆಟರಿ, ತಾಲೂಕ ಬೋರ್ಡದ ಮುಖ್ಯ ಕಾರ್ಯಾಧಿಕಾರಿ, ಅಲ್ಲದೆ ಈ ಸಂಬಂಧದಲ್ಲಿ ಅಧಿಕಾರ ಒಪ್ಪಿಸಿಕೊಟ್ಟ ಬೇರೆ ವ್ಯಕ್ತಿ ಇವರಿಗೆ ಇದೆ. ಈ ಅಧಿಕಾರಿಗಳು ಈ ಕಾಯಿದೆಯ ಉದ್ದೇಶಗಳಿಗಾಗಿ ಪ್ರವೇಶಮಾಡುವವರು. ಅವರ ಈ ಪ್ರವೇಶಕ್ಕೆ ಯಾರಾದರೂ ಅಡ್ಡಿ ಮಾಡಿದರೆ ಅದು ಅಪರಾಧವೆನಿಸುವುದು. ಅದು ಸಾಬೀತಾದರೆ, ಒಂದು ತಿಂಗಳ ವರೆಗಿನ ಸಾದಾ ಕಾರಾವಾಸ ಇಲ್ಲವೆ ೫೦೦/- ರೂಪಾಯಿಗಳ ವರೆಗಿನ ದಂಡ ಇಲ್ಲವೆ ಎರಡೂ ಮಾದರಿಯ ದಂಡನೆಯಿಂದ ಶಿಕ್ಷಿತನಾಗತಕ್ಕದ್ದು.

## ೨೧೭. ಚೇರಮನ್ನ, ಅಧ್ಯಕ್ಷ, ಮುಂತಾದವರಿಗೆ ಆತಂಕ ಮಾಡುವುದನ್ನು ನಿರ್ಬಂಧಿಸುವುದು

ಈ ಕಾಯಿದೆಯ ಇಲ್ಲವೆ ಅದರನ್ವಯವಾಗಿರುವ ಯಾವುದೇ ನಿಯಮದ, ಪೋಟನಿಯಮದ, ಕ್ರಮ ನಿಯಮದ, ಇಲ್ಲವೆ ಹುಕುಮಿನ ಸತ್ವದಿಂದ ಇಲ್ಲವೆ ಅದರ ಪರಿಣಾಮವಾಗಿ ಕರ್ತವ್ಯ ಮಾಡುತ್ತಿರುವಾಗ ಇಲ್ಲವೆ ಅಧಿಕರಿಸಲ್ಪಟ್ಟ ಇಲ್ಲವೆ ಮಾಡಲೇಬೇಕಾಗಿದ್ದ ಬೇರೆ ಯಾವುದನ್ನಾದರೂ ಮಾಡುತ್ತಿರುವಾಗ ಪಂಚಾಯತದ ಚೇರಮನ್ನನನ್ನು, ಉಪಚೇರಮನ್ನನನ್ನು, ಸೆಕ್ರೆಟರಿಯನ್ನು, ಇಲ್ಲವೆ ಸದಸ್ಯರನ್ನು

ಇಲ್ಲವೆ ತಾಲೂಕ ಬೋರ್ಡಿನ ಅಧ್ಯಕ್ಷನನ್ನು, ಉಪಾಧ್ಯಕ್ಷನನ್ನು, ಮುಖ್ಯ ಕಾರ್ಯಾಧಿಕಾರಿಯನ್ನು ಇಲ್ಲವೆ ಸದಸ್ಯನನ್ನು ಇಲ್ಲವೆ ಪಂಚಾಯತದಿಂದ ಇಲ್ಲವೆ ತಾಲೂಕ ಬೋರ್ಡದಿಂದ ನೇಮಿಸಿಕೊಳ್ಳಲ್ಪಟ್ಟ ಯಾವುದೇ ವ್ಯಕ್ತಿಯನ್ನು ಇಲ್ಲವೆ ಪಂಚಾಯತದಿಂದ ಇಲ್ಲವೆ ಅದರ ಪರವಾಗಿ ಇಲ್ಲವೆ ಬೋರ್ಡದಿಂದ ಇಲ್ಲವೆ ಅದರ ಪರವಾಗಿ ಯಾರ ಸಂಗಡ ಕರಾರು ಮಾಡಿಕೊಂಡಿರುವುದೋ ಅಂತಹ ಯಾವುದೇ ವ್ಯಕ್ತಿಯನ್ನು ಯಾವುದೇ ವ್ಯಕ್ತಿಯು ಪೀಡಿಸಿದರೆ ಇಲ್ಲವೆ ಅವನಿಗೆ ಆತಂಕವನ್ನುಂಟು ಮಾಡಿದರೆ, ಅವನ ಅಪರಾಧವು ಸಾಬೀತಾದರೆ, ಒಂದು ನೂರು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಅವನು ಶಿಕ್ಷಿತನಾಗತಕ್ಕದ್ದು.

**ವಿವೇಚನೆ**

ಪಂಚಾಯತ ಇಲ್ಲವೆ ತಾಲೂಕ ಬೋರ್ಡಿನ ಯಾವುದೇ ಅಧಿಕಾರಿ, ಸದಸ್ಯ ಇಲ್ಲವೆ ಅಧಿಕಾರ ಪಡೆದವ ಇಲ್ಲವೆ ಅವರೊಡನೆ ಕರಾರು ಮಾಡಿಕೊಂಡವ, ಅಂದರೆ ಪರ್ಯಾಯವಾಗಿ ಪಂಚಾಯತವೇ ಇಲ್ಲವೆ ಬೋರ್ಡು ಅದಂತೆ. ಅವನಿಗೆ ಆತಂಕ ಉಂಟುಮಾಡುವುದು, ಇಲ್ಲವೆ ಪೀಡಿಸುವುದು ಎಂದರೆ ಪಂಚಾಯತಕ್ಕೆ ಇಲ್ಲವೆ ಬೋರ್ಡಿಗೆ ಅದರ ಕೆಲಸದಲ್ಲಿ ವಿಘ್ನ ತಂದಂತೆ. ಅದು ಅಪರಾಧವಾಗುವುದು. ಸಾಬೀತಾದರೆ ಅವಕ್ಕೆ ೧೦೦ ರೂಪಾಯಿಗಳ ವರೆಗೆ ದಂಡದ ಶಿಕ್ಷೆ.

### ೨೧೮. ನೋಟೀಸನ್ನು ತೆಗೆದು ಹಾಕುವುದಕ್ಕೆ ಇಲ್ಲವೆ ಅದರಲ್ಲಿ ಬರೆದುದನ್ನು ಅಳಿಸಲಿಕ್ಕೆ ನಿರ್ಬಂಧ

ಪಂಚಾಯತದ ಇಲ್ಲವೆ ತಾಲೂಕ ಬೋರ್ಡಿನ ಇಲ್ಲವೆ ಅದರ ಕಾರ್ಯಕಾರಿ ಅಧಿಕಾರಿಯ ಹುಕುಮಿನನ್ವಯವಾಗಿ ಇಲ್ಲವೆ ಹುಕುಮಿನಿಂದ ನಿಲ್ಲಿಸಿದ ಯಾವುದೇ ಗುರುತು ಇಲ್ಲವೆ ಫಲಕ ಇಲ್ಲವೆ ಪ್ರದರ್ಶಿಸಲಾದ ಯಾವುದೇ ನೋಟೀಸನ್ನು ಯಾವುದೇ ವ್ಯಕ್ತಿಯು ಈ ಸಂಬಂಧದಲ್ಲಿ ಯಾವ ಅಧಿಕಾರ ಇಲ್ಲದೆ, ತೆಗೆದು ಹಾಕಿದರೆ, ನಾಶಮಾಡಿದರೆ, ರೂಪುಗೆಡಿಸಿದರೆ, ಇಲ್ಲವೆ ಅದರಲ್ಲಿ ಬರೆದುದನ್ನು ಬೇರೆ ರೀತಿಯಿಂದ ಅಳಿಸಿದರೆ, ಅವನ ಅಪರಾಧವು ಸಾಬೀತಾದರೆ, ಐವತ್ತು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಅವನು ಶಿಕ್ಷಿತನಾಗತಕ್ಕದ್ದು.

**ವಿವೇಚನೆ**

ಪಂಚಾಯತದ ಇಲ್ಲವೆ ಬೋರ್ಡಿನ ಅಧಿಕಾರದಿಂದ ಹಚ್ಚಿದ ನೋಟೀಸು ಇಲ್ಲವೆ ನಿಲ್ಲಿಸಿದ ಫಲಕ ಇಲ್ಲವೆ ಗುರುತು ಇರಬೇಕು. ಅದನ್ನು ಪರವಾನಗಿ ಇಲ್ಲದೆ ಯಾರಾದರೂ ತೆಗೆದು ಹಾಕಿದರೆ ಅಳಿಸಿದರೆ, ರೂಪುಗೆಡಿಸಿದರೆ ನಾಶಮಾಡಿದರೆ ಅದು ಅಪರಾಧ ವಾಗುವುದು ಅದಕ್ಕೆ ೫೦/- ರೂಪಾಯಿ ವರೆಗೆ ದಂಡ.

## ೨೧೯. ಮಾಹಿತಿ ಕೊಡದೆ ಇದ್ದರೆ ಇಲ್ಲವೆ ತಪ್ಪು ಮಾಹಿತಿ ಕೊಟ್ಟರೆ ದಂಡನೆ

ಈ ಕಾಯಿದೆಯನ್ವಯವಾಗಿ ಇಲ್ಲವೆ ಅದರನ್ವಯವಾಗಿ ಹೊರಡಿಸಲಾದ ಯಾವುದೇ ನೋಟೀಸಿನಿಂದ ಇಲ್ಲವೆ ಪ್ರಕರಣದಿಂದ ಯಾವುದೇ ಮಾಹಿತಿಯನ್ನು ಕೊಡಬೇಕೆಂದು ಯಾವುದೇ ವ್ಯಕ್ತಿಗೆ ಕೇಳಿಕೊಳ್ಳಲ್ಪಟ್ಟಾಗ, ಅವನು ಇಂತಹ ಮಾಹಿತಿಯನ್ನು ಸಾದರಪಡಿಸಲು ತಪ್ಪಿದರೆ, ಇಲ್ಲವೆ ತಿಳಿದೂ ತಿಳಿದೂ ತಪ್ಪು ಮಾಹಿತಿಯನ್ನು ಒದಗಿಸಿದರೆ, ಅವನ ಅಪರಾಧವು ಸಾಬೀತಾದರೆ, ಒಂದು ನೂರು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಅವನು ಶಿಕ್ಷಿತನಾಗತಕ್ಕದ್ದು.

### ವಿವೇಚನೆ

ಈ ಕಾಯಿದೆಯಿಂದ ಇಲ್ಲವೆ ನೋಟೀಸಿನಿಂದ ಯಾವುದೇ ವ್ಯಕ್ತಿಯು ಮಾಹಿತಿ ಕೊಡಲು ಬದ್ಧನಾಗಿರತಕ್ಕದ್ದು. ಅಂತಹನು ಮಾಹಿತಿ ಕೊಡಲು ತಪ್ಪಿದರೆ ಇಲ್ಲವೆ ತಿಳಿದೂ ತಪ್ಪು ಮಾಹಿತಿ ಕೊಟ್ಟರೆ, ಅದು ಅಪರಾಧವಾಗುವುದು. ಅದಕ್ಕೆ ೧೦೦/– ರೂಪಾಯಿ ವರೆಗೆ ದಂಡ.

## ೨೨೦. ಲಿಲಾವಿನಲ್ಲಿ ಬೇಡುವುದಕ್ಕೆ ನಿರ್ಬಂಧ

(೧) ಪಂಚಾಯತದ ಇಲ್ಲವೆ ತಾಲೂಕ ಬೋರ್ಡದ ಯಾವುದೇ ಸದಸ್ಯನು ಪಂಚಾಯತದ ಇಲ್ಲವೆ ತಾಲೂಕ ಬೋರ್ಡದ ನೌಕರನು, ಇಲ್ಲವೆ ಈ ಕಾಯಿದೆಯನ್ವಯವಾಗಿ ಸ್ಥಾವರ ಇಲ್ಲವೆ ಜಂಗಮ ಆಸ್ತಿಯ ಮಾರಾಟದ ಸಂಬಂಧವಾಗಿ ಯಾವುದೇ ಕರ್ತವ್ಯವನ್ನು ಮಾಡಬೇಕಾಗಿರುವ ಯಾವುದಕ್ಕೆ ವ್ಯಕ್ತಿಯು, ಇಂತಹ ಮಾರಾಟದಲ್ಲಿ ಯಾವುದೇ ಆಸ್ತಿಯನ್ನು ಪ್ರತ್ಯಕ್ಷ ಇಲ್ಲವೆ ಅಪ್ರತ್ಯಕ್ಷವಾಗಿ ಬೇಡತಕ್ಕದ್ದಲ್ಲ ಇಲ್ಲವೆ ಅದರಲ್ಲಿ ಹಿತಾಸಕ್ತಿ ಪಡೆಯತಕ್ಕದ್ದಲ್ಲ.

(೨) ಉಪಕಲಮು (೧) ರ ಶರತುಗಳಿಗೆ ವಿರುದ್ಧವಾಗಿ ಯಾವುದೇ ವ್ಯಕ್ತಿಯು ವರ್ತಿಸಿದರೆ, ಅವನ ಅಪರಾಧವು ಸಾಬೀತಾದರೆ, ಐದುನೂರು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಶಿಕ್ಷಿತನಾಗತಕ್ಕದ್ದು. ಮತ್ತು ಅವನು ಪಂಚಾಯತದ ಇಲ್ಲವೆ ತಾಲೂಕ ಬೋರ್ಡದ ಅಧಿಕಾರಿ ಇಲ್ಲವೆ ನೌಕರ ಆಗಿದ್ದರೆ, ಅವನು ನೌಕರಿಯಿಂದ ಕಡಿಮೆ ಮಾಡಲ್ಪಡಲು ಕೂಡ ಪಾತ್ರನಾಗತಕ್ಕದ್ದು.

### ವಿವೇಚನೆ

ಮಾರಾಟ ಮಾಡುವ ಅಧಿಕಾರಿಗಳೇ ಮಾರಾಟದಲ್ಲಿ ಬೇಡಿದರೆ, ಇಲ್ಲವೆ ಪರೋಕ್ಷವಾಗಿ ಬೇಡಿಸಿದರೆ, ಅಲ್ಲಿ ಬೇಡಿದವನ ಲಾಭವಾಗುವುದೇ ಹೊರತು

ಪಂಚಾಯುತದ ಇಲ್ಲದೆ ಬೋರ್ಡಿನ ಲಾಭ ಆಗುವುದಿಲ್ಲ. ಹಾಗೆ ನೋಡಿದರೆ, ಪಂಚಾಯುತದ ಇಲ್ಲದೆ ಬೋರ್ಡಿನ ಪ್ರತ್ಯಕ್ಷ ಹಾನಿಯಾಗುವುದು. ಸಂಬಂಧಪಟ್ಟ ಅಧಿಕಾರಿಗಳು ಸಂಸ್ಥೆಯ ಹಾನಿಯಲ್ಲಿ ಭಾಗ ವಹಿಸಿದಂತಾಗುವುದು. ಅದ್ದರಿಂದ ಅದಕ್ಕೆ ನಿರ್ಬಂಧ.. ನಿರ್ಬಂಧ ಮುರಿದರೆ ಅದು ಅಪರಾಧ. ಅದಕ್ಕೆ ೫೦೦/- ರೂಪಾಯಿ ವರೆಗೆ ದಂಡ; ಅಲ್ಲದೆ, ನೌಕರಿಯಿಂದ ಕಡಿಮೆ ಮಾಡಲ್ಪಡುವ ಪ್ರಸಂಗವೂ ಇದೆ.

## ಪ್ರಕರಣ : ೧೪ : ಇತರ

### ೨೨೧. ಮೈಸೂರ ಸ್ಥಾನಿಕ ಸರಕಾರದ ಸೇವೆ

(೧) ಆ ಕಾಲಕ್ಕೆ ಜಾರಿಯಲ್ಲಿದ್ದ ಯಾವುದೇ ಕಾಯಿದೆಯಲ್ಲಿ ಏನೇ ಹೇಳಲಾಗಿದ್ದರೂ ಸರಕಾರದಿಂದ ನಿರ್ದಿಷ್ಟಪಡಿಸಬಹುದಾದ ಯಾವುದೇ ಸ್ಥಾನಿಕ ಅಧಿಕಾರದ ಅಧೀನವಾಗಿರುವ ಹುದ್ದೆಗಳು ಮೈಸೂರ ಸ್ಥಾನಿಕ ಸರಕಾರದ ಸೇವೆಯಲ್ಲಿರುವ ಅಧಿಕಾರಿಗಳ ನೇಮಕದಿಂದ ಭರತಿ ಮಾಡಲ್ಪಡತಕ್ಕದ್ದು.

(೨) ಬೋರ್ಡಿನ ನೌಕರಿಯಲ್ಲಿರುವಾಗ ಮೇಲೆ ಹೇಳಿದ ಸೇವೆಯಲ್ಲಿರುವ ಅಧಿಕಾರಿಯು ವಿರುದ್ಧ ಯಾವುದೇ ಗೈರ ವರ್ತನೆಯು ಸಂಬಂಧವಾಗಿ ಅವಶ್ಯಕವಾಗಬಹುದಾದ ಶಿಸ್ತಿನ ಕ್ರಮವನ್ನು ತೆಗೆದುಕೊಳ್ಳುವುದರ ಬಗ್ಗೆ ತಾಲೂಕ ಬೋರ್ಡು, ತನಗೆ ಅವಶ್ಯಕವೆಂದು ಕಂಡರೆ, ಬೋರ್ಡಿನ ಒಟ್ಟು ಸದಸ್ಯರ ಸಂಖ್ಯೆಯಲ್ಲಿಯ ಎರಡು ಮೂರಾಂಶ ಸದಸ್ಯರಿಂದ ಸ್ವೀಕರಿಸಲ್ಪಟ್ಟ ಠರಾವಿನಿಂದ ಕಮಿಶನರನಿಗೆ ಶಿಫಾರಸು ಮಾಡಬಹುದು.

## ವಿವೇಚನೆ

ಇಲ್ಲಿ ಎರಡು ಮಾತುಗಳು ಇವೆ. ಸ್ಥಾನಿಕ ಅಧಿಕಾರಗಳಲ್ಲಿ ಅಧಿಕಾರಿಗಳ ಅವಶ್ಯಕತೆಯಾಗಿರುವಾಗ–ಆ ಹುದ್ದೆಗಳಿಗೆ ಮೈಸೂರ ಸ್ಥಾನಿಕ ಸರಕಾರದ ಸೇವೆಯಲ್ಲಿ ಇರುವ ಅಧಿಕಾರಿಗಳನ್ನು ನೇಮಿಸಬೇಕು. ಆ ಹುದ್ದೆಗಳು ಯಾವು ಎಂಬುದನ್ನು ಸರಕಾರವು ನಿರ್ದಿಷ್ಟಪಡಿಸುವುದು.

ಇನ್ನೊಂದು, ಇಂತಹ ಸೇವಕನ ನೇಮಕವಾದ ನಂತರ, ಅವನು ಬೋರ್ಡಿನ ನೌಕರಿಯಲ್ಲಿರುವಾಗ ಅವನ ಗೈರ ವರ್ತನೆಯು ಕಂಡು ಬಂದರೆ, ಅವನ ವಿರುದ್ಧ ಶಿಸ್ತಿನ ಕ್ರಮ ತೆಗೆದುಕೊಳ್ಳಲು ಬೋರ್ಡಿಗೆ ಅಧಿಕಾರವಿಲ್ಲ. ಕಮಿಶನರನು ಕ್ರಮ ತೆಗೆದುಕೊಳ್ಳಬೇಕೆಂದು ಶಿಫಾರಸು ಮಾಡುವ ಅಧಿಕಾರ ಮಾತ್ರ ಬೋರ್ಡಿಗೆ ಅದೆ. ಅದು ಈ ಶಿಫಾರಸು ಮಾಡುವಾಗ ತನ್ನಲ್ಲಿ ಒಂದು ಠರಾವು ಪಾಸು ಮಾಡಿರಬೇಕು. ಅದಕ್ಕೆ ಒಟ್ಟು ಸದಸ್ಯ ಸಂಖ್ಯೆಯ ೨/೩ ಸದಸ್ಯರು ಮತ ಹಾಕಿರಬೇಕು.

## ೨೨೨. ಸಾರ್ವಜನಿಕ ಕಾಮಗಿರಿಗಳ ನಿರ್ವಹಣೆ

ಪಂಚಾಯತದಿಂದ ಇಲ್ಲವೆ ತಾಲೂಕ ಬೋರ್ಡದಿಂದ ನಿರ್ವಹಿಸಲ್ಪಡಬೇಕಾದ ಎಲ್ಲ ಸಾರ್ವಜನಿಕ ಕಾಮಗಿರಿಗಳು ಸಂಬಂಧಪಟ್ಟ ಪಂಚಾಯತದಿಂದ ಇಲ್ಲವೆ ತಾಲೂಕ ಬೋರ್ಡದಿಂದ ಕಾರ್ಯಕಾರಿ ಮಾಡಲ್ಪಡತಕ್ಕದ್ದು.

ಆದರೆ, ಪಂಚಾಯತವು ಇಲ್ಲವೆ ತಾಲೂಕ ಬೋರ್ಡು ಹಾಗೆ ವಿನಂತಿ ಮಾಡಿಕೊಂಡಾಗ ಸರಕಾರದ ಸಾರ್ವಜನಿಕ ಕಾಮಗಿರಿ ಖಾತೆಯಿಂದ ಅಂತಹ ಯಾವುದೇ ಕಾಮಗಿರಿಯು ಪೂರ್ತಿ ಮಾಡಲ್ಪಡತಕ್ಕದ್ದು. ಮತ್ತು ಇಂತಹ ಕಾಮಗಿರಿಯ ವೆಚ್ಚವು ಸಂಬಂಧಪಟ್ಟ ಪಂಚಾಯತ ಇಲ್ಲವೆ ತಾಲೂಕ ಬೋರ್ಡದಿಂದ ಗೊತ್ತು ಮಾಡಲ್ಪಡಬಹುದಾದ ರೀತಿಯಲ್ಲಿ ಕೊಡಲ್ಪಡತಕ್ಕದ್ದು.

### ವಿವೇಚನೆ

ಪಂಚಾಯತವಾಗಲೀ ತಾಲೂಕ ಬೋರ್ಡವಾಗಲೀ ಇರುವುದು ಸಾರ್ವಜನಿಕ ಹಿತಕ್ಕಾಗಿ; ಸಾರ್ವಜನಿಕ ಕಾಮಗಿರಿಗಳನ್ನು ಅವು ತಾವೇ ಮಾಡತಕ್ಕದ್ದು. ಆದರೆ, ಒಂದು ವೇಳೆ, ಗಾತ್ರದಿಂದ ಇಲ್ಲವೆ ಗುಣದಿಂದ ದೊಡ್ಡ ಪ್ರಮಾಣದ ಕಾಮಗಿರಿಯಾಗಿ ಅದು ಸರಕಾರದ ಸಾರ್ವಜನಿಕ ಕಾಮಗಿರಿ ಖಾತೆಯವರು ಮಾಡಬೇಕೆಂದು ಬಯಸಿದರೆ ಅವರಿಗೆ ಒಪ್ಪಿಸಿ ಕೊಡಲು ಈ ಕಲಮು ಅಧಿಕಾರ ಕೊಡುತ್ತದೆ. ಹಾಗೆ ಒಪ್ಪಿಸಿಕೊಟ್ಟ ಕೆಲಸದ ವೆಚ್ಚವನ್ನು ಸಂಬಂಧಪಟ್ಟ ಪಂಚಾಯತ ಇಲ್ಲವೆ ತಾಲೂಕ ಬೋರ್ಡ ಕೊಡತಕ್ಕದ್ದು.

## ೨೨೩. ಸ್ಥಾನಿಕ ಸರಕಾರದ ಸಿಬ್ಬಂದಿ ನಿಧಿ

(೧) ಮೈಸೂರ ಸ್ಥಾನಿಕ ಸರಕಾರದ ಸೇವೆಯ ಅಧಿಕಾರಿಗಳಿಗೆ ಸಲ್ಲುವ ಸಂಬಳಗಳು, ಭತ್ತೆಗಳು, ಪೆನಶನುಗಳು, ಪ್ರಾವ್ಹಿಡೆಂಟ ಫಂಡು, ಗ್ರಾಚುಟಿ, ಮತ್ತು ಇತರ ವೆಚ್ಚಗಳ ಸಂಬಂಧವಾಗಿರುವ ಖರ್ಚನ್ನು ಎದುರಿಸುವುದಕ್ಕಾಗಿ ಸ್ಥಾನಿಕ ಸರಕಾರದ ಸಿಬ್ಬಂದಿ ನಿಧಿಯೆಂದು ಸರಕಾರದಿಂದ ರಚಿತವಾಗತಕ್ಕದ್ದು.

(೨) ಯಾವುದೇ ಕಾಯಿದೆಯಲ್ಲಿ ಏನೇ ಹೇಳಲಾಗಿದ್ದರೂ ಸರಕಾರವು ಹುಕುಮಿನಿಂದ ನಿರ್ಧರಿಸಬಹುದಾದಂತಹ ಕಾಲಕ್ಕೆ ಮತ್ತು ಅಂತಹ ರೀತಿಯಲ್ಲಿ ಪ್ರತಿಯೊಂದು ಸ್ಥಾನಿಕ ಅಧಿಕಾರವು ತನ್ನ ಆದಾಯದಲ್ಲಿಯ ಅಂತಹ ಪ್ರತಿಶತ ವಂತಿಗೆಯನ್ನು ಸ್ಥಾನಿಕ ಸರಕಾರದ ಸಿಬ್ಬಂದಿ ನಿಧಿಗೆ ಕೊಡಕ್ಕದ್ದು.

(೩) ಉಪಕಲಮು (೨) ರನ್ವಯವಾಗಿ ಕೊಡಬೇಕಾಗಿದ್ದ ಹಣವನ್ನು ಆ ಸ್ಥಾನಿಕ ಅಧಿಕಾರವು ಕೊಡಲು ತಪ್ಪಿದರೆ, ಕಮಿಶನರನು ಇಲ್ಲವೆ ಡೆ. ಕಮಿಶನರನು ಆ ಸ್ಥಾನಿಕ ಅಧಿಕಾರದ ನಿಧಿಯನ್ನು ಸ್ವಾಧೀನದಲ್ಲಿಟ್ಟುಕೊಂಡವನಿಗೆ ಅಂತಹ ಹಣವನ್ನು ಇಲ್ಲವೆ ತನ್ನ ಕೈಯಲ್ಲಿಯ ಆ ನಿಧಿಯೊಳಗಿನ ಶಿಲ್ಕಿನಿಂದ ಶಕ್ಯವಾದಷ್ಟು ಕೊಡಲು ನಿರ್ದೇಶಿಸಬಹುದು.

## ವಿವೇಚನೆ

ಸ್ಥಾನಿಕ ಸರಕಾರದ ಸೇವೆಯ ಅಧಿಕಾರಿಗಳು ಸ್ಥಾನಿಕ ಅಧಿಕಾರದ ಕೆಳಗೆ ಸೇವೆ ಸಲ್ಲಿಸುವುದರಿಂದ ಅವರ ಸಂಬಳ ಭತ್ತೆ ಪೆನ್ಶನು ಪ್ರಾವಿಡೆಂಟ ಫಂಡು ಗ್ರಾಚುಟಿ ಮುಂತಾದವುಗಳನ್ನು ಕೊಡಲಿಕ್ಕೆ ಒಂದು ನಿಧಿಯನ್ನು ರಚಿಸುವುದು ಸರಕಾರದ ಕೆಲಸ. ಸರಕಾರವು ಅದನ್ನು ರಚಿಸತಕ್ಕದ್ದು. ಅದಕ್ಕೆ ಸ್ಥಾನಿಕ ಅಧಿಕಾರಗಳು ತಮ್ಮ ಆದಾಯದಲ್ಲಿಯ ಇಷ್ಟು ಪ್ರತಿಶತ ವಂತಿಗೆ ಎಂದು ಸರಕಾರವು ನಿರ್ಧರಿಸಿದ್ದನ್ನು ಆ ಕಾಲಕ್ಕೆ ಆ ರೀತಿಯಲ್ಲಿ ಕೊಡಬೇಕು, ಕೊಡಲಿಕ್ಕೆ ತಪ್ಪಿದರೆ, ಡೆ ಕಮಿಶನರು, ಇಲ್ಲವೆ ಕಮಿಶನರನು ಆ ಸ್ಥಾನಿಕ ಅಧಿಕಾರದ ನಿಧಿಯನ್ನು ಸ್ವಾಧೀನದಲ್ಲಿಟ್ಟುಕೊಂಡವನು ಆ ಹಣವನ್ನು ಕೊಡಬೇಕೆಂದು ಆದೇಶ ಕೊಡುವನು. ಆ ಹಣವನ್ನು ಪೂರ್ತಿಯಾಗಿ ಇಲ್ಲವೆ ನಿಧಿಯ ಶಿಲ್ಕು ಕೈಯಲ್ಲಿ ಎಷ್ಟು ಇರುವುದೋ ಅಷ್ಟನ್ನು ಅವನುಕೊಡತಕ್ಕದ್ದು.

## ೨೨೪. ಭೂಮಿಯನ್ನು ಪಡೆಯುವುದು

ಈ ಕಾಯಿದೆಯ ಉದ್ದೇಶಕ್ಕಾಗಿ ಯಾವುವೇ ಭೂಮಿಯು ಬೇಕಾಗಿರುವಾಗ ಪಂಚಾಯತ ಇಲ್ಲವೆ ತಾಲೂಕ ಬೋರ್ಡದ ವಿನಂತಿಯ ಮೇರೆಗೆ ಸರಕಾರವು ಲ್ಯಾಂಡ ಅಕ್ವಿಜಿಶನ್ ಆ್ಯಕ್ಟದನ್ವಯವಾಗಿ ಭೂಮಿಯನ್ನು ಪಡೆಯುವುದರ ಸಲುವಾಗಿ ಪ್ರವೃತ್ತವಾಗಬಹುದು. ಮತ್ತು ಆ ಕಾಯಿದೆಯ ಪ್ರಕಾರ ಕೊಡಬೇಕೆಂದು ಹೇಳಿದ ಪರಿಹಾರ ಧನವನ್ನು ಮತ್ತು ಆ ಪ್ರಕರಣಗಳ ಬಗ್ಗೆ ಸರಕಾರದಿಂದ ಮಾಡಲ್ಪಟ್ಟ ವೆಚ್ಚವನ್ನು ಪಂಚಾಯತ ಇಲ್ಲವೆ ತಾಲೂಕ ಬೋರ್ಡು ಕೊಟ್ಟ ಮೇಲೆ ಸಂದರ್ಭಾನುಸಾರವಾಗಿ ಆ ಭೂಮಿಯು ಪಂಚಾಯತದ ಇಲ್ಲವೆ ತಾಲೂಕ ಬೋರ್ಡದ ಅಂತರ್ಗತವಾಗತಕ್ಕದ್ದು.

## ವಿವೇಚನೆ

ಈ ಕಾಯಿದೆಯ ಕಾರ್ಯಕ್ಕಾಗಿ ಪಂಚಾಯತಕ್ಕೆ ಇಲ್ಲವೆ ಬೋರ್ಡಿಗೆ ಯಾವುದೊಂದು ಭೂಮಿಯು ಬೇಕಾದರೆ ಅದು ಸರಕಾರಕ್ಕೆ ವಿನಂತಿ ಮಾಡಿಕೊಳ್ಳಬೇಕು. ಸರಕಾರವು ಭೂಮಿ ಪಡೆವ ಪ್ರಕರಣವನ್ನು ನಡೆಸುತ್ತದೆ. ಆ ಸಂಬಂಧದಲ್ಲಿ ಆ ಭೂಮಿ ಪಡೆವ ಕಾಯಿದೆಯ ಪ್ರಕಾರ ಕೊಡಬೇಕಾದ ಪರಿಹಾರ ಧನವನ್ನು ಮತ್ತೆ ಸರಕಾರವು ಮಾಡಿದ ಆ ಪ್ರಕರಣದಲ್ಲಿಯ ವೆಚ್ಚವನ್ನು ಆ ಪಂಚಾಯತ ಇಲ್ಲವೆ ಬೋರ್ಡು ಕೊಡತಕ್ಕದ್ದು. ಅಂದಾಗ ಅದು ಬೇಡಿದ ಭೂಮಿಯು ಅದಕ್ಕೆ ದೊರೆಯುವುದು. ಭೂಮಿಯನ್ನು ಪಡೆವಾಗಲೆಲ್ಲ ಈ ವಿಧಾನವನ್ನು ಅನುಸರಿಸಲೇಬೇಕು.

## ೨೨೫. ತಾಲೂಕ ಬೋರ್ಡು ಮತ್ತು ಪಂಚಾಯತಗಳ ಸದಸ್ಯರಿಗೆ ಮತ್ತು ಅವುಗಳ ಅಧಿಕಾರಿಗಳಿಗೆ ಮತ್ತು ಸೇವಕರಿಗೆ "ಸಾರ್ವಜನಿಕ ಸೇವಕ" ಎಂಬ ಪದ ಅನ್ವಯಿಸುವುದು

ಪಂಚಾಯತದ, ಇಲ್ಲವೆ ತಾಲೂಕ ಬೋರ್ಡದ ಇಲ್ಲವೆ ಪಟ್ಟಣ ಪ್ರದೇಶ ಕಮಿಟಿಯ ಪ್ರತಿಯೊಬ್ಬ ಸದಸ್ಯನು ಮತ್ತು ಪಂಚಾಯತದ, ತಾಲೂಕ ಬೋರ್ಡದ ಇಲ್ಲವೆ ಪಟ್ಟಣ ಪ್ರಾದೇಶ ಕಮೀಟಿಯ ಅಧೀನವಾಗಿ ನೌಕರಿ ಮಾಡುವ ಪ್ರತಿಯೊಬ್ಬ ಅಧಿಕಾರಿ ಮತ್ತು ಸೇವಕನು ಇಂಡಿಯನ್ ಪೀನಲ ಕೋಡದ ಕಲಮು ೨೧ರ ಅರ್ಥ ದಲ್ಲಿ ಮತ್ತು ಆ ಕಾಲಕ್ಕೆ ಜಾರಿಯಲ್ಲಿರುವ ೧೯೪೭(೧೯೪೭ರ ಕೇಂದ್ರ ಕಾಯಿದೆ ii)ರ ಲಂಚ ನಿರ್ಬಂಧದ ಕಾಯಿದೆಯ ಅರ್ಥದಲ್ಲಿ ಸಾರ್ವಜನಿಕ ಸೇವಕನೆಂದು ಗಣಿಸಲ್ಪ ಡತಕ್ಕದ್ದು.

### ವಿವೇಚನೆ

"ಸಾರ್ವಜನಿಕ ಸೇವಕ" ಎಂದು ಕಾಯಿದೆಯಲ್ಲಿ ಪ್ರಯೋಗವಾದರೆ ಆ ವ್ಯಕ್ತಿಗೆ ಕೆಲವೊಂದು ಹಕ್ಕು ಹಾಗೂ ಹೊಣೆಗಾರಿಕೆಗಳು ಬರುವುವು. ಆದ್ದರಿಂದ ಈ ವ್ಯವಸ್ಥೆ ಮಾಡಲಾಗಿದೆ.

## ೨೨೬. ದಂಡಗಳನ್ನು ಪಂಚಾಯತ ಮತ್ತು ತಾಲೂಕ ಬೋರ್ಡ ನಿಧಿಗಳಿಗೆ ಜಮಾ ಮಾಡತಕ್ಕದ್ದು

(೧) ಪಂಚಾಯತದಿಂದ ಇಲ್ಲವೆ ಅದರ ಪರವಾಗಿ ಯಾವುದೇ ಖಟ್ಲೆಯಲ್ಲಿ ಈ ಕಾಯಿದೆಯನ್ವಯವಾಗಿ ಇಲ್ಲವೆ ಈ ಕಾಯಿದೆಯನ್ವಯವಾಗಿರುವ ಯಾವುವೇ ನಿಯಮ ಇಲ್ಲವೆ ಪೋಟನಿಯಮದನ್ವಯವಾಗಿರುವ ಯಾವುದೇ ಅಪರಾಧಕ್ಕಾಗಿ ಮ್ಯಾಜಿಸ್ಟ್ರೇಟನಿಂದ ಹಾಕಲ್ಪಟ್ಟ ಎಲ್ಲ ದಂಡಗಳು ಇಂತಹ ಪಂಚಾಯತದ ಪಂಚಾಯತ ನಿಧಿಗೆ ಜಮಾ ಮಾಡತಕ್ಕದ್ದು.

(೨) ತಾಲೂಕ ಬೋರ್ಡದಿಂದ ಇಲ್ಲವೆ ಅದರ ಪರವಾಗಿ ಯಾವುದೇ ಖಟ್ಲೆ ಯಲ್ಲಿ ಈ ಕಾಯಿದೆಯನ್ವಯವಾಗಿ ಇಲ್ಲವೆ ಈ ಕಾಯಿದೆಯನ್ವಯವಾಗಿರುವ ಯಾವುದೇ ನಿಯಮ ಇಲ್ಲವೆ ಕ್ರಮನಿಯಮದನ್ವಯವಾಗಿರುವ ಯಾವುದೇ ಅಪ ರಾಧಕ್ಕಾಗಿ ಮ್ಯಾಜಿಸ್ಟ್ರೇಟನಿಂದ ಹಾಕಲ್ಪಟ್ಟ ಎಲ್ಲ ದಂಡಗಳು ಇಂತಹ ತಾಲೂಕ ಬೋರ್ಡದ ತಾಲೂಕ ಬೋರ್ಡ ನಿಧಿಗೆ ಜಮಾ ಮಾಡಲ್ಪಡತಕ್ಕದ್ದು.

### ವಿವೇಚನೆ

ಈ ಕಾಯಿದೆ ಇಲ್ಲವೆ ಅದರನ್ವಯವಾಗಿರುವ ಅಪರಾಧಗಳಿಗಾಗಿ ಹಾಕಿದ ದಂಡವು ಆಯಾ ಸಂಸ್ಥೆಯ ನಿಧಿಗೆ ಜಮಾ ಆಗತಕ್ಕದ್ದು ಎಂದು ಹೇಳಿರುವುದರಿಂದ

ಈ ದಂಡವು ಪಂಚಾಯತ ಇಲ್ಲವೆ ತಾಲೂಕ ಬೋರ್ಡಿನ ನಿಧಿಗೆ ಜಮಾ ಮಾಡಲ್ಪಡುವ ಆದಾಯವಾದಂತೆ. ಈ ಕಲಮು ಇಲ್ಲದಿದ್ದರೆ ದಂಡವು ಸರಕಾರದ ಸೊತ್ತಾಗುತ್ತಿತ್ತು. ಪಂಚಾಯತ ನಡಸಿದ ಪ್ರಕರಣದಲ್ಲಿಯ ದಂಡ ಪಂಚಾಯತ ನಿಧಿಗೆ ತಾಲೂಕ ಬೋರ್ಡ ನಡಸಿದ ಪ್ರಕರಣದಲ್ಲಿಯ ದಂಡ ಬೋರ್ಡಿನ ನಿಧಿಗೆ ಎಂದು ಸ್ಪಷ್ಟವಾಗಿ ಹೇಳಿದೆ.

## ೨೨೭. ಡಿಸ್ಟ್ರಿಕ್ಟ ಬೋರ್ಡುಗಳಿಂದ ಮತ್ತು ಪಂಚಾಯತಗಳಿಂದ ಸಂಚಾಲಿತವಾದ ಸಂಸ್ಥೆಗಳನ್ನು ವಶಪಡಿಸಿಕೊಳ್ಳುವುದು

ಈ ಕಾಯಿದೆಯು ಪ್ರಾರಂಭವಾಗುವುದಕ್ಕಿಂತ ತತ್‌ಕ್ಷಣ ಮುಂಚೆ ಪ್ರಾಥಮಿಕ ಇಲ್ಲವೆ ಮಾಧ್ಯಮಿಕ ಶಿಕ್ಷಣವನ್ನು ಕೊಡುವ ಯಾವುದೇ ಸಂಸ್ಥೆಯನ್ನು ಡಿಸ್ಟ್ರಿಕ್ಟ ಬೋರ್ಡ ಇಲ್ಲವೆ ಪಂಚಾಯತವು ಸಂಚಾಲನ ಮಾಡುತ್ತಿದ್ದರೆ, ಇಂತಹ ಸಂಚಾಲನವನ್ನು ಮತ್ತು ಇಂತಹ ಸಂಸ್ಥೆಯ ಸಾಲ-ಸೊತ್ತುಗಳನ್ನು ಸ್ಕೂಲಬೋರ್ಡ ಇಲ್ಲವೆ ಸರಕಾರಕ್ಕೆ ಯೋಗ್ಯವೆನ್ನಿಸುವ ಬೇರೆ ಅಧಿಕಾರಕ್ಕೆ ವಹಿಸಿಕೊಡುವುದಕ್ಕೆ ಸರಕಾರವು ಸಮರ್ಥವಾಗಿರುವುದು.

### ವಿವೇಚನೆ

ಈ ಕಾಯಿದೆಯು ಪ್ರಾರಂಭವಾಗುವುದಕ್ಕಿಂತ ಮೊದಲು ಡಿಸ್ಟ್ರಿಕ್ಟಬೋರ್ಡ ಮತ್ತು ಪಂಚಾಯತಗಳು ಇರುವುವು. ಅವು ಬೇರೆ ಕಾಯಿದೆಯ ಮೂಲಕವಾಗಿ ಇರುವುವು. ಅವುಗಳ ಆಡಳಿತದಲ್ಲಿ ಪ್ರಾಥಮಿಕ ಇಲ್ಲವೆ ಮಾಧ್ಯಮಿಕ ಶಿಕ್ಷಣದ ಸಂಸ್ಥೆಗಳು ಇದ್ದರೆ ಈ ಕಾಯಿದೆ ಬಂದ ಮೇಲೆ ಆ ಬೋರ್ಡು, ಪಂಚಾಯತಗಳು ಇಲ್ಲದಾಗುವುವು. ಆದ್ದರಿಂದ ಅಂತಹ ಸಂಸ್ಥೆಗಳ ಸಂಚಾಲನವನ್ನು ಬೇರೆಯವರ ಆಡಳಿತಕ್ಕೆ ಕೊಡಬೇಕಾಗುವುದು. ಆ ಸಂಸ್ಥೆಗಳ ಸಾಲ-ಸೊತ್ತುಗಳ ಸಹಿತವಾಗಿ ಒಪ್ಪಿಸಿಕೊಡುವ ಅಧಿಕಾರ ಸರಕಾರಕ್ಕೆ ಈ ಕಲಮಿನ ಮೂಲಕ ಬರುವುದು.

## ೨೨೮. ತಾಲೂಕ ಬೋರ್ಡದ ಇಲ್ಲವೆ ಪಂಚಾಯತದ ಆಸ್ತಿಗೆ ಆದ ಹಾನಿಯನ್ನು ಹೇಗೆ ಸರಿಪಡಿಸುವುದು

ಯಾವ ಅಲಕ್ಷ್ಯ ಇಲ್ಲವೆ ಅಕಾರ್ಯದ ಮೂಲಕ ಯಾವುದೇ ಕಾರ್ಯದ ಮುಖಾಂತರ ಯಾವುದೇ ವ್ಯಕ್ತಿಯು ಈ ಕಾಯಿದೆಯಿಂದ ಇಲ್ಲವೆ ಈ ಕಾಯಿದೆಯನ್ವಯವಾಗಿ ದಂಡನೆಯನ್ನು ಪಡೆದಿದ್ದರೆ, ಮತ್ತು ಇಂತಹ ವ್ಯಕ್ತಿಯಿಂದ ಯಾವುದೇ ಪಂಚಾಯತದ ಇಲ್ಲವೆ ತಾಲೂಕ ಬೋರ್ಡದ ಆಸ್ತಿಗೆ ಯಾವುದೇ ಹಾನಿಯು ಉಂಟಾಗಿದ್ದರೆ, ಅವನು ಆ ಹಾನಿಯನ್ನು ತುಂಬಿಕೊಡಲು ಮತ್ತು ಅಂತಹ ದಂಡವನ್ನು ಕೊಡಲು ಪಾತ್ರನಾಗತಕ್ಕದ್ದು. ಮತ್ತು ಹಾನಿಯ ಬೆಲೆಯ ಬಗ್ಗೆ ತಂಟೆಯುಂಟಾದ ಸಂದರ್ಭದಲ್ಲಿ, ಯಾವ ಮ್ಯಾಜಿಸ್ಟ್ರೇಟನಿಂದ ಆ ವ್ಯಕ್ತಿಯು

ದಂಡದ ಶಿಕ್ಷೆಗೆ ಒಳಗಾಗಿರುವನೋ ಆ ಮ್ಯಾಜಿಸ್ಟ್ರೇಟನಿಂದ ನಿರ್ಧರಿಸಲ್ಪಡತಕ್ಕದ್ದು ಮತ್ತು ಇಂತಹ ಬೆಲೆಯು ಬೇಡಿದಾಗ ಕೊಡಲ್ಪಡದಿದ್ದರೆ, ಅದನ್ನು ಜಪ್ತಿಯಿಂದ ಪಡೆಯತಕ್ಕದ್ದು ಮತ್ತು ಅಂತಹ ಮ್ಯಾಜಿಸ್ಟ್ರೇಟನು ಅದಕ್ಕಾಗಿ ವಾರಂಟನ್ನು

**ವಿವೇಚನೆ**

ಒಂದು ವ್ಯಕ್ತಿಯ ಅಲಕ್ಷ್ಯ ಇಲ್ಲವೆ ಅಕಾರ್ಯದ ಮೂಲಕ ಪಂಚಾಯತದ ಇಲ್ಲವೆ ತಾಲೂಕ ಬೋರ್ಡದ ಆಸ್ತಿಗೆ ಹಾನಿಯಾಗಿರಬೇಕು. ಇದಕ್ಕಾಗಿ ಆ ವ್ಯಕ್ತಿಗೆ ಮ್ಯಾಜಿಸ್ಟ್ರೇಟನಿಂದ ದಂಡವಾಗಿರಬೇಕು. ಆಗ ಆ ವ್ಯಕ್ತಿಯು ಹಾನಿಯಾದ ಆಸ್ತಿಯ ಬೆಲೆಯನ್ನು ತುಂಬಿಕೊಡಲು ಪಾತ್ರನಾಗುತ್ತಾನೆ. ಆಸ್ತಿಯ ಬೆಲೆಯು ಎಷ್ಟು ಎಂಬುದನ್ನು ಅವನಿಗೆ ದಂಡ ಹಾಕಿದ ಮ್ಯಾಜಿಸ್ಟ್ರೇಟನೇ ನಿರ್ಧರಿಸತಕ್ಕದ್ದು. ನಂತರ ಆ ಬೆಲೆಯನ್ನು ಬೇಡಿದಾಗ ಅವನು ಕೊಡದಿದ್ದರೆ ಅವನ ಆಸ್ತಿಯು ಜಪ್ತ ಮಾಡಿಸತಕ್ಕದ್ದು. ಅದಕ್ಕಾಗಿ ಮ್ಯಾಜಿಸ್ಟ್ರೇಟನು ವಾರಂಟು ತೆಗೆಯತಕ್ಕದ್ದು.

**೨೨೯. ಪಂಚಾಯತಗಳ ಮತ್ತು ತಾಲೂಕ ಬೋರ್ಡುಗಳ ವಿರುದ್ಧ ದಾವೆ ಮಾಡುವುದರ ಸಂಬಂಧವಾಗಿ ನಿರ್ಬಂಧಗಳು**

(೧) ಪಂಚಾಯತದ ವಿರುದ್ಧ ಇಲ್ಲವೆ ತಾಲೂಕ ಬೋರ್ಡದ ವಿರುದ್ಧ ಇಲ್ಲವೆ ಅದರ ಯಾವುದೇ ಅಧಿಕಾರಿಗಳ ವಿರುದ್ಧ ಇಲ್ಲವೆ ಅದರ ನಿರ್ದೇಶನದ ಮೂಲಕ ಕಾರ್ಯ ಮಾಡುತ್ತಿರುವ ಯಾವುದೇ ವ್ಯಕ್ತಿಯ ವಿರುದ್ಧ ಈ ಕಾಯಿದೆಯ ಇಲ್ಲವೆ ಈ ಕಾಯಿದೆಯನ್ವಯವಾಗಿ ಮಾಡಿದ ಯಾವುದೇ ನಿಯಮದ, ಪೋಟನಿಯಮದ, ಕ್ರಮನಿಯಮದ ಇಲ್ಲವೆ ಹುಕುಮಿನ ಅನ್ವಯವಾಗಿ ಮಾಡಿದ ಇಲ್ಲವೆ ಮಾಡಿದೆಯೆಂದು ಹೇಳಲಾದ ಯಾವುದೇ ಕಾರ್ಯಕ್ಕಾಗಿ ಲಿಖಿತವಾಗಿ ನೋಟೀಸನ್ನು ಪಂಚಾಯತದ ಕಚೇರಿಯಲ್ಲಿ ಇಲ್ಲವೆ ತಾಲೂಕ ಬೋರ್ಡದ ಕಚೇರಿಯಲ್ಲಿ ಕೊಟ್ಟ ಇಲ್ಲವೆ ಇಟ್ಟ ಇಲ್ಲವೆ ಇಂತಹ ಅಧಿಕಾರಿಯ ಇಲ್ಲವೆ ವ್ಯಕ್ತಿಯ ವಾಸಸ್ಥಳದಲ್ಲಿ ಕೊಟ್ಟ ಇಲ್ಲವೆ ಇಟ್ಟ ನಂತರದ ಎರಡು ತಿಂಗಳು ಪೂರ್ತಿಯಾಗುವ ತನಕ ಲುಕಸಾನ ಭರಪಾಯಿಗಾಗಿ ಇಲ್ಲವೆ ಪರಿಹಾರ ಧನಕ್ಕಾಗಿ ಯಾವುದೇ ದಾವೆಯನ್ನು ಮಾಡತಕ್ಕದ್ದಲ್ಲ; ಇಂತಹ ನೋಟೀಸು ದಾವಾದ ಕಾರಣವನ್ನು ಬೇಡಿದ ಪರಿಹಾರವನ್ನು, ಪರಿಹಾರ ಧನವನ್ನು ಬೇಡಿದ್ದರೆ, ಅದನ್ನು, ಮತ್ತು ವಾದಿಯಾಗಲಿಚ್ಛಿಸುವವನ ಹೆಸರು ಮತ್ತು ವಾಸಸ್ಥಳ, ಇವೆಲ್ಲವನ್ನು ಹೇಳತಕ್ಕದ್ದು.

(೨) ಅದು ಸ್ಥಾವರ ಆಸ್ತಿಯನ್ನು ಇಲ್ಲವೆ ಅದರ ಬಗ್ಗೆ ಹಕ್ಕು ಪ್ರಸ್ಥಾಪಿಸುವುದನ್ನು ಪಡೆಯುವುದಕ್ಕಾಗಿ ಇದ್ದ ಹೊರತು, ಇಂತಹ ಪ್ರತಿಯೊಂದು ದಾವೆಯು

ದಾವಾದ ಕಾರಣ ಉಂಟಾದ ನಂತರದ ಆರು ತಿಂಗಳ ಒಳಗೆ ಇಲ್ಲವೆ ಮುಂದು ವರೆವ ಅಪಾಯು ಇಲ್ಲವೆ ಲುಕಸಾನು ಇದ್ದ ಸಂದರ್ಭದಲ್ಲಿ ಅದು ಮುಂದುವರೆವ ತನಕ ಇಲ್ಲವೆ ಅದು ಮುಂದುವರೆವುದು ನಿಂತ ಮೇಲೆ ಆರು ತಿಂಗಳ ಒಳಗೆ ಪ್ರಾರಂಭಿಸಲ್ಪಡತಕ್ಕದ್ದು.

(೩) ಉಪಕಲಮು (೧) ರನ್ವಯವಾಗಿ ಯಾವುದೇ ನೋಟೀಸು ಕೊಡ ಲ್ಪಟ್ಟ ವ್ಯಕ್ತಿಯು ದಾವೆಯು ದಾಖಲ ಮಾಡಲ್ಪಡುವ ತಾರೀಖಿನಕಿಂತ ಮೊದಲು ವಾದಿಗೆ ಹಣವನ್ನು ಕೊಡಮಾಡಿದರೆ ಮತ್ತು ಹಾಗೆ ಕೊಡಮಾಡಿದ ಹಣದಕಿಂತ ಹೆಚ್ಚು ಹಣವನ್ನು ವಾದಿಯು ಅಂತಹ ಯಾವುದೇ ಆ ದಾವೆಯಲ್ಲಿ ಪಡೆಯದಿದ್ದರೆ, ಇಂತಹ ಕೊಡಮಾಡಿದ ನಂತರ ಯಾವುದೇ ವೆಚ್ಚವನ್ನು ಪಡೆದುಕೊಳ್ಳತಕ್ಕದ್ದಲ್ಲ. ಮತ್ತು ಹಣವನ್ನು ಕೊಡಮಾಡಿದ ತಾರೀಖಿನಿಂದ ಪ್ರತಿವಾದಿಯು ವೆಚ್ಚಕ್ಕೆ ಬಾಧ್ಯಸ್ಥನಾಗತಕ್ಕದ್ದು.

(೪) ಪಂಚಾಯತದ ಇಲ್ಲವೆ ತಾಲೂಕ ಬೋರ್ಡದ ಸದಸ್ಯ, ಅಧಿಕಾರಿ ಇಲ್ಲವೆ ಸೇವಕನು ಇಲ್ಲವೆ ಅದರ ನಿರ್ದೇಶನದಲ್ಲಿ ಕಾರ್ಯ ಮಾಡುತ್ತಿರುವ ಯಾವುದೇ ವ್ಯಕ್ತಿಯು ಯಾವುದೇ ದಾವೆಯಲ್ಲಿ ಪ್ರತಿವಾದಿಯಾವಾಗ ಪಂಚಾಯತ ದಿಂದ ಇಲ್ಲವೆ ತಾಲೂಕ ಬೋರ್ಡದಿಂದ ಎಮರಾಳಿತ್ವ ವಹಿಸಬೇಕೊ ಬೇಡವೊ ಎಂಬ ಬಗ್ಗೆ ಮತ್ತು ವೆಚ್ಚವನ್ನು ಅದರ ನಿಧಿಯೊಳಗಿಂದ ಕೊಡಬೇಕೆಂಬ ಬಗ್ಗೆ ಡೆಪ್ಯೂಟಿ ಕಮಿಶನರನು ನಿರ್ಧರಿಸತಕ್ಕದ್ದು.

(೫) ೧೮೭೭ ( ೧೮೭೭ ರ ಕೇಂದ್ರ ಕಾಯಿದೆ I ) ರ ಸ್ಪೆಸಿಫಿಕ್ ರಿಲೀಫ ಆ್ಯಕ್ಟದ ಕಲಮು ೫೪ ರ ಪ್ರಕಾರ ದಾಖಲಾದ ದಾವೆಗೆ ಈ ಕಲಮಿನಲ್ಲಿ ಹೇಳಿದ ಯಾವದೂ ಅನ್ವಯಿಸುತ್ತದೆಂದು ಗಣಿಸಲ್ಪಡತಕ್ಕದ್ದಲ್ಲ.

## ವಿವೇಚನೆ

ಪಂಚಾಯತ ಮತ್ತು ತಾಲೂಕ ಬೋರ್ಡದ ವಿರುದ್ಧ ದಾವೆ ಮಾಡಬೇಕಾ ದರೆ ಕೆಲವೊಂದು ಕ್ರಮ-ವಿಧಾನವನ್ನು ಅನುಸರಿಸಬೇಕಾಗುತ್ತದೆ. ಆ ಸಂಸ್ಥೆಯ ವಿರುದ್ಧ ಅಂದರೆ ಆ ಸಂಸ್ಥೆಯಲ್ಲಿ ಈ ಕಾಯಿದೆಯ ಇಲ್ಲವೆ ನಿಯಮ, ಪೋಟ- ನಿಯಮ, ಕ್ರಮನಿಯಮ; ಹುಕುಮಿನ ಪ್ರಕಾರ ಕೆಲಸಮಾಡುವ ಬೇರೆ ಅಧಿಕಾರಿ ಇಲ್ಲವೆ ವ್ಯಕ್ತಿಯು ಎಂದು ಅರ್ಥ. ಅಂದರೆ ಆ ವ್ಯಕ್ತಿಯ ವೈಯಕ್ತಿಕ ಕೆಲಸವಲ್ಲ. ಪಂಚಾಯತದ ಇಲ್ಲವೆ ತಾಲೂಕ ಬೋರ್ಡದ ಕೆಲಸ. ಸಾರ್ವಜನಿಕ ಸೇವೆಯ ಕಾರ್ಯಮಾಡುತ್ತಿರುವಾಗಿನ ಸಂದರ್ಭದಲ್ಲಿ ಅವರ ವಿರುದ್ಧ ಮಾಡಬೇಕಾದರೆ ಈ ಕ್ರಮ ಅನುಸರಿಸಬೇಕು.

ಒಂದು ನೋಟೀಸು ಕೊಡಲ್ಪಡಬೇಕು. ದಾವೆಯ ಕಾರಣ, ಬೇಡಿದ ಪರಿ ಹಾರ, ಪರಿಹಾರಧನ, ವಾದಿಯ ಹೆಸರು, ವಾಸಸ್ಥಳ, ಇವೆಲ್ಲ ಸಂಗತಿಗಳನ್ನು ಹಾಕಿ ನೋಟೀಸು ಕೊಡಬೇಕು. ಆ ನೋಟೀಸನ್ನು ಕಚೇರಿಯಲ್ಲಿ ಇಲ್ಲವೆ ಆ ವ್ಯಕ್ತಿಗೆ

ಕೊಡಬೇಕು ಇಲ್ಲವೆ ಮುಟ್ಟುವಂತೆ ಮಾಡಬೇಕು. ಅದು ಮುಟ್ಟಿದ ನಂತರ ಎರಡು ತಿಂಗಳು ಮುಗಿದ ನಂತರ ದಾವಾ ದಾಖಲ ಆಗತಕ್ಕದ್ದು.

ದಾವಾದ ಕಾರಣ ಉಂಟಾದ ಆರು ತಿಂಗಳ ಒಳಗೆ ದಾವಾ ಮಾಡಬೇಕು. ಆದರೆ ಈ ಮಾತು ಸ್ಥಾವರ ಆಸ್ತಿಯನ್ನು ಪಡೆಯಲಿಕ್ಕೆ ಇಲ್ಲವೆ ಆ ಬಗ್ಗೆ ಹಕ್ಕು ಪ್ರಸ್ತಾಪಿಸಲಿಕ್ಕೆ ದಾವಾ ಇದ್ದರೆ ಅದಕ್ಕೆ ಅನ್ವಯಿಸುವದಿಲ್ಲ. ಅಂದರೆ ಅದಕ್ಕೆ ಆರು ತಿಂಗಳ ಕಾಲಮಿತಿಯಿಲ್ಲ. ನೋಟೀಸು ಮುಟ್ಟಿದನಂತರ ಮತ್ತು ದಾವಾ ದಾಖಲ ಆಗದಕಿಂತ ಮೊದಲು ಪ್ರತಿವಾದಿಯು ಹಣವನ್ನು ಕೊಡಮಾಡಿದರೆ ಮತ್ತು ಅವನು ಕೊಡಮಾಡಿದ ಹಣದಕಿಂತ ಹೆಚ್ಚಾಗದಷ್ಟು ಮಾತ್ರ ದಾವೆಯಲ್ಲಿ ವಾದಿಗೆ ಸಿಕ್ಕರೆ, ವಾದಿಗೆ ಕೋರ್ಟ ಖರ್ಚುಪಡೆವ ಅಧಿಕಾರ ಉಳಿವುದಿಲ್ಲ; ಇಷ್ಟೇ ಅಲ್ಲ; ಪ್ರತಿವಾದಿಯು ಹಣ ಕೊಡಮಾಡಿದ ತಾರೀಖಿನಿಂದ ಅವನ ವೆಚ್ಚವನ್ನು ಕೊಡಬೇಕಾಗುವುದು. ದಾವೆಯಲ್ಲಿ ಪ್ರತಿವಾದಿಯಾಗಿ ಎದುರಿಸಬೇಕೋ ಬೇಡವೋ, ತಾಲೂಕ ಬೋರ್ಡಿನ ನಿಧಿ ಇಲ್ಲವೆ ಪಂಚಾಯತ ನಿಧಿಯೊಳಗಿಂದ ದಾವೆ ಎದುರಿಸುವ ವೆಚ್ಚವನ್ನು ಕೊಡಬೇಕೋ ಬೇಡವೊ ಎಂಬುದನ್ನು ಡೆ. ಕಮಿಶನರನು ನಿರ್ಧರಿಸಬೇಕು

ಈ ಕಲಮಿಗೆ ಒಂದು ಮಿತಿಯಿದೆ. ನಿರ್ದಿಷ್ಟ ಪರಿಹಾರ ಕಾಯಿದೆಯ ೫ಳನೆಯ ಕಲಮಿನ ಪ್ರಕಾರ ಮಾಡಲಾದ ದಾವೆಗೆ ಈ ಕಲಮು ಅನ್ವಯಿಸುವುದಿಲ್ಲ. ಆ ಕಲಮು ನಿರಂತರ ತಾಕೀದಿ ಪಡೆಯುವುದರ ಸಲುವಾಗಿ ಅನುಕೂಲಿಸಿದುದು.

**೨೩೦. ಸರಕಾರವು ಲಾಯಸೆನ್ಸು ಮತ್ತು ಪರವಾನಗಿ ಪಡೆಯಬೇಕಾಗಿಲ್ಲ.**

ಕೇಂದ್ರ ಇಲ್ಲವೆ ರಾಜ್ಯ ಸರಕಾರದ ಸ್ವಾಧೀನದಲ್ಲಿರುವ ಇಲ್ಲವೆ ನಿಯಂತ್ರಣದಲ್ಲಿರುವ ಯಾವುದೇ ಸ್ಥಳದ ಸಂಬಂಧವಾಗಿ ಇಲ್ಲವೆ ಕೇಂದ್ರ ಸರಕಾರದ ಇಲ್ಲವೆ ರಾಜ್ಯ ಸರಕಾರದ ಯಾವುದೇ ಆಸ್ತಿಯ ಸಂಬಂಧವಾಗಿ ಈ ಕಾಯಿದೆಯನ್ವಯವಾಗಿ ಇಲ್ಲವೆ ಯಾವುದೇ ಅಂತಹ ನಿಯಮ, ಪೋಟನಿಯಮ ಇಲ್ಲವೆ ಕ್ರಮನಿಯಮದನ್ವಯವಾಗಿ ಯಾವುದೇ ಲಾಯಸೆನ್ಸು ತೆಗೆಯಬೇಕೆಂಬುದಾಗಿ ಇಲ್ಲವೆ ಪರವಾನಗಿ ಪಡೆಯಬೇಕೆಂಬುದಾಗಿ, ಈ ಕಾಯಿದೆಯಲ್ಲಿಯ ಇಲ್ಲವೆ ಈ ಕಾಯಿದೆಯನ್ವಯವಾಗಿರುವ ಯಾವುದೇ ನಿಯಮದಲ್ಲಿಯ ಪೋಟ ನಿಯಮದಲ್ಲಿಯ ಇಲ್ಲವೆ ಕ್ರಮನಿಯಮದಲ್ಲಿಯ ಯಾವುದೂ ಅರ್ಥಮಾಡಲ್ಪಡತಕ್ಕದ್ದಲ್ಲ.

**ವಿವೇಚನೆ**

ಈ ಕಾಯಿದೆಯಲ್ಲಿ ಮತ್ತು ಅದರ ಪ್ರಕಾರ ಮಾಡಲಾದ ನಿಯಮ, ಪೋಟನಿಯಮ, ಕ್ರಮನಿಯಮ ಇವುಗಳಲ್ಲಿ ಹೇಳಿದ ಲಾಯಸೆನ್ಸು ಇಲ್ಲವೆ ಪರವಾನಗಿ ಸಕಾರದ ಸಂಬಂಧವಾಗಿ ಅಲ್ಲ. ಕೇಂದ್ರ ಸರಕಾರಕ್ಕಾಗಲಿ, ರಾಜ್ಯಸರಕಾರಕ್ಕಾಗಲಿ, ಈ ಕಾಯಿದೆಯನ್ವಯ ಲಾಯಸೆನ್ಸು ಇಲ್ಲವೆ ಪರವಾನಗಿ ಪಡೆವ ಕಾರಣವಿಲ್ಲ,

ಎಂದು ಈ ಕಲಮು ಹೇಳುತ್ತದೆ. ಅಂದರೆ ಸರಕಾರಗಳನ್ನು ಬಿಟ್ಟು ಉಳಿದವರು ಲಾಯಸೆನ್ಸು ಇಲ್ಲವೆ ಪರವಾನಗಿ ಪಡೆಯಬೇಕು. ಅಂತಹರ ಸಲುವಾಗಿ ಲಾಯಸೆನ್ಸು-ಪರವಾನಗಿ ಅವಶ್ಯ.

## ೨೩೧. ಚುನಾವಣೆಯ ಪ್ರಕರಣಗಳಲ್ಲಿ ತಾಕೀದಿಗಳು ಕೊಡಲ್ಪಡತಕ್ಕದ್ದಲ್ಲ

ಆ ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾಯಿದೆಯಲ್ಲಿ ಏನೇ ಹೇಳಲಾಗಿದ್ದರೂ ಯಾವುದೇ ನ್ಯಾಯಾಲಯವು ಈ ಕಾಯಿದೆಯನ್ವಯವಾಗಿರುವ ಯಾವುದೇ ಚುನಾವಣೆಯ ನಡೆವಳಿಕೆಯ ಸಲುವಾಗಿ ಈ ಕಾಯಿದೆಯನ್ವಯವಾಗಿ ಕೈಕೊಳ್ಳಲಾದ ಇಲ್ಲವೆ ಕೈಕೊಳ್ಳುವ ಸಂಭವವಿದ್ದ ಯಾವುದೇ ಪ್ರಕರಣವನ್ನು ತಡೆಗಟ್ಟುವಂತೆ ಯಾವುದೇ ತಾತ್ಪೂರ್ತಿಕ ಇಲ್ಲವೆ ಶಾಶ್ವತ ತಾಕೀದಿಯನ್ನು ದಯಪಾಲಿಸತಕ್ಕದ್ದಲ್ಲ ಇಲ್ಲವೆ ಯಾವುದೇ ಮಧ್ಯಂತರ ಹುಕುಮು ಮಾಡತಕ್ಕದ್ದಲ್ಲ.

### ವಿವೇಚನೆ

ಚುನಾವಣೆಗಳ ನಡೆವಳಿಕೆಯ ಸಂಬಂಧವಾಗಿ ನಡೆಯುವ ಪ್ರಕರಣಗಳು ನಿರಾತಂಕವಾಗಿ ನಡೆಯಬೇಕು. ಅವುಗಳಿಗೆ ಅಡ್ಡಿಯನ್ನುಂಟು ಮಾಡುವ ಹಾಗೆ ತಾತ್ಕಾಲಿಕ ಇಲ್ಲವೆ ಶಾಶ್ವತ ತಾಕೀದಿಯ ರೂಪದಲ್ಲಿ ಇಲ್ಲವೆ ಯಾವುದೇ ಹುಕುಮಿನ ರೂಪದಲ್ಲಿ ಕ್ರಮನಡೆಯಬಾರದು. ಅದಕ್ಕೆ ನ್ಯಾಯಾಲಯಗಳಿಗೆ ಈ ನಿರ್ಬಂಧವನ್ನು ಹಾಕಲಾಗಿದೆ. ನ್ಯಾಯಾಲಯಗಳ ಅಧಿಕಾರವು ಜಾರಿಯಲ್ಲಿರುವ ಬೇರೆ ಯಾವುದೇ ಕಾಯಿದೆಯ ಪ್ರಕಾರ ಏನೇ ಇದ್ದರೂ ಈ ಕಲಮು ಅಧಿಕಾರವನ್ನು ಮಿತಗೊಳಿಸುತ್ತದೆ. ಅಂದರೆ ಈ ಕಲಮು ಇಲ್ಲದಿದದ್ದರೆ, ಹಾಗೆ ತಾಕೀದಿ ಪಡೆದು ಸ್ಥಗಿತಗೊಳಿಸಲು ಬರುತ್ತಿತ್ತು. ಇದರಿಂದ ಸಾರ್ವಜನಿಕ ವ್ಯವಹಾರವು ಯಾವ ನಿರ್ಣಯವಿಲ್ಲದೆ ನಿಂತು ಬಿಡುತ್ತಿತ್ತು; ಹಾಗೆ ನಿಲ್ಲಬಾರದೆಂದೇ ಈ ಅಧಿಕಾರ ಈ ಕಲಮಿನ ಮೂಲಕ ಕೊಡಲಾಗಿದೆ.

## ೨೩೨. ದಾವೆ ಮುಂತಾದವುಗಳಿಗೆ ಆತಂಕ

(೧) ಈ ಕಾಯಿದೆಯ ಶರತುಗಳು ಸತ್ವತಃ ಮತ್ತು ಪರಿಣಾಮತಃ ಮನ್ನಿಸಲ್ಪಟ್ಟಿದ್ದರೆ, ಈ ಕಾಯಿದೆಯನ್ವಯವಾಗಿ ಮಾಡಿದ ಇಲ್ಲವೆ ಹಾಕಿದ ಕರಾಕರಣೆ, ಬೇಡಿಕೆ ಇಲ್ಲವೆ ಚಾರ್ಜದ ಬಗ್ಗೆ ತಕರಾರು ಮಾಡುವ ಇಲ್ಲವೆ ಈ ಕಾಯಿದೆಯ ಅಧಿಕಾರದನ್ವಯವಾಗಿ ವಸೂಲ ಮಾಡಲಾದ ಯಾವುದೇ ಹಣವನ್ನು ಪಡೆಯುವುದರ ಸಲುವಾಗಿ ಇಲ್ಲವೆ ಮೇಲ್ಕಾಣಿಸಿದ ಅಧಿಕಾರದನ್ವಯವಾಗಿರುವ ಯಾವುದೇ ಕರಾಕರಣೆ ಇಲ್ಲವೆ ಹಣದ ವಸೂಲಿಯ ಮೂಲಕ ಲುಕಸಾನು ಭರಪಾಯಿಗಾಗಿ ಇರುವ ದಾವೆಯನ್ನು ಯಾವುದೇ ದಿವಾಣಿ ನ್ಯಾಯಾಲಯವು ಮನ್ನಿಸತಕ್ಕದ್ದಲ್ಲ.

(೨) ಈ ಕಾಯಿದೆಯನ್ವಯವಾಗಿಇಲ್ಲವೆ ಈ ಕಾಯಿದೆಯನ್ವಯವಾಗಿ ಮಾಡಿದ ಯಾವುದೇ ನಿಯಮದ ಪೋಟ ನಿಯಮದ, ಕ್ರಮ ನಿಯಮದ ಇಲ್ಲವೆ ಹುಕುಮಿನ ಅನ್ವಯವಾಗಿ ಕಾಯಿದೇಶೀರವಾಗಿ ಮತ್ತು ಸದ್ಭಾವನೆಯಿಂದ ಯಾವುದನ್ನಾದರೂ ಮಾಡಿದುದರ ಇಲ್ಲವೆ ಮಾಡಲಾಗಿದೆ ಎಂಬುದರ ಸಂಬಂಧವಾಗಿ ಸರಕಾರದ ವಿರುದ್ಧ, ಕಮಿಶನರನ, ಡೆಪ್ಯೂಟಿ ಕಮಿಶನರನ,ಅಸಿಸ್ಟಂಟ ಕಮಿಶನರನ, ತಹಶೀಲ ದಾರನ, ಇಲ್ಲವೆ ಸರಕಾರದ ಯಾವುದೇ ಅಧಿಕಾರಿಯ ವಿರುದ್ಧ ಇಲ್ಲವೆ ಪಂಚಾಯತ ಇಲ್ಲವೆ ತಾಲೂಕ ಬೋರ್ಡದ ವಿರುದ್ದ ಇಲ್ಲವೆ ಇಂತಹ ಪಂಚಾಯತ ಇಲ್ಲವೆ ತಾಲೂಕ ಬೋರ್ಡದ ನಿರ್ದೇಶನದಲ್ಲಿ ಕಾರ್ಯ ಮಾಡುತ್ತಿದ್ದ ಯಾವುದೇ ಸದಸ್ಯ, ಅಧಿಕಾರಿ, ಸೇವಕ ಇಲ್ಲವೆ ಏಜೆಂಟನ ವಿರುದ್ಧ ಯಾವ ದಾವೆ ಇಲ್ಲವೆ ಇತರ ಕಾಯಿದೇಶೀರ ಪ್ರಕರಣಗಳು ಉಂಟಾಗತಕ್ಕದ್ದಲ್ಲ.

**ವಿವೇಚನೆ**

ಕರ ಆಕರಣೆ ಮಾಡಿದ್ದಕ್ಕೆ, ಹಾಕಿದ ಕರ ವಸೂಲಿ ಮಾಡಿದ್ದಕ್ಕೆ ತಕರಾರು ಮಾಡುವಂತಹ ದಾವೆಗಳಿದ್ದರೆ, ಇಲ್ಲವೆ ವಸೂಲಿ ಮಾಡಿದ್ದರ ಮಾಲಕ ಆದ ಲುಕಸಾನು ಭರಪಾಯಿ ಸಲುವಾಗಿ ದಾವೆಗಳಿದ್ದರೆ, ಅಂತಹ ದಾವೆಗಳನ್ನು ಯಾವ ದಿವಾಣಿ ನ್ಯಾಯಾಲಯವು ಮನ್ನಿಸತಕ್ಕದ್ದಲ್ಲ; ಅಂದರೆ ದಾವೆ ಮಾಡಲು ನಿರ್ಬಂಧ ವನ್ನು ಇಲ್ಲಿ ಹಾಕಿಲ್ಲ. ಆದರೆ ಕೋರ್ಟು ಅವುಗಳನ್ನು ಮನ್ನಿಸತಕ್ಕದ್ದಲ್ಲ. ಅಂದರೆ ಒಂದು ವೇಳೆ ದಾವೆ ಮಾಡಿದರೂ ಅವುಗಳನ್ನು ಮನ್ನಿಸಿ-ಚೌಕಶಿಮಾಡದೆ ಕಿತ್ತಿ ಹಾಕತಕ್ಕದ್ದು ಎಂದು ಅರ್ಥ.

ಸರಕಾರದ ವಿರುದ್ಧವಾಗಲಿ, ಇತರ ಸರಕಾರದ ಅಧಿಕಾರಿಗಳ ವಿರುದ್ಧ ಇಲ್ಲವೆ ಪಂಚಾಯತ-ತಾಲೂಕ ಬೋರ್ಡಗಳ ಅಧಿಕಾರಿಗಳ ವಿರುದ್ಧ ಅವನು ಕಾಯಿದೇಶೀರ ಮತ್ತು ಸದ್ಭಾವನೆಯಿಂದ ಈ ಕಾಯಿದೆಯನ್ವಯವಾಗಿ ಮಾಡಿದ ಯಾವ ಕೆಲಸಕ್ಕಾಗಿ ದಾವಾ ಮುಂತಾದ್ದು ಆಗತಕ್ಕದ್ದಲ್ಲ. ಅಂದರೆ ಅವರಿಗೆ ಇದರಿಂದ ರಕ್ಷಣೆ ಕೊಡಲಾಗಿದೆ. ಅದರ ರಕ್ಷಣೆಗೆ ಎರಡು ಅಂಶಗಳು: ಒಂದು, ಅವರು ಈ ಕಾಯಿದೆಯನ್ವಯವಾಗಿ ಕೆಲಸ ಮಾಡಿರಬೇಕು. ಮತ್ತೊಂದು ಕಾಯಿದೇಶೀರ ಹಾಗೂ ಸದ್ಭಾವನೆಯಿಂದ ಮಾಡಿರತಕ್ಕದ್ದು. ಆಗ ಈ ಕಲಮು ರಕ್ಷಣೆ ಒದಗಿಸುವುದು.

## ೨೩೩. ಮ್ಯಾಜಿಸ್ಟ್ರೇಟನ ಅಧಿಕಾರ ಕ್ಷೇತ್ರ

ಈ ಕಾಯಿದೆಯನ್ವಯವಾಗಿ ಇಲ್ಲವೆ ಅದರನ್ವಯವಾಗಿ ಮಾಡಿದ ಯಾವದೇ ನಿಯಮದ, ಕ್ರಮ ನಿಯಮದ ಇಲ್ಲದ ಪೋಟ ನಿಯಮದ ಅನ್ವಯವಾಗಿ ಯಾವುದೇ ಖಟ್ಲೆಯು, ಅಲ್ಲಿಯೆ ಬೇರೆಯಾಗಿ ಅನುಕೂಲಿಸಲಾದುದನ್ನು ಬಿಟ್ಟು, ಯಾವುದೇ ಮಾಜಿಸ್ಟ್ರೇಟನ ಎದುರು ದಾಖಲ ಮಾಡಲ್ಪಡತಕ್ಕದ್ದು ಮತ್ತು ಈ ಕಾಯಿದೆಯ ಇಲ್ಲವೆ ಅದರನ್ವಯವಾಗಿ ಮಾಡಿದ ಯಾವುದೇ ನಿಯಮದ, ಕ್ರಮ ನಿಯಮದ

ಇಲ್ಲವೆ ಪೋಟನಿಯಮದ ಅನ್ವಯವಾಗಿ ಇಲ್ಲವೆ ಸತ್ವದಿಂದ ಹಾಕಲಾದ ಪ್ರತಿ ಯೊಂದು ದಂಡ ಇಲ್ಲವೆ ದಂಡನೆಯು ಮತ್ತು ಈ ಕಾಯಿದೆಯಲ್ಲಿ ಬೇರೆಯಾಗಿ ಪ್ರತ್ಯೇಕ ಅನುಕೂಲತೆ ಮಾಡಿರದೆ ಇರುವ ಪರಿಹಾರ ಧನದ ಮಾಗಣಿಗಳು ಇಲ್ಲವೆ ವಸೂಲಿಯ ಇತರ ವೆಚ್ಚಗಳು ಕೂಡ, ಇಂತಹ ಮ್ಯಾಜಿಸ್ಟ್ರೇಟನಿಗೆ ಅರ್ಜಿ ಯನ್ನು ಮಾಡಿ ಯಾರಿಂದ ಹಣವನ್ನು ಮಾಗಣಿ ಮಾಡಲಾಗಿರುವುದೋ ಅಂತಹ ವ್ಯಕ್ತಿಯ ಒಡೆತನದಲ್ಲಿದ್ದ ಅವನ ಅಧಿಕಾರ ಕ್ಷೇತ್ರದಲ್ಲಿರುವ ಯಾವುದೇ ಜಂಗಮ ಆಸ್ತಿಯ ಜಪ್ತಿ ಮಾಡಿಸಿ, ಮತ್ತು ಮಾರಾಟ ಮಾಡಿಸಿ ವಸೂಲ ಮಾಡಲ್ಪಡ ಬಹುದು.

## ವಿವೇಚನೆ

ಈ ಕಾಯಿದೆಯಲ್ಲಿ ಅಲ್ಲಲ್ಲಿ ಕಲಮುಗಳಲ್ಲಿ, ಮತ್ತು ಮಾಡಬಹುದಾದ ನಿಯಮಗಗಲ್ಲಿ ಪೋಟನಿಯಮಗಳಲ್ಲಿ, ಕ್ರಮನಿಯಮಗಳಲ್ಲಿ ಅಪರಾಧ-ದಂಡದ ಬಗ್ಗೆ ಹೇಳಿದೆ. ಅಲ್ಲಿ ಬೇರೆಯಾಗಿ ವ್ಯವಸ್ಥೆ ಮಾಡದಿದ್ದರೆ, ಆ ಎಲ್ಲ ಖಟ್ಲೆಗಳು ಮ್ಯಾಜಿಸ್ಟ್ರೇಟನ ಎದುರು ದಾಖಲಮಾಡತಕ್ಕದ್ದು. ದಂಡ ಮತ್ತು ಇತರ ವೆಚ್ಚದ ವಸೂಲಿ ಮಾಡುವ ಪ್ರಸಂಗ ಬಂದರೆ ಯಾರಿಂದ ವಸೂಲಾಗಬೇಕಾಗಿದೆಯೋ ಆ ವ್ಯಕ್ತಿಯ ಜಂಗಮ ಆಸ್ತಿಯು ಯಾರ ಅಧಿಕಾರ ಕ್ಷೇತ್ರದಲ್ಲಿ ಇರುವುದೋ ಅಂತಹ ಮ್ಯಾಜಿಸ್ಟ್ರೇಟನಿಗೆ ಅರ್ಜಿ ಕೊಡಬೇಕು. ಅವನು ಜಪ್ತ-ಮತ್ತು ಮಾರಾಟಮಾಡಿಸಿ ಅದನ್ನು ವಸೂಲ ಮಾಡಬೇಕು. ಅಂದರೆ ಈ ಕಾಯಿದೆಯ ಪ್ರಕಾರ ಖಟ್ಲೆಗಳು ಇತರ ವಸೂಲಿಗಳು ಬೇರೆ ಅನುಕೂಲಮಾಡದಿದ್ದರೆ ಅವು ಮಾಜಿಸ್ಟ್ರೇಟನ ಎದುರು ಬರತಕ್ಕದ್ದು ಎಂದ ಹಾಗೆ.

## ೨೩೪. ದಾವೆಯಿಂದ ಪರ್ಯಾಯ ವಿಧಾನ

ಈ ಕಾಯಿದೆಯಿಂದ ಇಲ್ಲವೆ ಈ ಕಾಯಿದೆಯನ್ವಯವಾಗಿ ಯಾವುದೇ ವಸೂಲಿಯ ವಿಧಾನದ ಬದಲು ಇಲ್ಲವೆ ಪ್ರಕರಣ iv ಮತ್ತು ix ರ ಶರತುಗಳನ್ವಯ ವಾಗಿ ವಸೂಲಾಗ ಬೇಕಾದಷ್ಟು ಯಾವುದೇ ಹಣವು ಇಲ್ಲವೆ ಈ ಕಾಯಿದೆಯನ್ವಯ ವಾಗಿ ಕೊಡಿಸಲಾದ ಯಾವುದೇ ಪರಿಹಾರಧನವು, ವೆಚ್ಚವು, ಚಾರ್ಜು, ಇಲ್ಲವೆ ಲುಕಸಾನು ಭರಪಾಯಿಯು ಪೂರ್ತಿಯಾಗಿ ಇಲ್ಲವೆ ಅದರ ಯಾವುದೇ ಭಾಗವು ಅಂತಹ ವಿಧಾನದಿಂದ ವಸೂಲಾಗುವುದು ತಪ್ಪಿದ ಸಂದರ್ಭದಲ್ಲಿ ಆ ಹಣವನ್ನು ಕೊಡಲು ಪಾತ್ರನಾದ ವ್ಯಕ್ತಿಯ ಮೇಲೆ ಅಲ್ಲದೆ ಪಂಚಾಯತದ ಇಲ್ಲವೆ ತಾಲೂಕ ಬೋರ್ಡದ ಯಾವುದೇ ಆಸ್ತಿಗೆ, ಹಕ್ಕಿಗೆ, ಇಲ್ಲವೆ ಬಾಧ್ಯತೆಗೆ ಯಾವುದೇ ಅಪಾಯ ವನ್ನು ಯಾವುದೇ ರೀತಿಯಿಂದ ಉಂಟುಮಾಡಿದ ಯಾವುದೇ ವ್ಯಕ್ತಿಯ ಮೇಲೆಯೂ ಪಂಚಾಯತವು ಇಲ್ಲವೆ ತಾಲೂಕ ಬೋರ್ಡ ಸಮರ್ಥ ಅಧಿಕಾರವಿರುವ ಯಾವುದೇ ನ್ಯಾಯಾಲಯದಲ್ಲಿ ದಾವಾ ಮಾಡಬಹುದು.

**ವಿವೇಚನೆ**

ತನಗೆ ಸಲ್ಲಬೇಕಾಗಿದ್ದ ಹಣ, ಖರ್ಚು, ಮುಂತಾದ್ದನ್ನು ವಸೂಲ ಮಾಡಲು ಪ್ರಕರಣ iv ಮತ್ತು ix ದಲ್ಲಿ ಹೇಳಿದ ವಿಧಾನಗಳ ಬದಲು ಇಲ್ಲವೆ ಅವು ಯೋಗ್ಯ ಪರಿಣಾಮ ಉಂಟು ಮಾಡದಿದ್ದರೆ, ಪಂಚಾಯತ ಇಲ್ಲವೆ ತಾಲೂಕ ಬೋರ್ಡು ದಾವಾ ಮಾಡಿ ವಸೂಲು ಮಾಡಿಕೊಳ್ಳಲಿಕ್ಕೆ ಈ ಕಲಮು ಅಧಿಕಾರ ಕೊಡುತ್ತದೆ. ಅಂದರೆ ಅದು ದಾವಾ ಮಾಡಲು ಮೇಲೆ ಹೇಳಿದ ಕ್ರಮವನ್ನು ಅನುಸರಿಸಿ ವಿಫಲ ಆದ ಮೇಲೆಯೆ ಅಧಿಕಾರ ಬರುತ್ತದೆಂದಲ್ಲ, ಸ್ವತಂತ್ರವಾದ ಅಧಿಕಾರ ವಿದೆಯೆಂಬುದು 'ಪರ್ಯಾಯ ವಿಧಾನ' ಎಂಬುದರಿಂದ ಸ್ಪಷ್ಟವಾಗುವುದು. ಯಾರಿಂದ ಹಣ ವಸೂಲ ಬರಬೇಕಾಗಿದೆ ಆ ವ್ಯಕ್ತಿಯ ಮೇಲೆ ಇಲ್ಲವೆ ಯಾರು ಪಂಚಾಯತದ ಇಲ್ಲವೆ ಬೋರ್ಡದ ಆಸ್ತಿಗೆ, ಅಧಿಕಾರಕ್ಕೆ ಅಪಾಯ ಉಂಟು ಮಾಡಿರುವರೋ ಆ ವ್ಯಕ್ತಿಯ ಮೇಲೆಯೂ ಕೂಡ ದಾವಾ ಮಾಡಲು ಬರುತ್ತದೆಂದು ಈ ಕಲಮು ಹೇಳುವುದು. ದಾವೆಯನ್ನು ಸಮರ್ಥ ಅಧಿಕಾರವಿರುವ ನ್ಯಾಯಾಲಯದಲ್ಲಿ ಮಾಡಬೇಕು.

**೨೩೫. ಈ ಕಾಯಿದೆಯನ್ವಯವಾಗಿರುವ ಅಪರಾಧಕ್ಕೆ ದಂಡನೆ ಮತ್ತು ರಾಜೀ ಆಗಲಿಕ್ಕೆ ಅಧಿಕಾರ**

(೧) ಪಂಚಾಯತದ ಇಲ್ಲವೆ ತಾಲೂಕ ಬೋರ್ಡದ ಅಧಿಕಾರ ಕ್ಷೇತ್ರದ ಯಾವುದೇ ಪ್ರದೇಶದಲ್ಲಿ ಯಾರಾದರೂ—

(ಅ) ಕಲಮು ೫೩ ರಿಂದ ಅಗತ್ಯವೆನ್ನಿಸಿದ ಲಿಖಿತ ಪರವಾನಗಿ ಇಲ್ಲದೆಯೆ ಇಲ್ಲವೆ ಅದರಲ್ಲಿ ಹಾಕಲಾದ ಯಾವುದೇ ಕರಾರುಗಳ ವಿರುದ್ಧವಾಗಿ ಕಟ್ಟಡವನ್ನು ಕಟ್ಟಿಸಿದರೆ, ಹೆಚ್ಚು ಕಡಿಮೆ ಮಾಡಿದರೆ, ಜೋಡಣೆ ಮಾಡಿದರೆ ಇಲ್ಲವೆ ಪುನಾರಚನೆ ಮಾಡಿದರೆ;

(ಬ) ಕಲಮು ೫೬, ೫೭ ಇಲ್ಲವೆ ೧೪೩ ರಿಂದ ಅಗತ್ಯವೆನ್ನಿಸಿದ ಲಾಯಸೆನ್ಸ ಪಡೆಯದೆಯೆ ಇಲ್ಲವೆ ಅದರ ಯಾವುದೇ ಕರಾರುಗಳ ವಿರುದ್ಧವಾಗಿ ಇಲ್ಲವೆ ಆ ಲಾಯಸೆನ್ಸ್ ಸ್ಥಗಿತವಾದಾಗ ಯಾವುದೇ ಸ್ಥಳವನ್ನು ಉಪಯೋಗಿಸಿದರೆ; ಇಲ್ಲವೆ

(ಕ) ಈ ಕಾಯಿದೆಯ ಬೇರೆ ಯಾವುದೇ ಶರತುಗಳ ವಿರುದ್ಧವಾಗಿ ವರ್ತಿಸಿದರೆ,

ಅವನ ಅಪರಾಧವು ಸಾಬೀತಾದರೆ, ಐದು ನೂರು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಅವನು ಶಿಕ್ಷಿತನಾಗತಕ್ಕದ್ದು. ಮತ್ತು ಮುಂದುವರೆವ ಅಪರಾಧವಾಗಿದ್ದರೆ, ಅಪರಾಧವು ಮುಂದುವರೆದಷ್ಟು ಕಾಲ ಮೊದಲನೆಯ ಶಿಕ್ಷೆಯ ದಿನದಿಂದ ಪ್ರತಿ ದಿನಕ್ಕೆ ಐದು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ಹೆಚ್ಚಿನ ದಂಡದಿಂದಲೂ ಶಿಕ್ಷಿತನಾಗತಕ್ಕದ್ದು.

(೨) ಉಪಕಲಮು (೧) ರ ವಾಕ್ಯಾವಳಿ (ಬ) ದನ್ವಯುವಾಗಿ ಯಾವುದೇ ಸ್ಥಳದ ಸಂಬಂಧದಲ್ಲಿ ಶಿಕ್ಷೆಯಾದ ನಂತರ, ಸಂದರ್ಭಾನುಸಾರವಾಗಿ ಪಂಚಾಯತ ಇಲ್ಲವೆ ತಾಲೂಕ ಬೋರ್ಡು ಅರ್ಜಿ ಮಾಡಿಕೊಂಡರೆ ಮಾತ್ರ, ಇಲ್ಲದಿದ್ದರೆ ಇಲ್ಲ, ಮ್ಯಾಜಿಸ್ಟ್ರೇಟನು ಅಂತಹ ಸ್ಥಳವು ಮುಚ್ಚಲ್ಪಡಬೇಕೆಂದು ಹುಕುಮು ಮಾಡತಕ್ಕದ್ದು. ಮತ್ತು ತದನಂತರ, ಆ ಸ್ಥಳವು ಉಪಯೋಗಿಸಲ್ಪಡುವುದನ್ನು ತಡೆಯುವುದಕ್ಕೆ ಅಂತಹ ವ್ಯಕ್ತಿ ಇಲ್ಲವೆ ವ್ಯಕ್ತಿಗಳನ್ನು ನೇಮಿಸತಕ್ಕದ್ದು ಇಲ್ಲವೆ ಇತರ ಕ್ರಮವನ್ನು ಕೈಕೊಳ್ಳತಕ್ಕದ್ದು. ಮತ್ತು ಅದು ಮುಚ್ಚಲ್ಪಡಬೇಕೆಂದು ಹುಕುಮು ಹೊರಡಿಸಲ್ಪಟ್ಟ ನಂತರ ಯಾವುದೇ ಆ ಸ್ಥಳವನ್ನು ಉಪಯೋಗಿಸಿದರೆ ಇಲ್ಲವೆ ಉಪಯೋಗಿಸುವ ಅನುಮತಿ ಇತ್ತರೆ, ಹಾಗೆ ಅದು ಮುಚ್ಚಲ್ಪಡಬೇಕೆಂದು ಹುಕುಮು ಆದ ನಂತರ ಅವನು ಹಾಗೆ ಉಪಯೋಗಿಸುವ ಇಲ್ಲವೆ ಉಪಯೋಗಿಸಲು ಅನುಮತಿ ಕೊಡುವ ಪ್ರತಿ ಒಂದು ದಿವಸಕ್ಕೆ ಐದು ರೂಪಾಯಿಯ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಶಿಕ್ಷಿತನಾಗತಕ್ಕದ್ದು.

(೩) (ಅ) ಪಂಚಾಯತವು ಇಲ್ಲವೆ ತಾಲೂಕ ಬೋರ್ಡು ಇಲ್ಲವೆ ಕಮಿಶನರನು ಅಧಿಕರಿಸಬಹುದಾದಂತಹ ಅಧಿಕಾರಿಯು, ರಾಜೀ ತರೀಖ ಐದು ನೂರು ರೂಪಾಯಿಗಳಿಗಿಂತ ಹೆಚ್ಚಾಗದಷ್ಟು ಹಣವನ್ನು ಸಂದರ್ಭಾನುಸಾರವಾಗಿ 'ಪಂಚಾಯತದ ಇಲ್ಲವೆ ತಾಲೂಕ ಬೋರ್ಡದ ಇಲ್ಲವೆ ಅಧಿಕರಿಸಲ್ಪಟ್ಟ ಅಧಿಕಾರಿಯು ಅಭಿಪ್ರಾಯದಲ್ಲಿ ಯಾವನು ಈ ಕೆಳಗಿನಂತೆ ಮಾಡಿರುವನೆಂದು ಆಗಿದೆಯೋ ಆ ವ್ಯಕ್ತಿಯಿಂದ ಸ್ವೀಕರಿಸಬಹುದು.

(i) ಉಪಕಲಮು (೧) ರಲ್ಲಿ ಹೇಳಲಾದ ಮೇಲಿನ ಯಾವುದೇ ಅಪರಾಧಗಳನ್ನು ಮಾಡಿದರೆ, ಇಲ್ಲವೆ

(ii) ಈ ಕಾಯಿದೆಯನ್ವಯುವಾಗಿ ಇಲ್ಲವೆ ಈ ಕಾಯಿದೆಯನ್ವಯುವಾಗಿರುವ ಯಾವುದೇ ನಿಯಮು, ಕ್ರಮನಿಯಮು, ಇಲ್ಲವೆ ಪೋಟ ನಿಯಮದನ್ವಯುವಾಗಿ ಸರಕಾರದಿಂದ ಪ್ರಕಟನೆಯ ಮೂಲಕ ರಾಜೀ ಯೋಗ್ಯವೆಂದು ಸಾರಲಾದ , ಯಾವುದೇ ಬೇರೆ ಅಪರಾಧ ಮಾಡಿದ್ದರೆ.

ಮತ್ತು ಇಂತಹ ರಾಜೀಯಾದ ಮೇಲೆ ಅಂತಹ ಅಪರಾಧದ ಸಂಬಂಧವಾಗಿ ಅಂತಹ ವ್ಯಕ್ತಿಯ ವಿರುದ್ಧವಾಗಿ ಯಾವ ಪ್ರಕರಣವನ್ನು ನಡೆಸತಕ್ಕದ್ದಲ್ಲ.

(ಬ) ಆ ಅಪರಾಧದ ಸಂಬಂಧವಾಗಿ ಸಂಬಂಧಪಟ್ಟ ವ್ಯಕ್ತಿಯ ವಿರುದ್ಧ ಯಾವುದೇ ಅಪರಾಧಿಕ ನ್ಯಾಯಾಲಯದಲ್ಲಿ ಪ್ರಕರಣಗಳು ಪ್ರಾರಂಭಿಸಲ್ಪಟ್ಟಿದ್ದರೆ, ವಾಕ್ಯಾವಳಿ (ಅ) ದನ್ವಯ ಯಾವುದೇ ಅಪರಾಧವು ರಾಜೀಯಾದನಂತರ, ಆ ರಾಜಿಯು ಅಪರಾಧದಿಂದ ಬಿಡುಗಡೆಯೆಂದು ಗಣಿಸಲ್ಪಡತಕ್ಕದ್ದು ಮತ್ತು ಅಂತಹ

ಅಪರಾಧದ ಸಂಬಂಧದಲ್ಲಿ ಅಂತಹ ವ್ಯಕ್ತಿಯ ವಿರುದ್ಧ ಮುಂದೆ ಯಾವ ಪ್ರಕರಣಗಳೂ ನಡೆಸಲ್ಪಡತಕ್ಕದ್ದಲ್ಲ.

**ವಿವೇಚನೆ**

ಈ ಕಾಯಿದೆಯ ಪ್ರಕಾರ ಆದ ಅಪರಾಧಗಳಿಗೆ ದಂಡನೆ ಮತ್ತು ಆ ಅಪರಾಧಗಳ ಬಗ್ಗೆ ಪ್ರಕರಣಗಳಲ್ಲಿ ರಾಜೀ ಆಗುವ ಕುರಿತು ಈ ಕಲಮಿನಲ್ಲಿ ಹೇಳಲಾಗಿದೆ. ಕಲಮು ೫೩ ರರ ವಿರುದ್ಧವಾಗಿ ಕಟ್ಟಡ ಕಟ್ಟಿಸುವುದು ಅಪರಾಧ; ಕಲಮು ೫೬, ೫೭, ಮತ್ತು ೧೪೩ ರ ಪ್ರಕಾರ ಪಡೆಯಬೇಕಾದ ಲಾಯಸೆನ್ಸ ಇಲ್ಲವೆ ಸ್ಥಳಗಳನ್ನು ಉಪಯೋಗಿಸುವುದು ಅಪರಾಧ. ಈಪರಾಧಗಳಿಗೆ ೫೦೦/- ವರೆಗೆ ದಂಡ ಇದೆ. ಆ ಅಪರಾಧಗಳು ಮುಂದರಿವ ರೂಪದವು ಇದ್ದರೆ, ದಿನಕ್ಕೆ ೫/- ರೂಪಾಯಿ ವರೆಗಿನ ಹೆಚ್ಚಿನ ದಂಡವೂ ಇದೆ.

ಅಪರಾಧ ಸಾಬೀತಾಗಿ ದಂಡವಾದ ನಂತರ ಆ ಸ್ಥಳಗಳನ್ನು ಬಂದುಮಾಡುವುದು ಇಲ್ಲವೆ ಅಧಿಕೃತ ವ್ಯಕ್ತಿಯ ಸ್ವಾಧೀನಮಾಡಬೇಕಾದರೆ, ಪಂಚಾಯತ ಇಲ್ಲವೆ ಬೋರ್ಡು ಅರ್ಜಿ ಮಾಡಬೇಕಾಗುತ್ತದೆ. ಅರ್ಜಿಯಿಲ್ಲದೆ ಕೆಲಸ ನಡೆಯದು. ಅರ್ಜಿ ಮಾಡಿದ ನಂತರ ಮ್ಯಾಜಿಸ್ಟ್ರೇಟನು ಆ ಸ್ಥಳವನ್ನು ಬಂದು ಮಾಡಿಸಬಹುದು; ಬೇರೆಯ ಅಧಿಕೃತ ವ್ಯಕ್ತಿಗಳ ಸ್ವಾಧೀನ ಮಾಡಿಸಬಹುದು. ಹೀಗೆ ಬಂದು ಮಾಡಿಸಿದ ನಂತರ ಆ ಸ್ಥಳದ ಉಪಯೋಗವನ್ನು ಯಾರಾದರೂ ಮಾಡಿದರೆ ಇಲ್ಲವೆ ಮಾಡಗೊಟ್ಟರೆ ಅದೂ ಅಪರಾಧವಾಗುವುದು. ಅದಕ್ಕೆ ೫/- ರೂಪಾಯಿ ವರೆಗೆ ಒಂದೊಂದು ದಿನಕ್ಕೆ ದಂಡ. ಈ ಅಪರಾಧದ ಬಗ್ಗೆ ನಡೆದ ಪ್ರಕರಣದಲ್ಲಿ ರಾಜೀ ಆಗಲು ಬರುವುದು. ಈ ಕಾಯಿದೆಯ ಬೇರೆ ಅಪರಾಧಗಳು ರಾಜೀ ಯೋಗ್ಯವಾದವುಗಳು ಎಂದು ಸರಕಾರ ಪ್ರಕಟನೆ ಹೊರಡಿಸಬೇಕಾಗುತ್ತದೆ. ಒಮ್ಮೆ ರಾಜೀ ಆದ ಮೇಲೆ ಪ್ರಕರಣಗಳು ಮುಂದುವರೆಯತಕ್ಕದ್ದಲ್ಲ; ಇಷ್ಟೇ ಅಲ್ಲ, ರಾಜೀಯಾದ ನಂತರ ಆಪಾದಿತನು ಅಪರಾಧದಿಂದ ಬಿಡುಗಡೆ ಆದ ಹಾಗೆ ಎಂದು ತಿಳಿಯತಕ್ಕದ್ದು.

**೨೩೬. ಪೋಲೀಸ ಅಧಿಕಾರಿಗಳ ಅಧಿಕಾರಗಳು**

ಈ ಕಾಯಿದೆಯ ಯಾವುದೇ ಶರತುಗಳ ವಿರುದ್ಧವಾಗಿ ಇಲ್ಲವೆ ಈ ಕಾಯಿದೆಯನ್ವಯವಾಗಿ ಮಾಡಿದ ಯಾವುದೇ ನಿಯಮದ, ಕ್ರಮನಿಯಮದ ಇಲ್ಲವೆ ಪೋಟ ನಿಯಮದ ವಿರುದ್ಧವಾಗಿ ಯಾವುದೇ ಅಪರಾಧವು ಅವನ ಸಮ್ಮುಖದಲ್ಲಿ ಯಾವುದೇ ವ್ಯಕ್ತಿಯು ಮಾಡಿದರೆ, ಯಾವುದೇ ಪೋಲೀಸು ಅಧಿಕಾರಿಯು ಅವನನ್ನು ಬಂಧಿಸಬಹುದು, ಆ ಅಪರಾಧ ಮಾಡಿದ ವ್ಯಕ್ತಿಯ ಹೆಸರು ಮತ್ತು ವಿಳಾಸ ಅವನಿಗೆ ಗೊತ್ತಿರದಿದ್ದರೆ, ಮತ್ತು ಆ ಅಪರಾಧ ಮಾಡಿದವನು ತನ್ನ ಹೆಸರು ಮತ್ತು ವಿಳಾಸವನ್ನು

ಕೊಡಲು ನಿರಾಕರಿಸಿದರೆ ಇಲ್ಲವೆ ಕೊಟ್ಟ ಹೆಸರು ಮತ್ತು ವಿಳಾಸದ ಸತ್ಯತೆಯ ಬಗ್ಗೆ ಸಂಶಯ ಬರುವ ಕಾರಣ ಇದೆಯೆಂದು ಆ ಪೋಲೀಸು ಅಧಿಕಾರಿಗೆ ಅನ್ನಿಸಿದರೆ, ಆ ವ್ಯಕ್ತಿಯ ಸರಿಯಾದ ಹೆಸರು ಮತ್ತು ವಿಳಾಸವು ಖಚಿತವಾಗುವ ತನಕ ಅಂತಹ ವ್ಯಕ್ತಿಯನ್ನು ಪೋಲೀಸು ಸ್ಟೇಶನದಲ್ಲಿ ಬಂಧಿಸಿಡಬಹುದು.

(೨) ಉಪಕಲಮು (೧) ರನ್ವಯವಾಗಿ ಬಂಧಿಸಲ್ಪಟ್ಟ ಯಾವುದೇ ವ್ಯಕ್ತಿಗೆ ಅವನ ಬಂಧನದ ಕಾರಣಗಳು ಆದಷ್ಟು ಬೇಗನೇ ತಿಳಿಸಲ್ಪಡಬೇಕು. ಮತ್ತು ಆ ಬಂಧನದ ಸ್ಥಳದಿಂದ ಮ್ಯಾಜಿಸ್ಟ್ರೇಟನ ನ್ಯಾಯಾಲಯಕ್ಕೆ ಮುಟ್ಟಲು ಬೇಕಾಗುವ ಪ್ರವಾಸದ ಸಮಯವನ್ನು ಹೊರತು ಪಡಿಸಿ, ಇಂತಹ ಬಂಧನದಿಂದ ಇಪ್ಪತ್ತು ನಾಲ್ಕು ಗಂಟೆಗಳೊಳಗೆ ಸಮೀಪದ ಮ್ಯಾಜಿಸ್ಟ್ರೇಟನ ಎದುರು ಅವನನ್ನು ಹಾಜರ ಪಡಿಸತಕ್ಕದ್ದು. ಮತ್ತು ಮ್ಯಾಜಿಸ್ಟ್ರೇಟನ ಪರವಾನಗಿ ಇಲ್ಲದೆ ಇಂತಹ ಯಾವುದೇ ವ್ಯಕ್ತಿಯು ಮೇಲೆ ಹೇಳಿದ ಕಾಲಾವಧಿಯಕಿಂತ ಹೆಚ್ಚು ಕಾಲಾವಧಿಯವರೆಗೆ ತಾಬಾದಲ್ಲಿ ಇಟ್ಟುಕೊಳ್ಳಲ್ಪಡಲಾಗದು.

(೩) ಈ ಕಾಯಿದೆಯ ಶರತುಗಳ ವಿರುದ್ಧ ಇಲ್ಲವೆ ಈ ಕಾಯಿದೆಯನ್ವಯವಾಗಿರುವ ಯಾವುದೇ ನಿಯಮದ, ಕ್ರಮಸಿಯಮದ ಇಲ್ಲವೆ ಪೋಟನಿಯಮದ ವಿರುದ್ಧವಾಗಿರುವ ಯಾವುದೇ ಅಪರಾಧ ನಡೆದ ಬಗ್ಗೆ ಪಂಚಾಯತದ ಚೇರಮನ್ನನಿಗೆ ಇಲ್ಲವೆ ಸೆಕ್ರೆಟರಿಗೆ ಇಲ್ಲವೆ ತಾಲೂಕ ಬೋರ್ಡದ ಅಧ್ಯಕ್ಷನಿಗೆ ಇಲ್ಲವೆ ಅಧಿಕಾರಿಗೆ ಕೂಡಲೆ ಸೂಚನೆಯನ್ನು ಕೊಡುವುದು ಕೂಡ ಮತ್ತು ಪಂಚಾಯತದ ಇಲ್ಲವೆ ತಾಲೂಕ ಬೋರ್ಡದ ಎಲ್ಲ ಅಧಿಕಾರಿಗಳಿಗೆ ಮತ್ತು ಸೇವಕರಿಗೆ ಅವರ ಕಾಯಿದೇಶೀರ ಅಧಿಕಾರದಲ್ಲಿ ಎಲ್ಲ ಬಗೆಯ ಸಹಾಯ ಸಲ್ಲಿಸುವುದೂ ಕೂಡ ಪೋಲೀಸು ಅಧಿಕಾರಿಗಳ ಕರ್ತವ್ಯವಾಗಿರತಕ್ಕದ್ದು.

## ವಿವೇಚನೆ

ಈ ಕಾಯಿದೆಯಲ್ಲಿ ಇಲ್ಲವೆ ಅದರನ್ವಯವಾಗಿದ್ದ ನಿಯಮದಲ್ಲಿ, ಪೋಟನಿಯಮದಲ್ಲಿ, ಕ್ರಮನಿಯಮದಲ್ಲಿ ಹೇಳಿದ ಯಾವುದೇ ಅಪರಾಧವು ಯಾವುದೇ ಪೋಲೀಸು ಅಧಿಕಾರಿಯ ಎದುರು ನಡೆದರೆ ಆ ಅಪರಾಧ ಮಾಡಿದ ವ್ಯಕ್ತಿಯನ್ನು ಬಂಧನ ಮಾಡುವ ಅಧಿಕಾರ ಪೋಲೀಸು ಅಧಿಕಾರಿಗೆ ಇದೆ. ಅಪರಾಧ ಮಾಡಿದ ವ್ಯಕ್ತಿಯು ತನ್ನ ಹೆಸರು ವಿಳಾಸವನ್ನು ಹೇಳದಿದ್ದರೆ ಹೇಳಿದ ಹೆಸರು ಸರಿಯಾಗಿಲ್ಲವೆಂದು ಸಂಶಯ ಬಂದರೆ, ಸರಿಯಾದ ಹೆಸರು ನಿಶ್ಚಿತವಾಗುವ ತನಕ ಆ ಅಪರಾಧಿಯನ್ನು ಪೋಲೀಸು ಠಾಣೆಯಲ್ಲಿ ಬಂಧಿಸಿಡಬಹುದು. ಬಂಧಿಸಿಟ್ಟವನಿಗೆ ಅವನ ಬಂಧನದ ಕಾರಣವನ್ನು ಆದಷ್ಟು ಬೇಗ ತಿಳಿಸಬೇಕು ಮತ್ತು ಸಮೀಪದ ಮ್ಯಾಜಿಸ್ಟ್ರೇಟನ ಎದುರು ಹಾಜರ ಪಡಿಸಬೇಕು.

ಬಂಧನವಾದ ಸ್ಥಳದಿಂದ ಮಾಜಿಸ್ಟ್ರೇಟನ ಕಚೇರಿಗೆ ಮುಟ್ಟಲಿಕ್ಕೆ ಬೇಕಾಗುವ ಸಮಯುವನ್ನು ಹೊರತು ಪಡಿಸಿ ಬಂಧನವಾದ ೨೪ ಗಂಟೆಗಳಲ್ಲಿ ಆರೋಪಿತನನ್ನು ಮಾಜಿಸ್ಟ್ರೇಟನ ಎದುರು ಹಾಜರಪಡಿಸತಕ್ಕದ್ದು ಮಾಜಿಸ್ಟ್ರೇಟನ ಪರವಾನಗಿ ಇಲ್ಲದೆ ೨೪ ಗಂಟೆಯಕಿಂತ ಪೋಲೀಸ ಅಧಿಕಾರಿಯು ಆರೋಪಿತನನ್ನು ತನ್ನ ತಾಬೆಯಲ್ಲಿ ಹೆಚ್ಚು ಕಾಲ ಇಟ್ಟುಕೊಳ್ಳಬಾರದು.

ಈ ಕಾಯಿದೆಯ ಪ್ರಕಾರ ಅಪರಾಧವೆಂದಾದುದರ ಸೂಚನೆಯನ್ನು ಪೋಲೀಸು ಅಧಿಕಾರಿಯು ಪಂಚಾಯತದ ಚೇರಮನ್ ಇಲ್ಲವೆ ಸೆಕ್ರೆಟರಿಗೆ ಇಲ್ಲವೆ ತಾಲೂಕ ಬೋರ್ಡದ ಅಧ್ಯಕ್ಷ ಇಲ್ಲವೆ ಅದರ ಅಧಿಕಾರಿಗೆ ತಿಳಿಸಬೇಕು. ಮತ್ತು ಅವರಿಗೆ ಅವಶ್ಯಕವಾದ ನೆರವನ್ನು ಕೊಡಬೇಕು. ಅಂದರೆ ಈ ಕಾಯಿದೆಯ ಪ್ರಕಾರ ಆದ ಅಪರಾಧಗಳ ಬಗ್ಗೆ ಪಂಚಾಯತದ ಇಲ್ಲವೆ ತಾಲೂಕ ಬೋರ್ಡದ ಅಧಿಕಾರಿಗಳಿಗೆ ನೆರವಾಗುವುದು ಪೋಲೀಸ ಅಧಿಕಾರಿಗಳ ಕರ್ತವ್ಯವಾಗಿದೆ ಎಂದು ಈ ಕಲಮು ಹೇಳುತ್ತದೆ.

## ೨೩೭. ವಾರ್ಷಿಕ ಆಡಳಿತದ ವರದಿ

ಪ್ರತಿ ವರುಷದ ಏಪ್ರಿಲ ಒಂದನೆಯ ತಾರೀಖಿನ ನಂತರ ಆದಷ್ಟು ಬೇಗ ಮತ್ತು ಕಮಿಶನರನು ಗೊತ್ತುಮಾಡಬಹುದಾದಂತಹ ತಾರೀಖಿನ ಒಳಗೆ,ತಾಲೂಕ ಬೋರ್ಡದ ಅಧ್ಯಕ್ಷನು ಹಿಂದಿನ ಅಧಿಕೃತ ವರುಷದ ಕಾಲಾವಧಿಯಲ್ಲಿ ಬೋರ್ಡಿನ ಆಡಳಿತದ ಬಗ್ಗೆ ಸರಕಾರವು ನಿರ್ದೇಶಿಸಬಹುದಾದಂತಹ ನಮೂನೆಯಲ್ಲಿ ಮತ್ತು ಅಂತಹ ವಿವರಗಳುಳ್ಳ ವರದಿಯನ್ನು ತಾಲೂಕ ಬೋರ್ಡದ ಎದುರು ಮಂಡಿಸತಕ್ಕದ್ದು ಮತ್ತು ಅದರ ಮೇಲಿನ ಠರಾವು ಸಹಿತವಾಗಿ ಆ ವರದಿಯನ್ನು ಜಿಲ್ಲಾ ಮಂಡಳಕ್ಕೆ ಕಮಿಶನರನು ಗೊತ್ತುಮಾಡಬಹುದಾದ ತಾರೀಖಿನಕಿಂತ ತಡವಾಗದ ಹಾಗೆ ಕಳಿಸತಕ್ಕದ್ದು.

### ವಿವೇಚನೆ

ಏಪ್ರಿಲ ೧ ರಿಂದ ಮುಂದಿನ ವರುಷದ ೩೧ ನೆಯ ಮಾರ್ಚಿಗೆ ಅಧಿಕೃತ ವರುಷವು ಮುಗಿಯುತ್ತದೆ. ಮುಗಿದ ವರುಷದ ಆಡಳಿತದ ಬಗ್ಗೆ ಏಪ್ರಿಲ ೧ ರಿಂದ ಮುಂದೆ ಆದಷ್ಟು ಬೇಗ ಆದರೂ ಕಮಿಶನರನು ಗೊತ್ತುಮಾಡುವ ತಾರೀಖಿನ ಒಳಗೆ ಆಡಳಿತದ ವರದಿಯನ್ನು ಗೊತ್ತುಮಾಡಿದ ನಮೂನೆಯಲ್ಲಿ ಆ ಎಲ್ಲ ವಿವರಗಳನ್ನು ಹಾಕಿ ಸಿದ್ಧಪಡಿಸತಕ್ಕದ್ದು. ಅದು ಬೋರ್ಡದಲ್ಲಿ ಸ್ವೀಕೃತವಾಗಬೇಕು. ಸ್ವಿಕೃತವಾದ ಠರಾವಿನೊಂದಿಗೆ ಜಿಲ್ಲಾ ಮಂಡಳಕ್ಕೆ ಕಳಿಸಬೇಕು. ಎಂದು ಕಳಿಸಬೇಕು ಎಂಬ ಬಗ್ಗೆ ಕಮಿಶನರನು ತಾರೀಖು ಗೊತ್ತುಮಾಡುವನು.

## ೨೩೮. ಕಾಯಿದೆಬದ್ಧವಾಗಿ ರಚಿತವಾಗದೆ ಇದ್ದ ಪಂಚಾಯತಗಳ ಕರ್ತವ್ಯಗಳು ಮತ್ತು ಅಧಿಕಾರಗಳು ಸರಕಾರದಿಂದ ನೇಮಕವಾದ ವ್ಯಕ್ತಿಯಿಂದ ನಿರ್ವಹಿಸಲ್ಪಡತಕ್ಕದ್ದು.

(೧) ಈ ಕಾಯಿದೆಯಲ್ಲಿ ಇಲ್ಲವೆ ಅದರನ್ವಯವಾಗಿ ಮಾಡಿದ ನಿಯಮಗಳಲ್ಲಿ ಏನೇ ಹೇಳಲಾಗಿದ್ದರೂ ಈ ಕಾಯಿದೆಯನ್ವಯವಾಗಿ ಪಂಚಾಯತವು ಕಾಯಿದೆಬದ್ಧವಾಗಿ ರಚಿತವಾಗಿಲ್ಲವೆಂದು ಸರಕಾರಕ್ಕೆ ಯಾವುದೇ ಕಾಲಕ್ಕೆ ಕಂಡು ಬಂದರೆ, ಸರಕಾರವು ಪ್ರಕಟನೆಯಿಂದ ಪಂಚಾಯತದ ಎಲ್ಲ ಇಲ್ಲವೆ ಯಾವುದೇ ಅಧಿಕಾರಗಳು ಮತ್ತು ಕರ್ತವ್ಯಗಳು ಅಂತಹ ವ್ಯಕ್ತಿ ಇಲ್ಲವೆ ವ್ಯಕ್ತಿಗಳಿಂದ, ಅಂತಹ ರೀತಿಯಲ್ಲಿ ಮತುತ್ತ ಅಂತಹ ಕಾಲಾವಧಿಯ ವರೆಗೆ ಮತ್ತು ಅದಕ್ಕೆ ಯೋಗ್ಯ ಕಂಡಂತಹ ಕರಾರುಗಳಿಗಂಕಿತವಾಗಿ ನಿರ್ವಹಿಸಲ್ಪಡುವಂತೆ ಮಾಡಿಸತಕ್ಕದ್ದು.

(೨) ಉಪಕಲಮು (೧) ರಲ್ಲಿ ಹೇಳಲಾದ ಪ್ರಕಟನೆಯ ತಾರೀಖಿನ ವರೆಗೆ ಅಂತಹ ಪಂಚಾಯತವನ್ನು ರಚನೆ ಮಾಡಿದ ವ್ಯಕ್ತಿಗಳಿಂದ ಪಂಚಾಯತದ ಎಲ್ಲ ಅಧಿಕಾರಗಳು ಮತ್ತು ಕರ್ತವ್ಯಗಳು ಸದುದ್ದೇಶದಿಂದ ನಿರ್ವಹಿಸಲ್ಪಟ್ಟಿದ್ದು ಮತ್ತು ಮಾಡಲ್ಪಟ್ಟಿದ್ದು, ಆ ವ್ಯಕ್ತಿಗಳಿಂದ ಕಾಯಿದೆ ಬದ್ಧವಾಗಿ ನಿರ್ವಹಿಸಲ್ಪಟ್ಟಿವೆಯೆಂದು ಮತ್ತು ಮಾಡಲ್ಪಟ್ಟಿವೆಯೆಂದು ಮತ್ತು ಯಾವಾಗಲೂ ಹಾಗೆ ನಿರ್ವಹಿಸಲ್ಪಟ್ಟಿವೆಯೆಂದು ಮತ್ತು ಮಾಡಲ್ಪಟ್ಟಿವೆಯೆಂದು ಗಣಿಸಲ್ಪಡತಕ್ಕದ್ದು. ಆ ವ್ಯಕ್ತಿಗಳು ಮಾಡಿದ ಯಾವ ಕಾರ್ಯಗಳೂ ಅವರು ಕಾಯಿದೆ ಬದ್ಧವಾಗಿ ರಚಿತವಾದ ಪಂಚಾಯತದ ಸದಸ್ಯರಲ್ಲವೆಂಬ ಕಾರಣಕ್ಕಾಗಿ ಮಾತ್ರ ಬೇಕಾಯಿದೇಶೀರ ಎಂದು ಗಣಿಸಲ್ಪಡತಕ್ಕದ್ದಲ್ಲ ಇಲ್ಲವೆ ಅವುಗಳ ಕಾಯಿದೆ ಬದ್ಧತೆಯ ಪ್ರಶ್ನೆಯನ್ನು ಎತ್ತತಕ್ಕದ್ದಲ್ಲ ಮತ್ತು ಇಂತಹ ಕಾರ್ಯಗಳ ಸಂಬಂಧವಾಗಿ ಆ ವ್ಯಕ್ತಿಗಳು ಹೊಣೆಗಾರಿಕೆಯಿಂದ ಮುಕ್ತರಾಗಿರುವರೆಂದು, ಮತ್ತು ಅಭಯಪಡೆದಿರುವರೆಂದು ಗಣಿಸಲ್ಪಡತಕ್ಕದ್ದು.

**ವಿವೇಚನೆ**

ಪಂಚಾಯತ ರಚನೆಯಾಗಿ ಕಾರ್ಯ ಪ್ರವೃತ್ತವಾದ ಮೇಲೆ, ಆ ಪಂಚಾಯತದ ರಚನೆಯು ಕಾಯಿದೆಬದ್ಧವಾಗಿಲ್ಲವೆಂದು ಸರಕಾರಕ್ಕೆ ಯಾವುದೇ ಕಾಲಕ್ಕೆ ಕಂಡು ಬಂದರೆ ಏನು ಮಾಡಬೇಕು ಎಂಬುವದರ ಬಗ್ಗೆ ಇಲ್ಲಿ ಹೇಳಲಾಗಿದೆ. ಹಾಗೆ ಕಂಡು ಬಂದ ನಂತರ ಅಂತಹ ಪಂಚಾಯತದ ಅಧಿಕಾರ-ಹಾಗು ಕರ್ತವ್ಯಗಳನ್ನು ನಿರ್ವಹಿಸಲು ಬೇರೆ ವ್ಯಕ್ತಿ ಇಲ್ಲವೆ ವ್ಯಕ್ತಿಗಳನ್ನು ಸರಕಾರವು ನೇಮಿಸುವುದು. ಅವನು ಇಲ್ಲವೆ ಅವರು ಮುಂದೆ ಕಾರ್ಯವಮಾಡುವರು. ಆದರೆ ರಚನೆಯಾದ ತಾರೀಖಿನಿಂದ ಮತ್ತು ಕಾಯಿದೆಬದ್ಧವಾಗಿ ರಚಿತವಾಗಿಲ್ಲವೆಂದು ಕಂಡು ಬೇರೆಯವರಿಗೆ ಅಧಿಕಾರ ವಹಿಸಿಕೊಡುವ ತಾರೀಖಿನ ವರೆಗೆ ನಡೆದ ಕಾರ್ಯಗಳ ಬಗ್ಗೆ

ಏನು? ಆ ಎಲ್ಲ ಕಾರ್ಯಗಳು ಕಾಯಿದೆ ಬದ್ಧವೆಂದು ತಿಳಿಯತಕ್ಕದ್ದು; ಅಲ್ಲದೆ, ಆ ಕಾರ್ಯ ಮಾಡಿದ ವ್ಯಕ್ತಿಗಳು ಹೊಣೆಗಾರಿಕೆಯಿಂದ ಮುಕ್ತರೂ, ಅಭಯ ಪಡೆದವರೂ ಆಗಿರುವರೆಂದು ತಿಳಿಯತಕ್ಕದ್ದು. ಏಕೆಂದರೆ ಅವರು ಕಾರ್ಯ ಮಾಡಿದಾಗ ಸದುದ್ದೇಶದಿಂದಲೇ ಮಾಡಿರುವರು.

**೨೩೯. ತಾಲೂಕುಗಳ ಪ್ರಾದೇಶಿಕ ಮಿತಿಯ ಸ್ಥಿತ್ಯಂತರದ ಮೂಲಕ ತಾಲೂಕ ಬೋರ್ಡುಗಳನ್ನು ಮುರಗಡೆ ಮಾಡುವ ಮತ್ತು ಪುನಾ ರಚನೆ ಮಾಡುವ ಸರಕಾರದ ಅಧಿಕಾರ**

(೧) ತಾಲೂಕ ಬೋರ್ಡದ ಸದಸ್ಯರ ಅಧಿಕಾರ ಕಾಲಾವಧಿಯಲ್ಲಿ ಒಂದು ಹೊಸ ತಾಲೂಕು ರಚಿತವಾದ ಕಾರಣವಿರುವಾಗ, ಇಲ್ಲವೆ ಬೇರೆ ಯಾವುದೇ ಕಾರಣವಿರುವಾಗ ತಾಲೂಕದ ಪ್ರಾದೇಶಿಕ ಮಿತಿಯಲ್ಲಿ ಹೆಚ್ಚು ಕಡಿಮೆ ಆದಾಗ, ಅಧಿಕೃತ ಗ್ಯಾಜೆಟದಲ್ಲಿಯ ಪ್ರಕಟನೆಯ ಮೂಲಕ ಸರಕಾರವು ಹುಕುಮು ಹೊರಡಿಸಿ ಆ ಹುಕುಮಿನಲ್ಲಿ ನಿರ್ದಿಷ್ಟಪಡಿಸಿದ ತಾರೀಖಿನಿಂದ ಅಂತಹ ತಾಲೂಕ ಬೋರ್ಡನ್ನು ಮುರಗಡೆ ಮಾಡಬಹುದು ಮತ್ತು

(i) ಮುರಗಡೆ ಮಾಡಲ್ಪಟ್ಟ ತಾಲೂಕಿಗೆ ತಾಲೂಕ ಬೋರ್ಡು ಪುನಾ ರಚಿತವಾಗತಕ್ಕದ್ದೆಂದು ನಿರ್ದೇಶಿಸಬಹುದು; ಇಲ್ಲವೆ

(ii) ಹೊಸದಾಗಿ ರಚಿತವಾದ ತಾಲೂಕಿಗೆ ಒಂದು ತಾಲೂಕ ಬೋರ್ಡು ಸ್ಥಾಪಿಸಲ್ಪಡಬೇಕೆಂದು ನಿರ್ದೇಶಿಸಬಹುದು.

(೨) ಉಪಕಲಮು (೧) ರನ್ವಯುವಾಗಿ ಮುರಗಡೆ ಮಾಡಲ್ಪಟ್ಟ ತಾಲೂಕ ಬೋರ್ಡದ ಸದಸ್ಯರು ಸರಕಾರದ ಹುಕುಮಿನಲ್ಲಿ ನಿರ್ದಿಷ್ಟಪಡಿಸಿದ ತಾರೀಖಿನಿಂದ ತಮ್ಮ ಅಧಿಕಾರ ಪದಗಳನ್ನು ಖಾಲೀ ಮಾಡತಕ್ಕದ್ದು.

(೩) ಉಪಕಲಮು (೧) ರ ಶರತುಗಳನ್ವಯುವಾಗಿ ಪುನಾರಚಿತವಾದ ಇಲ್ಲವೆ ಸ್ಥಾಪಿತವಾದ ತಾಲೂಕ ಬೋರ್ಡದಲ್ಲಿ, ಸರಕಾರದಿಂದ ನಾಮಕರಣ ಹೊಂದಿದ ಸದಸ್ಯರು ಇರತಕ್ಕದ್ದು. ಮತ್ತು ಅಂತಹ ಸದಸ್ಯರು ಎಷ್ಟು ಶಕ್ಯವಾಗುವುದೋ ಅಷ್ಟು ಮಟ್ಟಿಗೆ ಉಪಕಲಮು (೧) ರನ್ವಯುವಾಗಿ ಮುರಗಡೆ ಮಾಡಲ್ಪಟ್ಟ ತಾಲೂಕ ಬೋರ್ಡದ ಸದಸ್ಯರಾಗಿದ್ದ ವ್ಯಕ್ತಿಗಳೇ ಆಗಿರತಕ್ಕದ್ದು.

(೪) ತಾಲೂಕ ಬೋರ್ಡದ ಅಧ್ಯಕ್ಷ, ಉಪಾಧ್ಯಕ್ಷರು ಈ ಕಾಯಿದೆಯಲ್ಲಿ ಅನುಕೂಲಿಸಲಾದ ರೀತಿಯಲ್ಲಿ ಚುನಾಯಿತರಾಗತಕ್ಕದ್ದು.

(೫) ಹೀಗೆ ಪುನಾರಚಿತವಾದ ಇಲ್ಲವೆ ಸ್ಥಾಪಿತವಾದ ತಾಲೂಕ ಬೋರ್ಡದ ಅಧಿಕಾರ ಕಾಲಾವಧಿಯು ಸರಕಾರವು ಲೇಖಿಯಾಗಿ ಹುಕುಮಿನಿಂದ

ನಿರ್ದಿಷ್ಟಪಡಿಸುವಷ್ಟು, ಆದರೂ ಒಂದು ವರುಷ ಮೀರದಂತಹ ಕಾಲಾವಧಿಯ ವರೆಗೆ ಇರತಕ್ಕದ್ದು.

(೬) ಉಪಕಲಮು (೫) ರ ಶರತುಗಳನುಸಾರವಾಗಿ ತಾಲೂಕ ಬೋರ್ಡದ ಅಧಿಕಾರ ಕಾಲಾವಧಿಯು ಮುಗಿದ ನಂತರ, ಈ ಕಾಯಿದೆಯಲ್ಲಿ ಅನುಸರಿಸಲಾದ ರೀತಿಯಲ್ಲಿ ತಾಲೂಕ ಬೋರ್ಡು ರಚಿಸಲ್ಪಡತಕ್ಕದ್ದು.

(೭) ಈ ಕಲಮಿನನ್ವಯವಾಗಿ ತಾಲೂಕ ಬೋರ್ಡು ಮುರಗಡೆ ಮಾಡಲ್ಪಟ್ಟ ಮತ್ತು ಪುನಾರಚಿತವಾದಾಗ ಇಲ್ಲವೆ ಸ್ಥಾಪಿತವಾದಾಗ ಮುರಗಡೆ ಮಾಡಲ್ಪಟ್ಟ ತಾಲೂಕ ಬೋರ್ಡದ ಅಂತರ್ಗವಾಗಿರುವ ತಾಲೂಕ ಬೋರ್ಡದ ನಿಧಿ ಮತ್ತು ಇತರ ಆಸ್ತಿಯು ಪುನಾರಚಿತವಾದ ಇಲ್ಲವೆ ಸ್ಥಾಪಿತವಾದ ತಾಲೂಕ ಬೋರ್ಡದ ಅಂತರ್ಗತವಾಗಿರತಕ್ಕದ್ದು. ಮತ್ತು ಅಂತಹ ಸಾಲ ಮತ್ತು ಹೊಣೆಗಾರಿಕೆಗಳು ಈ ಕಲಮಿನ ಪ್ರಕಾರ ಪುನಾರಚಿತವಾದ ಇಲ್ಲವೆ ಸ್ಥಾಪಿತವಾದ ತಾಲೂಕ ಬೋರ್ಡಿಗೆ ಸರಕಾರವು ಲೇಖೀ ಹುಕುಮಿನಿಂದ ನಿರ್ದೇಶಿಸಬಹುದಾದಂತೆ ಹಸ್ತಾಂತರಿಸಲ್ಪಡತಕ್ಕದ್ದು.

(೮) ಮುರಗಡೆಯಾದ ತಾಲೂಕ ಬೋರ್ಡದ ಹಕ್ಕುಗಳು ಹಾಗೂ ಹೊಣೆಗಾರಿಕೆಗಳು ದಿವಾಣಿ ಮತ್ತು ಅಪರಾಧಿಕ ಪ್ರಕರಣಗಳ ಸಂಬಂಧವಾಗಿ, ಕರಾರುಗಳು, ಒಪ್ಪಂದಗಳು, ಮತ್ತು ಇತರ ವಿಷಯಗಳ ಸಂಬಂಧವಾಗಿ ಇಲ್ಲವೆ ಹುಕುಮಿನ ಯಾವುದೇ ಭಾಗದಲ್ಲಿ ಉಂಟಾಗುವ ಇಲ್ಲವೆ ಸಂಬಂಧಪಟ್ಟ ಇತರ ಸಂಗತಿಗಳು ಪುನಾರಚಿತವಾದ ಇಲ್ಲವೆ ಸ್ಥಾಪಿತವಾದ ತಾಲೂಕ ಬೋರ್ಡದ ಅಧಿಕಾರದಂಕಿತವಾಗಿ ಅಂತಹ ತಾಲೂಕ ಬೋರ್ಡದ ಅಂತರ್ಗತವಾಗಿರತಕ್ಕದ್ದು.

(೯) ಮುರಗಡೆ ಮಾಡಲ್ಪಟ್ಟ ತಾಲೂಕ ಬೋರ್ಡದಿಂದ ಯಾವುದು ಪುನಾರಚಿತವಾಗಿರುವುದೋ ಇಲ್ಲವೆ ಸ್ಥಾಪಿತವಾಗಿರುವುದೋ ಆ ತಾಲೂಕ ಬೋರ್ಡದ ಅಧಿಕಾರದ ಅಂಕಿತವಾಗಿರುವ ಪ್ರಾದೇಶದ ಯಾವುದೇ ಭಾಗಕ್ಕೆ ಸಂಬಂಧಪಟ್ಟು ಮಾಡಿದ, ಹೊರಡಿಸಿದ, ಹಾಕಿದ ಇಲ್ಲವೆ ದಯಪಾಲಿಸಲಾದ ಯಾವುದೇ ನೇಮಕ, ಪ್ರಕಟನೆ, ನೋಟೀಸು, ಕರ, ಹುಕುಮು, ಯೋಜನೆ, ಲಾಯಿಸೆನ್ಸು, ಪರವಾನಗಿ, ನಿಯಮ, ಕ್ರಮನಿಯಮ, ಇಲ್ಲವೆ ನಮೂನೆ ಇಂತಹ ತಾಲೂಕ ಬೋರ್ಡದಿಂದ ಮಾಡಿದ, ಹೊರಡಿಸಿದ, ಹಾಕಿದ ಇಲ್ಲವೆ ದಯಪಾಲಿಸಲಾದ ನೇಮಕದಿಂದ, ಪ್ರಕಟನೆಯಿಂದ, ನೋಟೀಸಿನಿಂದ, ಕರದಿಂದ, ಹುಕುಮಿನಿಂದ, ಯೋಜನೆಯಿಂದ, ಲಾಯಿಸೆನ್ಸದಿಂದ, ಪರವಾನಗಿಯಿಂದ, ನಿಯಮದಿಂದ, ಕ್ರಮನಿಯಮದಿಂದ, ಇಲ್ಲವೆ ನಮೂನೆಯಿಂದ, ಹಿಂದೆ ಸರಿಸುವತನಕ ಇಲ್ಲವೆ ಹೊರತು, ತಿದ್ದುಪಡಿ ಮಾಡುವ ತನಕ ಇಲ್ಲವೆ ಹೊರತು. ಇಂತಹ ತಾಲೂಕ

ಬೋರ್ಡದಿಂದ ಮಾಡಿದ್ದುವೆಂದು, ಹೊರಡಿಸಲಾದುವೆಂದು, ಹಾಕಲಾದುವೆಂದು, ಇಲ್ಲವೆ ದಯಪಾಲಿಸಲಾದುವೆಂದು ಗಣಿಸಲ್ಪಡತಕ್ಕದ್ದು.

(೧೦) ಈ ಹಿಂದಿನ ಉಪಕಲಮಿನ ಶರತುಗಳನ್ನು ಪರಿಣಾಮಕಾರಿಯಾಗಿ ಮಾಡುವ ಪ್ರಸಂಗದಲ್ಲಿ ಯಾವುದೇ ಆತಂಕ ಉಂಟಾದರೆ, ಸರಕಾರವು ಅಧಿಕೃತ ಗ್ಯಾಜೆಟದಲ್ಲಿ ಪ್ರಸಿದ್ಧಿಸಿದ ಹುಕುಮಿನಿಂದ ಪ್ರಸಂಗಕ್ಕೆ ತಕ್ಕಂತೆ ಆತಂಕ ನಿವಾರಣೆಗಾಗಿ ಯಾವುದನ್ನೂ ಮಾಡುವುದು ಅವಶ್ಯವೆಂದು ಅನ್ನಿಸುವುದೋ ಅಂತಹ ಯಾವುದನ್ನು ಮಾಡಬಹುದು.

**ವಿವೇಚನೆ**

ಹೊಸ ತಾಲೂಕ ರಚನೆಯಾದರೆ ಇಲ್ಲವೆ ಬೇರೆ ಯಾವುದೇ ಕಾರಣದಿಂದ ತಾಲೂಕದ ಪ್ರಾದೇಶಿಕ ಮಿತಿಯಲ್ಲಿ ಬದಲಾವಣೆ ಆದರೆ, ತಾಲೂಕದ ರಚನೆ ಬೇರೆಯಾಗಬೇಕಾಗುವುದು. ಆದ್ದರಿಂದ ಅಲ್ಲಿಯ ತನಕ ಇದ್ದ ತಾಲೂಕ ಬೋರ್ಡನ್ನು ಮುರಗಡೆ ಮಾಡಿ ಹೊಸದನ್ನು ಸ್ಥಾಪಿಸಬೇಕಾಗುವುದು. ಪುನಾರಚಿತವಾಗಿ ಮಾಡಬೇಕಾಗುವುದು. ಹೀಗೆ ಆಗುವುದರಿಂದ ಬೋರ್ಡಧಲ್ಲಿ ಸ್ಥಿತ್ಯಂತರಗಳಾಗುವುವು. ಮುರಗಡೆಯಾದ ಬೋರ್ಡದ ಸದಸ್ಯರು ತಮ್ಮ ಸ್ಥಳವನ್ನು ಖಾಲೀ ಮಾಡಬೇಕಾಗುವುದು. ಆಗ ಸರಕಾರವು ಒಂದು ಮಧ್ಯಂತರ ಬೋರ್ಡು ರಚನೆ ಮಾಡುವುದು. ಸ್ಥಳ ಖಾಲೀ ಮಾಡಿದ ವ್ಯಕ್ತಿಗಳನ್ನು ಶಕ್ಯವಾದಮಟ್ಟಿಗೆ ನಾಮಕರಣದ ಸದಸ್ಯರನ್ನಾಗಿ ಮಾಡಿ ಮಧ್ಯಂತರ ಬೋರ್ಡನ್ನು ಸರಕಾರವು ರಚನೆ ಮಾಡುವುದು. ಇದರ ಕಾಲಾವಧಿ ೧ ವರುಷಕ್ಕಿಂತ ಹೆಚ್ಚು ಇಲ್ಲ ಈ ಅವಧಿಯಲ್ಲಿ ಬೋರ್ಡು ತನ್ನ ಅಧ್ಯಕ್ಷ ಉಪಾಧ್ಯಕ್ಷರನ್ನು ಚುನಾಯಿಸಿಕೊಳ್ಳಬೇಕು. ಮಧ್ಯಂತರ ಅವಧಿ ಮುಗಿದಮೇಲೆ ಈ ಕಾಯಿದೆಯ ಪ್ರಕಾರ ತಾಲೂಕ ಬೋರ್ಡು ರಚನೆಯಾಗತಕ್ಕದ್ದು.

ಮುರಗಡೆಯಾದ ಬೋರ್ಡದ ನಿಧಿ ಮತ್ತು ಆಸ್ತಿಯು ಪುನಾರಚಿತವಾದ ಇಲ್ಲವೆ ಸ್ಥಾಪಿತವಾದ ಬೋರ್ಡಿಗೆ ವರ್ಗಾಯಿಸುವುದು ಸರಕಾರದ ಕಾರ್ಯ. ಹಿಂದಿನ ಸಾಲ-ಸೊತ್ತು-ಹೊಣೆಗಾರಿಕೆಗಳು ಸರಕಾರದ ಹುಕುಮಿನ ಪ್ರಕಾರ ನಡೆಯಿಸತಕ್ಕದ್ದು. ಈ ಮಾತು, ಹಿಂದೆ ಜಾರಿಯಲ್ಲಿದ್ದ ಕರಾರು, ಪ್ರಕರಣಗಳು, ಒಪ್ಪಂದಗಳು ಇವುಗಳಿಗೂ ಅನ್ವಯಿಸುತ್ತದೆ. ಅಲ್ಲದೆ ತಾಲೂಕ ಬೋರ್ಡು ಮುರಗಡೆಯಾಗಿ ಬೇರೊಂದು ಸ್ಥಾಪಿತವಾದರೂ ಹಿಂದಿನ ಬೋರ್ಡದ ಎಲ್ಲ ಕಾರ್ಯಗಳು ಮುಂದಿನ ಬೋರ್ಡಿನ ಅಧಿಕಾರದಿಂದ ಹಿಂದೆ ಸರಿಸಲ್ಪಡುವತನಕ ಜಾರಿಯಲ್ಲಿ ಉಳಿಯುವುವು; ಹೊಸ ಬೋರ್ಡು ಮಾಡಿದ ಹಾಗೆಯೇ ಉಳಿಯುವುವು.

ಈ ಎಲ್ಲ ಕಾರ್ಯ ನಡೆಯುವಾಗ ಆತಂಕಗಳು ಬಂದರೆ ಅವನ್ನು ನಿವಾರಿಸಲು ಸರಕಾರಕ್ಕೆ ಅಧಿಕಾರವಿದೆ.

## ೨೪೦. ನೋಟೀಸು ಮುಂತಾದ್ದನ್ನು ಜಾರಿ ಮಾಡುವ ವಿಧಾನ

(೧) ಈ ಕಾಯಿದೆಯಲ್ಲಿ ಬೇರೆಯಾಗಿ ಅನುಕೂಲಿಸಲಾಮವನ್ನು ಬಿಟ್ಟು ಈ ಕಾಯಿದೆಯನ್ವಯವಾಗಿ ಇಲ್ಲವೆ ಈ ಕಾಯಿದೆಯನ್ವಯವಾಗಿ ಮಾಡಿದ ಯಾವುದೇ ನಿಯಮ, ಕ್ರಮನಿಯಮ, ಪ್ರೋಟನಿಯಮ ಇಲ್ಲವೆ ಹುಕುಮಿನ ಅನ್ವಯವಾಗಿರುವ ಯಾವುದೇ ನೋಟೀಸು ಯಾರ ಹೆಸರಿಗೆ ಅದು ಉದ್ದೇಶಿತ ವಾಗಿರುವುದೋ ಆ ವ್ಯಕ್ತಿಗೆ—

(ಅ) ಆ ನೋಟೀಸನ್ನು ಇಲ್ಲವೆ ಕಾಗದವನ್ನು ಅಂತಹ ವ್ಯಕ್ತಿಗೆ ಕೊಡುವುದ ರಿಂದ ಇಲ್ಲವೆ ಕೊಡಮಾಡುವುದರಿಂದ ಜಾರಿ ಮಾಡಲ್ಪಡತಕ್ಕದ್ದು; ಇಲ್ಲವೆ

(ಬ) ಇಂತಹ ವ್ಯಕ್ತಿಯು ಸಿಕ್ಕದಿದ್ದರೆ, ಇಂತಹ ನೋಟೀಸನ್ನು ಇಲ್ಲವೆ ಕಾಗದವನ್ನು ಗೊತ್ತಿದ್ದ ಅವನ ವಾಸಸ್ಥಳ ಇಲ್ಲವೆ ವ್ಯವಹಾರದ ಸ್ಥಳವೆಂದು ಈ ಹಿಂದೆ ಇದ್ದದ್ದು ಅಲ್ಲಿ ಅದನ್ನು ಇಟ್ಟು ಇಲ್ಲವೆ ಅದನ್ನು ಕುಟುಂಬದ ವಯಸ್ಕ ಗಂಡಸಿಗೆ ಇಲ್ಲವೆ ಸೇವಕನಿಗೆ ಕೊಡುವುದರಿಂದ ಇಲ್ಲವೆ ಕೊಡಮಾಡುವುದರಿಂದ ಜಾರಿ ಮಾಡಲ್ಪಡತಕ್ಕದ್ದು.

(ಕ) ಆ ಗ್ರಾಮದಲ್ಲಿ ಇಲ್ಲವೆ ಪಟ್ಟಣದಲ್ಲಿ ಅಂತಹ ವ್ಯಕ್ತಿಯು ವಾಸ ವಾಗಿರದಿದ್ದರೆ ಮತ್ತು ಇಂತಹ ನೋಟೀಸು ಇಲ್ಲವೆ ಕಾಗದವು ಜಾರಿಸಲ್ಪಡ ಬೇಕೆಂದು ನಿರ್ದೇಶನ ಮಾಡುವ ಅಧಿಕಾರಿಗೆ ಆ ವ್ಯಕ್ತಿಯ ಬೇರೆ ಕಡೆಯ ವಿಳಾಸವು ಗೊತ್ತಿದ್ದರೆ ರಜಿಸ್ಟರ್ಡ ಪೋಸ್ಟಿನಿಂದ ಕಳಿಸಿ ಅದನ್ನು ಜಾರಿ ಮಾಡತಕ್ಕದ್ದು. ಇಲ್ಲವೆ,

(ಡ) ಮೇಲೆ ಹೇಳಿದ ಯಾವುದೇ ಸಾಧನವು ದೊರೆಯದಿದ್ದರೆ, ಇಂತಹ ನೋಟೀಸು ಇಲ್ಲವೆ ಕಾಗದವನ್ನು ಈ ಹಿಂದೆ ವಾಸವಾಗಿದ್ದನೆಂದು ಇಲ್ಲವೆ ವ್ಯವ ಹಾರ ನಡೆಸಿದನೆಂದು ಇಲ್ಲವೆ ಸ್ವಂತಕ್ಕಾಗಿ ಲಾಭಕ್ಕಾಗಿ ಕಾರ್ಯ ಮಾಡುತ್ತಿದ್ದ ನೆಂದು ತಿಳಿದ ಮನೆ ಯಾವುದಾದರೂ ಇದ್ದರೆ, ಅದರಲ್ಲಿ ಎದ್ದು ಕಾಣುವ ಭಾಗಕ್ಕೆ ಅಂಟಿಸಿ ಜಾರಿ ಮಾಡತಕ್ಕದ್ದು.

(೨) ಒಂದು ಕಟ್ಟಡದ ಇಲ್ಲವೆ ಭೂಮಿಯ ಮಾಲಕನ ಇಲ್ಲವೆ ಸ್ವಾಧೀನ ದಲ್ಲಿಟ್ಟುಕೊಂಡವನ ಮೇಲೆ ಯಾವುದೇ ನೋಟೀಸು ಇಲ್ಲವೆ ಬೇರೆ ಕಾಗದವು ಜಾರಿ ಮಾಡಲ್ಪಡಬೇಕಾಗಿದ್ದಾಗ, ಅದರಲ್ಲಿಯ ಮಾಲಕ ಇಲ್ಲವೆ ಸ್ವಾಧೀನದಲ್ಲಿಟ್ಟು ಕೊಂಡವನನ್ನು ಹೆಸರಿಸುವ ಅವಶ್ಯಕತೆ ಉಂಟಾಗತಕ್ಕದ್ದಲ್ಲ. ಮತ್ತು ಈ ಕಾಯಿದೆಯಲ್ಲಿ ಬೇರೆಯಾಗಿ ನಿರ್ದಿಷ್ಟವಾಗಿ ಅನುಕೂಲಿಸಲಾಗದೆ ಇದ್ದ ಸಂದರ್ಭ ದಲ್ಲಿ ಅದನ್ನು—

(ಅ) ಮಾಲಕನಿಗೆ ಇಲ್ಲವೆ ಸ್ವಾಧೀನದಲ್ಲಿಟ್ಟುಕೊಂಡವನಿಗೆ ಆ ನೋಟೀ ಸನ್ನು ಇಲ್ಲವೆ ಕಾಗದವನ್ನು ಕೊಡುವುದರಿಂದ ಇಲ್ಲವೆ ಕೊಡಮಾಡುವುದರಿಂದ

ಇಲ್ಲವೆ ಒಬ್ಬರಕಿಂತ ಹೆಚ್ಚು ಮಾಲಕರು ಇಲ್ಲವೆ ಸ್ವಾಧೀನದಲ್ಲಿಟ್ಟುಕೊಂಡವರು ಇದ್ದರೆ, ಅವರಲ್ಲಿ ಯಾರೊಬ್ಬರಿಗೆ ಕೊಡುವುದರಿಂದ ಇಲ್ಲವೆ ಕೊಡಮಾಡುವುದರಿಂದ ಜಾರಿ ಮಾಡತಕ್ಕದ್ದು.

(ಬ) ಅಂತಹ ಮಾಲಕನು ಇಲ್ಲವೆ ಸ್ವಾಧೀನದಲ್ಲಿಟ್ಟುಕೊಂಡವನು ಸಿಕ್ಕದಿದ್ದರೆ, ಆ ನೋಟೀಸನ್ನು ಇಲ್ಲವೆ ಕಾಗದವನ್ನು ಮೇಲೆ ಹೇಳಿದ ಮಾಲಕನ ಇಲ್ಲವೆ ಸ್ವಾಧೀನದಲ್ಲಿಟ್ಟುಕೊಂಡವನ ಕುಟುಂಬದ ವಯಸ್ಕ ಗಂಡಸಿಗೆ ಇಲ್ಲವೆ ಸೇವಕನಿಗೆ ಕೊಡುವುದರಿಂದ ಇಲ್ಲವೆ ಕೊಡಮಾಡುವುದರಿಂದ ಜಾರಿ ಮಾಡತಕ್ಕದ್ದು.

(ಕ) ಮೇಲೆ ಹೇಳಿದ ಯಾವುದೇ ಸಾಧನವು ದೊರೆಯದಿದ್ದರೆ ಯಾವುದಕ್ಕೆ ಆ ನೋಟೀಸು ಇಲ್ಲವೆ ಕಾಗದ ಸಂಬಂಧವಿದೆಯೋ ಅಂತಹ ಕಟ್ಟಡದ ಇಲ್ಲವೆ ಭೂಮಿಯ ಎದ್ದು ಕಾಣುವ ಭಾಗಕ್ಕೆ ಅದನ್ನು ಅಂಟಿಸುವುದರಿಂದ ಜಾರಿ ಮಾಡತಕ್ಕದ್ದು.

(೩) ಅದರಲ್ಲಿ ನಿರ್ದಿಷ್ಟಪಡಿಸಿದ ವ್ಯಕ್ತಿಗಳಿಗೆ ಜಾರಿ ಮಾಡಬೇಕೆಂದು ಈ ಕಾಯಿದೆಯ ಪ್ರಕಾರ ಪ್ರಕಟವಾಗಿ ಅಗತ್ಯವಾಗಿರದಿದ್ದರೆ, ಈ ಕಾಯಿದೆಯು ಪಂಚಾಯತ ಇಲ್ಲವೆ ತಾಲೂಕ ಬೋರ್ಡು ಕೊಡಬೇಕೆಂದು ಹೇಳಿದ ಇಲ್ಲವೆ ಕೊಡಲು ಅಧಿಕರಿಸಿದ ಪ್ರತಿಯೊಂದು ನೋಟೀಸು ಸಾರ್ವಜನಿಕ ನೋಟೀಸೆಂದು ಇಲ್ಲವೆ ಸಾಮಾನ್ಯವಾಗಿ ಕೊಡಲ್ಪಟ್ಟಿದ್ದ ಇಲ್ಲವೆ ಕಾಯಿದೆಯ ಶರತುಗಳಿಂದ ಕೊಡಬೇಕಾಗಿದ್ದುದು, ಅದರ ಒಂದು ಪ್ರತಿಯನ್ನು ತಾಲೂಕ ಬೋರ್ಡದ ಇಲ್ಲವೆ ಪಂಚಾಯತದ ಕಚೇರಿಯಲ್ಲಿ ಎದ್ದು ಕಾಣುವ ಸ್ಥಳದಲ್ಲಿ ಇಂತಹ ಕಾಲಾವಧಿಯಲ್ಲಿ ಮತ್ತು ಬೇರೆ ಸಾರ್ವಜನಿಕ ಕಟ್ಟಡಗಳಲ್ಲಿಯ ಎದ್ದು ಕಾಣುವ ಭಾಗದಲ್ಲಿ ಅಂಟಿಸಿ ಇಲ್ಲವೆ ಸ್ಥಳೀಯ ವೃತ್ತಪತ್ರಿಕೆಗಳಲ್ಲಿ ಪ್ರಕಟಿಸಿ, ಇಲ್ಲವೆ ಈ ಸಂಬಂಧವಾಗಿ ಪಂಚಾಯತ ಇಲ್ಲವೆ ತಾಲೂಕ ಬೋರ್ಡು ನಿರ್ದೇಶಿಸಬಹುದಾದ ಬೇರೆ ರೀತಿಯಲ್ಲಿ ಪ್ರಸಿದ್ಧಿಸಿ, ಜಾರಿ ಮಾಡಿದರೆ, ಅದು ಯೋಗ್ಯವಾಗಿ ಕೊಡಲ್ಪಟ್ಟ ಇಲ್ಲವೆ ಜಾರಿ ಮಾಡಿದ ನೋಟೀಸು ಎಂದು ಗಣಿಸಲ್ಪಡತಕ್ಕದ್ದು.

(೪) ನಮೂನೆಯಲ್ಲಿಯ ದೋಷದ ಸಲುವಾಗಿ ಯಾವುದೇ ನೋಟೀಸು ಇಲ್ಲವೆ ಬಿಲ್ಲು ಕಾಯಿದೆಬದ್ಧವಲ್ಲವೆಂದಾಗತಕ್ಕದ್ದಲ್ಲ.

(೫) ಈ ಕಾಯಿದೆಯ ಇಲ್ಲವೆ ಅದರನ್ವಯವಾಗಿ ಮಾಡಿದ ನಿಯಮಗಳ, ಕ್ರಮನಿಯಮಗಳ, ಪೋಟನಿಯಮಗಳ ಇಲ್ಲವೆ ಹುಕುಮುಗಳ ಅನ್ವಯವಾಗಿ ಯಾವುದೇ ನೋಟೀಸು ಇಲ್ಲವೆ ಇತರ ಕಾಗದವು ಜಾರಿ ಮಾಡಲ್ಪಟ್ಟಾಗ, ಯಾವುದೇ ಕರವನ್ನು ಕೊಡಲಿಕ್ಕೆ, ಇಲ್ಲವೆ ಇತರ ಹಣವನ್ನು ಕೊಡಲಿಕ್ಕೆ ಇಲ್ಲವೆ ಯಾವುದೇ ಕಾಮಗಿರಿ ನಿರ್ವಹಿಸಲಿಕ್ಕೆ, ಇಲ್ಲವೆ ಯಾವುದನ್ನಾವರೂ ಅನುಕೂಲಿಸಲಿಕ್ಕೆ ಒಂದು

ಕಾಲಾವಧಿ ಗೊತ್ತು ಮಾಡಲ್ಪಟ್ಟಿರುತ್ತದೆ. ಈ ಕಾಯಿದೆಯಲ್ಲಿ ಇಲ್ಲವೆ ಅದರನ್ವಯ ವಾಗಿ ಮಾಡಿದ ಆ ನಿಯಮಗಳಲ್ಲಿ, ಕ್ರಮನಿಯಮಗಳಲ್ಲಿ, ಪೋಟ ನಿಯಮಗಳಲ್ಲಿ ಇಲ್ಲವೆ ಹುಕುಮುಗಳಲ್ಲಿ ಯಾವುದೇ ವಿರುದ್ಧವಾದ ಶರತುಗಳು ಇಲ್ಲದಿರುವಾಗ ಈ ಕಾಲಾವಧಿಯು ಅದು ಜಾರಿಯಾದ ತಾರೀಖಿನಿಂದಲೇ ಎಣಿಸಲ್ಪಡತಕ್ಕದ್ದು.

(೬) ಈ ಕಾಯಿದೆಯ ಇಲ್ಲವೆ ಯಾವುದೇ ನಿಯಮದ, ಕ್ರಮನಿಯಮದ ಪೋಟ ನಿಯಮದ ಇಲ್ಲವೆ ಹುಕುಮಿನ ಅನ್ವಯವಾಗಿರುವ ಯಾವುದೇ ನೋಟೀಸು ಯಾವುದೇ ಕಾರ್ಯವನ್ನು ಮಾಡಲು ಹೇಳಿ ಕಾಲಾವಧಿಯನ್ನು ನಿಶ್ಚಿತಗೊಳಿಸ ದಿದ್ದರೆ, ಆ ಕಾರ್ಯವು ಮಾಡಲ್ಪಡಲಿಕ್ಕೆ ಆ ನೋಟೀಸು ಯೋಗ್ಯ ಕಾಲಾವಧಿ ಯನ್ನು ಗೊತ್ತುಮಾಡತಕ್ಕದ್ದು.

(೭) ನೋಟೀಸಿನ ಕರಾರುಗಳ ಪ್ರಕಾರ ಕಾರ್ಯವು ಆಗದೇ ಇದ್ದ ಸಂದರ್ಭದಲ್ಲಿ, ನೋಟೀಸಿನಲ್ಲಿ ಮಾಡಲು ಹೇಳಿದ ಕಾರ್ಯವು ಮಾಡಲ್ಪಡುವುದಕ್ಕೆ ಆವಶ್ಯಕವಾದಂತಹ ಕ್ರಮವನ್ನು ತೆಗೆದುಕೊಳ್ಳಲು ಪಂಚಾಯತಕ್ಕೆ ಇಲ್ಲವೆ ತಾಲೂಕ ಬೋರ್ಡಿಗೆ ಇಲ್ಲವೆ ಅದರಿಂದ ಅಧಿಕರಿಸಲ್ಪಟ್ಟ ಅಧಿಕಾರಿಗೆ, ಕಾಯಿದೆ ಬದ್ಧವಾಗಿರತಕ್ಕದ್ದು. ಮತ್ತು ಆ ಬಗ್ಗೆ ಪಂಚಾಯತದಿಂದ ಇಲ್ಲವೆ ತಾಲೂಕ ಬೋರ್ಡದಿಂದ ಮಾಡಬೇಕಾಗಿ ಬಂದ ವೆಚ್ಚವು ಯಾರ ಮೇಲೆ ನೋಟೀಸು ಜಾರಿ ಮಾಡಲಾಗಿದ್ದಿತೋ ಆ ವ್ಯಕ್ತಿಯಿಂದ ಇಲ್ಲವೆ ವ್ಯಕ್ತಿಗಳಿಂದ ಕೊಡಲ್ಪಡಬೇಕು. ಮತ್ತು ಕಲಮು ೭೭ ಇಲ್ಲವೆ ೧೮೫ ರಲ್ಲಿ ಹೇಳಿದ ರೀತಿಯಂತೆ ವಸೂಲ ಮಾಡಲ್ಪ ಡಲು ಯೋಗ್ಯವಾಗತಕ್ಕದ್ದು.

## ವಿವೇಚನೆ

ನೋಟೀಸು ಮುಂತಾದ ಕಾಗದಪತ್ರಗಳನ್ನು ಜಾರಿಮಾಡುವ ವಿಧಾನದ ಬಗ್ಗೆ ಇಲ್ಲಿ ಹೇಳಲಾಗಿದೆ. ಇದೊಂದು ಮಹತ್ವದ ಮಾತು. ನೋಟೀಸು ಕೊಡಬೇ ಕೆಂದು ಕಾಯಿದೆಯಲ್ಲಿ ಹೇಳಿದ ಮೇಲೆ ಅದನ್ನು ಜಾರಿ ಮಾಡುವ ವಿಧಾನದ ಬಗ್ಗೆಯೂ ಹೇಳಲೇಬೇಕು. ನೋಟೀಸು ಯಾರಿಗೆ ಕೊಡಬೇಕಾಗಿದೆಯೋ ಅವರಿಗೆ ಕೊಡುವುದು, ಕೊಡಮಾಡುವುದು, ಅವನು ಪ್ರತ್ಯಕ್ಷ ಸಿಕ್ಕದಿದ್ದರೆ, ಅವನ ಮನೆ ಯಲ್ಲಿ ಇಡುವುದು, ಮನೆಯಲ್ಲಿಯ ವಯಸ್ಕ ಗಂಡಸಿಗೆ ಮುಟ್ಟಿಸುವುದು; ಸೇವಕನಿಗೆ ಮುಟ್ಟಿಸುವುದು. ಇವರು ಯಾರೂ ದೊರೆಯದಿದ್ದರೆ, ಮನೆಗೆ ಅಂಟಿಸುವುದು. ಗ್ರಾಮದಲ್ಲಿ ಇಲ್ಲವೆ ಊರಲ್ಲಿ ವಾಸವಾಗಿರದೆ ಬೇರೆಡೆಗೆ ಎಲ್ಲಿಯಾದರೂ ಇರುವ ನೆಂದು ತಿಳಿದು ಅಲ್ಲಿಯ ವಿಳಾಸ ಗೊತ್ತಾಗಿದ್ದರೆ, ಅಲ್ಲಿಗೆ ರಜಿಸ್ಟರ್ಡ ಅಂಚೆ ಯಿಂದ ಕಳಿಸತಕ್ಕದ್ದು. ಇದರಲ್ಲಿ ಒಂದು ಕ್ರಮವಿದೆ. ಯಾರ ಹೆಸರಿಗೆ ನೋಟೀಸು ಇರುವುದೋ ಅವನಿಗೆ ಕೊಡುವುದು ಮೊದಲ ಕೆಲಸ; ಅದು

ಸಾಧ್ಯವಾಗದಿದ್ದರೆ, ಮೇಲೆ ಹೇಳಿದಂತೆ ಒಂದೊಂದಾಗಿ ಬೇರೆ ಬೇರೆ ವಿಧಾನಗಳನ್ನು ಅನುಸರಿಸಬೇಕು. ಈ ಮಾತು ಉಳಿದ ಕಾಗದಗಳಿಗೂ ಅನ್ವಯಿಸುವುದು.

ಹೀಗೆ ವೈಯಕ್ತಿಕವಲ್ಲದ ನೋಟೀಸುಗಳು ಇರುವುವು. ಅವು ಸಾರ್ವಜನಿಕ ಇಲ್ಲವೆ ಸಾಮಾನ್ಯ ಸ್ವರೂಪದವು. ಅವು ಜಾರಿಯಾಗುವುದು ಹೇಗೆ? ಕಚೇರಿಯಲ್ಲಿ ಅಂಟಿಸುವುದು; ಸಾರ್ವಜನಿಕ ಕಟ್ಟಡಗಳಿಗೆ ಅಂಟಿಸುವುದು; ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಿಸುವುದು. ಹೀಗೆ ಮಾಡಿದರೆ ಸಾರ್ವಜನಿಕರಿಗೆ ನೋಟೀಸು ಕೊಟ್ಟಂತೆ.

ನೋಟೀಸಿನಲ್ಲಿ ಕಾಲಮಿತಿಯನ್ನು ಹಾಕಬಹುದು. ಈ ಕಾಲಮಿತಿಯ ಬಗ್ಗೆ ಕಾಯದೆಯಲ್ಲಿ ನಿಯಮದಲ್ಲಿ, ಕ್ರಮನಿಯಮದಲ್ಲಿ, ಪೋಟ ನಿಯಮದಲ್ಲಿ ಹೇಳಿದ್ದರೆ ಅಷ್ಟು ಕಾಲಮಿತಿ; ಇಲ್ಲದಿದ್ದರೆ ಯೋಗ್ಯವೆನ್ನಿಸುವ ಕಾಲಮಿತಿ ಹಾಕಬೇಕು. ಆ ಕಾಲಮಿತಿಯು ಆ ನೋಟೀಸು ಜಾರಿಯಾದ ದಿನದಿಂದ ಪ್ರಾರಂಭವಾಗುವುದು. ನೋಟೀಸಿನ ನಮೂನೆಯಲ್ಲಿ ಏನಾದರೂ ದೋಷವಿದ್ದರೆ, ಅದು ಕಾಯದೆಬದ್ಧ ನೋಟೀಸು ಅಲ್ಲ ಎಂದು ಅನ್ನಲಾಗದು. ಏಕೆಂದರೆ ಅದರಲ್ಲಿ ಕಾಣಿಸಿದ ಸಂಗತಿ ಮುಖ್ಯವೆ ಹೊರತು, ನಮೂನೆಯಲ್ಲ.

ನೋಟೀಸಿನಲ್ಲಿ ಕಾಣಿಸಿದ ಕಾರ್ಯವನ್ನು ಜಾರಿ ಯಾರ ಮೇಲೆ ಆಗಿರುವುದೋ ಆ ವ್ಯಕ್ತಿಯು ಮಾಡಿಸದಿದ್ದರೆ, ಪಂಚಾಯತವು ಇಲ್ಲವೆ ಬೋರ್ಡು ಮಾಡಿಸಿ, ಆ ವ್ಯಕ್ತಿಯಿಂದ ವೆಚ್ಚವನ್ನು ವಸೂಲ ಮಾಡತಕ್ಕದ್ದು. ಕಾರ್ಯ ಆಗಬೇಕಾಗಿರುದು ಮುಖ್ಯ. ಏಕೆಂದರೆ ಅದರಿಂದ ಸಾರ್ವಜನಿಕ ಹಿತವಾಗುವುದು.

## ೨೪೧. ಸಂಧಿಕಾಲದ ಶರತುಗಳು

(೧) ಈ ಕಾಯಿದೆಯಲ್ಲಿ ಏನೇ ಹೇಳಲಾಗಿದ್ದರೂ—

(i) ಸರಕಾರವು—

(ಅ) ಈ ಕಾಯಿದೆಯು ಪ್ರಾರಂಭವಾಗುವುದಕ್ಕೆ ತತ್‌ಕ್ಷಣ ಮುಂಚಿತವಾಗಿ ಜಿಲ್ಲೆಗಳಲ್ಲಿ ಡಿಸ್ಟ್ರಿಕ್ಟ ಬೋರ್ಡುಗಳೆಂದು ಕಾರ್ಯ ಮಾಡುತ್ತಿದ್ದ ಸಂಸ್ಥೆಗಳ ಸದಸ್ಯರ ಅಧಿಕಾರ ಕಾಲಾವಧಿಯು ಯಾವ ತಾರೀಖಿಗೆ ಮುಕ್ತಾಯವಾಗುವುದೆಂಬುದನ್ನು ಪ್ರಕಟನೆಯಿಂದ ನಿರ್ದಿಷ್ಟಪಡಿಸುವುದು ಕಾಯಿದೆಬದ್ಧವಾಗತಕ್ಕದ್ದು; ಮತ್ತು

(ಬ) ಉಪ ವಾಕ್ಯಾವಳಿ (ಅ) ದನ್ವಯೆವಾಗಿ ನಿರ್ದಿಷ್ಟಪಡಿಸಿದ ತಾರೀಖಿನಿಂದ, ಪ್ರಕಟನೆಯಿಂದ, ಈ ಕಾಯಿದೆಯ ಶರತುಗಳ ಅನುಸಾರವಾಗಿ ತಾಲೂಕ ಬೋರ್ಡು ರಚಿತವಾಗುವ ತನಕ, ಈ ಕಾಯಿದೆಯನ್ವಯವಾಗಿರುವ ತಾಲೂಕ ಬೋರ್ಡದ ಮತ್ತು ಅದರ ಅಧ್ಯಕ್ಷನ ಕಾರ್ಯಗಳನ್ನು ನಿರ್ವಹಿಸಲಿಕ್ಕೆ ಮತ್ತು ಕರ್ತವ್ಯಗಳನ್ನು ಮಾಡಲಿಕ್ಕೆ ಪ್ರತಿಯೊಂದು ತಾಲೂಕಿಗೆ ಆ ಅಧಿಕಾರಗಳನ್ನು

ನಿರ್ವಹಿಸಲು ಒಬ್ಬ ವಿಶೇಷ ಅಧಿಕಾರಿಯನ್ನು ನೇಮಿಸುವುದು ಕಾಯಿದೆಬದ್ಧ ವಾಗಿರತಕ್ಕದ್ದು.

(ii) ವಾಕ್ಯಾವಳಿ (i) ದಲ್ಲಿಯ ಉಪ ವಾಕ್ಯಾವಳಿ (ಬ) ದನ್ವಯವಾಗಿ ನೇಮಕವಾದ ವಿಶೇಷ ಅಧಿಕಾರಿಗೆ ಅವನ ಕರ್ತವ್ಯ ನಿರ್ವಹಣೆಯಲ್ಲಿ, ಸಲಹೆ ಕೊಡಲು, ಸರಕಾರಕ್ಕೆ ಆವಶ್ಯಕವೆನ್ನಿಸಿದರೆ, ಸರಕಾರವು ನಾಮಕರಣ ಮಾಡ ಬಹುದಾದಂತಹ ವ್ಯಕ್ತಿಗಳುಳ್ಳ ಒಂದು ಕಮಿಟಿಯನ್ನು ಸರಕಾರವು ರಚಿಸಬಹುದು.

(೨) ಈ ಕಾಯಿದೆಯಲ್ಲಿ ಏನೇ ಹೇಳಲಾಗಿದ್ದರೂ—

(ಅ) ಒಂದು ಸಾವಿರದ ಐದು ನೂರು ಜನವಸತಿಗಿಂತ ಕಡಿಮೆ ಇರುವ ಒಂದು ಭೂಕಂದಾಯದ ಗ್ರಾಮಕ್ಕೆ ಇಲ್ಲವೆ ಭೂಕಂದಾಯ ಗ್ರಾಮಗಳ ಗುಂಪಿಗೆ ರಚಿತವಾದ ಪಂಚಾಯತಗಳು ಈ ಕಾಯಿದೆಯು ಪ್ರಾರಂಭವಾದಂದಿನಿಂದ ಮುರ ಗಡೆಯಾಗತಕ್ಕದ್ದು. ಮತ್ತು ಈ ಕಾಯಿದೆಯು ಪಾಸಾದ ನಂತರ ಶಕ್ಯವಾದಷ್ಟು ಬೇಗನೇ ಕಮಿಶನರನು ಮುರಗಡೆಯಾದ ಪಂಚಾಯತಗಳ ಹೆಸರುಗಳನ್ನು ಪ್ರಕ ಟಿಸತಕ್ಕದ್ದು. ಹೀಗೆ ಮುರಗಡೆಯಾದ ನಂತರ, ಇಂತಹ ಒಂದೊಂದು ಪಂಚಾ ಯತದ ಆಸ್ತಿ, ಹಕ್ಕು ಹಾಗೂ ಹೊಣೆಗಾರಿಕೆಗಳು ಸರಕಾರದ ಅಂತರ್ಗತವಾಗ ತಕ್ಕದ್ದು.

**ವಿವರಣೆ :** ಈ ಉಪ ವಾಕ್ಯಾವಳಿಯಲ್ಲಿಯ " ಪಂಚಾಯತ " ಅಂದರೆ, ಕಲಮು ೨೮೭ ರಿಂದ ರದ್ದತಿಯಾದ ಯಾವುದೇ ಕಾಯಿದೆಗಳನ್ವಯವಾಗಿ ರಚಿತ ವಾದ ಪಂಚಾಯತವೆಂದು ಅರ್ಥ.

(ಬ) ಈ ಕಾಯಿದೆಯು ಪ್ರಾರಂಭವಾಗುವುದಕ್ಕೆ ತತ್‌ಕ್ಷಣ ಮುಂಚಿತ ವಾಗಿ ಒಂದು ಸಾವಿರದ ಐದು ನೂರಕ್ಕಿಂತ ಕಡಿಮೆಯಿಲ್ಲದಷ್ಟು ಜನವಸತಿ ಇರುವ ಒಂದು ಭೂಕಂದಾಯದ ಗ್ರಾಮಕ್ಕೆ ಇಲ್ಲವೆ ಭೂಕಂದಾಯದ ಗ್ರಾಮಗಳ ಗುಂಪಿಗೆ ಪಂಚಾಯತವೆಂದು ಕಾರ್ಯ ಮಾಡುತ್ತಿರುವ ಸಂಸ್ಥೆಯು, ಈ ಕಾಯಿದೆಯ ಅನುಸಾರವಾಗಿ ಪಂಚಾಯತವು ರಚಿತವಾಗುವ ತನಕ ಈ ಕಾಯಿದೆಯ ಶರತು ಗಳಿಂದ ಪಂಚಾಯತಕ್ಕೆ ದಯಪಾಲಿಸಲಾದ ಅಧಿಕಾರಗಳನ್ನು ನಿರ್ವಹಿಸತಕ್ಕದ್ದು. ಮತ್ತು ಕರ್ತವ್ಯಗಳನ್ನು ಮಾಡತಕ್ಕದ್ದು.

(ಕ) ವಾಕ್ಯಾವಳಿ (ಬ) ದನ್ವಯವಾಗಿ ಕಾರ್ಯ ಮಾಡುತ್ತಿರುವ ಪಂಚಾ ಯತದ ಸದಸ್ಯರ ಸ್ಥಳಗಳು ನೈಮಿತ್ತಿಕವಾಗಿ ಖಾಲಿಯಾದರೆ, ತುಂಬಲ್ಪಡತಕ್ಕದ್ದು. ಮತ್ತು ಇಂತಹ ಖಾಲೀ ಸ್ಥಳಗಳ ತುಂಬುವ ಸಂಬಂಧದಲ್ಲಿಯ ಎಲ್ಲ ವಿಷಯಗಳು, ಈ ಕಾಯಿದೆಯು ಪ್ರಾರಂಭವಾಗುವುದಕ್ಕೆ ತತ್‌ಕ್ಷಣ ಮುಂಚಿತವಾಗಿ ಶೆರವಾದ ಸ್ಥಳಗಳನ್ನು ತುಂಬುವ ಬಗ್ಗೆ ಮತ್ತು ಅಂತಹ ವಿಷಯಗಳನ್ನು ಕ್ರಮಪಡಿಸುವಬಗ್ಗೆ

ಇದ್ದ ಶರತುಗಳ ಅನುಸಾರವಾಗಿ ಅಂತಹ ಶರತುಗಳ ಬಗ್ಗೆ ಸರಕಾರವು ಪ್ರಕಟಣೆಯಿಂದ ಇಂತಹ ನಿಯಮಗಳಲ್ಲಿ ಮಾಡುವ ಅಂತಹ ತಿದ್ದುಪಡಿಗಳ ಅಂಕಿತವಾಗಿ, ಕ್ರಮಪಡಿಸಲ್ಪಡತಕ್ಕದ್ದು.

(ಡ) ವಾಕ್ಯಾವಳಿ (ಬ) ದಲ್ಲಿ ಹೇಳಲಾದ ಸದಸ್ಯರ ಅಧಿಕಾರ ಕಾಲಾವಧಿಯು ಸರಕಾರವು ಪ್ರಕಟಣೆಯಿಂದ ನಿಯಮಿಸಬಹುದಾದಂತಹ ತಾರೀಖಿನ ವರೆಗೆ ವ್ಯಾಪಿಸತಕ್ಕದ್ದು ಇಲ್ಲದೆ ಸಂದರ್ಭಾನುಸಾರ, ಮುಕ್ತಾಯಗೊಳ್ಳತಕ್ಕದ್ದು ಮತ್ತು ಹಳೆಯ ಸದಸ್ಯರು ನಿವೃತ್ತಿಯಾಗಬೇಕೆಂದು ಗೊತ್ತುಮಾಡಿದ ದಿನಕ್ಕೆ ಹೊಸದಾಗಿ ಚುನಾಯಿತರಾದ ಸದಸ್ಯರು ಅಧಿಕಾರ ಪದದಲ್ಲಿ ಬರುವ ಹಾಗೆ ಸರಕಾರವು ಚುನಾವಣೆಗಳು ನಡೆಯುವಂತೆ ಮಾಡತಕ್ಕದ್ದು.

**ವಿವೇಚನೆ**

ಹೊಸದಾಗಿ ಒಂದು ಕಾಯಿದೆಯು ರೂಪುಗೊಂಡು ಜಾರಿಯಲ್ಲಿ ಬಂದರೆ ಹಳೆಯ ಕಾಯಿದೆಗಳು ರದ್ದಾಗುವುವು. ರದ್ದಾದ ಕಾಯಿದೆಯ ಅನುಸಾರವಾಗಿ ಕಾರ್ಯ ಮಾಡುತ್ತಿದ್ದ ಸಂಸ್ಥೆಗಳು ಮುಕ್ತಾಯ ಹೊಂದುವುವು. ಹೊಸ ಕಾಯಿದೆಯ ಪ್ರಕಾರ ಸಂಸ್ಥೆಗಳು ಉದಯವಾಗುವುದಕ್ಕಿಂತ ಮೊದಲು, ಹಳೆಯ ಕಾಯಿದೆಯು ರದ್ದಾದನಂತರ ಸಂಧಿಕಾಲದಲ್ಲಿ ಯಾವ ಸ್ಥಿತಿ ಇರುವುದು ಎಂಬಬಗ್ಗೆ ಈ ಕಲಮು ಇದೆ.

ಡಿಸ್ಟ್ರಿಕ್ಟ ಬೋರ್ಡು ಎಂದು ಕಾರ್ಯ ಮಾಡುತ್ತಿದ್ದ ಸಂಸ್ಥೆಗಳ ಸದಸ್ಯರ ಅಧಿಕಾರ ಕಾಲಾವಧಿ ಎಂದು ಮುಗಿಯುವುದು ಎಂಬ ಬಗ್ಗೆ ಸರಕಾರ ಪ್ರಕಟಣೆ ಹೊರಡಿಸುವುದು. ಡಿಸ್ಟ್ರಿಕ್ಟ ಬೋರ್ಡುಗಳು ಮಾಯವಾಗಿ ತಾಲೂಕ ಬೋರ್ಡುಗಳು ಬರುವುವು. ಹೊಸದಾಗಿ ಈ ಕಾಯಿದೆ ಪ್ರಕಾರ ತಾಲೂಕ ಬೋರ್ಡು ರಚನೆಯಾಗುವ ತನಕ ಒಂದೊಂದು ತಾಲೂಕಿಗೆ ವಿಶೇಶಾಧಿಕಾರಿಯ ನೇಮಕವನ್ನು ಸರಕಾರವು ಮಾಡುವುದು. ಅವನಿಗೆ ನೆರವಾಗಲು ಒಂದು ಸಲಹಾಸಮಿತಿಯನ್ನು ಸರಕಾರವು ನೇಮಿಸುವುಧು. ಆ ವಿಶೇಷಾಧಿಕಾರಿಯು ಹೊಸದಾಗಿ ತಾಲೂಕ ಬೋರ್ಡು ರಚಿತವಾಗುವ ವರೆಗೆ ಕೆಲಸ ಮಾಡುವನು.

೧೯೫೯ ರ ಈ ಕಾಯಿದೆಯು ಪ್ರಾರಂಭವಾಗುವುದಕ್ಕೆ ಮೊದಲೂ ರಾಜ್ಯದಲ್ಲಿ ಪಂಚಾಯತಗಳು ಇವೆ. ಆ ಪಂಚಾಯತಗಳು ೧೫೦೦ ಕ್ಕಿಂತ ಕಡಿಮೆ ಜನವಸತಿ ಇರುವ ಭೂಕಂದಾಯ ಗ್ರಾಮಕ್ಕೆ ಇಲ್ಲವೆ ಗ್ರಾಮಗಳ ಗುಂಪಿಗೆ ಇದ್ದರೆ ಅವು ಈ ಕಾಯಿದೆ ಜಾರಿಯಲ್ಲಿ ಬಂದ ದಿನ ಮುರಗಡೆಯಾದಂತೆ. ಹೀಗೆ ಮುರಗಡೆಯಾದ ಪಂಚಾಯತಗಳು ಯಾವು ಎಂಬುದನ್ನು ಕಮಿಶನರನು ಹೆಸರುಗಳನ್ನು ಪ್ರಕಟಿಸುವನು. ಮುರಗಡೆಯಾದರೂ ಈ ಹೊಸ ಕಾಯಿದೆಯ ಪ್ರಕಾರ ಚುನಾವಣೆಯಾದ ಹೊಸ ಪಂಚಾಯತಗಳು ರಚಿತವಾಗುವ ತನಕ ಹಳೆಯ ಪಂಚಾಯತಗಳೇ

ಈ ಕಾಯಿದೆಯ ಪ್ರಕಾರ ಕಾರ್ಯ ಮಾಡುವುವು. ಇಷ್ಟು, ಅವುಗಳ ಜನಸಂಖ್ಯೆ ೧೫೦೦ ಕ್ಕಿಂತ ಕಡಿಮೆಯಾಗಿರಬಾರದು. ಈ ರೀತಿ ಪಂಚಾಯತಗಳು ಕಾರ್ಯ ಮಾಡುತ್ತಿರುವಾಗ ಸದಸ್ಯರ ಸ್ಥಳಗಳು ಖಾಲೀ ಆದರೆ, ಹಳೆಯ ಕಾಯಿದೆಯಲ್ಲಿ ಸ್ಥಳ ತುಂಬುವ ಬಗ್ಗೆ ಹೇಳಿದಂತೆ ನಡೆಯತಕ್ಕದ್ದು. ಆ ಹಳೆಯ ಕಾಯಿದೆಗಳನ್ನು ಸರಕಾರವು ಆವಶ್ಯಕ ತಿದ್ದುಪಡಿ ಮಾಡುವುದು.

ಹಳೆಯ ಸದಸ್ಯರ ·ಅಧಿಕಾರ ಕಾಲಾವಧಿಯು ಸರಕಾರ ಗೊತ್ತುಮಾಡುವ ದಿನದ ತನಕ ಉಳಿವುದು.

**೨೪೨. ರದ್ದತಿ ಹಾಗೂ ಸಂರಕ್ಷಣೆ**

(೧) ೧೯೫೨ (ಮೈಸೂರ ಕಾಯಿದೆ ನಂ iv— ೧೯೫೨) ರ ಮೈಸೂರ ಗ್ರಾಮಪಂಚಾಯತ ಮತ್ತು ಡಿಸ್ಟ್ರಿಕ್ಟ ಬೋರ್ಡ ಕಾಯಿದೆ, ೧೯೩೩ (ಮುಂಬಯಿ ಕಾಯಿದೆ ನಂ vi— ೧೯೩೩) ರ ಮುಂಬಯಿ ಗ್ರಾಮಪಂಚಾಯತ ಕಾಯಿದೆ— ಆದರ ೬, ೭, ಮತ್ತು ೮ ಪ್ರಕರಣಗಳನ್ನು ಬಿಟ್ಟು, ೧೯೫೦ (ಮದ್ರಾಸ ಕಾಯಿದೆ ನಂ x — ೧೯೫೦ ರ ಮದ್ರಾಸ ಗ್ರಾಮಪಂಚಾಯತ ಕಾಯಿದೆ— ಅದರ ಕಲಮು ೧೩೨ ನ್ನು ಬಿಟ್ಟು, ೧೯೫೬ (ಹೈದರಾಬಾದ ಕಾಯಿದೆ ನಂ. xvii — ೧೯೫೬) ರ ಹೈದರಾಬಾದ ಗ್ರಾಮಪಂಚಾಯತ ಕಾಯಿದೆ, ೧೯೫೬ (ಕೊಡಗು ಕಾಯಿದೆ ನಂ. iv ೧೯೫೬) ರ ಕೂರ್ಗ ಪಂಚಾಯತರಾಜ್ಯ ಕಾಯಿದೆ ೧೯೨೩ (ಮುಂಬಯಿ ಕಾಯಿದೆ ನಂ. vi—೧೯೨೩) ರ ಮುಂಬಯಿ ಲೋಕಲ್ ಬೋರ್ಡ ಕಾಯಿದೆ; ೧೯೨೦ (ಮದ್ರಾಸ ಕಾಯಿದೆ ನಂ xiv— ೧೯೨೦)ರ ಮದ್ರಾಸ ಡಿಸ್ಟ್ರಿಕ್ಟ ಬೋರ್ಡ ಕಾಯಿದೆ, ೧೯೫೬ (ಹೈದರಾಬಾದ ಕಾಯಿದೆ ನಂ. i — ೧೯೫೬) ರ ಹೈದರಾಬಾದ ಡಿಸ್ಟ್ರಿಕ್ಟ ಬೋರ್ಡ ಕಾಯಿದೆ, ಮತ್ತು ೧೮೮೯ ( ಮುಂಬಯಿ ಕಾಯಿದೆ ನಂ. i — ೧೮೮೯ ) ರ ಮುಂಬಯಿ ಗ್ರಾಮ ಸ್ವಚ್ಛತೆಯ ಕಾಯಿದೆ, ಇವು ಈ ಮೂಲಕ ರದ್ದು ಮಾಡಲ್ಪಟ್ಟಿವೆ.

ಆದರೆ, ಇಂತಹ ರದ್ದತಿಯು—

(ಅ) ಆ ಕಾಯಿದೆಗಳ ; ಈ ಮೊದಲಿನ ಕಾರ್ಯಾಚರಣೆ ಇಲ್ಲವೆ ಅವುಗಳನ್ವಯವಾಗಿ ಮಾಡಲಾದ ಯಾವುದನ್ನು ಮತ್ತು ಮಾಡಗೊಟ್ಟ ಯಾವುದನ್ನು ಬಾಧಿಸತಕ್ಕದ್ದಲ್ಲ; ಇಲ್ಲವೆ

(ಬ) ಮೇಲೆ ಹೇಳಿದ ಕಾಯಿದೆಗಳನ್ವಯವಾಗಿ ಪಡೆದ, ಬಂದ ಇಲ್ಲವೆ ಉಂಟಾದ ಯಾವುದೇ ಹಕ್ಕು, ಬಾಧ್ಯತೆ, ಹೊಣೆಗಾರಿಕೆ ಇಲ್ಲವೆ ಋಣ ಇವುಗಳನ್ನು ಬಾಧಿಸತಕ್ಕದ್ದಲ್ಲ; ಇಲ್ಲವೆ

(ಕ) ಮೇಲೆ ' ಹೇಳಿದ ಕಾಯಿದೆಗಳ ವಿರುದ್ಧ ಘಟಿಸಿದ ಯಾವುದೇ ಅಪರಾಧದ ಸಂಬಂಧವಾಗಿ ಉಂಟಾದ ಯಾವುದೇ ದಂಡನೆ, ಜಪ್ತಿ ಇಲ್ಲವೆ ಶಿಕ್ಷೆ ಇವುಗಳನ್ನು ಬಾಧಿಸತಕ್ಕದ್ದಲ್ಲ; ಇಲ್ಲವೆ

(ಡ) ಮೇಲೆ ಹೇಳಿದಂತಹ ಯಾವುದೇ ಹಕ್ಕು, ಬಾಧ್ಯತೆ, ಋಣ, ಹೊಣೆಗಾರಿಕೆ, ಜಪ್ತಿ ಇಲ್ಲವೆ ಶಿಕ್ಷೆ, ಸಂಬಂಧವಾಗಿ ಇರುವ ಯಾವುದೇ ಶೋಧ, ಕಾಯಿದೇಶೀರ ಪ್ರಕರಣ ಇಲ್ಲವೆ ಉಪಾಯ ಇವುಗಳನ್ನು ಬಾಧಿಸತಕ್ಕದ್ದಲ್ಲ; ಮತ್ತು

ಈ ಕಾಯಿದೆಯ ಪಾಸು ಆಗಿಲ್ಲವೆಂಬಂತೆ, ಅಂತಹ ಯಾವುದೇ ಶೋಧ, ಕಾಯಿದೇಶೀರ ಪ್ರಕರಣ, ಇಲ್ಲವೆ ಉಪಾಯ ಪ್ರಾರಂಭಿಸಬಹುದು, ಮುಂದುವರಿಸಬಹುದು, ಇಲ್ಲವೆ ಕಾರ್ಯಕಾರಿ ಮಾಡಿಸಬಹುದು ಮತ್ತು ಇಂತಹ ಯಾವುದೇ ದಂಡನೆ, ಜಪ್ತ ಇಲ್ಲವೆ ಶಿಕ್ಷೆ ಹಾಕಿಸಬಹುದು.

(ಅ) ಆದರೆ, ಈ ಹಿಂದಿನ ಶರತಿನ ಅಂಕಿತವಾಗಿ, ಮೇಲೆ ಹೇಳಿದ ಕಾಯಿದೆಗಳನ್ವಯವಾಗಿ, ಮಾಡಿದ ಯಾವುದೇ ಕಾರ್ಯ, ಇಲ್ಲವೆ ತೆಗೆದುಕೊಂಡ ಯಾವುದೇ ಕ್ರಮ (ಮಾಡಿದ ಯಾವುದೇ ನೇಮಕ, ಇಲ್ಲವೆ ಪ್ರಾತಿನಿಧ್ಯ, ಹಾಕಿದ ಯಾವುದೇ ಕರ, ಇಲ್ಲವೆ ಫೀ, ಹೊರಡಿಸಿದ ಯಾವುದೇ ಪ್ರಕಟನೆ, ಹುಕುಮು, ದಾಖಲೆ ಪತ್ರ ಇಲ್ಲವೆ ನಿರ್ದೇಶನ, ರೂಪಿಸಲಾದ ಯಾವುದೇ ನಿಯಮ, ಕ್ರಮನಿಯಮ, ನಮೂನೆ, ಪೋಟ ನಿಯಮ, ಇಲ್ಲವೆ ಯೋಜನೆ, ಪಡೆದ ಪ್ರಮಾಣ ಪತ್ರ, ದಯಪಾಲಿಸಲಾದ ಯಾವುದೇ ಲಾಯಸೆನ್ಸು ಇಲ್ಲವೆ ಪರವಾನಗಿ, ಇಲ್ಲವೆ ಪರಿಣಮಿಸಿದ ನೋಂದಣಿ, ಇವುಗಳನ್ನು, ಒಳಗೊಂಡು) ವು ಈ ಕಾಯಿದೆಯ ಸಮಾನ ಶರತುಗಳನುಸಾರವಾಗಿ ಮಾಡಿದುದೆಂದು, ಇಲ್ಲವೆ ತೆಗೆದುಕೊಳ್ಳಲ್ಪಟ್ಟದೆಂದು ಗಣಿಸಲ್ಪಡತಕ್ಕದ್ದು ಮತ್ತು ಆ ಪ್ರಕಾರವಾಗಿ ಮತ್ತು ಈ ಕಾಯಿದೆಯನ್ವಯವಾಗಿ ಮಾಡಿದ ಕಾರ್ಯದಿಂದ ಇಲ್ಲವೆ ತೆಗೆದುಕೆಂಡ ಕ್ರಮದಿಂದ ಅದನ್ನು ಹಿಂದೆ ಸರಿಸುವ ತನಕ ಜಾರಿಯಲ್ಲಿ ಮುಂದುವರೆಯತಕ್ಕದ್ದು.

(ಬ) ಈ ಕಾಯಿದೆಯು ಪ್ರಾರಂಭವಾಗುವುದಕಿಂತ ತತ್ಕ್ಷಣ ಮುಂಚಿತವಾಗಿ ಡಿಸ್ಟ್ರಿಕ್ಟ ಬೋರ್ಡದ ಪ್ರತಿಯೊಬ್ಬ ಅಧಿಕಾರಿಯು ಇಲ್ಲವೆ ಸೇವಕನು ತಾಲೂಕ ಬೋರ್ಡದ ಇಲ್ಲವೆ ಸರಕಾರದ ಸೇವೆಯಲ್ಲಿ ಹೊಂದಿಸಿಕೊಳ್ಳಲ್ಪಡತಕ್ಕದ್ದು. ಮತ್ತು ಬೇರೆ ಅನುಕೂಲತೆ ಮಾಡಲ್ಪಡುವತನಕ, ಅಂತಹ ತಾರೀಖಿಗೆ ಬಾಧ್ಯಸ್ಥನಾಗಿರುವ ಇಲ್ಲವೆ ಅಂಕಿತವಾಗಿರುವಂತಹ ಸೇವಾಕರಾರುಗಳಿಗೆ ಅಂಕಿತವಾಗಿರತಕ್ಕದ್ದು ಮತ್ತು ಅಂತಹ ಸಂಬಳ ಮತ್ತು ಭತ್ತೆಗಳನ್ನು ಸ್ವೀಕರಿಸತಕ್ಕದ್ದು.

(ಕ) ತಾಲೂಕ ಬೋರ್ಡದ ಅಭಿಪ್ರಾಯದಲ್ಲಿ ಅದರ ಸೇವೆಯ ಅಗತ್ಯತೆಗೆ ಅವಶ್ಯವಿಲ್ಲವೆಂದು ಇಲ್ಲವೆ ಹೊಂದಿಕೆಯಾಗುವದಿಲ್ಲವೆಂದು ಆಗಿದ್ದರೆ, ಯಾವುದೇ ಅಧಿಕಾರಿ ಇಲ್ಲವೆ ಸೇವಕನನ್ನು ಅವನ ನೌಕರಿಯ ಕರಾರುಗಳಿಂದ ಅಗತ್ಯವಾಗಿರುವಂತಹ ನೋಟೀಸನ್ನು ಕೊಟ್ಟು, ಸರಕಾರದ ಪೂರ್ವಸಮ್ಮತಿಯಿಂದ ನೌಕರಿಯಿಂದ ಕಡಿಮೆ ಮಾಡಲಿಕ್ಕೆ ತಾಲೂಕ ಬೋರ್ಡು ಸಮರ್ಥವಾಗಿರತಕ್ಕದ್ದು. ಮತ್ತು ಯಾರನ್ನು ನೌಕರಿಯಿಂದ ಕಡಿಮೆ ಮಾಡಲಾಗಿದೆಯೋ ಅಂತಹ ಪ್ರತಿಯೊಬ್ಬ ಅಧಿಕಾರಿಯು ಇಲ್ಲವೆ ಸೇವಕನು ಯಾವ

ಡಿಸ್ಟ್ರಿಕ್ಟ ಬೋರ್ಡದಲ್ಲಿ ನೌಕರಿಗೆ ಇರುವನೋ ಅದು ಇಲ್ಲದಂತಾಗದೆ ಉಳಿದಿದ್ದರೆ, ಅಶಕ್ತತೆಯ ಕಾರಣದ ಮೂಲಕ ಪಡೆಯಲು ಪಾತ್ರನಾಗುತ್ತಿದ್ದಂತಹ, ರಜೆ, ಪೆನಶನು, ಪ್ರಾವ್ಹಿಡೆಂಟ ಫಂಡು, ಮತ್ತು ಗ್ರ್ಯಾಚ್ಯುಟಿಗಳಿಗೆ ಬಾಧ್ಯಸ್ಥನಾಗಿರತಕ್ಕದ್ದು.

(ಡ) ಈ ಕಾಯಿದೆಯು ಪ್ರಾರಂಭವಾಗುವುದಕ್ಕಿಂತ ಮೊದಲು ಡಿಸ್ಟ್ರಿಕ್ಟ ಬೋರ್ಡದಿಂದ ಇಲ್ಲವೆ ಅದರ ಪರವಾಗಿ ಮಾಡಿದ ಎಲ್ಲ ಕರಾರುಗಳು ಮತ್ತು ಅದರ ಎಲ್ಲ ಆಸ್ತಿ, ಋಣಗಳು ಮತ್ತು ಆ ತಾರೀಖಿಗೆ ಸತ್ವಯುತವಾಗಿರುವಂತಹವು ಈ ಸಂಬಂಧದಲ್ಲಿ ಸರಕಾರವು ಮಾಡಬಹುದಾದಂತಹ ಹುಕುಮಿನ ಅನುಸಾರವಾಗಿ ಅಂತಹ ತಾಲೂಕ ಬೋರ್ಡುಗಳಿಗೆ ಇಲ್ಲವೆ ಇತರ ಅಧಿಕಾರಿಗಳಿಗೆ ಹಸ್ತಾಂತರವಾಗತಕ್ಕದ್ದು.

(ಇ) ಡಿಸ್ಟ್ರಿಕ್ಟ ಬೋರ್ಡದ ನೌಕರರ ಹಿತಕ್ಕಾಗಿ ಡಿಸ್ಟ್ರಿಕ್ಟ ಬೋರ್ಡು ಪ್ರಾವಿಡೆಂಟ ಫಂಡು, ವಯೋಧಿಕ ನಿಧಿ, ಇಲ್ಲವೆ ಅಂತಹ ಬೇರೆ ಯಾವುದೇ ನಿಧಿಯನ್ನು ಸ್ಥಾಪಿಸಿರುವಾಗ, ಈ ಕಾಯಿದೆಯು ಪ್ರಾರಂಭವಾದ ತಾರೀಖಿಗೆ ಅಂತಹ ಯಾವುದೇ ನಿಧಿಯಲ್ಲಿ ಜಮೆಯಾಗಿರುವ ಹಣವು, ಅಂತಹ ನಿಧಿಗೆ ಹೊಂದಿಕೊಂಡಿರುವ ಇತರ ಯಾವುದೇ ಸೊತ್ತುಗಳು ಸಹಿತವಾಗಿ ಸರಕಾರಕ್ಕೆ ಹಸ್ತಾಂತರವಾಗತಕ್ಕದ್ದು. ಮತ್ತು ಅದು ಸರಕಾರದ ಅಂತರ್ಗತವಾಗತಕ್ಕದ್ದು. ಮತ್ತು ಸರಕಾರವು ಆ ನಿಧಿಯ ಸಂಬಂಧವಾಗಿ ಡಿಸ್ಟ್ರಿಕ್ಟ ಬೋರ್ಡು ಮಾಡಬೇಕಾಗಿದ್ದ ಕರ್ತವ್ಯಗಳನ್ನು ನೆರವೇರಿಸಲು ಹೊಣೆಗಾರವಾಗಿರತಕ್ಕದ್ದು.

(ಫ) ರದ್ದತಿಯಾದ ಯಾವುದೇ ಕಾಯಿದೆಗಳ ಅನ್ವಯವಾಗಿ ಸ್ಥಾಪಿತವಾದ, ಕಲಮು ೨೪೧ ರ ಉಪಕಲಮು (೨) ರ ವಾಕ್ಯಾವಳಿ (ಬ) ದನ್ವಯವಾಗಿ ಮುಂದುವರೆದ ಪಂಚಾಯತದಿಂದ ಇಲ್ಲವೆ ಅದರ ಪರವಾಗಿ ಮಾಡಿದ ಎಲ್ಲ ಕರಾರುಗಳು ಮತ್ತು ಅದರ ಎಲ್ಲ ಆಸ್ತಿ ಮತ್ತು ಋಣಗಳು ಸರಕಾರವು ನಿರ್ದಿಷ್ಟಪಡಿಸಬಹುದಾದಂತಹ ಕರಾರುಗಳ ಅಂಕಿತವಾಗಿ, ಮೇಲೆ ಹೇಳಿದ ವಾಕ್ಯಾವಳಿಯನ್ವಯವಾಗಿ ಮುಂದುವರೆದ ಪಂಚಾಯತಗಳಿಗೆ ವಾಪಸಾ ಹಕ್ಕಿಸಿಂದ ಬರತಕ್ಕದ್ದು.

(ಗ) ೧೯೫೦ ರ ಮದ್ರಾಸ ಗ್ರಾಮಪಂಚಾಯತ ಕಾಯಿದೆಯ ಕಲಮು ೧೩೭ ರಿಂದ ಮಾಡಿದ ೧೮೮೮ (ಮದ್ರಾಸ ಕಾಯಿದೆ ನಂ. I ೧೮೮೮) ರ ಮದ್ರಾಸ ಗ್ರಾಮ ನ್ಯಾಯಾಲಯ ಕಾಯಿದೆಯ ತಿದ್ದುಪಡಿಗಳು ಮದ್ರಾಸ ಪ್ರದೇಶದಲ್ಲಿ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ರಚಿತವಾದ ಇಲ್ಲವೆ ಮುಂದುವರೆದ ಪಂಚಾಯತಗಳಿಗೆ ಅನ್ವಯಿಸುವುದು ಮುಂದುವರೆಯತಕ್ಕದ್ದು, ಆದರೆ, ಅಲ್ಲಿ ಪಂಚಾಯತದ ಪ್ರೆಸಿಡೆಂಟ ಮತ್ತು ವಾಯಿಸ್ ಪ್ರೆಸಿಡೆಂಟ ಎಂದು ಕರೆಯಲಾದುದಕ್ಕೆ ಪಂಚಾಯತದ ಚೇರಮನ್ನ ಮತ್ತು ಉಪಚೇರಮನ್ನ ಎಂದು ಅರ್ಥ ಮಾಡತಕ್ಕದ್ದು.

(ಹ) ೧೯೩೩ ರ ಮುಂಬಯಿ ಗ್ರಾಮ ಪಂಚಾಯತ ಕಾಯಿದೆಯ ಪ್ರಕರಣ ೬, ೭ ಮತ್ತು ೮ ರಲ್ಲಿಯ ಶರತುಗಳು ಮುಂಬಯಿ ಪ್ರದೇಶದಲ್ಲಿ ಜಾರಿಯಲ್ಲಿ ಮುಂದುವರೆಯತಕ್ಕದ್ದು. ಮತ್ತು ೧೯೩೩ ರ ಮುಂಬೈ ಗ್ರಾಮ ಪಂಚಾಯತ ಕಾಯಿದೆಯ ಯಾವುದೇ ಶರತುಗಳಿಗೆ ಸಮಾನವಾಗಿ ನ್ಯಾಯ ಪಂಚಾಯತಕ್ಕೆ ಸಂಬಂಧವಿದ್ದರೆ ಈ ಕಾಯಿದೆಯಲ್ಲಿ ಮಾಡಲಾದ ಯಾವುದೇ ಶರತು ಈ ಕಾಯಿದೆಯನ್ವಯವಾಗಿ ನ್ಯಾಯ ಪಂಚಾಯತಕ್ಕೆ ಸಂಬಂಧವಿದ್ದ ಶರತು ಎಂದೇ ಅರ್ಥ ಮಾಡಲ್ಪಡತಕ್ಕದ್ದು.

(ಈ) ರದ್ದತಿಯಾದ ಕಾಯಿದೆಗಳಲ್ಲಿಯ ಯಾವುದೇ ಕಾಯಿದೆಗೆ ಇಲ್ಲವೆ ಶರತುಗಳಿಗೆ ಇದ್ದ ಯಾವುದೇ ಸಂಬಂಧಾರ್ಥವು, ಬೇರೆ ಉದ್ದೇಶವನ್ನು ತೋರಿಸದೆ ಇದ್ದರೆ, ಈ ಕಾಯಿದೆಯಲ್ಲಿಯ ಅಂತಹ ಸಮಾನಾರ್ಥದ ಶರತುಗಳ ಸಂಬಂಧಾರ್ಥ ವನ್ನು ಹೇಳುವುದೆಂದು ಅರ್ಥ ಮಾಡತಕ್ಕದ್ದು.

(೨) ೧೯೫೫ (ಮದ್ರಾಸ ಕಾಯಿದೆ ನಂ. XXX — ೧೯೫೫) ರ ಮದ್ರಾಸ ರೆವೆನ್ಯೂ (ಆ್ಯಡಿಶನಲ್ ಸರಚಾರ್ಜ) ಕಾಯಿದೆಯ ಕಲಮು ೫, ಮದ್ರಾಸ ಪ್ರದೇಶದಲ್ಲಿ ಜಾರಿಯಲ್ಲಿದ್ದುದು ಈ ಮೂಲಕ ರದ್ದು ಮಾಡಲ್ಪಟ್ಟಿದೆ.

**ವಿವೇಚನೆ**

ಯಾವ ಕಾಯಿದೆಗಳು ರದ್ದು ಮಾಡಲ್ಪಟ್ಟಿವೆ; ಎಷ್ಟು ಮಟ್ಟಿಗೆ ರದ್ದು ಮಾಡಲ್ಪಟ್ಟಿವೆ, ರದ್ದಾದುದರ ಪರಿಣಾಮ ಏನಾಗುತ್ತಿದೆ; ಎಂಬ ಬಗ್ಗೆ ಈ ಕಲಮಿನಲ್ಲಿ ಹೇಳಿದೆ. ಕಲಮು ಹೆಚ್ಚು ವಿವರವುಳ್ಳದ್ದಾಗಿರುವುದರಿಂದ ಇಲ್ಲಿ ಪ್ರತ್ಯೇಕ ವಿವರಣೆ ಅಗತ್ಯವಿಲ್ಲ. ರದ್ದಾದ ಕಾಯಿದೆಗಳ ಮೂಲಕವಾಗಿರುವ ಕಾರ್ಯಗಳಿಗೆ ನೌಕರರಿಗೆ, ಅಧಿಕಾರಿಗಳಿಗೆ ರಕ್ಷಣೆ ಕೊಡಲಾಗಿದೆ ಎಂಬುದನ್ನು ಗಮನಿಸತಕ್ಕದ್ದು. ಸಮಾನ ಶರತುಗಳು ಕಂಡುಬಂದರೆ, ರದ್ದಾದ ಕಾಯಿದೆಗಳು ಹೊಸ ಕಾಯಿದೆಯಲ್ಲಿ ಅಂತರ್ಗತವಾಗಿವೆಯೆಂಬ ಸೂಚನೆ ಕೂಡ ಇದೆ.

**೨೪೩. ಮುಂಬಯಿ ಕಾಯಿದೆ ನಂ. LXI – ೧೯೪೭ ಕ್ಕೆ ತಿದ್ದುಪಡಿ**

ಮುಂಬಯಿ ಪ್ರಾಥಮಿಕ ಶಿಕ್ಷಣ ಕಾಯಿದೆ— ೧೯೪೭ ರಲ್ಲಿ—

(೧) ಕಲಮು ೪ ರಲ್ಲಿ ಉಪಕಲಮು (೧೫) ರ ನಂತರ ಈ ಕೆಳಗಿನ ಉಪಕಲಮು ಸೇರಿಸಲ್ಪಡತಕ್ಕದ್ದು:—

"(೧೬) ಈ ಕಾಯಿದೆಯಲ್ಲಿ ಏನೇ ಹೇಳಲಾಗಿದ್ದರೂ ೧೯೫೯ ರ ಮೈಸೂರ ಗ್ರಾಮಪಂಚಾಯತ ಹಾಗೂ ಲೋಕಲ್ ಬೋರ್ಡ ಕಾಯಿದೆಯು ಪ್ರಾರಂಭವಾದ ತಾರೀಖಿನಿಂದ ಪರಿಣಾಮವಾಗಿ—

(ಅ) ಡಿಸ್ಟ್ರಿಕ್ಟ ಲೋಕಲ್ ಬೋರ್ಡಿನಿಂದ ಚುನಾಯಿತವಾದ ಆ ಸಂಸ್ಥೆಯ ಸದಸ್ಯರ ಸ್ಥಳಗಳು ನೈಮಿತ್ತಿಕವಾಗಿ ಖಾಲೀ ಆದರೆ, ಅವು ರಾಜ್ಯಸರಕಾರದಿಂದ

ನೇಮಕದಿಂದ ಭರತಿ ಮಾಡಲ್ಪಡತಕ್ಕದ್ದು. ಮತ್ತು ಇಂತಹ ಸದಸ್ಯರ ಅಧಿಕಾರ ಕಾಲಾವಧಿಯು ಮುಗಿದ ಮೇಲೆ ಡಿಸ್ಟ್ರಿಕ್ಟ ಸ್ಕೂಲಬೋರ್ಡದ ಎಲ್ಲ ಸದಸ್ಯರು ರಾಜ್ಯ ಸರಕಾರದಿಂದ ನೇಮಕ ಮಾಡಲ್ಪಡತಕ್ಕದ್ದು.

(ಬ) ಈ ಕಾಯಿದೆಯಲ್ಲಿಯ ಡಿಸ್ಟ್ರಿಕ್ಟ ಲೋಕಲ್ ಬೋರ್ಡಿಗೆ ಇದ್ದ ನಾಮ ನಿರ್ದೇಶನವು ಆವಶ್ಯಕ ತಿದ್ದುಪಡಿಗಳೊಂದಿಗೆ ಮತ್ತು ವಾಕ್ಯಾವಳಿ (ಅ) ದ ಶರತು ಗಳಿಗಂಕಿತವಾಗಿ, ರಾಜ್ಯಸರಕಾರಕ್ಕೆ ಸಂಬಂಧಪಟ್ಟಿದ್ದೆಂದು ಅರ್ಥ ಮಾಡತಕ್ಕದ್ದು."

(೨) ಕಲಮು ೪೧ ರ ಉಪಕಲಮು (೧) ರ ಬದಲು ಈ ಕೆಳಗಿನ ಉಪ ಕಲಮು ಸೇರಿಸಲ್ಪಡತಕ್ಕದ್ದು.

" (೧) ಭೂಕಂದಾಯದ ಎಲ್ಲ ವಿಷಯುಗಳ ಮೇಲೆ ಮತ್ತು ಆ ಕಾಲಕ್ಕೆ ಜಾರಿಯಲ್ಲಿರುವ ಯಾವುದೇ ಕಾಯಿದೆಗಳನ್ವಯವಾಗಿರುವ ನೀರಿನ ದರದಮೇಲೆ ಒಂದು ರೂಪಾಯಿಗೆ ಏಳು ನಯೆಪೈಸೆಗಳ ದರದಂತೆ ಶಿಕ್ಷಣ ಸೆಸ್ಸು ಎಂದು ಸಂಕಾ ರವು ಆಕಾರಮಾಡತಕ್ಕದ್ದು. ಶಿಕ್ಷಣ ಸೆಸ್ಸಿನ ಆಕರಣೆ ಹಾಗೂ ಅದರ ವಸೂಲಿಯು ಗೊತ್ತುಮಾಡಲ್ಪಡಬಹುದಾದಂತಹ ರೀತಿಯಲ್ಲಿ ಮಾಡಲ್ಪಡತಕ್ಕದ್ದು ಮತ್ತು ಡಿಸ್ಟ್ರಿಕ್ಟ ಸ್ಕೂಲ ಬೋರ್ಡದ ಅಧಿಕಾರ ಕ್ಷೇತ್ರದಲ್ಲಿರುವ ಪ್ರದೇಶದಲ್ಲಿ ವಸೂಲಿ ಮಾಡಿದ ಶಿಕ್ಷಣ ಸೆಸ್ಸನ್ನು ಪ್ರಾಥಮಿಕ ಶಿಕ್ಷಣದ ಉದ್ದೇಶಕ್ಕಾಗಿ ಸರಕಾರವು ವಾರ್ಷಿಕವಾಗಿ ಡಿಸ್ಟ್ರಿಕ್ಟ ಸ್ಕೂಲ ಬೋರ್ಡಿಗೆ ಕೊಡತಕ್ಕದ್ದು.

**ವಿವೇಚನೆ**

ಮೈಸೂರ ಗ್ರಾಮಪಂಚಾಯತ ಹಾಗೂ ಲೋಕಲ್ ಬೋರ್ಡ ಕಾಯಿದೆ ೧೯೫೯ ರ ಮೂಲಕ ಆವಶ್ಯಕ ಬದಲಾವಣೆಗಳನ್ನು ಮಾಡಬೇಕಾಗಿ ಮುಂಬಯಿ ಪ್ರಾಥಮಿಕ ಶಿಕ್ಷಣ ಕಾಯಿದೆಯಲ್ಲಿ ತಿದ್ದುಪಡಿ ಮಾಡಲಾಗಿದೆ. ಇದರಲ್ಲಿ ಶಿಕ್ಷಣ ಸೆಸ್ಸು ಹಾಕಬೇಕೆಂಬುವುದು ಹೊಸ ಮಾತು.

## ೨೪೪. ಕೂರ್ಗ (ಕೊಡಗು) ಕಾಯಿದೆ ನಂ. VIII — ೧೯೩೪ ಕ್ಕೆ ತಿದ್ದುಪಡಿ

(೧) ೧೯೩೪ರ ಕೂರ್ಗ ಲ್ಯಾಂಡ ಸೆಸ್ ಮತ್ತು ಟ್ಯಾಕ್ಸೆಸ್ ಕಾಯಿದೆಯಲ್ಲಿ—

(ಅ) ಕಲಮು ೪ ರಲ್ಲಿ "ಆರು ಆಣೆಗಳು" ಎಂಬ ಶಬ್ದಗಳಿಗೆ ಬದಲಾಗಿ "ಇಪ್ಪತ್ತೈದು ನಯೆಪೈಸೆ" ಎಂಬ ಶಬ್ದಗಳು ಸೇರಿಸಲ್ಪಡತಕ್ಕದ್ದು.

(ಬ) ಕಲಮುಗಳು ೬, ೭, ಮತ್ತು ೮ ತೆಗೆದು ಹಾಕಲ್ಪಡತಕ್ಕದ್ದು;

(ಕ) ಕಲಮು ೯ ರಲ್ಲಿ "ಕಲಮುಗಳು ೪, ೬, ೭ ಮತ್ತು ೮" ಎಂಬ ಶಬ್ದ ಗಳು ಮತ್ತು ಅಂಕಿಗಳ ಬದಲು "ಕಲಮು ೪" ಎಂಬ ಶಬ್ದ ಮತ್ತು ಅಂಕಿಯು ಸೇರಿಸಲ್ಪಡತಕ್ಕದ್ದು.

(ಡ) ಕಲಮು ೧೦ ರಲ್ಲಿ "ಇಲ್ಲವೆ ಕಲಮುಗಳು ೬, ೭, ಮತ್ತು ೮ ರನ್ವಯ ಹಾಕಲಾದ ಕರ" ಎಂಬ ಶಬ್ದಗಳು ಮತ್ತು ಅಂಕಿಗಳು ತೆಗೆದುಹಾಕಲ್ಪಡತಕ್ಕದ್ದು.

(ಇ) ಕಲಮು ೧೪ ರ ಉಪಕಲಮು (೨) ರಲ್ಲಿಯ ವಾಕ್ಯಾವಳಿ (ಇ) ಇದನ್ನು ತೆಗೆದುಹಾಕತಕ್ಕದ್ದು.

(ಫ) ಕಲಮು ೧೫ ರಲ್ಲಿ " (ಇ) ಮತ್ತು (ಫ) " ಎಂಬ ಅಕ್ಷರಗಳು ಮತ್ತು ಕಂಸುಗಳಿಗೆ "ಮತ್ತು (ಫ) ಎಂಬ ಶಬ್ದ, ಕಂಸು, ಮತ್ತು ಅಕ್ಷರ" ಬದಲಾಗಿ ಸೇರಿಸಲ್ಪಡತಕ್ಕದ್ದು.

(೨) ಉಪಕಲಮು ೧ ರಿಂದ ಮಾಡಲ್ಪಟ್ಟ ತಿದ್ದುಪಡಿಗಳ ಸಂಬಂಧವಾಗಿ ೧೮೯೯ ( ಮೈಸೂರ ಕಾಯಿದೆ ನಂ. iii — ೧೮೯೯ ) ರ ಮೈಸೂರ ಜನರಲ್ ಕ್ಲಾಜಿಸ್ ಆ್ಯಕ್ಟ ಅನ್ವಯಿಸತಕ್ಕದ್ದು.

**ವಿವೇಚನೆ**

ಈ ಚಿಕ್ಕ ಪುಟ್ಟ ಬದಲಾವಣೆಗಳಿಂದ ಹೊಸ ಕಾಯಿದೆಯು ಸರಿಯಾಗಿ ಪರಿಣಾಮಕಾರಿಯಾಗುವುದು ಮತ್ತು ಕೊಡಗಿನ ಆ ಕಾಯಿದೆಯು ವಿಸಂಗತವಾಗುವುದಿಲ್ಲ.

**೨೪೫. ಈ ಕಾಯಿದೆಯನ್ನು ಜಾರಿಯಲ್ಲಿ ತರಲು ಹುಕುಮುಗಳು**

(೧) ಈ ಕಾಯಿದೆಯಲ್ಲಿ ಇಲ್ಲವೆ ಜಾರಿಯಲ್ಲಿದ್ದ ಬೇರೆ ಯಾವುದೇ ಕಾಯಿದೆಯಲ್ಲಿ ಏನೇ ಹೇಳಲಾಗಿದ್ದರೂ ಸರಕಾರವು ಅಧಿಕೃತ ಗ್ಯಾಜೆಟದಲ್ಲಿ ಪ್ರಸಿದ್ಧಿಸಿದ ಹುಕುಮಿನಿಂದ ಅದಕ್ಕೆ ಆವಶ್ಯಕವೆನ್ನಿಸಿದ ಇಲ್ಲವೆ ಪ್ರಸಂಗೋಚಿತವೆನ್ನಿಸಿದ,

(ಅ) ಈ ಕಾಯಿದೆಯ ಶರತುಗಳನ್ನು ಪರಿಣಾಮಕಾರಿಯಾಗಿ ಕಾರ್ಯಾಚರಣೆಯಲ್ಲಿ ತರಲು ಅನುಕೂಲತೆಗಳನ್ನು ಮಾಡಬಹುದು;

(ಬ) ಕಲಮು ೨೪೨ ರ ಎರಡನೆಯ ಅಪವಾದದಲ್ಲಿ (ಅ) ವಾಕ್ಯಾವಳಿಯಲ್ಲಿ ಹೇಳಲಾದ ನಿಯಮಗಳು, ಕ್ರಮನಿಯಮಗಳು, ಪೋಟ ನಿಯಮಗಳು, ಪ್ರಕಟನೆಗಳು ಮತ್ತು ಹುಕುಮುಗಳು ಈ ಕಾಯಿದೆಯನ್ವಯವಾಗಿ ಸ್ಥಾಪಿತವಾದ ಸ್ಥಾನಿಕ ಅಧಿಕಾರಗಳಿಗೆ ಅನ್ವಯಿಸುವುದಕ್ಕೆ ತೆಗೆದು ಹಾಕಲ್ಪಡಲು, ಜೋಡಿಸಲ್ಪಡಲು, ಸರಿಪಡಿಸಲ್ಪಡಲು, ಮತ್ತು ತಿದ್ದಪಡಿ ಮಾಡಲ್ಪಡಲು ಅನುಕೂಲತೆಗಳನ್ನು ಮಾಡಬಹುದು.

(ಕ) ಡಿಸ್ಟ್ರಿಕ್ಟ ಬೋರ್ಡಗಳಿಗೆ ಇಲ್ಲವೆ ಬೇರೆ ಯಾವುದೇ ಕಾಯಿದೆಯಲ್ಲಿಯ ಇತರ ಅಧಿಕಾರಗಳಿಗೆ ಸಂಬಂಧಿಸಿ ಅರ್ಥಮಾಡುವ ಆತಂಕಗಳನ್ನು ಒಳಗೊಂಡು ಈ ಕಾಯಿದೆಯ ಶರತುಗಳಿಗೆ ಅಧಿಕಾರ ಬರುವ ಸಂಧಿಕಾಲದ ಸಂಬಂಧವಾಗಿರುವ ತೊಂದರೆಗಳನ್ನು ನಿವಾರಣೆ ಮಾಡಲು ಅನುಕೂಲತೆಗಳನ್ನು ಮಾಡಬಹುದು.

(ಡ) ಈ ಮೊದಲು ಯಾವುದೇ ಸ್ಥಾನಿಕ ಅಧಿಕಾರಗಳಿಂದ ನಡೆಸಲ್ಪಟ್ಟ ಸೇವೆಗಳು ಮತ್ತು ಚಟುವಟಿಕೆಗಳು ಸ್ಥಾನಿಕ ಅಧಿಕಾರಿಗಳ ಪರವಾಗಿ ಸಮ್ಯಕ್ಕೆ ಮುಂದರಿಸಲು ಅಧಿಕಾರ ಕೊಡಲು ಅನುಕೂಲ ಮಾಡಿಕೊಡಬಹುದು.

(ಇ) ಈ ಮೊದಲು ಹೇಳಿದ ಯಾವುದೇ ವಿಷಯಗಳ ಸಂಬಂಧವಾಗಿ ಆವಶ್ಯಕ ಇಲ್ಲವೆ ಪ್ರಸಂಗೋಚಿತ ಅನ್ನಿಸುವಷ್ಟು ಮಟ್ಟಿಗೆ, ಯಾವುದೇ ನ್ಯಾಯಾಲಯದ ಇಲ್ಲವೆ ಅಧಿಕಾರದ ಅಧಿಕಾರಗಳನ್ನು ಇಲ್ಲವೆ ಅಧಿಕಾರ ಕ್ಷೇತ್ರಗಳನ್ನು ಹೆಚ್ಚುಕಡಿಮೆ ಮಾಡುವುದಕ್ಕಾಗಿ ಮತ್ತು ಅಂತಹ ಹುಕುಮಿನಲ್ಲಿ ನಿರ್ದಿಷ್ಟ ಪಡಿಸ ಬಹುದಾದಂತಹ ಅಧಿಕಾರವನ್ನು ನಿರ್ವಹಿಸಲು ಹೊಸ ನ್ಯಾಯಾಲಯಗಳಿಗೆ ಇಲ್ಲವೆ ಇತರ ಅಧಿಕಾರಿಗಳಿಗೆ ಅಧಿಕಾರ ಕೊಡಲು ಅನುಕೂಲ ಮಾಡಿಕೊಡಬಹುದು.

(೨) ಉಪಕಲಮು (೧) ರನ್ವಯವಾಗಿ ಮಾಡಿದ ಯಾವುದೇ ಹುಕುಮಿನ ಶರತುಗಳು ಕಲಮು ೨೪೬ ರ ಶರತುಗಳಿಗೆ ಅಂಕಿತವಾಗಿದ್ದು, ಅವು ಈ ಕಾಯಿದೆಯಿಂದ ಪಾಸು ಮಾಡಲ್ಪಟ್ಟಂತೆ ಪರಿಣಾಮಕಾರಿಯಾಗಿರತಕ್ಕದ್ದು, ಮತ್ತು ಇಂತಹ ಯಾವುದೇ ಹುಕುಮು ಈ ಕಾಯಿದೆಯು ಪ್ರಾರಂಭವಾಗು ತಾರೀಖಿನಕಿಂತ ಮೊದಲು ಆಗವೇ ಇದ್ದ ಯಾವುದೇ ತಾರೀಖಿಗೆ ಹಿನ್ನೋಟ ವುಳ್ಳದ್ದಾಗುವಂತೆ ಮಾಡಲ್ಪಡಬಹುದು.

ಆದರೆ, ಅದರ ಪ್ರಾರಂಭದಕಿಂತ ಮೊದಲಿನ ಯಾವುದೇ ತಾರೀಖಿಗೆ ಯಾವುದೇ ಶರತು ಹಿನ್ನೋಟವುಳ್ಳದ್ದಾಗಿದೆಯೆಂದು ಮಾಡಿದ ಅಂತಹ ಹುಕುಮಿನ ಮೂಲಕವಾಗಿ ಆ ಕಾರಣದಿಂದ ಯಾವುದೇ ವ್ಯಕ್ತಿಯು ಅಪರಾಧ ಮಾಡಿದ್ದಾ ನೆಂದು ಗಣಿಸಲ್ಪಡತಕ್ಕದ್ದಲ್ಲ.

**ವಿವೇಚನೆ**

ಕಾಯಿದೆ ಪಾಸಾಗುವುದು ಒಂದು ಹಂತ. ಅದನ್ನು ಜಾರಿಯಲ್ಲಿ ತರು ವುದು ಇನ್ನೊಂದು ಹಂತ. ಜಾರಿಯಲ್ಲಿ ತರಬೇಕಾದರೆ ಅನೇಕ ಆವಶ್ಯಕ, ಇಲ್ಲವೆ ಪ್ರಸಂಗೋಚಿತ ಹುಕುಮುಗಳನ್ನು ಮಾಡಬೇಕಾಗುತ್ತದೆ. ಅವು ಹೇಗೆ ಮತ್ತು ಯಾತಕ್ಕಾಗಿ ಮಾಡಲ್ಪಡಬೇಕು ಎಂಬುದರ ಬಗ್ಗೆ ಇಲ್ಲಿ ಹೇಳಲಾಗಿದೆ.

## ೨೪೬. ಕೆಲವು ನಿಯಮಗಳು ಮತ್ತು ಹುಕುಮುಗಳು ರಾಜ್ಯ ಶಾಸನ ಸಭೆಗಳ ಎದುರು ಮಂಡಿಸಲ್ಪಡಬೇಕು

ಕಲಮು ೨೧೦ ರನ್ವಯವಾಗಿ ಮಾಡಿದ ಪ್ರತಿಯೊಂದು ನಿಯಮ ಮತ್ತು ಕಲಮು ೨೪೫ ರನ್ವಯವಾಗಿ ಮಾಡಿದ ಪ್ರತಿಯೊಂದು ಹುಕುಮು ಅದು ಮಾಡ

ಲ್ಪಟ್ಟ ಮೇಲೆ ಆದಷ್ಟು ಬೇಗನೇ ರಾಜ್ಯದ ಶಾಸನ ಸಭೆಗಳ ಒಂದೊಂದು ಸಭೆಯ ಎದುರು ಅದು ಅಧಿವೇಶನದಲ್ಲಿದ್ದಾಗ ಒಟ್ಟು ಮುವ್ವತ್ತು ದಿವಸಗಳ ಕಾಲಾವಧಿಯ ವರೆಗೆ, ಅದು ಒಂದು ಅಧಿವೇಶನವಾಗಲಿ ಇಲ್ಲವೆ ಎರಡು, ಇಲ್ಲವೆ ಹೆಚ್ಚು ಅಧಿವೇಶನದಲ್ಲಿಯಾಗಲಿ, ಮಂಡಿಸಲ್ಪಡತಕ್ಕದ್ದು. ಮತ್ತು ಆ ಕಾಲಾವಧಿ ಮುಗಿವುದರೊಳಗೆ ಯಾವುದೇ ನಿಯಮದಲ್ಲಿ ಇಲ್ಲವೆ ಹುಕುಮಿನಲ್ಲಿ ರಾಜ್ಯ ಶಾಸನ ಸಭೆಗಳಲ್ಲಿ ಯಾವುದೇ ಸಭೆಯು ತಿದ್ದುಪಡಿ ಮಾಡಿದರೆ, ಇಲ್ಲವೆ ಯಾವುದೇ ನಿಯಮವು ಇಲ್ಲವೆ ಹುಕುಮು ಪರಿಣಾಮಕಾರಿಯಾಗಬಾರದೆಂದು ನಿರ್ದೇಶಿಸಿದರೆ, ಮತ್ತು ಆ ತಿದ್ದುಪಡಿ ಇಲ್ಲವೆ ನಿರ್ದೇಶನವು ಇನ್ನೊಂದು ಸಭೆಯಿಂದ ಒಪ್ಪಿಕೊಳ್ಳಲ್ಪಟ್ಟರೆ, ಅಂತಹ ನಿಯಮವು ಇಲ್ಲವೆ ಹುಕುಮು ಅಂತಹ ತಿದ್ದುಪಡಿಯಾದ ರೂಪದಲ್ಲಿಯೇ ಪರಿಣಾಮಕಾರಿಯಾಗತಕ್ಕದ್ದು ಇಲ್ಲವೆ ಸಂದರ್ಭಾನುಸಾರವಾಗಿ ಪರಿಣಾಮಹೀನವಾಗತಕ್ಕದ್ದು.

## ವಿವೇಚನೆ

ಕಲಮು ೨೧೦ ಮತ್ತು ೨೪೫ ರನ್ವಯವಾಗಿ ಮಾಡಿದ ನಿಯಮಗಳಿಗೆ ಇಲ್ಲವೆ ಹುಕುಮುಗಳಿಗೆ ರಾಜ್ಯ ಶಾಸನ ಸಭೆಯ ಸಮ್ಮತಿ ಬೇಕು ಎಂದು ಇದರಿಂದ ಹೇಳಿದ ಹಾಗಾಯಿತು. ಮುವ್ವತ್ತು ದಿನಗಳ ಅವಧಿಯು ಆ ಸಭೆಯು ಅಧಿವೇಶನದಲ್ಲಿದ್ದಾಗ ಒಟ್ಟುಗೂಡಿ ಆಗಬೇಕು. ಅಂದರೆ ಅವಸರದಿಂದ ಮಾಡಬಾರದೆಂಬುದು ಇಲ್ಲಿಯ ಸೂಚನೆ.

# ಕೋಷ್ಟಕ ೧

(ಕಲಮು ೭೩)

(ಅ) ಆಸ್ತಿಯ ಮೇಲೆ ಕರ — ಕರದ ಮೇಲ್ಮಿತಿಯ ದರ

(೧) ಕಟ್ಟಡಗಳ ಮೇಲೆ ಹಾಕಲಾದ ಕರ........ ವಾರ್ಷಿಕ ಬಾಡಿಗೆಯ ಮೂಲ್ಯದ (ಪ್ರತಿ ವರುಷಕ್ಕೆ) ಪ್ರತಿಶತ ೮

**ವಿವರಣೆ :** " ವಾರ್ಷಿಕ ಬಾಡಿಗೆಯ ಮೂಲ್ಯ " ಎಂದರೆ ಯಾವುದೇ ಕಟ್ಟಡವು ಇಲ್ಲವೆ ಭೂಮಿಯು, ಅದರಲ್ಲಿಯ ಫರ್ನಿಚರ ಇಲ್ಲವೆ ಯಂತ್ರದ ಸಾಮಾನು ಇವುಗಳನ್ನು ಬಿಟ್ಟು, ವರುಷ ವರುಷಕ್ಕೆ ಪಡೆಯಬಹುದಾದ ವಾರ್ಷಿಕ ಬಾಡಿಗೆ.

(೨) ಭೂಕಂದಾಯದ ಆಕರಣೆಗೆ ಅಂಕಿತವಾಗಿರದೆ ಇದ್ದ ಭೂಮಿಗಳ ಮೇಲೆ ಕರ..........ಪ್ರತಿ ಒಂದುನೂರು ಚೌರಸ ಯಾರ್ಡುಗಳಿಗೆ ವರುಷಕ್ಕೆ ೧ ರೂ.

(ಬ) (ಅ) ಧಂದೆಗಳು, ವ್ಯಾಪಾರಗಳು, ವೃತ್ತಿಗಳು, ಮತ್ತು ನೌಕರಿಗಳ ಮೇಲೆ ಕರ

| ವರ್ಗ ೧ | ವಾರ್ಷಿಕವಾಗಿ |
|---|---|
| ಪ್ರತಿಯೊಬ್ಬ ವ್ಯಕ್ತಿಯು ಯಾವುದೇ ಅಧಿಕಾರಪದವನ್ನು ಧಾರಣ ಮಾಡಿದವನು, ಖಾಸಗಿ ಇಲ್ಲವೆ ಸಾರ್ವಜನಿಕ ನೇಮಕವಾದವನು ಯಾವುದೇ ಅಧಿಕಾರಪದದಲ್ಲಿರಲಿ, ಯಾರ ಸಂಬಳವು ಇಲ್ಲವೆ ಪೆನಶನು ತಿಂಗಳಿಗೆ ೧೦೦೦ ರೂಪಾಯಿ ಇಲ್ಲವೆ ಅದರ ಮೇಲ್ಪಟ್ಟು ಇದೆಯೋ ಅವನು ಮತ್ತು ಈ ಕೆಳಗಿನ ವರ್ಣನೆಯಲ್ಲಿ ಬರುವ ಮತ್ತು ಯಾರ ಆದಾಯವು ತಿಂಗಳಿಗೆ ೧೦೦೦ ರೂಪಾಯಿ ಇಲ್ಲವೆ ಹೆಚ್ಚು ಇರುವುದೋ ಅವನು— | ೫೦ ರೂಪಾಯಿ |
| (i) ಕಂಪನಿಯೆಂದು ವ್ಯವಹಾರ ಮಾಡುವವನು | |
| (ii) ಅಬಕಾರಿ ಬಾಡಿಗೆದಾರರು, ಠೋಕ ಮತ್ತು ಕಿರಕೋಳ ವ್ಯಾಪಾರಸ್ಥರು, । ಸರಕು ಸಿದ್ಧಮಾಡುವವರು, ಕಂತ್ರಾಟದಾರರು, ಲಿಲಾವುದಾರರು, ಮತ್ತು ಕಮೀಶನ್ ಏಜಂಟರು | |

(iii) ಬ್ಯಾಂಕರರು, ಸಾಲ ಕೊಡುವವರು, ಹಣ ವಿನಿಮಯ ಮಾಡುವವರು ಮತ್ತು ಒತ್ತಿ ಇಟ್ಟುಕೊಳ್ಳುವವರು

(iv) ವೃತ್ತಪತ್ರಗಳ ಸಂಪಾದಕರು ಮತ್ತು ಮಾಲಕರು

(v) ಆಧಾರ ಪತ್ರಗಳ, ಶೇರುಗಳ, ಹುಂಡಿಗಳ ದಲಾಲರು ಮತ್ತು ವ್ಯವಹಾರ ಮಾಡುವವರು

(vi) ಕೆಲಸ ಮಾಡುವ ಬ್ಯಾರಿಸ್ಟರು, ಅಡ್ವೋಕೇಟರು, ಹಾಯಕೋರ್ಟ ವಕೀಲರು, ಸಾಲಿಸಿಟರು, ಅಟೋರ್ನಿಗಳು, ವಕೀಲರು ಮತ್ತು ಕಾಯಿದೆ ಏಜೆಂಟರು

(vii) ಕೆಲಸ ಮಾಡುವ ವೈದ್ಯಕೀಯ ಡಾಕ್ಟರರು, ಹಕೀಮರು, ವೈದ್ಯರು

(viii) ದಂತ ವೈದ್ಯರು ಮತ್ತು ಪಶು ಶಸ್ತ್ರಜ್ಞರು

(ix) ಸ್ಥಾಪತ್ಯ ವಿಶಾರದರು, ಸಿವಿಲ ಇಂಜನಿಯರು

(x) ಮಾರ್ಕೆಟುಗಳ ಮಾಲಕರು ಮತ್ತು ಒಕ್ಕಲಿಗರು

(xi) ಹೋಟೇಲು, ವಸತಿಗೃಹ, ಇಲ್ಲವೆ ಊಟದ ಮನೆಯ ಮಾಲಕರು

(xii) ಕಟ್ಟಡ ರಚನೆ ಮಾಡುವವರು, ಮೋಜಣಿದಾರರು

(xiii) ಗಿರಣಿ, ಗುದಾಮು, ಪ್ರಿಂಟಿಂಗ ಪ್ರೆಸ್, ಗಾಣಗಳು, ಹತ್ತಿ ಪ್ರೆಸುಗಳು, ಇತರ ಪ್ರೆಸುಗಳ ಮಾಲಕರು

(xiv) ವೃತ್ತಿಯಿಂದ ಕಲಾವಿದರು, ಫೋಟೋಗ್ರಾಫರು, ನಟರು ಮತ್ತು ಸರ್ಕಸ ಮಾಲಕರು, ನಾಟಕ ಕಂಪನಿ ಮಾಲಕರು ಸಂಗೀತಗಾರರು, ನರ್ತಕರು,

(xv) ಪ್ರಾಣಿ ಇಲ್ಲವೆ ವಾಹನ ವ್ಯಾಪಾರದವರು, ಬಗಿಗಳ ಮಾಲಕರು, ತೈನಾತಿಯಲಾಯದ ಮಾಲಕರು

(xvi) ಕೈ ಕೆಲಸಗಾರರು

} ೫೦ ರೂಪಾಯಿ

**ವರ್ಗ ೨**

| | |
|---|---|
| ವರ್ಗ ಒಂದರಲ್ಲಿ ವರ್ಣಿಸಲಾದ ಪ್ರಯೊಬ್ಬನು ಯಾರ ಆದಾಯವು ತಿಂಗಳಿಗೆ ೫೦೦/-ಇಲ್ಲವೆ ಹೆಚ್ಚು ಇರುವುದು | ವಾರ್ಷಿಕವಾಗಿ ೨೫ ರೂ. |

**ವರ್ಗ ೩**

| | |
|---|---|
| ವರ್ಗ ಒಂದರಲ್ಲಿ ವರ್ಣಿಸಲಾದ ವ್ಯಕ್ತಿಗಳು ಅವರ ಆದಾಯ ತಿಂಗಳಿಗೆ ೩೦೦/-ಇಲ್ಲವೆ ಹೆಚ್ಚು ಇದ್ದರೆ | ೧೨/- |

ವರ್ಗ ೪

ವರ್ಗ ಒಂದರಲ್ಲಿ ವರ್ಣಿಸಲಾದ ವ್ಯಕ್ತಿಗಳ ಆದಾಯ ತಿಂಗಳಿಗೆ ೨೦೦/-ಇಲ್ಲವೆ ಹೆಚ್ಚು ಇದ್ದರೆ

ವರ್ಗ ೫

ವರ್ಗ ಒಂದರಲ್ಲಿ ವರ್ಣಿಸಲಾದ ವ್ಯಕ್ತಿಗಳ ಆದಾಯ ತಿಂಗಳಿಗೆ ೧೦೦/- ಇಲ್ಲವೆ ಹೆಚ್ಚು ಇದ್ದರೆ ೪/-

ವರ್ಗ ೬

ವರ್ಗ ಒಂದರಲ್ಲಿ ವರ್ಣಿಸಿದ ವ್ಯಕ್ತಿಗಳ ಆದಾಯ ತಿಂಗಳಿಗೆ ೫೦/- ರೂ. ಇಲ್ಲವೆ ಹೆಚ್ಚು ಇದ್ದರೆ ೨/-

ವರ್ಗ ೭

ವರ್ಗ ಒಂದರಲ್ಲಿ ವರ್ಣಿಸಿದ ಆದಾಯ ೩೦/- ಇಲ್ಲವೆ ಹೆಚ್ಚು ಇದ್ದರೆ ೧/-

**(ಬ) ವ್ಯಾಪಾರ ಇಲ್ಲವೆ ವ್ಯವಹಾರದ ಸ್ಥಳಗಳ ಮೇಲೆ ಕರ** ವಾರ್ಷಿಕ

(ಅ) ವಿದ್ಯುತ್ ಶಕ್ತಿಯಿಂದ ಸಂಚಾಲಿತವಾದ ಯಂತ್ರದಿಂದ ನಡೆಸಿದ ವ್ಯಾಪಾರ ಇಲ್ಲವೆ ವ್ಯವಹಾರ ೫೦/-

(ಬ) ಇತರ ವ್ಯಾಪಾರ ಇಲ್ಲವೆ ವ್ಯವಹಾರ ೨೫/-

**(ಕ) ವಾಹನ ಕರ**

ನಾಲ್ಕು ಗಾಲಿಯ ಎರಡು ಇಲ್ಲವೆ ಹೆಚ್ಚು ಕುದುರೆಗಳಿಂದ ನಡೆಯುವ ಸ್ಪ್ರಿಂಗ ಸಹಿತ ವಾಹನ ಒಂದಕ್ಕೆ ೨೦/-

ನಾಲ್ಕು ಗಾಲಿಯ ಸ್ಪ್ರಿಂಗ ಸಹಿತ ವಾಹನ, ಒಂದು ಕುದುರೆ, ಎತ್ತು, ಇಲ್ಲವೆ ಎರಡು ಇಲ್ಲವೆ ಹೆಚ್ಚು ಕುದುರೆಗಳಿಂದ ನಡೆ-ಯುವ ೧೩ ಮೊಳದ ಒಳಗೆ ಉದ್ದ ಇರುವ ವಾಹನ ಒಂದಕ್ಕೆ- ೧೦/-

ಎರಡು ಗಾಲಿಯ ಸ್ಪ್ರಿಂಗ ಸಹಿತ ಇರುವ ಒಂದು ಇಲ್ಲವೆ ಹೆಚ್ಚು ಕುದುರೆ, ಎತ್ತು ಗಳಿಂದ ನಡೆವ ವಾಹನ ಒಂದಕ್ಕೆ ೬/-

ಸ್ಪ್ರಿಂಗ ಸಹಿತ ಇರುವ ಇತರ ವಾಹನ ಒಂದಕ್ಕೆ ೬/-

ಸ್ಪ್ರಿಂಗ ಇಲ್ಲದ ಇತರ ವಾಹನ ಒಂದಕ್ಕೆ ೪/-

ಸಾಯಕಲ್ಲು ಇಲ್ಲವೆ ಮೂರು ಗಾಲಿಯ ಸಾಯಕಲ್ಲು ಒಂದಕ್ಕೆ ೩/-

(ಡ) ಜಾತ್ರೆ, ಉತ್ಸವ ಮತ್ತು ಮನರಂಜನ ಒಂದಕ್ಕೆ ೨೦/-

(ಇ) ಜಕಾತಿ : ಸರಕಿನ ಬೆಲೆಯ ಒಂದು ನೂರಕ್ಕೆ ೩/-

(ಫ) ಬಸ್ ನಿಲ್ದಾಣಕ್ಕೆ ಫೀ ಒಂದು ಬಸ್ಸಿಗೆ ೨೫/-

# ಕೋಷ್ಟಕ ೨

(ಕಲಮು ೧ಳಿಇ ರನ್ವಯ ಲಾಯಸೆನ್ಸು ಇಲ್ಲದೆ ಉಪಯೋಗಿಸಲಾಗದ ಸ್ಥಳಗಳಿಗೆ)

ಸೋಡಾ : ಮುಂತಾದ ಪೇಯಗಳ ತಯಾರಿಕೆಗೆ

ಮದ್ದು ಗುಂಡುಗಳು : ಸಂಗ್ರಹ, ತಯಾರಿಕೆ, ಪ್ಯಾಕಿಂಗ ಮುಂತಾಗಿ

ಹಿಟ್ಟಿನ ಸಾಮಾನುಗಳು : ಸುಡುವುದು, ತಯಾರಿಸುವುದು, ಮಾನವ ಉಪಯೋಗಕ್ಕೆಂದು ಸಂಗ್ರಹಿಸಿಡುವುದು ( ಮನೆತನದ ಉಪಯೋಗದ ಹೊರತು)

ಭಸ್ಮಗಳು : ಯಾವುದೇ ವಿಧಾನದಿಂದ ತಯಾರಿಸುವುದು, ಸಂಗ್ರಹಿಸಿಡು ವುದು; ಮುಂತಾಗಿ

ಬಿಸ್ಕಿಟುಗಳು : ತಯಾರಿಸುವುದು, ಮಾನವ ಉಪಯೋಗಕ್ಕಾಗಿ ಸಂಗ್ರಹಿ ಸಿಡುವುದು (ಮನೆತನದ ಉಪಯೋಗದ ಹೊರತು)

ರಕ್ತ : ಯಾವುದೇ ವಿಧಾನದಿಂದ ಸಿದ್ಧಸರಕು ಮಾಡುವುದು; ಸಂಗ್ರಹಿ ಸಿಡುವುದು ಮುಂತಾಗಿ.

ಎಲಬುಗಳು : ಯಾವುದೇ ವಿಧಾನದಿಂದ ಸಿದ್ಧಸರಕು ಮಾಡುವುದು; ಸಂಗ್ರಹಿಸಿಡುವುದು ಮುಂತಾಗಿ.

ಬ್ರೆಡ್ಡು : ತಯಾರಿಸುವದು, ಮಾನವ ಉಪಯೋಗಕ್ಕಾಗಿ ಸಂಗ್ರಸಿಡುವುದು (ಮನೆತನದ ಉಪಯೋಗದ ಹೊರತು)

ಇಟ್ಟಂಗಿ : ತಯಾರಿಸುವುದು.

ಕಪ್ಪುರ : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹಿಸಿಡುವುದು ಮುಂತಾಗಿ.

ಮೇಣಬತ್ತಿ : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹಿಸಿಡು ವುದು ಮುಂತಾಗಿ.

ಜಮಖಾನೆಗಳು : ತಯಾರಿಸುವುದು.

ಕ್ಯಾಟಗಟ (ಬೆಕ್ಕಿನಕರಳು ದಾರ); ಯಾವುದೇ ವಿಧಾನದಿಂದ ತಯಾರಿಸು ವುದು; ಸಂಗ್ರಹಿಸಿಡುವುದು ಮುಂತಾಗಿ.

ಸಿಮೆಂಟ : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಭಟ್ಟಿ ಇದ್ದಲಿ : ಸಂಗ್ರಹ, ಮಾರಾಟ, ಮುಂತಾಗಿ.

ರಾಸಾಯನಿಕ ತಯಾರಿಕೆಗಳು : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಮೆಣಸಿನಕಾಯಿ : ಯಂತ್ರದಿಂದ ಬೀಸುವುದು.

ಕ್ಲೋರೇಟ ಮಿಶ್ರಣಗಳು : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಅಂಗಾರ ( ಸಿಂಡರ ) : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಅರಿವೆಗಳು : ಬಣ್ಣ ಹಾಕುವುದು.

ಕಲ್ಲಿದ್ದಲಿ : ಸಂಗ್ರಹ, ಮಾರಾಟ, ಮುಂತಾಗಿ.

ತೆಂಗಿನ ಕಾತಿ : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಜ್ವಲನ ವಸ್ತು : ಸಂಗ್ರಹ.

ಜ್ವಲನಗಳು : ತಯಾರಿಸುವುದು; ಮಾನವ ಉಪಯೋಗಕ್ಕಾಗಿ ಸಂಗ್ರಹ (ಮನೆತನದ ಉಪಯೋಗದ ಹೊರತು)

ಮಿಠಾಯಿ : ತಯಾರಿಸುವುದು; ಮಾನವ ಉಪಯೋಗಕ್ಕೆ ಸಂಗ್ರಹ ( ಮನೆತನದ ಉಪಯೋಗದ ಹೊರತು )

ಅರಳಿ; ಅರಳಿಯ ಕೊಳೆ : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಬಣ್ಣಗಳು : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಸ್ಫೋಟಕಗಳು : ಸಂಗ್ರಹ

ನೆಣ ; (ಕೊಬ್ಬು) : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಉರುವಲುಕಟ್ಟಿಗೆ : ಸಂಗ್ರಹ, ಮಾರಾಟ

ಸಿಡಿಮದ್ದು : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ

ಮೀನು : ಯಾವುದೇ ವಿಧಾನದಿಂದ ಸರಕು ಸಿದ್ಧಪಡಿಸುವುದು; ಸಂಗ್ರಹ ಮುಂತಾಗಿ.

ಮೀನದ ಎಣ್ಣೆ : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ನಾರು (ಅಗಸೆ) : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಮಾಂಸಲಗಳು : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಹಿಟ್ಟು : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ,

ಉರುವಲ : ಯಾವುದೇ ಔದ್ಯಮಿಕ ಉಪಯೋಗಕ್ಕಾಗಿ.

ಪಾರಜದ ಸಿಡಿ : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಗ್ಯಾಸು : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಬಂಗಾರ : ಶುದ್ಧೀಕರಿಸುವುದು.

ಕಡಲೆ : ಯಂತ್ರದಿಂದ ಹೊಟ್ಟು ತೆಗೆವುದು.

ಮದ್ದಿನ ಅರಳೆ : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಮದ್ದಿನ ಪುಡಿ : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಕೂದಲು : ಯಾವುದೇ ವಿಧಾನದಿಂದ ಸರಕು ಸಿದ್ಧಿಪಡಿಸುವುದು; ಸಂಗ್ರಹ ಮುಂತಾಗಿ.

ಒಣಹುಲ್ಲು : ಸಂಗ್ರಹ-ಮಾರಾಟ.

ನಾರು (ಪುಂಡಿ) : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ತೊಗಲು; ಚರ್ಮ : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಖುರಗಳು : ಯಾವುದೇ ವಿಧಾನದಿಂದ ಸರಕು ಸಿದ್ಧಪಡಿಸುವುದು; ಸಂಗ್ರಹ ಮುಂತಾಗಿ.

ಕೋಡುಗಳು : ಯಾವುದೇ ವಿಧಾನದಿಂದ ಸರಕು ಸಿದ್ಧಪಡಿಸುವುದು; ಸಂಗ್ರಹ ಮುಂತಾಗಿ.

ಬರ್ಫ : ತಯಾರಿಸುವುದು.

ಸಣಬು (ಜ್ಯೂಟ) : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಅರಗು : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಸೀಸು : ಕರಗಿಸುವುದು.

ಹದಮಾಡಿದ ಚರ್ಮ : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಸುಣ್ಣ : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಸುಣ್ಣದ ಚಿಪ್ಪು : ಯಾವುದೇ ವಿಧಾನನಿಂದ ಸರಕು ಸಿದ್ಧಪಡಿಸುವುದು; ಸಂಗ್ರಹ ಮುಂತಾಗಿ.

ಗೊಬ್ಬರ : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಯಂತ್ರ ಸಾಮುಗ್ರಿ : ಔದ್ಯಮಿಕ ಉದ್ದೇಶಕ್ಕಾಗಿ ಉಪಯೋಗಿಸುವುದು;

ಕಡ್ಡಿಪೆಟ್ಟಿಗೆ : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಮಾಂಸ : ಯಾವುದೇ ವಿಧಾನವಾದ ಸರಕು ಸಿದ್ಧಪಡಿಸುವುದು; ಸಂಗ್ರಹ ಮುಂತಾಗಿ.

ಲೋಹಗಳು : ಬಡಿಯುವುದು, ಮುರಿಯುವುದು, ಪಡಿಯಚ್ಚು ಮಾಡುವುದು ಮುಂತಾಗಿ.

ನಾಯಿಟ್ರೊ ರಸಾಯನ : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ನಾಯಿಟ್ರೊ ಗ್ಲಿಸರಿನ್ : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ನಾಯಿಟ್ರೊ ಮಿಶ್ರಣ : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಕೊಳೆತ ಮಾಂಸ-ಮೀನ, ಹಳಸು : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಭತ್ತ : ಯಂತ್ರದಿಂದ ಕುದಿಸುವುದು ಇಲ್ಲವೆ ಹೊಟ್ಟು ತೆಗೆವುದು.

ಪೆಟ್ರೋಲಿಯಂ ಪದಾರ್ಥಗಳು : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ; ಆರು ಗ್ಯಾಲನಕ್ಕಿಂತ ಹೆಚ್ಚು ಆಗದಷ್ಟು ಪ್ರಮಾಣದಲ್ಲಿ ೧೯೩೪ ರ ಪೆಟ್ರೋಲಿಯಂ ಕಾಯಿದೆಯಿಂದ ಲಾಯಿಸೆನ್ಸ ಬೇಕಾಗಿರದಿದ್ದರೆ.

ಕಪ್ಪು ರಾಳ : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಗಡಿಗೆ ಮಡಿಕೆ : ಯಾವುದೇ ವಿಧಾನದಿಂದ ತಯಾರಿಸುವುದು.

ಅಂಟು ( ಕಪ್ಪುರ ರಾಳ ಒಳಗೊಂಡು ) : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಸೋರುಪ್ಪು : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಸೀಗೇಕಾಯಿ : ಯಂತ್ರದಿಂದ ಪುಡಿಮಾಡುವುದು.

ಅರಗಿನ ಪದರು : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ತೊಗಲು : ಯಾವುದೇ ವಿಧಾನದಿಂದ ಸರಕು ಸಿದ್ಧಪಡಿಸುವುದು; ಸಂಗ್ರಹ ಮುಂತಾಗಿ.

ಸಾಬೂಣ : ಯಾವುದೇ ವಿಧಾನದಿಂದ ತಯಾರಿಸುವುದು.

ಮದ್ಯಾರ್ಕ : ಯಾವುದೇ ವಿಧಾನದಿಂದ ತಯಾರಿಸುವುದು.

ಗಂಧಕ : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಚರಬಿ : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಡಾಂಬರು : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಚಪ್ಪರ ಸಾಮುಗ್ರಿಗಳು : ಸಂಗ್ರಹ-ಮಾರಾಟ.

ಹಂಚುಗಳು : ತಯಾರಿಸುವುದು.

ಇಮಾರತಿ ಕಟ್ಟಿಗೆ : ಸಂಗ್ರಹ—ಮಾರಾಟ

ತಂಬಾಕು (ನಾಶಿಪುಡಿ, ಸಿಗಾರ, ಸಿಗಾರೇಟ, ಬೀಡಿ, ಒಳಗೊಂಡು) : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ತರ್ಪೆಂಟಾಯಿನ್ : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ.

ಉಣ್ಣೆ : ಯಾವುದೇ ವಿಧಾನದಿಂದ ತಯಾರಿಸುವುದು; ಸಂಗ್ರಹ ಮುಂತಾಗಿ

ನೂಲು : ಬಣ್ಣ ಹಾರುವುದು.

ಆದರೆ, ಮೇಲೆ ಹೇಳಿದ ಸಾಮಾನುಗಳ ಕೇವಲ ಸಂಗ್ರಹಕ್ಕಾಗಿ, ಮನೆತದ ಉಪಯೋಗಕ್ಕಾಗಿ ಭತ್ತ ಕುದಿಸಲು ಇಲ್ಲವೆ ಸಂಗ್ರಹಿಸಲು, ಮತ್ತು ಕಮಿಶನರನು ಕಾಲಕಾಲಕ್ಕೆ ನಿರ್ದಿಷ್ಟ ಪಡಿಸಿದ ಪ್ರಮಾಣದಲ್ಲಿ ಆಗಿದ್ದು ಲಾಯಿಸೆಸ್ಸು ಬೇಕಾಗಿರಬಾರದು.

ಲೋಹಕ್ಕೆ ನೀರು ಕುಡಿಸುವುದು ಇಲ್ಲವೆ ವಿದ್ಯುತ್‌ನಿಂದ ಮೆರಗು ಕೊಡುವುದು,

ಕೂದಲು ಕತ್ತರಿಸುವ ಸಲೂನು ಇಡುವುದಕ್ಕೆ

ಹಂದಿಗಳನ್ನು ಇಡುವುದಕ್ಕೆ, ಇಲ್ಲವೆ ೨೦ ಇಲ್ಲವೆ ಹೆಚ್ಚು ಆಡು ಇಲ್ಲವೆ ಕುರಿ ಇಡುವುದಕ್ಕೆ

ಅನಾರೋಗ್ಯಕರವಾದ ವಾಸನೆ, ಹೊಗೆ, ಧೂಳು, ಇಲ್ಲವೆ ಸಪ್ಪಳ ಬರುವ ಹಾಗೆ ಇರುವ ಸರಕು ತಯಾರಿಸುವುದು

ಒಟ್ಟಿನಲ್ಲಿ, ತಾಲೂಕ ಬೋರ್ಡದ ಅಭಿಪ್ರಾಯದಲ್ಲಿ ಯಾವುದೇ ಔದ್ಯಮಿಕ ವಿಧಾನದಿಂದ ಮಾನವ ಜೀವನಕ್ಕೆ, ಆರೋಗ್ಯಕ್ಕೆ, ಇಲ್ಲವೆ ಅಸ್ತಿಗೆ ಅಪಾಯಕಾರಕವಾಗುವಂತಹ ಇಲ್ಲವೆ ಕಂಟಕ ಪ್ರಾಯವಾಗುವಂತಹ ಯಾವುದೇ ಕೆಲಸ ನಡೆಯುವುದು.

# ಕೋಷ್ಟಕ ೩

## ನೋಟೀಸಿನ ನಮೂನೆ

( ಕಲಮು ೧೬೪ ನೋಡಿರಿ. )

"………………… ತಾಲೂಕದ ರಹಿವಾಸಿಗಳಿಗೆ ಇದರ ಜತೆಗೆ ಜೋಡಿಸಿದ ನಿಯಮಗಳಲ್ಲಿ ವ್ಯಾಖ್ಯೆ ಮಾಡಿದ ಮತ್ತು ಅದರಲ್ಲಿ ಕಾಣಿಸಿದ ದರದಂತೆ ತಾಲೂಕ ಬೋರ್ಡು ಕರ, ತೆರಿಗೆ ಇಲ್ಲವೆ ಫೀ ಹಾಕಬೇಕೆಂದು ಬಯಸಿದೆ ಎಂದು ಈ ಮೂಲಕ ನೋಟೀಸು ಕೊಡಲಾಗಿದೆ.

ಸೂಚಿಸಲಾದ ಕರ ಮುಂತಾದವುಗಳಿಗೆ ತಾಲೂಕದ ಯಾವುದೇ ರಹಿವಾಸಿಯು ತಕರಾರು ಮಾಡುವುದಿದ್ದಲ್ಲಿ ತಾಲೂಕ ಬೋರ್ಡಿಗೆ ಈ ನೋಟೀಸಿನ ತಾರೀಖಿನಿಂದ ಒಂದು ತಿಂಗಳ ಒಳಗೆ ಲೇಖಿಯಿಂದ ತಕರಾರುಗಳನ್ನು ಅವನು ಕಳಿಸಬಹುದು.

## ನಿಯಮಗಳು

( ಕಲಮು ೧೬೪ ರ ಉಪಕಲಮು (೨) ರನ್ವಯವಾಗಿ ತಾಲೂಕ ಬೋರ್ಡದಿಂದ ತಯಾರಿಸಲ್ಪಟ್ಟ ನಿಯಮಗಳು ಇಲ್ಲವೆ ಜೋಡಿಸಲ್ಪಡಬೇಕು. )

[ ಮುಗಿದುದು ]